SHRI SHANKARACHARYARA ADVAITA DARSHANA

A collection of research articles on Shri Shankaracharya's works a[illegible]
Advaita Philosophy

Edited by : Dr. G. M. Hegde, Kittel Arts College, Dharwad

Published by : Bhagavatpada Prakashana
Post : Mathadevala Tq. : Sirsi District : North Kanara - 581 33[illegible]

First Impression : 2001

Pages : xxii + 248

Copies : 1000

Price : Rs. 120/-




ಶ್ರೀ ಭಗವತ್ಪಾದ ಪ್ರಕಾಶನ

ಅಧ್ಯಕ್ಷರು : ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳು

ಸದಸ್ಯರು : ಶ್ರೀ ಗಣಪತಿ ಸುಬ್ರಾಯ ಹೆಗಡೆ, ಅಜ್ಜೀಬಳ
ಶ್ರೀ ಗಜಾನನ ವೆಂಕಟರಮಣ ಜೋಶಿ, ಕಾಗೇರಿ
ಶ್ರೀ ನಾರಾಯಣ ಸುಬ್ರಾಯ ಹೆಗಡೆ, ಕುಂದರಗಿ
ಶ್ರೀ ಮಹಾದೇವ ಮಹಾಬಲೇಶ್ವರ ಹೆಗಡೆ, ಗಡಿಕೈ
ಡಾ. ಜಿ. ಎಂ. ಹೆಗಡೆ, ಧಾರವಾಡ
ಶ್ರೀ ಜಿ. ಸುಬ್ರಾಯ ಭಟ್ಟ, ಭಕ್ಕಳ

ಕಾರ್ಯದರ್ಶಿ : ಪ್ರಾ. ಪದ್ಮನಾಭ ಈಶ್ವರ ಹೆಗಡೆ, ಗಮಯನಮನೆ

ಸಹಕಾರ್ಯದರ್ಶಿ : ಡಾ. ವಿಜಯನಳಿನಿ ರಮೇಶ, ಶಿರಸಿ

ಪ್ರಥಮ ಮುದ್ರಣ : ೨೦೦೧ ಪ್ರತಿಗಳು : ೧೦೦೦

ಬೆಲೆ : ರೂ. ೧೨೦/- ಪುಟಗಳು : xxii + ೨೪೮

ಮುದ್ರಕರು :
ಸೋಮಶೇಖರ ಆಕಳವಾಡಿ
ಮನೋಹರ ಮುದ್ರಣಾಲಯ
ಮಾರ್ಕೆಟ್, ಧಾರವಾಡ

# ಪ್ರಕಾಶಕರ ನುಡಿ



ಭಾರತದ ಸಾಂಸ್ಕೃತಿಕ ಪ್ರಪಂಚದ ಮಹಾಚೇತನವಾದ ಆದಿಶಂಕರಾಚಾರ್ಯರು (ಕ್ರಿ. ಶ. ೭೮೮-೮೨೦) ಈ ಪುಣ್ಯಭೂಮಿಯಲ್ಲಿ ಅವತರಿಸಿ ಅದ್ವೈತ ಮತದ ಸಂಸ್ಥಾಪನಾ ಕಾರ್ಯ ಮಾಡಿರುವುದು ನಮ್ಮ ಭಾಗ್ಯವಿಶೇಷವಾಗಿದೆ. ಆದಿಶಂಕರರ ಅನುಗ್ರಹದಿಂದ ಕಾಶಿಯ ದಶಾಶ್ವಮೇಧ ಘಾಟಿನಲ್ಲಿ ಆರಂಭವಾದ ಸ್ವರ್ಣವಲ್ಲೀ ಮಠವು ಮುಂದೆ ಕ್ರಮವಾಗಿ ಉಜ್ಜಯನಿ, ಗೋಕರ್ಣ, ಕಡತೋಕೆ, ಸಹಸ್ರಲಿಂಗ ಮತ್ತು ಇಂದಿನ ಸ್ವರ್ಣವಲ್ಲಿಗೆ ಬಂದು ಧರ್ಮದೀಪವಾಗಿ ಬೆಳಗುತ್ತಲಿದೆ.

ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಸುಂದರ ನಿಸರ್ಗ ಪರಿಸರದ ರಮ್ಯತಾಣದಲ್ಲಿರುವ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನವು ಅದ್ವೈತ ಮತದ ಮಹಾಗುರುಪೀಠವಾಗಿ ಪ್ರಸಿದ್ಧವಾಗಿದೆ. ಸುಮಾರು ಹನ್ನೆರಡು ನೂರು ವರ್ಷಗಳ ಭವ್ಯವಾದ ಇತಿಹಾಸ ಶ್ರೀಮಠಕ್ಕಿದೆ. ಶ್ರೀ ವಿಶ್ವವಂದ್ಯ ಸರಸ್ವತಿಗಳಿಂದ ಆರಂಭವಾಗಿ ಇಂದಿನ ಪೀಠಾಧಿಪತಿಗಳಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳವರೆಗೆ೫೪ ಯತಿವರ್ಯರು ಶ್ರೀಮಠದ ಸಂಸ್ಕೃತಿ ಪರಂಪರೆಯನ್ನು ಮುನ್ನಡೆಸಿಕೊಂಡು ಬಂದಿದ್ದಾರೆ. ಸಮಸ್ತ ಗೋಕರ್ಣಮಂಡಲಕ್ಕೆ ಗುರುಪೀಠವಾಗುವುದರ ಜೊತೆಗೆ ಘಟ್ಟದ ಮೇಲಿನ೧೭ ಸೀಮೆಗಳು ಹಾಗೂ ಘಟ್ಟದ ಕೆಳಗಿನ ಕೆಲಭಾಗಗಳು ಶ್ರೀಮಠದ ವ್ಯಾಪ್ತಿಯಲ್ಲಿದ್ದು ನಾಡಿನಾದ್ಯಂತ ಅಪಾರ ಸಂಖ್ಯೆಯ ಭಕ್ತಕೋಟಿಯನ್ನು ಶ್ರೀಮಠವು ಪಡೆದಿದೆ.

ಸ್ವರ್ಣವಲ್ಲೀ ಮಹಾಸಂಸ್ಥಾನವು ಭಾರತೀಯ ಸಂಸ್ಕೃತಿಯ ಪ್ರಸಾರ ಮಾಡುತ್ತಿದ್ದು ವೇದವಿದ್ಯಾ ವ್ಯಾಸಂಗ ಕೇಂದ್ರವಾಗಿ ಪ್ರಸಿದ್ಧವಾಗಿದೆ. ವೈದಿಕ ಸಂಸ್ಕೃತಿ - ಸಂಸ್ಕಾರಗಳನ್ನು ಪ್ರಚುರಪಡಿಸುವುದು, ಆದಿಶಂಕರರ ವೇದಾಂತಸಾರವನ್ನು ಮನೆಮನಗಳಿಗೆ ತಲುಪಿಸುವುದು. ಧಾರ್ಮಿಕ ವಿಧಿವಿಧಾನಗಳನ್ನು, ಕರ್ಮಾನುಷ್ಠಾನ, ಯೋಗವನ್ನು ನಿರಂತರವಾಗಿ ನಡೆಸುತ್ತಾ ಶ್ರೀಮಠವು ಭಕ್ತಕೋಟಿಯ ಕಣ್ಮಣಿಯಾಗಿ

ಬೆಳೆದಿದೆ. ವೈದಿಕ ವಿದ್ವಾಂಸರು, ಸಾಹಿತಿಗಳು, ಕಲಾವಿದರು ಶ್ರೀಮಠಕ್ಕೆ ಆಗಮಿಸಿ ಇದರ ವಿದ್ವತ್ ಪರಂಪರೆಯನ್ನು ಮುನ್ನಡೆಸುತ್ತಿದ್ದಾರೆ. ಯಜ್ಞಯಾಗಾದಿಗಳನ್ನು ನಿರಂತರವಾಗಿ ನಡೆಸುತ್ತಾ ದೇವತೆಗಳ ಸಂಪ್ರೀತಿಗೆ ಕಾರಣವಾಗಿ ಲೋಕ ಕಲ್ಯಾಣದ ಉದಾತ್ತ ಭಾವನೆಯನ್ನು ಪ್ರಕಟಿಸುತ್ತಲಿರುವ ಶ್ರೀಮಠವು ಭಕ್ತಕೋಟಿಯ ಕಾಮಧೇನುವಾಗಿದೆ. ವೈದಿಕ ಧರ್ಮದ ಆಚಾರ ಹಾಗೂ ವಿಚಾರಪರಂಪರೆಯನ್ನೂ ಸಂಸ್ಕೃತಿ ಸಂವರ್ಧನೆಯನ್ನೂ ವೇದವಿದ್ಯಾ ಪ್ರಸಾರವನ್ನೂ ಕಲಾಪೋಷಣೆಯನ್ನೂ ಸಮಾಜಕಲ್ಯಾಣವನ್ನೂ ಸಾಧಿಸುವಲ್ಲಿ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನವು ಮಹತ್ವದ ಹೆಜ್ಜೆಯಿಟ್ಟಿದೆ. ಅನ್ನದಾನ, ಅಭಯದಾನವನ್ನು ನೀಡಿ ಭಕ್ತರ ಬದುಕಿನ ಸಮಸ್ಯೆಗಳಿಗೆ ನಿರಂತರವಾಗಿ ಸ್ಪಂದಿಸುತ್ತಲಿರುವ ಈ ಮಹಾಸಂಸ್ಥಾನ ಜನತೆಯ ಜೀವನವನ್ನು ಪಾವನವಾಗಿಸುವ ಮಹಾಸಂಕಲ್ಪದಲ್ಲಿ ತೊಡಗಿದೆ.

ಸ್ವರ್ಣವಲ್ಲೀ ಮಹಾಸಂಸ್ಥಾನದ ೫೪ನೆಯ ಪೀಠಾಧಿಪತಿಗಳಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳ ದಿವ್ಯ ನೇತೃತ್ವದಲ್ಲಿ ' ಶ್ರೀ ಭಗವತ್ಪಾದ ಪ್ರಕಾಶನ ' ಸಂಸ್ಥೆಯು ಆರಂಭವಾಗಿದ್ದು ಅದು ಅನೇಕ ಗುರುತರವಾದ ಧ್ಯೇಯೋದ್ದೇಶಗಳನ್ನೊಳಗೊಂಡಿದೆ.

೧. ಹಸ್ತಪ್ರತಿ, ತಾಡೋಲೆ, ಕಡತಗಳನ್ನು ಸಂಗ್ರಹಿಸಿ ದೊಡ್ಡ ಭಂಡಾರ ತೆರೆದು ಅವುಗಳ ಸಂಪಾದನೆ, ಪರಿಷ್ಕರಣ, ಪ್ರಕಟಣ ಕಾರ್ಯ ಕೈಗೊಳ್ಳುವುದು.

೨. ಅದ್ವೈತ ತತ್ವಸಿದ್ಧಾಂತ, ಆದಿಶಂಕರರ ವೇದಾಂತಸಾರ, ಜೀವನ, ಉಪದೇಶಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಪ್ರಕಟಿಸುವುದು.

೩. ಆದಿಶಂಕರರ ಸಮಗ್ರ ಸಾಹಿತ್ಯಸಂಪುಟ. ಸ್ತೋತ್ರ ಕೃತಿಗಳ ಅನುವಾದ ಸಾಹಿತ್ಯವನ್ನು ಪ್ರಕಟಿಸುವುದು.

೪. ಶ್ರೀಗಳ ಪ್ರವಚನ ಸಂಪುಟಗಳು, ವೇದಾಂತ ವೈಚಾರಿಕ ಕೃತಿಗಳನ್ನು ಪ್ರಕಟಿಸುವುದು.

೫. ಭಾರತೀಯ ಸಂಸ್ಕೃತಿಮಾಲೆ, ಪ್ರಾಚೀನ ಸಾಹಿತ್ಯರತ್ನಮಾಲೆಯ ಗ್ರಂಥಗಳ ಪ್ರಕಟಣೆ ಮಾಡುವುದು.

೬. ವೇದ ಸಮ್ಮೇಳನ, ಇತಿಹಾಸ ಸಮ್ಮೇಳನ, ಸಂಸ್ಕೃತಿ ಸಮ್ಮೇಳನ, ಕಲಾ ಸಮ್ಮೇಳನ, ವಿವಿಧ ವಿಚಾರ ಸಂಕಿರಣ, ಕಮ್ಮಟ, ವಿದ್ವಾಂಸರ ಉಪನ್ಯಾಸಗಳನ್ನು ಕೃತಿಗಳ ರೂಪದಲ್ಲಿ ಏರ್ಪಡಿಸಿ ಅವುಗಳನ್ನು ಪ್ರಕಟಣೆ ಮಾಡುವುದು.

೭. ಧಾರ್ಮಿಕ ಆಚರಣೆ, ಕರ್ಮಾನುಷ್ಠಾನ, ವೈದಿಕ ಧರ್ಮದ ಸಂಸ್ಕೃತಿ-ಸಂಸ್ಕಾರಕ್ಕೆ ಸಂಬಂಧಿಸಿದ ಗ್ರಂಥಗಳ ಪ್ರಕಟಣೆ ಮಾಡುವುದು.

೮. ಅದ್ವೈತ ವೇದಾಂತಕ್ಕೆ ಸಂಬಂಧಿಸಿದ ಸಂಶೋಧನ ಕೇಂದ್ರ ಹಾಗೂ ಗ್ರಂಥಾಲಯ, ಸಾಮಗ್ರಿ ಸಂಗ್ರಹ ಭಂಡಾರ ಸ್ಥಾಪಿಸುವುದು.

೯. ಸ್ಥಳೀಯ ಜಾನಪದ, ಸಾಹಿತ್ಯ, ಸಂಸ್ಕೃತಿ, ಸಂಶೋಧನೆಯ ಗ್ರಂಥ ಪ್ರಕಟಿಸುವುದು.

೧೦. ಧಾರ್ಮಿಕ, ಸಾಮಾಜಿಕ. ಸಾಂಸ್ಕೃತಿಕ ಸಾಧಕರ, ಚೇತನಗಳ. ಪುಣ್ಯಪುರುಷರ ಸಾಹಿತ್ಯರತ್ನಮಾಲೆಯ ಕೃತಿಗಳನ್ನು ಪ್ರಕಟಿಸುವುದು.

೧೧. ' ಸ್ವರ್ಣವಲ್ಲೀ ಪ್ರಭಾ ' ಮಾಸಿಕ ಪತ್ರಿಕೆಯನ್ನು ನಡೆಸುವುದು.

ಇವೇ ಮೊದಲಾದ ಉನ್ನತ ಗುರಿಗಳನ್ನು ಇಟ್ಟುಕೊಂಡು ಶ್ರೀ ಭಗವತ್ಪಾದ ಪ್ರಕಾಶನವು ಪುಸ್ತಕ ಪ್ರಕಟಣಾ ಕಾರ್ಯವನ್ನು ಆರಂಭಿಸಿದೆ.

ಈಗಾಗಲೇ ಡಾ. ಎ. ಕೆ. ಶಾಸ್ತ್ರಿ ಅವರು ಬರೆದ ' ಸ್ವರ್ಣವಲ್ಲೀ ಮಹಾ ಸಂಸ್ಥಾನದ ಚಾರಿತ್ರಿಕ ದಾಖಲೆಗಳು ' ಮಹಾಸಂಪುಟ (ರಾಜ್ಯ ಪತ್ರಾಗಾರ ಇಲಾಖೆ ಪ್ರಕಟಣೆ) ಹಾಗೂ ' ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಚರಿತ್ರೆ ', ' ಬೋಧಾಯನೀಯ ನಿತ್ಯಕರ್ಮ ' ಮೊದಲಾದ ಐತಿಹಾಸಿಕ. ಧಾರ್ಮಿಕ ಗ್ರಂಥಗಳು. ' ವಿವಾಹ ಸಂಸ್ಕಾರ ' (ವಿಚಾರಸಂಕಿರಣ ಪ್ರಬಂಧಗಳು) ಹಾಗೂ ' ಸ್ವರ್ಣವಲ್ಲೀ ಸುಧಾ '; ' ಗಾಯತ್ರೀ ಜಪಯಜ್ಞ ' ಶ್ರೀಗಳ ಪ್ರವಚನ ಸಂಪುಟಗಳನ್ನು ಶ್ರೀಮಠವು ಪ್ರಕಟಿಸಿದೆ. ಶ್ರೀ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳು ಆರಂಭಿಸಿದ ಗೀತಾಪ್ರವಚನ ಭಾವಧಾರೆಯನ್ನು ವಿವಿಧ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆಯಂತೆ ' ಶ್ರೀ ಭಗವದ್ಗೀತೆ ಅಧ್ಯಾತ್ಮ ವಿದ್ಯೆ ' ಮೊದಲನೆಯ ಸಂಪುಟವನ್ನು ಪ್ರಕಟಿಸಲಾಗಿದೆ. ' ಸ್ವರ್ಣವಲ್ಲೀ ಪ್ರಭಾ ' ಮಾಸಿಕ ಆಧ್ಯಾತ್ಮಿಕ ಪತ್ರಿಕೆಯು ಶ್ರೀಮಠದ ಭಕ್ತರಲ್ಲಿ ಧರ್ಮಪ್ರಭೆಯನ್ನು ಹರಡುತ್ತದೆ.

ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನವು ಅದ್ವೈತ ಪೀಠಪರಂಪರೆಯ ಸುಕ್ಷೇತ್ರವಾಗಿದ್ದು ಶ್ರೀ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳ ಸಂಕಲ್ಪದಂತೆ ' ಆದಿಶಂಕರರ ಅದ್ವೈತ ದರ್ಶನ ' ವನ್ನು ಕುರಿತು ಮೂರು ದಿನಗಳ ರಾಷ್ಟ್ರೀಯ ವಿಚಾರ ಸಂಕಿರಣ ಶ್ರೀಮಠದಲ್ಲಿ ಶಂಕರ ಜಯಂತಿಯ ಸಂದರ್ಭದಲ್ಲಿ (೨, ೩, ೪ ಮೇ ೨೦೦೦) ಅರ್ಥಪೂರ್ಣವಾಗಿ ಜರುಗಿತು. ರಾಷ್ಟ್ರದ ಬೇರೆ ಬೇರೆ ಭಾಗಗಳಿಂದ ಬಂದ ವಿದ್ವಾಂಸರು ಶಂಕರರ ಅದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದಂತೆ ಮೌಲಿಕವಾದ ಪ್ರಬಂಧಗಳನ್ನು ಮಂಡಿಸಿದರು. ಈ ಎಲ್ಲ ಪ್ರಬಂಧಗಳನ್ನು ಈಗ ಶ್ರೀ ಭಗವತ್ಪಾದ ಪ್ರಕಾಶನವು ' ಶ್ರೀ ಶಂಕರಾಚಾರ್ಯರ ಅದ್ವೈತ ದರ್ಶನ ' ಶೀರ್ಷಿಕೆಯಲ್ಲಿ ಪ್ರಕಟಿಸುತ್ತಿದ್ದು ಇದು ಶ್ರೀಮಠದ ಹೆಮ್ಮೆಯ ಪ್ರಕಟಣೆಯಾಗುತ್ತಿದೆ.

ಆದಿಶಂಕರರ ವೇದಾಂತಸಾರ, ಅದ್ವೈತ ದರ್ಶನದ ಸ್ವರೂಪವನ್ನು, ಅದರ ವೈಜ್ಞಾನಿಕತೆ, ವೈಚಾರಿಕತೆ, ಪ್ರಸ್ತುತತೆಯನ್ನು ವಿದಿತಪಡಿಸುವ ಸಂಶೋಧನ ಲೇಖನಗಳ ಈ ಗ್ರಂಥ ಪ್ರಕಟಣೆ ಮಾಡಲು ಮುಖ್ಯ ಪ್ರೇರಕಶಕ್ತಿ ಶ್ರೀ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳು. ಅವರು ಶ್ರೀಮಠದ ಪೀಠಾಧಿಪತಿಗಳಾಗಿ ಹತ್ತು ವರ್ಷಗಳಾಗುತ್ತಿದ್ದು

ಇದು ದಶಮಾನೋತ್ಸವದ ನೆನಪಿಗಾಗಿ ಪ್ರಕಟವಾಗುವ ಹತ್ತು ಪುಸ್ತಕಗಳಲ್ಲಿ ಒಂದಾಗಿದೆ. ಇವರ ಪ್ರಕಟಣೆಗೆ ಮಾರ್ಗದರ್ಶನ ಮಾಡಿದ ಶ್ರೀಗಳಿಗೆ ನಮ್ಮ ಭಕ್ತಿಪೂರ್ವಕ ನಮನಗಳು.

ಶಂಕರಾಚಾರ್ಯರ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಪಾಲ್ಗೊಂಡು ಪ್ರಬಂಧ ಮಂಡಿಸಿ, ಅದು ಪುಸ್ತಕ ರೂಪದಲ್ಲಿ ಬರುವಂತೆ ಪ್ರಬಂಧ ಬರೆದುಕೊಟ್ಟ ಎಲ್ಲ ವಿದ್ವಾಂಸರಿಗೆ. ವಿದ್ವಾನ್ ಭಾಲಚಂದ್ರ ಶಾಸ್ತ್ರಿ, ನರಸಿಂಹ ಭಟ್ಟ, ಶಂಕರ ಭಟ್ಟ ಮೊದಲಾದವರಿಗೆ ವಂದನೆಗಳು. ಧಾರವಾಡದ ಮನೋಹರ ಮುದ್ರಣಾಲಯದ ರವಿ - ಚಂದ್ರ ಸೋದರರು ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಶ್ರೀಮಠದ ಆಡಳಿತ ಮಂಡಳಿಯ ಸರ್ವ ಸದಸ್ಯರಿಗೂ, ಶ್ರೀ ಭಗವತ್ಪಾದ ಪ್ರಕಾಶನದ ಸದಸ್ಯರಿಗೂ ನಮ್ಮ ಕೃತಜ್ಞತೆಯ ವಂದನೆಗಳು.

'ಶ್ರೀ ಶಂಕರಾಚಾರ್ಯರ ಅದ್ವೈತ ದರ್ಶನ' ಗ್ರಂಥವನ್ನು ಭಕ್ತಜನತೆ ಪ್ರೀತಿಯಿಂದ ಕೊಂಡು ಓದಿ ಆನಂದಿಸುವಂತಾಗಲಿ ಎಂದು ಹಾರೈಸುತ್ತೇವೆ.

ಶ್ರೀ ಭಗವತ್ಪಾದ ಪ್ರಕಾಶನ<br>ಸ್ವರ್ಣವಲ್ಲೀ ಮಹಾಸಂಸ್ಥಾನ<br>ಮಠದೇವಳ ಸೋದಾ

**ಡಾ. ಜಿ. ಎಂ. ಹೆಗಡೆ**<br>**ಪ್ರೊ. ಪಿ. ಆಯ್. ಹೆಗಡೆ**

# ಸಂಪಾದಕರ ಮಾತು



ಭಾರತದ ಆಧ್ಯಾತ್ಮಿಕ ಲೋಕದ ಮಹಾಚೇತನವಾದ ಆದಿ ಶಂಕರಾಚಾರ್ಯರು ಭಾರತೀಯ ಸಂಸ್ಕೃತಿಯ ಪುನರುತ್ಥಾನ ಮಾಡಿದ ಯತಿವರ್ಯರಾಗಿದ್ದಾರೆ. ಅದ್ವೈತ ದರ್ಶನ, ವೇದಾಂತವಿಚಾರಗಳನ್ನು ಆಸೇತು ಹಿಮಾಚಲ ಪರ್ಯಂತ ಪ್ರಸಾರ ಮಾಡಿದ ಶಂಕರಾಚಾರ್ಯರು ಅದ್ವಿತೀಯ ಕಾರ್ಯ ಮಾಡಿದ್ದಾರೆ. ಪ್ರಪಂಚವೇ ಬೆರಗುಗೊಳ್ಳುವ ಅದ್ಭುತ ಪ್ರತಿಭೆ, ಪಾಂಡಿತ್ಯ ಹೊಂದಿದ್ದ ಅವರು ವಿದ್ವತ್ತಿನ ಮೇರು ಶಿಖರವಾಗಿದ್ದರು. ಭಾರತೀಯ ವೇದಾಂತಕ್ಕೆ ಆದಿಶಂಕರಾಚಾರ್ಯರು ನೀಡಿದ ಕೊಡುಗೆ ಅನುಪಮವಾದುದು. ಭಾರತೀಯ ಸಾಂಸ್ಕೃತಿಕ ಇತಿಹಾಸದಲ್ಲಿ ಆದಿಶಂಕರರು ಸಂಸ್ಕೃತಿಯ ದಿವ್ಯಪ್ರಭೆಯಾಗಿ ಕಂಗೊಳಿಸುತ್ತಾರೆ.

ಭಾರತೀಯ ದಾರ್ಶನಿಕ ಪ್ರಪಂಚದ ಧೀಮಂತರಾದ ಆದಿಶಂಕರಾಚಾರ್ಯರು ಪ್ರಸ್ಥಾನತ್ರಯಗಳಾದ ಶ್ರೀಭಗವದ್ಗೀತೆ, ಬ್ರಹ್ಮಸೂತ್ರ, ಉಪನಿಷತ್ತುಗಳಿಗೆ ಭಾಷ್ಯಗ್ರಂಥಗಳನ್ನು ರಚಿಸಿ ಭಾರತೀಯ ವಿದ್ವತ್ತಿಗೆ ಮಹೋಪಕಾರ ಮಾಡಿದ್ದಾರೆ. ನಿರ್ಗುಣ ಬ್ರಹ್ಮೋಪಾಸಕರೂ, ಅದ್ಭುತ ತಾರ್ಕಿಕರೂ ಆಗಿದ್ದ ಆದಿಶಂಕರಾಚಾರ್ಯರು ಭಕ್ತವರೇಣ್ಯರೂ ಆಗಿದ್ದರು. ಕೇವಲಜ್ಞಾನಿಗಳಾಗಿದ್ದರೂ ಭಕ್ತಿಮಾರ್ಗಪ್ರತಿಪಾದನೆ ಮಾಡಿ ಅನೇಕ ಸ್ತೋತ್ರಗಳನ್ನು ರಚಿಸಿ ಜನಸಾಮಾನ್ಯರ ಹೃದಯದಲ್ಲಿ ಭಕ್ತಿಯ ಬೀಜ ಬೆಳೆಯುವಂತೆ ಮಾಡಿದರು. ವೇದಾಂತ ತತ್ವಗಳು ಜನಸಾಮಾನ್ಯರ ಅರಿವಿಗೆ ಬರುವಂತೆ ಮಾಡುವದು ಅವರ ಉದ್ದೇಶವಾಗಿತ್ತು. ಆದ್ದರಿಂದಲೇ ಆದಿಶಂಕರರು ರಚಿಸಿದ ಸ್ತೋತ್ರಸಾಹಿತ್ಯ ಭಕ್ತಿ-ಜ್ಞಾನ ವೈರಾಗ್ಯದ ತ್ರಿವೇಣಿಸಂಗಮವಾಗಿ ಭಾರತೀಯರನ್ನು ನಿರಂತರವಾಗಿ ಪ್ರಭಾವಿಸುತ್ತ ಬಂದಿದೆ. ನಿರಂತರವಾಗಿ ಚಿಂತನ ಮಂಥನ ಮಾಡುವ ವಿಚಾರಧಾರೆ ಆದಿಶಂಕರರ ಕೃತಿರಾಶಿಯಲ್ಲಿ ಅಂತಸ್ಥವಾಗಿದೆ.

ಹನ್ನೆರಡು ನೂರು ವರ್ಷಗಳ ಭವ್ಯ ಇತಿಹಾಸವುಳ್ಳ ಮಹಾಗುರುಪೀಠವಾದ ಸ್ವರ್ಣವಲ್ಲೀ ಮಹಾಸಂಸ್ಥಾನದಲ್ಲಿ ಆದಿಶಂಕರರನ್ನು ಕುರಿತು ರಾಷ್ಟ್ರೀಯ ವಿಚಾರಸಂಕಿರಣವನ್ನು ನಡೆಸಲು ಪೂಜ್ಯ ಶ್ರೀಗಳಾದ ಶ್ರೀ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳು ನಿರ್ಧರಿಸಿ ಮಾರ್ಗದರ್ಶನ ಮಾಡಿದರು. ಆದಿಶಂಕರರ ಕೃತಿಗಳ

ವಿಮರ್ಶಾತ್ಮಕ ಅಧ್ಯಯನ. ಸನಾತನ ಧರ್ಮದ ಪುನರುಜ್ಜೀವನದಲ್ಲಿ ಶಂಕರರ ಪಾತ್ರ, ಅದ್ವೈತ ಸಿದ್ಧಾಂತದ ವೈಜ್ಞಾನಿಕತೆ. ಶಂಕರ ಸಿದ್ಧಾಂತದ ಕಾಲೌಚಿತ್ಯ, ಆದಿಶಂಕರರು ಮತ್ತು ಇತರ ಸಿದ್ಧಾಂತಗಳು, ಭಾರತೀಯ ಸಾಹಿತ್ಯದ ಮೇಲೆ ಅದ್ವೈತ ಸಿದ್ಧಾಂತದ ಪ್ರಭಾವ ಎಂಬ ಗೋಷ್ಠಿಗಳಲ್ಲಿ ವಿದ್ವತ್ಪೂರ್ಣ ಪ್ರಬಂಧಗಳು ಮಂಡಿತವಾಗಲು ರಾಷ್ಟ್ರದ ಬೇರೆ ಬೇರೆ ಭಾಗಗಳಿಂದ ವಿದ್ವಾಂಸರನ್ನು ಆಮಂತ್ರಿಸಲಾಯಿತು. ಮೂರು ದಿನಗಳ ಕಾಲ (೨, ೩, ೪ ಮೇ ೨೦೦೦) ಆದಿಶಂಕರರನ್ನು ಕುರಿತ ರಾಷ್ಟ್ರೀಯ ವಿಚಾರಸಂಕಿರಣ ಸ್ವರ್ಣವಲ್ಲಿ ಮಹಾಸಂಸ್ಥಾನದಲ್ಲಿ ಅರ್ಥಪೂರ್ಣವಾಗಿ ಜರುಗಿತು. ಶಂಕರ ಜಯಂತಿಯಂದು (೨ ಮೇ ೨೦೦೦) ಈ ವಿಚಾರ ಸಂಕಿರಣವನ್ನು ಕಂಚಿಯ ಕಾಮಕೋಟಿ ಪೀಠದ ಪೂಜ್ಯ ಶ್ರೀಗಳಾದ ಶ್ರೀ ಜಯೇಂದ್ರ ಸರಸ್ವತಿ ಮಹಾಸ್ವಾಮಿಗಳು ಉದ್ಘಾಟಿಸಿದರು. ಅವರ ಉದ್ಘಾಟನಾ ಉಪನ್ಯಾಸ ಮತ್ತು ಪೂಜ್ಯ ಶ್ರೀಗಳಾದ ಶ್ರೀ ಗಂಗಾಧರೇಂದ್ರ ಸರಸ್ವತಿ ಸ್ವಾಮಿಗಳ ಪ್ರಾಸ್ತಾವಿಕ ಉಪನ್ಯಾಸಗಳನ್ನು ಈ ಗ್ರಂಥದ ಆರಂಭದಲ್ಲಿ ನೀಡಲಾಗಿದೆ. ಅಂದು ಕಂಚಿ ಮಠದ ಶ್ರೀ ವಿಜಯೇಂದ್ರ ಸರಸ್ವತಿ ಮಹಾಸ್ವಾಮಿಗಳು ಉದ್ಘಾಟನಾ ಸಮಾರಂಭದಲ್ಲಿ ಪಾಲ್ಗೊಂಡುದು ವಿಶೇಷವಾಗಿತ್ತು. ವಿವಿಧ ಗೋಷ್ಠಿಗಳ ಈ ವಿಚಾರ ಸಂಕಿರಣದಲ್ಲಿ ಮಂಡಿಸಲ್ಪಟ್ಟ ವಿದ್ವಾಂಸರ ೧೮ ಪ್ರಬಂಧಗಳನ್ನು ಈ ಸಂಪುಟದಲ್ಲಿ ಅಳವಡಿಸಲಾಗಿದೆ. ಕೊನೆಯಲ್ಲಿ ಪೂಜ್ಯ ಶ್ರೀಗಳಾದ ಶ್ರೀ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳ ಸಮಾರೋಪ ಉಪನ್ಯಾಸವನ್ನು ಯಥಾವತ್ತಾಗಿ ನೀಡಲಾಗಿದೆ.

ಆದಿಶಂಕರರ ಕೃತಿದರ್ಶನ, ಅದ್ವೈತದರ್ಶನದ ವ್ಯಾಖ್ಯಾನ ಅದರ ವೈಜ್ಞಾನಿಕತೆ ಮತ್ತು ಅನುಷ್ಠಾನ ವೇದಾಂತ ಅಲ್ಲದೆ ಹೊಸದಾಗಿ ಭಾರತೀಯ ಸಾಹಿತ್ಯದ ಮೇಲೆ ಅದ್ವೈತ ಸಿದ್ಧಾಂತದ ಪ್ರಭಾವವನ್ನು ಕುರಿತ ಮಹತ್ವಪೂರ್ಣ ಲೇಖನಗಳು ಈ ಸಂಪುಟದ ವಿಶೇಷತೆಯಾಗಿದೆ. "ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾ ಪರಃ" ಎಂಬ ಅದ್ವೈತ ದರ್ಶನದ ಮಹಾವಾಕ್ಯವನ್ನು ನೀಡಿ ಭಾರತೀಯರನ್ನು ಎಚ್ಚರಿಸಿದ ಆದಿಶಂಕರರ ಮೇರುವ್ಯಕ್ತಿತ್ವದ ಹಾಗೂ ಅದ್ವೈತ ದರ್ಶನದ ವ್ಯಾಪಕ ಚಿಂತನಧಾರೆಯು ಈ ಕೃತಿಯ ವೈಶಿಷ್ಟ್ಯವಾಗಿದೆ. ಈ ರಾಷ್ಟ್ರೀಯ ವಿಚಾರ ಸಂಕಿರಣವನ್ನು ನಡೆಸಲು ಮುಖ್ಯಪ್ರೇರಕ ಶಕ್ತಿಯಾದ ಶ್ರೀ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳವರಿಗೆ ಭಕ್ತಿಪೂರ್ವಕ ನಮನಗಳು. ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಪ್ರಬಂಧಗಳನ್ನು ಮಂಡಿಸಿದ ಎಲ್ಲ ವಿದ್ವಾಂಸರಿಗೂ ಕೃತಜ್ಞತೆಗಳು, ಈ ಸಂಪುಟವನ್ನು ಪ್ರಕಟಿಸಲು ಕಾರಣರಾದ ಶ್ರೀಮಠದ ಆಡಳಿತ ಮಂಡಳಿಗೂ, ಶ್ರೀಮಠದ ಅಧ್ಯಾಪಕ ವೃಂದಕ್ಕೂ ಹಾಗೂ ಶ್ರೀ ಭಗವತ್ಪಾದ ಪ್ರಕಾಶನದ ಎಲ್ಲ ಸದಸ್ಯರಿಗೆ ವಂದನೆಗಳು. ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಧಾರವಾಡದ ಮನೋಹರ ಮುದ್ರಣಾಲಯದ ರವಿ-ಚಂದ್ರ ಸಹೋದರರಿಗೆ ಹಾಗೂ ಕರಡು ತಿದ್ದುವಲ್ಲಿ ನೆರವಾದ ಸೋಮಶೇಖರ ಆಕಳವಾಡಿ ಅವರಿಗೆ ಹಾಗೂ ಗ್ರಂಥಕ್ಕೆ ಮುಖಚಿತ್ರ ಒದಗಿಸಿದ ರವೀಂದ್ರ ವಿಶ್ವಜ್ಞ ಅವರಿಗೂ ನೆನಕೆಗಳು. ಶಂಕರರ ಅದ್ವೈತ ದರ್ಶನದ ಈ ಗ್ರಂಥವು ಸಹೃದಯರಿಗೆ ಪ್ರಿಯವಾಗಲೆಂದು ಆಶಿಸುತ್ತೇನೆ.

ಧಾರವಾಡ

ಡಾ. ಜಿ. ಎಂ. ಹೆಗಡೆ



ತಿರುಮಲ ತಿರುಪತಿ ದೇವಸ್ಥಾನವು
ಈ ಗ್ರಂಥ ಪ್ರಕಟಣೆಗೆ ಧನಸಹಾಯ ಮಾಡಿದ್ದು
ತಿರುಮಲ ತಿರುಪತಿ ದೇವಸ್ಥಾನಕ್ಕೆ ಹಾಗೂ ಧರ್ಮದರ್ಶಿ
ಮಂಡಳಿಗೆ ಕೃತಜ್ಞತೆಯ ನಮನಗಳು.

# ಪರಿವಿಡಿ



# ಶ್ರೀ ಶಂಕರಾಚಾರ್ಯರನ್ನು ಕುರಿತ " ರಾಷ್ಟ್ರೀಯ ವಿಚಾರ ಸಂಕಿರಣ"ದಲ್ಲಿ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನಾಧೀಶ್ವರರಾದ

# ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳವರು ನೀಡಿದ ಪ್ರಾಸ್ತಾವಿಕ ಭಾಷಣ

ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಅಂಗಸಂಸ್ಥೆಯಾದ ಶ್ರೀ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನದ ಆಶ್ರಯದಲ್ಲಿ ಶ್ರೀ ಶಂಕರ ಭಗವತ್ಪಾದಾಚಾರ್ಯರನ್ನು ಕುರಿತು ನಡೆಸಲ್ಪಡುವ ರಾಷ್ಟ್ರೀಯ ವಿಚಾರ ಸಂಕಿರಣದ ಉದ್ಘಾಟನೆಯು ಪರಮಪೂಜ್ಯ ಶ್ರೀ ಶ್ರೀ ಜಯೇಂದ್ರ ಸರಸ್ವತೀ ಮಹಾಸ್ವಾಮಿಗಳವರಿಂದ ನೆರವೇರಿಸಲ್ಪಟ್ಟಿದೆ. ಈ ವಿಚಾರ ಸಂಕಿರಣವು ಶ್ರೀ ಶಂಕರರ ಸ್ವರೂಪವೇ ಆಗಿರುವ ಶ್ರೀ ಕಂಚೀ ಕಾಮಕೋಟಿ ಪೀಠದ ಜಗದ್ಗುರುಗಳ ಸನ್ನಿಧಿಯಲ್ಲಿ ಪ್ರಾರಂಭವಾಗುತ್ತಿರುವುದು ನಮ್ಮ ಅಹೋ ಭಾಗ್ಯ.

ನಮ್ಮ ದೇಶದಲ್ಲಿ ಅವತರಿಸಿದ ಆಚಾರ್ಯ ಮಹಾನುಭಾವರಲ್ಲಿ ಆದ್ಯರೂ ಪೂಜ್ಯರೂ ಆದವರು ಶ್ರೀ ಶಂಕರ ಭಗವತ್ಪಾದರು. ಬೇರೆ ಬೇರೆ ಕಾರಣಗಳಿಂದಾಗಿ ಸಾಮಾನ್ಯ ಜನರ ಮಾನಸದಲ್ಲಿ ಆಚಾರ್ಯರ ಸ್ಮರಣೆ ಇಂದು ಕಡಿಮೆಯಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಆದರೆ ಶ್ರೀ ಶಂಕರರು ಇಂದಿಗೂ ಪ್ರಸ್ತುತರು. ಇದಕ್ಕೆ ಹಲವು ವಿಷಯಗಳನ್ನು ಕಾರಣವಾಗಿ ಕೊಡಬಹುದು. ಈ ವಿಚಾರ ಸಂಕಿರಣದಲ್ಲಿ ಮಂಡಿಸಲ್ಪಡುವ ಎಲ್ಲ ಪ್ರಬಂಧಗಳೂ ಒಂದಿಲ್ಲೊಂದು ರೀತಿಯಲ್ಲಿ "ಶ್ರೀ ಶಂಕರರು ಇಂದಿಗೂ ಪ್ರಸ್ತುತರು" ಎಂಬ ವಿಷಯವನ್ನೇ ಸಮರ್ಥಿಸುತ್ತವೆ.

ಶ್ರೀ ರಾಮಕೃಷ್ಣ ಪರಮಹಂಸರು ತಮ್ಮ ದಿವ್ಯವಾಣಿಯಲ್ಲಿ ಅನೇಕ ಸಲ ಶ್ರೀ ಶಂಕರ ಭಗವತ್ಪಾದರನ್ನು ಸ್ಮರಿಸಿದ್ದಾರೆ, ಗೌರವಿಸಿದ್ದಾರೆ. 'ಶ್ರೀ ಶಂಕರರು ಲೋಕಶಿಕ್ಷಣಕ್ಕಾಗಿ ಅವತರಿಸಿದ ಮಹಾನುಭಾವರು' ಎಂದವರು ಹೇಳುತ್ತಾರೆ. ಲೋಕಶಿಕ್ಷಣವೆನ್ನುವುದು ಸುಲಭದ ವಿಷಯವಲ್ಲ. ಆಚಾರ್ಯತ್ವವೆನ್ನುವುದು ಹಗುರವಾದ ಸ್ಥಾನವಲ್ಲ. ಅದನ್ನು ನಿರ್ವಹಿಸಬೇಕಾದರೆ ಆತ ಭಗವದನುಗ್ರಹವನ್ನು ಪಡೆದಿರಬೇಕಾಗುತ್ತದೆ. ಆಗಲೇ ಅವನ ಲೋಕಶಿಕ್ಷಣ ಸಾರ್ಥಕವಾಗುತ್ತದೆ. ಈ ರೀತಿಯಲ್ಲಿ ಪರಿಪೂರ್ಣ ಅನುಗ್ರಹವನ್ನು ಪಡೆದು ಬಂದಂಥ ಮಹಾನುಭಾವರು ಶಂಕರರು

ಎಂಬ ಮಾತನ್ನು ಶ್ರೀ ರಾಮಕೃಷ್ಣರು ಆಗಾಗ ಹೇಳುತ್ತಿದ್ದರು. ಶ್ರೀ ಶಂಕರರು ಸಮಾಧಿಸ್ಥಿತಿಯ ಪರಮೋಚ್ಚ ಅನುಭವವನ್ನು ಪಡೆದು, ಲೋಕಾನುಗ್ರಹಕ್ಕಾಗಿ ಬಹಿರ್ಮುಖವಾಗಿ ಬಂದವರು. ಯೋಗಶಾಸ್ತ್ರದ ಪ್ರಕಾರ ಸಮಾಧಿಸ್ಥಿತಿ ಅದರಲ್ಲೂ ಉಚ್ಚವಾದ ಸಮಾಧಿ ಸ್ಥಿತಿಯೆಂದರೆ 'ಶವ ಸಮಾಧಿ'. ಆ ಶವಸಮಾಧಿ ಬಂದುಬಿಟ್ಟರೆ ಆತ ಹೆಚ್ಚೆಂದರೆ ೨೦ ದಿನ ಬದುಕುತ್ತಾನೆ. ನಂತರ ಅವನು ಕಾಯವನ್ನು ತ್ಯಜಿಸುತ್ತಾನೆ. ಈ ಜೀವನಕ್ಕೆ ಪುನಃ ಬರುವುದೇ ಇಲ್ಲ. ಆದರೆ ಶ್ರೀ ಶಂಕರರಂಥವರು ಪುನಃ ಇಲ್ಲಿಗೆ ಬಂದಿದ್ದಾರೆ, ಅದು ಲೋಕಶಿಕ್ಷಣಕ್ಕಾಗಿ. ಈ ಮಾತನ್ನು ಶ್ರೀ ರಾಮಕೃಷ್ಣರು ಪುನಃ ಪುನಃ ಹೇಳಿದ್ದನ್ನು ನಾವು ಕಾಣುತ್ತೇವೆ. ಅವರು ಈ ರೀತಿಯ ಗೌರವದ ಮಾತನ್ನು ಇನ್ನಾವ ಆಚಾರ್ಯರ ಬಗ್ಗೂ ಹೇಳಿಲ್ಲ ಎನ್ನುವುದು ಗಮನಾರ್ಹ ಸಂಗತಿ. ಇಂದು ವಿಶ್ವದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು ಸರ್ವರ ಆದರಕ್ಕೆ ಪಾತ್ರರು. ಅಂಥವರು ಶ್ರೀ ಶಂಕರರನ್ನು ಪರಿಪೂರ್ಣಭಾವದಿಂದ ಗೌರವಿಸುತ್ತಾರೆಂದ ಮೇಲೆ ಶ್ರೀ ಶಂಕರರ ಗೌರವವೆಷ್ಟು ! ಮಾತ್ರವಲ್ಲ ಇಂದಿಗೂ ಅವರ ಪ್ರಸ್ತುತತೆ ಎಷ್ಟು ! ಎಂಬುದನ್ನು ನಾವು ಊಹಿಸಬಹುದು.

ಇದೇ ರೀತಿಯಲ್ಲಿ ಸ್ವಾಮೀ ವಿವೇಕಾನಂದರೂ ಹೇಳುತ್ತಾರೆ. ಅವರ ಪ್ರವಚನಗಳಲ್ಲೆಲ್ಲ ಶ್ರೀ ಶಂಕರರ ಅದ್ವೈತ ಸಿದ್ಧಾಂತವು ಓತಪ್ರೋತವಾಗಿ ತುಂಬಿದೆ. ಆಧುನಿಕ ವಿಜ್ಞಾನಿಗಳೂ ಕೂಡ ಶ್ರೀ ಶಂಕರರನ್ನು ತುಂಬ ಗೌರವಿಸುತ್ತಾರೆ. ಏಕೆಂದರೆ ಶ್ರೀ ಶಂಕರರ ಗ್ರಂಥಗಳಲ್ಲಿ ಎಲ್ಲಿಯೂ ಅವೈಜ್ಞಾನಿಕ ವಿಷಯಗಳಿಲ್ಲ. ಅವರ ಕೃತಿಗಳ ವಿಷಯವ್ಯಾಪ್ತಿ ವಿಸ್ತಾರವಾದುದು. ಎಲ್ಲ ಕೃತಿಗಳನ್ನೂ ಓದಲು ಹಲವು ವರ್ಷಗಳೇ ಬೇಕಾಗುತ್ತವೆ. ಅಷ್ಟು ವಿಸ್ತೃತವಾದ ಅವರ ಸಾಹಿತ್ಯದಲ್ಲಿ ಎಲ್ಲಿಯೂ "ಇದೊಂದು ಅವೈಜ್ಞಾನಿಕ ವಿಷಯ" ಎಂದು ತಿರಸ್ಕರಿಸಬಹುದಾದ ಒಂದು ವಿಷಯವೂ ಇಲ್ಲ. ನಮ್ಮ ಒಂದು ಅನಿಸಿಕೆ– ಶ್ರೀ ಶಂಕರರ ಸಿದ್ಧಾಂತ ಕೇವಲ ಇಂದಿಗೆ ಮಾತ್ರ ಪ್ರಸ್ತುತವೆಂತಲ್ಲ. ಕಲಿಯುಗ ಇನ್ನೂ ಮುಕ್ಕಾಲು ಭಾಗ ಉಳಿದಿದೆ. ಬಹುಶಃ ಕಲಿಯುಗಾಂತ್ಯದ ವರೆಗೂ ಅದು ಮಾಸಲಾರದು. ಅದರ ಗೌರವ ಹೆಚ್ಚುತ್ತಲೇ ಇರುತ್ತದೆ. ಇನ್ನು ಜನತೆಗೆ ಚೆನ್ನಾಗಿ ಬಿಂಬಿಸುವುದು ಈ ವಿಚಾರ ಸಂಕಿರಣದ ಒಂದು ಪ್ರಧಾನ ಉದ್ದೇಶ.

ನಾವು ಈ ವಿಚಾರ ಸಂಕಿರಣಕ್ಕೆ "ಶ್ರೀ ಶಂಕರರ ಕುರಿತ ರಾಷ್ಟ್ರೀಯ ವಿಚಾರ ಸಂಕಿರಣ" ಎಂದು ಶೀರ್ಷಿಕೆ ನೀಡಿದ್ದೇವೆ. ಇಲ್ಲಿ ಬಂದ ಅನೇಕರಿಗೆ ಮನಸ್ಸಿನೊಳಗೆ ಒಂದು ಸಂಕೋಚ ಇದೆ. ಏನೆಂದರೆ,– ಇಲ್ಲಿ ಕಂಚಿಯ ಗುರುಪೀಠ ಬಂದಿದೆ. ಮತ್ತೆ ಕೆಲವು ಕರ್ನಾಟಕದ ಹೊರಗಿನ ವಿದ್ವಾಂಸರು ಬಂದಿದ್ದಾರೆ. ಅಷ್ಟು ಬಿಟ್ಟರೆ ಉಳಿದವರೆಲ್ಲ ಇಲ್ಲಿಯವರೆ ತಾನೆ ? ಅಂದಮೇಲೆ ಇದು ಹೇಗೆ ರಾಷ್ಟ್ರೀಯ ? ಆದರೆ ರಾಷ್ಟ್ರೀಯ ಶಬ್ದ ಬಳಸುವ ಉದ್ದೇಶ ಬೇರೆಯೇ ಇದೆ. ಅದು ಶ್ರೀ ಶಂಕರರು ನಿಜವಾದ ರಾಷ್ಟ್ರೀಯ ವ್ಯಕ್ತಿ ಎನ್ನುವುದು. ನಾವೆಲ್ಲ ಈ ದೇಶದ ಏಕದೇಶಿಗಳಾಗಿದ್ದೇವೆ. ನಮಗೆ ನಮ್ಮ ಮಾತೃಭಾಷೆ, ನಮ್ಮ ಸಂಕುಚಿತ ಪ್ರದೇಶದ ಬಗ್ಗೆಯಷ್ಟೇ ಗೌರವ. ಆದರೆ ಶ್ರೀ ಶಂಕರರು ಸನಾತನ ಧರ್ಮದ ಪುನರುತ್ಥಾನಕ್ಕಾಗಿ ಸಮಗ್ರ ದೇಶದಲ್ಲಿ ಸಂಚಾರ ಮಾಡಿ ಎಲ್ಲ ಕಡೆ ತಮ್ಮ

ಪ್ರಭಾವವನ್ನು ಸ್ಥಾಪಿಸಿದ್ದಾರೆ. ಭಾರತದ ತುತ್ತತುದಿ ಕಾಶ್ಮೀರವಿರಲಿ, ಚೀನಾಗಡಿಯ ಹತ್ತಿರದ ಬದರೀನಾಥವಿರಲಿ, ಪೂರ್ವದ ಆಸ್ಸಾಂ ಇರಲಿ, ದಕ್ಷಿಣದ ಕನ್ಯಾಕುಮಾರಿ ಇರಲಿ ಎಲ್ಲೆಡೆ ಶ್ರೀ ಶಂಕರರು ಇಟ್ಟ ಹೆಜ್ಜೆಯ ಛಾಯೆ ಇನ್ನೂ ಇದೆ. ಸಮಗ್ರ ಭಾರತದಲ್ಲಿ ಶ್ರೀ ಶಂಕರರ ಪ್ರಭಾವ ಮಾಸದೇ ಇರುವದರಿಂದ "ಶಂಕರಾಚಾರ್ಯಜೀ" ಎಂದೇ ನಮ್ಮನ್ನು (ಅನೇಕ ಸನ್ಯಾಸಿಗಳನ್ನು) ಮಾತನಾಡಿಸುತ್ತಾರೆ. ಅಷ್ಟರ ಮಟ್ಟಿಗೆ ಶ್ರೀ ಶಂಕರಾಚಾರ್ಯರ ಬಗ್ಗೆ ಜನಮಾನಸದಲ್ಲಿ ಏನೋ ಒಂದು ಕಳಕಳಿ, ಅಭಿಮಾನ ಇದೆ.

ಇಂದು ಭಾರತದ ಭೂಭಾಗ ಎಷ್ಟಿದೆಯೋ ಅಷ್ಟನ್ನೂ ಒಟ್ಟಿಗೇ ಆಳಿದ ರಾಜರು ಇಲ್ಲವೇ ಇಲ್ಲ ಎಂದರೂ ತಪ್ಪಿಲ್ಲ. ಹರ್ಷವರ್ಧನ ಉತ್ತರ ಭಾರತವನ್ನು ಪೂರ್ತಿ ಆಳಿದ್ದಾನೆ. ಪುಲಕೇಶಿ ದಕ್ಷಿಣ ಭಾರತದ ಕೇಂದ್ರಭಾಗವಾದ ಬಾದಾಮಿಯಿಂದ ರಾಜನಾಗಿ ಆಳಿದ್ದಾನೆ. ಅಶೋಕ ಚಕ್ರವರ್ತಿ ಸುಮಾರು ಮುಕ್ಕಾಲು ಭಾಗ ಭಾರತವನ್ನು ಆಳಿದ್ದ. ಆದರೆ ಸಮಗ್ರ ಭಾರತವನ್ನು ಆಳಿದ ವ್ಯಕ್ತಿ ಎಂದರೆ ಮತ್ತೆ ಶ್ರೀರಾಮಚಂದ್ರನ ಬಳಿಗೇ ಹೋಗಬೇಕು. ಆದರೆ ಇಂದು ನಾವು ಯಾವುದನ್ನು ಭಾರತವೆಂದು ಗುರುತಿಸುತ್ತೇವೆಯೋ ಆ ಇಡೀ ದೇಶವನ್ನು ಶಂಕರರು ಸಂಚರಿಸಿದ್ದಾರೆ. ನಮಗನಿಸುತ್ತದೆ– ಇತಿಹಾಸದಲ್ಲಿ "ಇದು ನಮ್ಮ ದೇಶದ ಗಡಿ" ಎಂದು ಗುರುತಿಸಲಿಕ್ಕೆ ಇನ್ನಾವುದೇ ಸ್ಪಷ್ಟ ಕುರುಹು ಇಲ್ಲದೇ ಹೋದರೂ, ಶ್ರೀ ಶಂಕರರು ಯಾವ ಯಾವ ಭಾಗದಲ್ಲಿ ಸಂಚರಿಸಿದ್ದಾರೋ ಅದನ್ನೇ ಗಡಿಯಾಗಿ ಗುರುತಿಸಿದರೆ ಭಾರತ ದೇಶದ ನಕಾಶೆಯಾಗುತ್ತದೆ. ಅದಕ್ಕಾಗಿ ನಾವು ಹೇಳುವುದು– ಶ್ರೀ ಶಂಕರರೊಬ್ಬರೇ ಅಪ್ಪಟ ರಾಷ್ಟ್ರೀಯ ವ್ಯಕ್ತಿ ಎಂದು. ಹಾಗಾಗಿ ಅವರ ರಾಷ್ಟ್ರೀಯತೆಯನ್ನು ಎತ್ತಿ ಹಿಡಿಯಬೇಕೆಂಬುದು ನಮ್ಮ ಮೂಲ ಉದ್ದೇಶ. ಅದಕ್ಕೇ 'ರಾಷ್ಟ್ರೀಯ ವಿಚಾರ ಸಂಕಿರಣ' ಎಂದೇ ಶೀರ್ಷಿಕೆ ನೀಡಲಾಗಿದೆ. ಅಂತಹ ಒಬ್ಬ ರಾಷ್ಟ್ರೀಯ ಮಹಾನುಭಾವರ ಪ್ರಸ್ತುತತೆಯ ಕುರಿತಾಗಿ ಈ ಗೋಷ್ಠಿಗಳಲ್ಲಿ ಆಳವಾದ ಚಿಂತನೆ ನಡೆಯಲಿಕ್ಕಿದೆ.

ದೀಪ ಬೆಳಗಿಸಿ ಸಮಾರಂಭದ ಉದ್ಘಾಟನೆ ಮಾಡುವುದು ಲೋಕ ರೂಢಿ. ಆದರೆ ಈ ಸಮಾರಂಭದ ಉದ್ಘಾಟನಾ ಕ್ಷಣದಲ್ಲಿ ಸಭಾಸದರು ನೋಡಿದ್ದೇ ಬೇರೆ. ಕಂಚಿ ಕಾಮಕೋಟಿ ಜಗದ್ಗುರು ಪೀಠದ ಪರಮ ಪೂಜ್ಯ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಮಹಾಸ್ವಾಮಿಗಳವರಲ್ಲಿ ಸಮಾರಂಭವನ್ನು ಉದ್ಘಾಟಿಸುವಂತೆ ಪ್ರಾರ್ಥಿಸಿದಾಗ ಅವರು ದೀಪದ ಹತ್ತಿರ ಹೋಗಿ ನಿಂತು ದೀಪ ಹಚ್ಚಿಸಿದರೇ (ಶಿಷ್ಯರ ಕೈಯಿಂದ) ವಿನಃ ಸ್ವತಃ ದೀಪ ಹಚ್ಚಲಿಲ್ಲ. ಈ ಕುರಿತು ಎಲ್ಲರ ಮನಸ್ಸಿನಲ್ಲಿ ಪ್ರಶ್ನೆಯೂ ಹುಟ್ಟಿಕೊಂಡಿರಲಿಕ್ಕೂ ಸಾಕು. ಹತ್ತು ವರ್ಷಗಳ ಹಿಂದೆ ಪೀಠಾರೋಹಣ ಪ್ರಧಾನ ಸಮಾರಂಭದಲ್ಲಿಯೇ ಅವರು ಒಂದು ಮಾತನ್ನು ಹೇಳಿದ್ದರು– "ದೀಪದಿಂದ ದೀಪ ಹೊತ್ತಿಸಿ, ನಿಮಗೊಂದು ದೀಪ ತಯಾರು ಮಾಡಿ ಕೊಟ್ಟಿದ್ದೇವೆ. ಇದನ್ನು ನೀವು ರಕ್ಷಣೆ ಮಾಡಿಕೊಳ್ಳಿ" ಎಂದು. ಆ ದೀಪ ಇಲ್ಲಿ ಇನ್ನೂ ಉರಿಯುತ್ತಾ ಇದೆ. ಹಾಗಾಗಿ ಬಹುಶಃ ದೀಪ ಹಚ್ಚುವ ಅವಶ್ಯಕತೆ ಇಲ್ಲ ಎನಿಸಿತೋ ಏನೋ ಅವರಿಗೆ. ಇದಕ್ಕೆ ಹತ್ತು ವರ್ಷಗಳಿಂದ ಪರಸ್ಪರ ಬೆಸೆದುಕೊಂಡು ಬಂದಂಥ ಬಾಂಧವ್ಯ, ಪ್ರೀತಿ, ಕಳಕಳಿ, ಅನುಗ್ರಹಗಳೇ ಕಾರಣ. ಕಂಚಿ ಕಾಮಕೋಟಿ ಪೀಠದ

ಸ್ವಾಮಿಗಳಿಂದ ಅನೇಕ ವಿಷಯಗಳಲ್ಲಿ ಮಾಗದರ್ಶನ ಸಿಗುತ್ತಲೇ ಇದೆ. ಆ ಪ್ರೀತಿಯ ಕಳಕಳಿ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಾ ಬರುತ್ತಿದೆ. ಈ ಮಹಾಸಂಸ್ಥಾನಕ್ಕೆ ಅವರು ಮಾಡಿದ ಮಾರ್ಗದರ್ಶನ, ಇಲ್ಲಿಯ ಭಕ್ತ ಜನರಿಗೆ ಅವರು ಮಾಡಿದ ಉಪಕಾರ ಅಜರ-ಅಮರ. ಈ ಸಮ್ಮೇಳನ ಅವರ ವಿಶೇಷ ಆಶೀರ್ವಾದದಿಂದ ಪರಿಪೂರ್ಣವಾಗುತ್ತದೆ.

ಒಂದರ್ಥದಲ್ಲಿ ನಮಗೆ ಸತೀರ್ಥ್ಯರು ಎನ್ನಬಹುದಾದ ಶ್ರೀ ಶ್ರೀಶಂಕರ ವಿಜಯೇಂದ್ರ ಸರಸ್ವತೀ ಮಹಾಸ್ವಾಮಿಗಳವರೂ ಕೂಡ ತಮ್ಮ ಸಾನ್ನಿಧ್ಯವನ್ನು ಕರುಣಿಸಿದ್ದಾರೆ. ಇಲ್ಲಿಯ ಜನ ವೇದ-ಸಂಸ್ಕೃತಗಳಲ್ಲಿ ತುಂಬ ಅಭಿಮಾನವುಳ್ಳವರು ಎಂದು ಕೇಳಿ ಅವರು ಈ ಪ್ರದೇಶ ಮತ್ತು ಜನರನ್ನು ನೋಡಬೇಕೆಂಬ ಲವಲವಿಕೆಯನ್ನಿಟ್ಟುಕೊಂಡು ಬಂದಿದ್ದಾರೆ. ಅವರ ಆಶೀರ್ವಾದವೂ ಗೋಷ್ಠಿಯನ್ನು ಪುಷ್ಟಿಗೊಳಿಸುತ್ತದೆ.

ದೇಶದ ಹಾಗೂ ರಾಜ್ಯದ ಅನೇಕ ಭಾಗಗಳಿಂದ ವಿದ್ವಾಂಸರು ಆಗಮಿಸಿದ್ದಾರೆ. ಅವರೆಲ್ಲರ ವಿಚಾರ ಮಂಥನದ ಮಹಾಯಜ್ಞ ಇಲ್ಲಿ ನಡೆಯಲಿದೆ. ಮುಂದಿನ ಮೂರು ದಿನಗಳಲ್ಲಿ ೨೨ ಪ್ರಬಂಧಗಳು ಮಂಡಿಸಲ್ಪಡುವವು. ಅವುಗಳಲ್ಲಿ ಆದಿಶಂಕರರ ಇತಿಹಾಸಕ್ಕೆ ಸಂಬಂಧಿಸಿದ ಒಂದು ಪ್ರಬಂಧವನ್ನು ಬಿಟ್ಟರೆ ಉಳಿದೆಲ್ಲವೂ ಅವರ ಸಮಗ್ರ ಸಾಹಿತ್ಯ ಮತ್ತು ಸಿದ್ಧಾಂತಕ್ಕೆ ಸಂಬಂಧಪಟ್ಟವುಗಳು. ಇತಿಹಾಸಕಾರರು ಕೊಡುವ ಇತಿಹಾಸವು ಆ ವ್ಯಕ್ತಿಯ ಒಂದೆರಡು ಮುಖಗಳನ್ನಷ್ಟೇ ಪರಿಚಯಿಸುತ್ತದೆ. ಅವರ ಸಮಗ್ರ ಸಾಹಿತ್ಯವನ್ನು ಚೆನ್ನಾಗಿ ಜೀರ್ಣಿಸಿಕೊಂಡರೆ ಸಿಗುವ ಅವರ ವ್ಯಕ್ತಿತ್ವದ ಪರಿಚಯ, ಉಂಟಾಗುವ ಗೌರವ, ಇತಿಹಾಸಜ್ಞರು ಕೊಡುವ ಪರಿಚಯಕ್ಕಿಂತ ಅದೆಷ್ಟೋ ದೊಡ್ಡದು. ಜನರು ಶ್ರೀ ಆದಿಶಂಕರರನ್ನು "ಶ್ರೀ ಶಂಕರರ ಸಿದ್ಧಾಂತ"ದ ಮೂಲಕ ಅರ್ಥೈಸಿಕೊಂಡು, ಅವರ ಆ ದೊಡ್ಡ ರಾಷ್ಟ್ರೀಯ ವ್ಯಕ್ತಿತ್ವವನ್ನು ತಿಳಿದುಕೊಳ್ಳಬೇಕೆಂಬುದೇ ನಮ್ಮ ಪ್ರಧಾನ ಉದ್ದೇಶ.

ಅಂತಹ ವಿಷಯಗಳ ಬಗ್ಗೆ ಒಂದು ಸಮಗ್ರವಾದ ವಸ್ತುನಿಷ್ಠವಾದ ಚಿಂತನೆ ಇಲ್ಲಿ ನಡೆದು ನಮ್ಮ ಜನತೆಗೆ, ರಾಷ್ಟ್ರಕ್ಕೆ. ಶಂಕರರ ಪ್ರಸ್ತುತತೆಯನ್ನು ಈ ಗೋಷ್ಠಿ ಚೆನ್ನಾಗಿ ಘೋಷಿಸಲಿ ಎಂದು ಆಶಿಸುತ್ತ ಈ ಮಾತನ್ನು ಪೂರ್ಣ ಮಾಡುತ್ತೇವೆ.

**ಲೋಕಾಃ ಸಮಸ್ತಾಃ ಸುಖಿನೋ ಭವಂತು**

**ನಾರಾಯಣ ನಾರಾಯಣ ನಾರಾಯಣ**

# ಶ್ರೀ ಶಂಕರಾಚಾರ್ಯರನ್ನು ಕುರಿತು ನಡೆದ
# ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ
# ಶ್ರೀ ಜಗದ್ಗುರು ಆದಿಶಂಕರಾಚಾರ್ಯ ಕಂಚಿಕಾಮಕೋಟಿ ಪೀಠದ
# ಶ್ರೀ ಶ್ರೀ ಜಯೇಂದ್ರಸರಸ್ವತಿ ಮಹಾಸ್ವಾಮಿಗಳು ಮಾಡಿದ
# ಉದ್ಘಾಟನಾ ಉಪನ್ಯಾಸ

ಶ್ರುತಿ ಸ್ಮೃತಿ ಪುರಾಣಾನಾಮಾಲಯಂ ಕರುಣಾಲಯಮ್ ।
ನಮಾಮಿ ಭಗವತ್ಪಾದಂ ಶಂಕರಂ ಲೋಕಶಂಕರಮ್ ॥

ಅಪಾರ ಕರುಣಾ ಸಿಂಧುಂ ಜ್ಞಾನದಂ ಶಾಂತರೂಪಿಣಮ್ ।
ಶ್ರೀ ಚಂದ್ರಶೇಖರ ಗುರುಂ ಪ್ರಣಮಾಮಿ ಮುದಾಅಹಮ್ ।

ಹಿಂದೂ ಧರ್ಮವು ವೈದಿಕ ಧರ್ಮವೆಂದೂ, ಸನಾತನ ಧರ್ಮವೆಂದೂ ಕರೆಯಲ್ಪಡುತ್ತದೆ. ಹಿಂದೂ ಧರ್ಮ ಒಬ್ಬ ಮನುಷ್ಯನಿಂದ ಒಂದು ಕಾಲದಲ್ಲಿ ಆರಂಭವಾದುದಲ್ಲ. ಅದು ಯುಗಯುಗಗಳಿಂದ, ತಲೆತಲಾಂತರಗಳಿಂದ ಭವ್ಯಭಾರತ ದೇಶದಲ್ಲಿ ಜೀವವಾಹಿನಿಯಾಗಿ ಹರಿದು ಬಂದಿದೆ. ಜಗತ್ತಿನ ಇತರ ಧರ್ಮಗಳಿಗೆ ನಿರ್ದಿಷ್ಟ ಕಾಲದ ಕಟ್ಟಳೆ ಇದ್ದರೆ ಹಿಂದೂ ಧರ್ಮಕ್ಕೆ ಯಾವುದೆ ಕಾಲದ ಕಟ್ಟು ಇರುವದಿಲ್ಲ. ಅದು ಯುಗಯುಗಗಳಿಂದ ಬೆಳೆದು ಬಂದಿದೆ. ಕೃತಯುಗ. ತ್ರೇತಾಯುಗ, ದ್ವಾಪರಯುಗ, ಕಲಿಯುಗಗಳಲ್ಲಿ ಹರಿದು ಬಂದ ಹಿಂದೂ ಧರ್ಮ ಅನಾದಿ ಧರ್ಮವೆಂದು ಕರೆಯಲ್ಪಡುತ್ತದೆ. ಯಾವುದಕ್ಕೆ ಆರಂಭವಿದೆಯೊ ಅದಕ್ಕೆ ಸಮಾಪನವಿದೆ. ಯಾವುದಕ್ಕೆ ಆರಂಭವಿಲ್ಲವೊ ಅದಕ್ಕೆ ಸಮಾಪನವೂ ಇಲ್ಲ. ಆದ್ದರಿಂದ ಹಿಂದೂಧರ್ಮ ಅನಾದಿ ಧರ್ಮವಾಗಿದ್ದು ಅದು ಸಮಾಪನ ಧರ್ಮವಲ್ಲ. ಹಿಂದೂ ಧರ್ಮಕ್ಕೆ ವೇದಗಳೇ ಪ್ರಮಾಣ ಗ್ರಂಥಗಳು. ಋಷಿಮುನಿಗಳ ಬಹುಕಾಲದ ಜ್ಞಾನ, ತಪಸ್ಸು, ಸಾಧನೆ, ಸಿದ್ಧಿಗಳಿಂದ ಹುಟ್ಟಿಕೊಂಡ ವೇದಗಳು ಭಾರತದ ಪ್ರಾಚೀನ ಪರಂಪರೆಯ ಅಮೂಲ್ಯ ನಿಧಿಗಳಾಗಿವೆ. ಭಾರತೀಯ ಪರಂಪರೆಯಲ್ಲಿ ವೇದಗಳು ಕಂಠಸ್ಥ ಸಂಪ್ರದಾಯದಲ್ಲಿ ಬೆಳೆದು ಬಂದವು. ಮಹರ್ಷಿಗಳು. ಗುರು-ಶಿಷ್ಯ ಪರಂಪರೆಯಲ್ಲಿ ಅದನ್ನು ಪಠಿಸುತ್ತ

ಬಂದರು. ವೇದಪಠಣ ಪರಂಪರೆ ನಿರಂತರವಾಗಿ ನಡೆದು ಬಂದಿದ್ದರೂ ಕಾಲಕ್ರಮೇಣ ಯುಗಧರ್ಮಕ್ಕನುಗುಣವಾಗಿ ಜನರಲ್ಲಿ ಧರ್ಮಶ್ರದ್ಧೆ ಕಡಿಮೆಯಾಗುತ್ತ ಬಂತು. ಜನರಲ್ಲಿ ಧರ್ಮಶ್ರದ್ಧೆ ಕ್ಷೀಣಿಸಿದರೆ ದುಃಖ, ಕಷ್ಟಗಳ ಪರಂಪರೆ ಹೆಚ್ಚುತ್ತದೆ. ಜನರಲ್ಲಿ ಧರ್ಮಶ್ರದ್ಧೆಯನ್ನು ಬೆಳೆಸಲು ಪರಮಾತ್ಮ ಯುಗಯುಗಗಳಿಂದ ಮತ್ತೆ ಮತ್ತೆ ಅವತಾರ ತಾಳಿ ಧರ್ಮ ಸಂರಕ್ಷಣೆ ಮಾಡುತ್ತ ಬಂದಿದ್ದಾನೆ.

ಮತ್ಸ್ಯಕೂರ್ಮ ವರಾಹಶ್ಚ ನಾರಸಿಂಹಶ್ಚ ವಾಮನಃ ।
ರಾಮೋ ರಾಮಶ್ಚ ಕೃಷ್ಣಶ್ಚ ಬೌದ್ಧ ಕಲ್ಕಿ ನಮೋಽಸ್ತುತೆ ॥

ಎಂಬ ಶ್ಲೋಕ ಪರಮಾತ್ಮನ ದಶಾವತಾರದ ವಿಚಾರವನ್ನು ತಿಳಿಸುತ್ತದೆ. ಭಾರತದಲ್ಲಿ ವೇದೋದ್ಧಾರ ಪರಮಾತ್ಮನ ಅವತಾರದ ಮೂಲಕ ಆಗುತ್ತ ಬಂದಿದ್ದರೂ ನಮ್ಮ ಹಿಂದೂ ಧರ್ಮದಲ್ಲಿ ಅನೇಕ ವಾದಗಳೂ, ವಿಭಿನ್ನ ಮತಗಳೂ ಹುಟ್ಟಿಕೊಂಡವು. ಆಧ್ಯಾತ್ಮ ಪ್ರಪಂಚದಲ್ಲಿ ಪ್ರತಿಯೊಂದು ಮತವೂ ತನ್ನದೇ ಶ್ರೇಷ್ಠವೆಂಬ ಪ್ರಮಾಣವನ್ನು, ವಾದವನ್ನು ಮುಂದಿಟ್ಟಿತು. ಯಾವ ಮತ ಸತ್ಯ, ಯಾವುದು ಮಿಥ್ಯ ಎಂಬ ಪ್ರಶ್ನೆ ಹುಟ್ಟಿಕೊಂಡಿದ್ದರಿಂದ ಧರ್ಮದ ಆಚರಣೆಯಲ್ಲಿಯೂ ವಿಚಾರಪಥದಲ್ಲೂ ಸಾಕಷ್ಟು ಗೊಂದಲ ಉಂಟಾಯಿತು. ಇಂತಹ ಸಂದಿಗ್ಧ ಸನ್ನಿವೇಶದಲ್ಲಿ ಜ್ಞಾನಬೋಧೆ ಮಾಡುವದಕ್ಕೆ ಶಂಕರಾಚಾರ್ಯರು ಅವತರಿಸಿದರು. ದಕ್ಷಿಣಾಮೂರ್ತಿ ಸ್ವರೂಪರಾಗಿ ಕುಳಿತುಕೊಂಡವರು ಸಾಕ್ಷಾತ್ ಶಿವಶಂಕರ ದೇವರು. ಜ್ಞಾನೋಪದೇಶಕ್ಕಾಗಿಯೇ ಒಂದು ಸ್ವರೂಪ, ಅದೇ ಪರಮೇಶ್ವರ ಸ್ವರೂಪ. 'ಜ್ಞಾನಮಿಚ್ಛೇತ್ ಮಹೇಶ್ವರಾತ್' – ಜ್ಞಾನ ಬೇಕೆಂದರೆ ಪರಮೇಶ್ವರನಲ್ಲಿಗೆ ಹೋಗಬೇಕು. ವಿಘ್ನಗಳು ಹೋಗಬೇಕೆಂದರೆ ಗಣೇಶನ ಹತ್ತಿರ ಹೋಗಬೇಕು. ಆರೋಗ್ಯ ಇರಬೇಕೆಂದರೆ ಸೂರ್ಯನಮಸ್ಕಾರ ಮಾಡಬೇಕು. ಹೀಗೆ ಜ್ಞಾನ ನೀಡುವುದಕ್ಕಾಗಿಯೇ ಇರುವವರು ಸಾಕ್ಷಾತ್ ಪರಮೇಶ್ವರ ದೇವರು. ಆ ಪರಮೇಶ್ವರ ದೇವರ ಅಂಶವಾಗಿ, ಜ್ಞಾನ ಪ್ರಚಾರಕ್ಕಾಗಿ, ಕೇರಳದಲ್ಲಿ ಆರ್ಯಾಂಬಾ – ಶಿವಗುರು ದಂಪತಿಗಳ ಒಬ್ಬನೇ ಮಗನಾಗಿ ಅವತರಿಸಿದರು. ಅವರಿಗೆ 'ಶಂಕರ' ಎಂದು ಹೆಸರಿಟ್ಟರು. ಶಂ ಕರೋತಿ ಇತಿ ಶಂಕರಃ. (ಶಂ = ಸುಖ) ಕೇವಲ ಭೌತಿಕ ಮಾತ್ರವಲ್ಲ, ಆಧ್ಯಾತ್ಮಿಕ ಸುಖ ಕೂಡ ಅವರ ಮೂಲಕವೇ ಬರಬೇಕು. ಶಂಭು ಎನ್ನುವ ಹೆಸರುಂಟು. ಶಂ ಭವತಿ ಯಸ್ಮಾತ್ ಸಃ ಶಂಭುಃ । ದೇವಾಲಯಕ್ಕೆ ಹೋಗಿ ದೇವನ ದರ್ಶನ ಮಾಡಬೇಕು. ಹಾಗೆ ಹೋದಾಗ ಅಲ್ಲಿಂದ ಸುಖ ಬರುತ್ತದೆ. ಶಂಕರರು ಹಾಗಲ್ಲ, ಎಲ್ಲಿ ಎಲ್ಲಿ ಕಷ್ಟವಿದೆಯೋ ಅಲ್ಲಲ್ಲಿ ಹೋಗಿ ಸುಖ ಕೊಡುವವರು ಶಂಕರರು.

'ಶಂಭೋರ್ಮೂರ್ತಿಶ್ಚರತಿ ಭುವನೇ ಶಂಕರಾಚಾರ್ಯರೂಪಾ ।'

ಶಂಭುರೂಪವೇ ಶಂಕರಾಚಾರ್ಯರಾಗಿ ಈ ಭೂಲೋಕದಲ್ಲಿ ಸಂಚರಿಸುತ್ತಿದ್ದಾರೆ ಎಂದು ಹೇಳಿದೆ. ಎಲ್ಲೆಲ್ಲಿ ಆಧ್ಯಾತ್ಮಿಕ ಕಷ್ಟವಿದೆಯೋ ಅಥವಾ ನಮ್ಮ ವೈದಿಕ ಧರ್ಮದಲ್ಲಿ ಆಧ್ಯಾತ್ಮಿಕ ಸಂದೇಹ ಉಂಟೋ ಎಲ್ಲಿ ತುಂಬಾ ಕಷ್ಟ ಪಡುವವರಿದ್ದಾರೋ ಅಲ್ಲೆಲ್ಲ ಹೋಗಿ ಆಧ್ಯಾತ್ಮತತ್ತ್ವವನ್ನು ಉಪದೇಶ ಮಾಡುವುದಕ್ಕಾಗಿಯೇ ಶಿವನ ಈ

ಅವತಾರವಾಯಿತು. ವಿಷ್ಣು ಒಂಬತ್ತು ಅವತಾರಗಳನ್ನು ತಾಳಿದ್ದಾನೆ. ಅದರ ಉದ್ದೇಶ ದುಷ್ಟರ ಶಿಕ್ಷೆ, ಶಿಷ್ಟರ ರಕ್ಷೆ.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

ಎಂದು ಅವನೇ ಹೇಳಿದ್ದಾನೆ. ನಂಬಿದವರಿಗೆ ರಕ್ಷೆ ನೀಡುತ್ತಾನೆ. ದ್ರೋಹಿಗಳಿಗೆ ಶಿಕ್ಷೆ ನೀಡುತ್ತಾನೆ. ಹೀಗೆ ವಿಷ್ಣುವಿನ ಅವತಾರದಲ್ಲಿ ಶಿಷ್ಟ ರಕ್ಷಣೆ ದುಷ್ಟ ಶಿಕ್ಷೆ ಎರಡೂ ಮುಖ್ಯ.

ಪರಮೇಶ್ವರನ ಅವತಾರವೂ ಶಿಷ್ಟ ರಕ್ಷಣೆಗಾಗಿ. ಆ ರಕ್ಷಣೆಯೇ ಶಿಷ್ಯನ ಮೇಲೆ ಅನುಗ್ರಹ. ಗುರು, ಶಿಷ್ಯನ ಅಜ್ಞಾನ, ಶಂಕೆಗಳನ್ನು ಮನಸ್ಸಿನಿಂದ ದೂರಮಾಡಿ ಶಿಷ್ಯನನ್ನು ಅನುಗ್ರಹಿಸುತ್ತಾನೆ. ಶ್ರೀ ಶಂಕರರು ಅಂತಹ ಅವತಾರ. ಶಂಕರಾಚಾರ್ಯರು ಯಾವ ಹಿಂಸೆಯನ್ನೂ ಮಾಡಿಲ್ಲ. ಆದರೆ ಅವರನ್ನೇ ಹಿಂಸಿಸಲು ಹೊರಟ ಕಾಪಾಲಿಕರ ಬಗೆಗೆ ಒಂದು ದಂತ ಕಥೆ ಪ್ರಚಲಿತವಾಗಿದೆ.

"ಅದ್ವೈತಂ ನವಿರುಧ್ಯತೇ" ಎಂದಿದ್ದಾರೆ. ಶಂಕರರು ಯಾರ ವಿರೋಧಿಗಳೂ ಅಲ್ಲ. ಕೇವಲ ಸನಾತನ ಧರ್ಮದ ಪ್ರಚಾರ, ಸತ್ಯದ ಉಪದೇಶ ಮಾಡುವುದಕ್ಕಾಗಿಯೇ ಅವರ ಅವತಾರ. ಎಲ್ಲಿ ವಿರೋಧಿಗಳಿದ್ದಾರೋ ಅಲ್ಲಿ ವಾದ ಮಾಡಿ ಜಯಿಸಿ, ಸತ್ಯದ ಸ್ಥಾಪನೆ ಮಾಡುವುದೇ ಅವರ ಅವತಾರದ ಉದ್ದೇಶ. ಶಂಕರರು ಐದನೆಯ ವರ್ಷದಲ್ಲಿ ಉಪನಯನವಾಗಿ ಭಿಕ್ಷೆಗೆ ಹೋದಾಗ. ಒಬ್ಬನ ಮನೆಯಲ್ಲಿ ಏನೂ ಇರಲಿಲ್ಲ. ಒಂದು ಒಣ ನೆಲ್ಲಿಕಾಯಿ (ಆಮಲಕ) ಮಾತ್ರ ಇತ್ತು. ಅದನ್ನೇ ಗೃಹಿಣಿ ಭಿಕ್ಷೆಯಾಗಿ ನೀಡಿದಳು. ಅವರು ಅದನ್ನು ತೆಗೆದುಕೊಂಡು "ಅಂಗಂ ಹರೇಃ ಪುಲಕ ಭೂಷಣ ಮಾಶ್ರಯಂತೀ" — ಇತ್ಯಾದಿಯಾಗಿ ಮಹಾಲಕ್ಷ್ಮಿಯನ್ನು ಸ್ತೋತ್ರಮಾಡಿ ಆ ಬಡವನ ಸಮಸ್ಯೆಗಳನ್ನೆಲ್ಲ ತೀರಿಸಿ, ಸುವರ್ಣ ಆಮಲಕವನ್ನು ಸುರಿಸಿ ಅವನನ್ನು ಉದ್ಧಾರ ಮಾಡಿದರು.

ಒಮ್ಮೆ ಅವರು ತಾಯಿಯೊಂದಿಗೆ ನದಿಯ ಹತ್ತಿರ ಬಂದರು. ನದಿಯಲ್ಲಿ ಒಂದು ಮೊಸಳೆ ಅವರ ಪಾದವನ್ನು ಹಿಡಿದುಕೊಂಡಿತು. ಸನ್ಯಾಸ ಸ್ವೀಕರಿಸಲು ತಾಯಿಯಿಂದ ಅನುಮತಿ ಪಡೆದು ಆ ಮೊಸಳೆಯಿಂದ ಬಿಡಿಸಿಕೊಂಡರು. ನಂತರ ಮಧ್ಯಪ್ರದೇಶದ ಓಂಕಾರೇಶ್ವರಕ್ಕೆ ಹೋಗಿ, ಅಲ್ಲಿ ಗೋವಿಂದ ಭಗವತ್ಪಾದರಿಂದ ಸನ್ಯಾಸ ದೀಕ್ಷೆಯನ್ನು ತೆಗೆದುಕೊಂಡರು.

ಕೇರಳದಲ್ಲಿ ಹುಟ್ಟಿ ಮಧ್ಯಪ್ರದೇಶದ ಹಿಂದೀ ಕ್ಷೇತ್ರದಲ್ಲಿ ಸನ್ಯಾಸದೀಕ್ಷೆ ಪಡೆದು, ಅಲ್ಲಿಯೇ ಗೋವಿಂದ ಭಗವತ್ಪಾದರನ್ನು ಗುರುಗಳನ್ನಾಗಿ ಪಡೆದು, ಅಲ್ಲಿಂದ ಮುಂದೆ ಕಾಶಿಗೆ ಹೋದರು. ಇದೊಂದೇ ಸಾಕು ನಮ್ಮ ದೇಶ, ನಮ್ಮ ಭಾಷೆ, ನಮ್ಮ ಸಂಸ್ಕೃತಿ ಒಂದು ಎಂದು ಹೇಳಲು. ಕಾಶಿಯಲ್ಲಿಯೂ ಎಲ್ಲ ಸಿದ್ಧಾಂತದವರೊಂದಿಗೂ ವಾದಮಾಡಿ ಅದ್ವೈತಸಿದ್ಧಾಂತ ಒಂದೇ ಸತ್ಯ, ಉಳಿದವುಗಳಲ್ಲ ಎಂದು ಸಾರಿದರು. ವ್ಯವಹಾರಕ್ಕೆ ಎಲ್ಲವೂ ಬೇಕು. ಪರಮಾರ್ಥಕ್ಕೆ ಒಂದೇ. ವ್ಯವಹಾರ ಮುಗಿಸುವ ಸಮಯದಲ್ಲಿ ಅದ್ವೈತವಾಗುತ್ತದೆ. ಅದೇ ಜ್ಞಾನ, ಅದೇ ಮಧುರ, ಅದೇ ಆನಂದ, ಅದೇ ಶಾಂತಿ.

ಕಲ್ಲುಸಕ್ಕರೆಗೆ ರೂಪವುಂಟು, ಮಾಧುರ್ಯವುಂಟು. ರೂಪ ಕಾಣುತ್ತದೆ, ಮಾಧುರ್ಯ ಕಾಣುವುದಿಲ್ಲ. ತಿಂದಾದ ಮೇಲೆ ಆಕಾರ ಹೋಗಿಬಿಟ್ಟಿತು. ಮಾಧುರ್ಯ ಮಾತ್ರವೇ ಮೆಲುಕುತ್ತಾ ಇದೆ. ಇದೇ ಅದ್ವೈತ. ಸಗುಣ, ಸಾಧನೆಗೋಸ್ಕರ ಅವಕಾಶ. ಸಗುಣ, ಕರ್ಮಕಾಂಡ, ವೇದಾಂತ ಹೀಗೆ ಧರ್ಮದಲ್ಲಿ ಎಷ್ಟೊಂದು ಸಿದ್ಧಾಂತಗಳನ್ನು ಹೇಳಿದ್ದಾರೋ ಅವೆಲ್ಲ ಬೇಕು. ಶಂಕರಾಚಾರ್ಯರು ಒಂದನ್ನೂ ಬಿಡಲಿಕ್ಕೆ ಹೇಳಲಿಲ್ಲ. ಆ ಪ್ರಕಾರವಾಗಿ ವ್ಯವಹಾರಕ್ಕೋಸ್ಕರ ಎಲ್ಲಾ ಬೇಕು. ಸತ್ಯಕ್ಕೋಸ್ಕರವಾಗಿ ಒಂದೇ ಒಂದು ಸಾಕು. ಕಲ್ಲುಸಕ್ಕರೆ ತಿನ್ನಬೇಕು. ಆಗ ಮಾಧುರ್ಯ ಮನಸ್ಸಿಗೆ ಬರುತ್ತದೆ. ನೋಡಿದರೆ ಬರುವದಿಲ್ಲ. ತಿಂದ ಮೇಲೆ ಮಾಧುರ್ಯವನ್ನು ಮಾತ್ರ ಸವಿಯುತ್ತಿರುತ್ತೇವೆ. ರೂಪವನ್ನು ನೋಡುವದಿಲ್ಲ. ಆ ಪ್ರಕಾರವಾಗಿ ಸಗುಣ ಉಪಾಸನಾದ್ವಾರಾ ಮೋಕ್ಷಪ್ರಾಪ್ತಿ "ಸಗುಣಶರಣಾನಾಮಪಿ ಈದೃಶೀ ಗತಿಃ।" (ಸಗುಣ ಶರಣರಿಗೂ ಮೋಕ್ಷವಾಗುತ್ತದೆ.) 'ಕಿಂತು ನಿರ್ಗುಣ ಶರಣಾನಾಮ್' (ನಿರ್ಗುಣ ಶರಣರಾದ ಮೇಲೆಯೇ) ಎಂದು ಶಂಕರಾಚಾರ್ಯರು ಭಾಷ್ಯದಲ್ಲಿ ಹೇಳಿದ್ದಾರೆ. ಆದ್ದರಿಂದ ಸಗುಣ ಅವರಿಗೆ ವಿರೋಧವಲ್ಲ. ಅದು ಸಾಧನ. ಸೋಪಾನ. ಮೇಲೆ ಮೇಲೆ ಹತ್ತಿದ ಮೇಲೆ ನಮಗೆ ಕೆಳಗಿನ ಸೋಪಾನ ಬೇಡ. ನಮಗೆ ಬೇಡವಾದರೂ ಪರರಿಗೆ ಬೇಡವೆಂದು ಹೇಳಲಿಲ್ಲ. ನಮಗೆ ಇರುವುದು ಒಂದೇ ಒಂದು ಸತ್ಯ. ಅಲ್ಲಿಗೇ ಹೋಗಬೇಕು. ಆ ಸತ್ಯ ಪಡೆಯುವುದಕ್ಕಾಗಿ ಕ್ರಮಕ್ರಮವಾಗಿ ಹೋಗಬೇಕು. ಮೇಲೆ ಮೇಲೆ ಹೋದಂತೆ ಕೆಳಗಿನದು ಬೇಡ. ಅದೇ 'ಮಿಥ್ಯಾ' ಎಂದು ತಾತ್ಪರ್ಯ. ಸಜ್ಜನರು ವ್ಯವಹಾರ ಮಿಥ್ಯಾ ಎಂದು ಹೇಳಿದ್ದಾರೆ. ಹಾಗಿದ್ದರೆ ನಾವು ವ್ಯವಹಾರ ಮಾಡುವುದು ಸತ್ಯವೋ ಸುಳ್ಳೋ ? ಯಾರಿಗೆ ಅದು ಮಿಥ್ಯಾ ಎಂದು ಹೇಳಿದ್ದಾರೆ ? ಯಾರಿಗೆ ಅನುಭವ ಬಂದಿದೆಯೋ ಅವರಿಗೆ ಹೇಳಿದ್ದಾರೆ. ಸಾಮಾನ್ಯ ಜನರಿಗೆ ಎಲ್ಲ ಸತ್ಯ. ವ್ಯವಹಾರವೂ ಸತ್ಯ ಎಂದು ಹೇಳಿದ್ದಾರೆ. ಆದ್ದರಿಂದ ವ್ಯಾವಹಾರಿಕ ಸತ್ಯದಿಂದ ನಾವೆಲ್ಲ ಪ್ರಯೋಜನದಲ್ಲಿ ಇದ್ದೇವೆ. ಧರ್ಮ, ಕರ್ಮ. ಆಚರಣ, ಸಂಸ್ಕೃತಿ, ಪುಸ್ತಕ, ನೃಸಿಂಹಪೂಜಾ, ಶಂಕರಪೂಜಾ ಹೀಗೆ ಎಲ್ಲವನ್ನೂ ಮಾಡಿಕೊಂಡಿರಬೇಕು. ನಮಗಾಗಿ ಮಾಡಿಕೊಳ್ಳಬೇಕು, ಪ್ರಪಂಚಕ್ಕಾಗಿ ಮಾಡಿಕೊಳ್ಳಬೇಕು. ಆದ್ದರಿಂದ ಸಾಧನ ಪರವಾಗಿ ಎಲ್ಲವನ್ನೂ ನಂಬಿಕೊಂಡರೂ ಸಾಧ್ಯಪರವಾಗಿ ಲಕ್ಷ್ಯಪರವಾಗಿ ಒಂದೇ ಒಂದು ಸತ್ಯ ಇರಬೇಕು. ಅದು "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಅವರಿಗೇ (ಜ್ಞಾನಿಗಳಿಗೇ) ಮಿಥ್ಯೆಯಾಗಿ ಕಾಣಬೇಕು. ನಮಗೆಲ್ಲ ಕಾಣಬಾರದು. ಕೊನೆಯಲ್ಲಿ ಎಲ್ಲಿಗೆ ಹೋಗುತ್ತಾರೋ, ಯಾರು ಅನುಭವಿಸುತ್ತಾರೋ ಅದು ಬ್ರಹ್ಮ ಸತ್ಯ.

ಗುರುಗಳ ಬಳಿಗೆ ಕೆಲವು ಜನ ಶಿಷ್ಯರು ಹೋಗಿದ್ದರು. ಗುರುಗಳು ಅಂದಿನ ಪಾಠದಲ್ಲಿ "ಬ್ರಹ್ಮ ಸತ್ಯಂ ಜಗನ್ಮಿಥ್ಯಾ." ಬ್ರಹ್ಮ ಒಂದೇ ಸತ್ಯ ಉಳಿದದ್ದೆಲ್ಲ ಸುಳ್ಳು ಎಂದಿದ್ದರು. ಮರುದಿನ ಶಿಷ್ಯರು ಬರುತ್ತಿರುವಾಗ ದಾರಿಯಲ್ಲಿ ಗಜವೊಂದು ಎದುರಾಯಿತು. ಎಲ್ಲ ಶಿಷ್ಯರೂ ಅಲ್ಲಲ್ಲಿ ಓಡಿಹೋದರು. ಒಬ್ಬ ಮಾತ್ರ "ಬ್ರಹ್ಮ ಒಂದೇ ಸತ್ಯ ಉಳಿದವೆಲ್ಲಾ ಸುಳ್ಳು" ಎಂಬ ಮಾತನ್ನು ನೆನಪಿಸಿಕೊಂಡು ಹೋಗುತ್ತಲೇ

ಇದ್ದ. ಆನೆ ಅವನನ್ನು ಎತ್ತಿ ಎಸೆಯಿತು. ಅವನಿಗೆ ತುಂಬಾ ಪೆಟ್ಟಾಯಿತು. ಗುರುಗಳಲ್ಲಿ ಕೇಳಿದ. ಗುರುಗಳೆ : ಬ್ರಹ್ಮವೊಂದೇ ಸತ್ಯ ಉಳಿದದ್ದೆಲ್ಲಾ ಸುಳ್ಳು ಎಂದಿರಿ. ನನಗೆ ಅದು ಚೆನ್ನಾಗಿ ಅರ್ಥವಾಗಿತ್ತು. ಉಳಿದವರಿಗೆ ಆಗಿರಲಿಲ್ಲ. ಆದರೂ ಹೀಗೇಕೆ ಆಯಿತು ? ಎಂದು, ಗುರುಗಳು ಹೇಳಿದರು : ಎಲ್ಲಿ ಎರಡನೇ ವಸ್ತು ಕಾಣುತ್ತದೆಯೋ ಅಲ್ಲಿ ಬ್ರಹ್ಮ ಕಾಣುವದಿಲ್ಲ. ಎಲ್ಲಿ ಒಂದೇ ಒಂದು ಕಾಣುತ್ತದೆಯೋ ಅಲ್ಲಿ ಬ್ರಹ್ಮ ಕಾಣಿಸುತ್ತದೆ. ನೀನೇನು ತಿಳಿದೆ ? ನಾನೊಬ್ಬ, ಆನೆಯೊಂದು, ಗಜಪಾಲ ಒಬ್ಬ, ಉಳಿದವರು ಓಡಿದರು ಎಂದಲ್ಲವೇ ? ನಿನಗೆ ಅರ್ಧ ಮಾತ್ರವೇ ಅರ್ಥವಾಗಿದೆ. ಅದಕ್ಕೇ ಈ ಕಷ್ಟ ಬಂದಿತು. ವಸ್ತುತಃ ಗಜೋಪಿ ಮಿಥ್ಯಾ ಪಲಾಯನ ಮಪಿ ಮಿಥ್ಯಾ'', ಗಜವೂ ಸುಳ್ಳು, ಓಡಿದ್ದೂ ಸುಳ್ಳು, ನೀನೊಬ್ಬನೇ ಸತ್ಯ. ಹೀಗೆ ತಿಳಿಯದ್ದರಿಂದ ಕಷ್ಟ ಬಂದಿತು ಎಂದರು.

ಹೀಗೆ ಅರ್ಧಸತ್ಯ ಬರಬಾರದು. ಪೂರ್ಣ ಸತ್ಯ ಬರಬೇಕು. ಆದ್ದರಿಂದ ಯಾವುದನ್ನು ಕಲಿತರೂ ಅರ್ಧ ಅರ್ಧ ಕಲಿಯಬಾರದು. ಪೂರ್ಣ ಕಲಿಯಬೇಕು. ಇಲ್ಲದಿದ್ದರೆ ಗಜದಿಂದ ಕಷ್ಟಬಂದಂತೆಯೇ ಆಗಿಬಿಡುತ್ತದೆ. ಆದ್ದರಿಂದ ಪರಮಾರ್ಥ ಸತ್ಯ ಒಂದೇ ಒಂದು. ವ್ಯಾವಹಾರಿಕ ಸತ್ಯ ಉಂಟು ಎಂದು ತಿಳಿಯಬೇಕು. ವ್ಯವಹಾರ ನಡೆಯಬೇಕು. ಕರ್ಮ, ಆಚರಣೆ, ಅನುಷ್ಠಾನ ಎಲ್ಲ ನಡೆಯಬೇಕು. ಇದನ್ನು ಇಟ್ಟುಕೊಂಡು ಮೇಲೆ ಹೋಗಬೇಕು. ಪರಮಾರ್ಥವೇ ನಮ್ಮ ಲಕ್ಷ್ಯ. ಅದ್ವೈತ ಸತ್ಯಾನುಭವವೇ ನಮ್ಮ ಲಕ್ಷ್ಯ. ಅದಕ್ಕೆ ದಾರಿ ? ಇದೆಲ್ಲ ದಾರಿ. ನದಿಗಳು ಅನೇಕ ಕಡೆಗಳಿಂದ ಬರುತ್ತವೆ. ಅವುಗಳಿಗೆ ಹೆಸರು ಬೇರೆ, ಉಪಯೋಗ ಬೇರೆ. ಸಮುದ್ರವೇ ಲಕ್ಷ್ಯವಾಗಿ ಎಲ್ಲವೂ ಒಟ್ಟಾಗುತ್ತವೆ. ಆ ಪ್ರಕಾರವಾಗಿ ಮಾರ್ಗಗಳು ಭಿನ್ನ ಭಿನ್ನವಾಗಿ ಇರಬಹುದು. ಲಕ್ಷ್ಯ ಒಂದೇ ಒಂದಿರಬೇಕು. ಇದೇ ಶಂಕರರು ತೋರಿದ ಮಾರ್ಗ.

ಆದ್ಯ ಗುರು ಶಂಕರಾಚಾರ್ಯರು ವೇದೋದ್ಧಾರ ಮಾಡಿ ಅದ್ವೈತ ಸಿದ್ಧಾಂತ ಸ್ಥಾಪನೆ ಮಾಡಿದರು. ಕೇವಲ ಭಾರತದಲ್ಲಿ ಮಾತ್ರವಲ್ಲ, ಇಡೀ ಪ್ರಪಂಚದಲ್ಲಿ ಅದ್ವೈತ ಎಂದರೆ ಶಂಕರಾಚಾರ್ಯರು. ಶಂಕರಾಚಾರ್ಯರು ಎಂದರೆ ಅದ್ವೈತ ಫಿಲಾಸಫಿ, (ಅದ್ವೈತ ಒಂದೇ ಫಿಲಾಸಫಿ) ಎರಡೇ ಶಬ್ದ, ಮೂರನೇ ಶಬ್ದವೇ ಇಲ್ಲ. ಅಷ್ಟು ವ್ಯಾಪಕವಾಗಿ ಈ ಸಿದ್ಧಾಂತ ಹರಡಿದೆ. ವಸ್ತುತಃ ಆಧ್ಯಾತ್ಮಿಕ ಬಲವೇ ಬಲ. ''ಧಿಗ್ಬಲಂ ಕ್ಷತ್ರಿಯ ಬಲಂ, ಬ್ರಹ್ಮತೇಜೋ ಬಲಂ ಬಲಮ್'' ಬ್ರಹ್ಮತೇಜಸ್ಸಿನ ಬಲವೇ ಬಲ. ಕ್ಷತಿಯ ಬಲ ಇಂದು ಇದ್ದು ನಾಳೆ ಹೋಗಬಹುದು. ಯಾವಾಗಲೂ ಇರುವುದು ಒಂದೇ ಒಂದು ಬಲ. ಅಧ್ಯಾತ್ಮ ಬಲ. ಆ ಅಧ್ಯಾತ್ಮ ಬಲವನ್ನು ಪಡೆಯುವದಕ್ಕೋಸ್ಕರವಾಗಿಯೇ ಇಷ್ಟೆಲ್ಲಾ ಕಾರ್ಯಕ್ರಮ ಮಾಡುತ್ತಿದ್ದಾರೆ. ಶಂಕರಾಚಾರ್ಯರು ನಮ್ಮ ದೇಶಕ್ಕೆ ಪ್ರಪಂಚಕ್ಕೆ, ಒಬ್ಬೊಬ್ಬ ವ್ಯಕ್ತಿಗೆ ಕೂಡ ಗುರುಗಳಾಗಿದ್ದು ನಮ್ಮ ಅಜ್ಞಾನವನ್ನು ಕಳೆದು ಜ್ಞಾನವನ್ನು ಕೊಡುವುದಕ್ಕೆ ಬಂದವರು. ಜ್ಞಾನ ಪ್ರಬೋಧದಿಂದ ನಾವೆಲ್ಲ ಮೇಲಕ್ಕೆ ಬರಬೇಕು. ಅದಕ್ಕೋಸ್ಕರವೇ ಅವತರಿಸಿದರು. ಗುರುಗಳು ಅದಕ್ಕೋಸ್ಕರವೇ ಈ ''ವಿಚಾರಗೋಷ್ಠಿ'' ಇಟ್ಟುಕೊಂಡಿದ್ದಾರೆ.

ವೇದಾಂತಕ್ಕೆ ವಿಚಾರವೇ ಪ್ರಧಾನ. ಆತ್ಮದರ್ಶನಕ್ಕೆ ಅದೊಂದು ಸಾಧನ. ವಿಚಾರದ ದಾರಿಯನ್ನು ಶಂಕರರು ಹೇಳಿದ್ದಾರೆ. "ಅತೋ ವಿಚಾರಃ ಕರ್ತವ್ಯಃ" ಎಲ್ಲ ಕಡೆಗೆ ಹೇಳಿದ್ದಾರೆ : ವಿಚಾರ ಮಾಡು. ವಿಚಾರ ಮಾಡು, ವಿಚಾರ ಮಾಡು ಎಂದು. ಹೇಗೆ ? ನಾನು ಎಂದರೆ ಈ ಶರೀರವೇ ? ಬುದ್ಧಿಯೇ ? ಕಣ್ಣೇ ? ಕಿವಿಯೇ ? ಕಾಲೆ ? ಹೃದಯವೇ ? ಮನಸ್ಸೇ ? ವಿಚಾರಮಾಡಬೇಕು. ಇದಲ್ಲ, ಇದಲ್ಲ............... ಇದಲ್ಲ ಹೀಗೆ ವಿಚಾರ ಮಾಡಬೇಕು. ಅತೋ ವಿಚಾರಃ ಕರ್ತವ್ಯಃ । ನಿತ್ಯಾನಿತ್ಯ ವಿವೇಕಃ । ವಿಚಾರ ಮಾಡಿದರೆ ತಪ್ಪಾರಾ ವಿಷಯವು ಚೆನ್ನಾಗಿ ಅರಿವಾಗುತ್ತದೆ.

ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳು, ಅದ್ವೈತವು ವಿಜ್ಞಾನಕ್ಕೆ ಅನುಕೂಲವೋ ಪ್ರತಿಕೂಲವೋ ಎಂಬ ವಿಷಯವನ್ನು ಪ್ರಸ್ತಾಪಿಸಿದರು. ನಮ್ಮ ವಿಜ್ಞಾನ ವಿದೇಶೀ ವಿಜ್ಞಾನಕ್ಕೆ ವಿರೋಧವಲ್ಲ. ವಿದೇಶೀ ವಿಜ್ಞಾನಕ್ಕಿಂತ ನಮ್ಮ ವಿಜ್ಞಾನ ಸಾವಿರ ಕಿಲೋಮೀಟರ ಮುಂದೆಯೇ ಇದೆ. ವಿದೇಶೀ ವಿಜ್ಞಾನಗಳು ಆಟಮ್ ಬಾಂಬ, ಅಣುಗಳ ವರೆಗೆ ಬಂದಿವೆ. ಆದರೆ ನಮ್ಮ ವಿಜ್ಞಾನ ಅಣುವಿಗಿಂತಲೂ ಸೂಕ್ಷ್ಮತಮವಾದ ಆತ್ಮದ ವರೆಗೆ ಮುಟ್ಟಿದೆ.

ಅಣೋರಣೀಯಾನ್ ಮಹತೋ ಮಹೀಯಾನ್ ॥

ವೇದಾಂತ–ವಿಜ್ಞಾನದಲ್ಲಿ ವರ್ಣಿತವಾದ ಆತ್ಮ, ಅಣುವಿಗೂ ಅಣುವಾಗಿ ಇದೆ. ಮಹತ್ತಾಗಿಯೂ ಇದೆ. ಈ ವಿದೇಶೀ ವಿಜ್ಞಾನ ಮಹತ್ತಾದದ್ದನ್ನು ನಾಶ ಮಾಡಲಿಕ್ಕೆ ಬಂದಂತಹದು. ಆದರೆ ನಮ್ಮದು ಹಾಗಲ್ಲ. ಅಣುವಾಗಿದ್ದ ಆತ್ಮವೇ ಎಲ್ಲ ಕಡೆಗೂ ಇದ್ದು, ಪ್ರೇಮ ಮಾಡಲಿಕ್ಕೆ, ಸ್ನೇಹ ಮಾಡಲಿಕ್ಕೆ ಬರುತ್ತದೆ. ನಮ್ಮ ಆತ್ಮ ಎಲ್ಲರನ್ನೂ ಒಟ್ಟುಗೂಡಿಸಲಿಕ್ಕೆ ಬರುತ್ತದೆ. ವಸುಧೈವ ಕುಟುಂಬಕಮ್ ॥ ಎಲ್ಲರೂ ಒಂದೇ ಒಂದು.

ತ್ವಯಿ, ಮಯಿ ಚ, ಅನ್ಯತ್ರ ಏಕೋ ವಿಷ್ಣುಃ ।
ವ್ಯರ್ಥಂ ಕುಪ್ಯಸಿ ಮಯಿ ಅಸಹಿಷ್ಣುಃ ।
ಸರ್ವಸ್ಮಿನ್ನಪಿ ಪಶ್ಯಾತ್ಮಾನಮ್
ಸರ್ವತ್ರ ಉತ್ಸೃಜತಿ ಭೇದ ಅಜ್ಞಾನಮ್ ॥

ಅಜ್ಞಾನದಿಂದ ನಮಗೆ ಕಾಣುವಂತಹ ಭೇದಗಳೆಲ್ಲವೂ ಬಿಟ್ಟುಹೋಗುತ್ತವೆ. ಒಂದೇ ಒಂದು ಆತ್ಮ ಕಾಣುತ್ತದೆ. ಆಗ ದ್ವೇಷ, ಭೋಗ, ಸಾವು, ಚೌರ್ಯ ಏನೂ ಇರುವುದಿಲ್ಲ. ಅಂದರೆ ನಮ್ಮ ವಿಜ್ಞಾನ ನೈತಿಕ ವಿಜ್ಞಾನವನ್ನು ಒಳಗೊಂಡಿದೆ. ಇಂದಿನ ಜನರ ಮನಸ್ಸಿಗೆ ಮತ್ತು ವ್ಯವಹಾರಕ್ಕೆ ಬೇಕಾದಂತಹ ನೈತಿಕ ವಿಜ್ಞಾನವನ್ನು ವೇದಾಂತ-ವಿಜ್ಞಾನ ಕೊಡುತ್ತದೆ. ಅದೆಂದರೆ : ಸುಳ್ಳು ಹೇಳಬಾರದು, ದ್ವೇಷ ಮಾಡಬಾರದು, ನಿಂದೆ ಮಾಡಬಾರದು, ಕಟು ಭಾಷೆ ಆಡಬಾರದು. ಇತ್ಯಾದಿ ಇತ್ಯಾದಿ. ಏಕೆಂದರೆ ಅವನ ಹತ್ತಿರ, ಇವನ ಹತ್ತಿರ, ಎಲ್ಲರಲ್ಲೂ ಇರುವ ಆತ್ಮ ಒಂದೇ. ಆದ್ದರಿಂದ ಯಾರ ಮೇಲೆ ಸಿಟ್ಟು ಮಾಡುವುದು ? ಕಾರಣ ವೇದಾಂತ-ವಿಜ್ಞಾನ ಅತ್ಯಂತ ದೊಡ್ಡದು. ಈ ದೊಡ್ಡ ವಿಜ್ಞಾನದ ಮುಂದೆ ಕಂಪ್ಯೂಟರ ವಿಜ್ಞಾನ, ಅಣುಶಕ್ತಿ ವಿಜ್ಞಾನ ಇವೆಲ್ಲವೂ

ಸಣ್ಣದಾಗುತ್ತಾ ಹೋಗುತ್ತವೆ. ಈ ದೊಡ್ಡ (ಅಖಂಡ) ವಿಜ್ಞಾನದಿಂದ ಎಲ್ಲ ಕಡೆಗೂ ಸುಖ–ಶಾಂತಿ ಬಂದರೆ, ಆ ಸಣ್ಣ ವಿಜ್ಞಾನದಿಂದ ನಾಶ ಬರುತ್ತದೆ. ಯಾವ ದೊಡ್ಡ ವಿಜ್ಞಾನದಿಂದ ಸರ್ವತ್ರ ಸುಖ-ಶಾಂತಿ ಸ್ಥಾಪಿಸಲ್ಪಡುತ್ತದೆಯೋ ಅದು ನಿಜವಾದ ವಿಜ್ಞಾನ, ಉಳಿದೆಲ್ಲವೂ ಅಜ್ಞಾನ. ಜ್ಞಾನ ಎನ್ನುವುದು ಒಂದೇ ಒಂದು. ಅದೆಂದರೆ "ಆತ್ಮ ಸರ್ವರಲ್ಲಿ ಇದೆ."

ರಾಜಕೀಯ ವ್ಯಕ್ತಿಗಳೂ ಸಹ ಚುನಾವಣೆಯ ಸಂದರ್ಭದಲ್ಲಿ ಓಟಿಗೋಸ್ಕರ 'ನಾವೆಲ್ಲ ಒಂದೇ'' ಎಂತ ಹೇಳುತ್ತಾರೆ. ನಂತರ ದೀರ್ಘವಾದ ಜಾತಿಯ ಪಟ್ಟಿಯನ್ನು ನಮ್ಮ ಮುಂದಿಟ್ಟು, ನಮ್ಮ ನಮ್ಮಲ್ಲಿಯೇ ಭೇದವನ್ನು ಸೃಷ್ಟಿಸುತ್ತಾರೆ. ಕಾರಣ, ಅವರು ಹೇಳುವುದು ಅಜ್ಞಾನದಿಂದಲೇ. ನಿಜವಾದ ಆತ್ಮಜ್ಞಾನ ಬಂದವನಿಂದ ಲಕ್ಷ-ಲಕ್ಷ ಜನರಿಗೆ ಶಾಂತಿ, ಸಮಾಧಾನ, ಸುಖ ಸಿಗುತ್ತದೆ. ಪೂಜ್ಯ ಭಗವತ್ಪಾದಾಚಾರ್ಯರು ಹೇಳಿರುವುದು ಇಂತಹ ಒಂದು ದೊಡ್ಡ ವೇದಾಂತ ವಿಜ್ಞಾನವನ್ನು. ನಾವು ಹಣ್ಣನ್ನು ಸವಿದು ಸಂತೋಷ ಪಡುತ್ತೇವೆ. ಇದು ತೀರ ಸಣ್ಣ ವಿಷಯ. ಇಷ್ಟು ಸಣ್ಣ ವಿಷಯದಿಂದ ನಾವು ಅಷ್ಟೊಂದು ಸಂತೋಷ (ಆನಂದ) ಪಟ್ಟರೆ, ಅಖಂಡವಾದ ಸಚ್ಚಿದಾನಂದ ಸ್ವರೂಪವನ್ನು ಅನುಭವಿಸಿದರೆ, ಎಷ್ಟು ಸುಖ-ಶಾಂತಿ-ಆನಂದ ಬರಬೇಡ !

ಭಗವಂತನು ಈ ಮನುಷ್ಯ ಜನ್ಮವನ್ನು ಯಾತಕ್ಕೋಸ್ಕರ ಕೊಟ್ಟಿದ್ದಾನೆ ? ಎಂಬ ಪ್ರಶ್ನೆ ಹಲವು ಸಲ ಎದುರಾಗುತ್ತದೆ. ಈ ಜನ್ಮವೇ ಕೊನೆಯದಾಗಬೇಕು, ಎನ್ನುವುದೇ ಇದರ ಉದ್ದೇಶ. ಏಕೆಂದರೆ ಇದಕ್ಕೂ ಹಿಂದೆ ಅದೆಷ್ಟೋ ಜನ್ಮವನ್ನು ಪಡೆದು, ಕಷ್ಟ-ನಷ್ಟಗಳನ್ನು ಅನುಭವಿಸಿ ಈ ಮನುಷ್ಯ ಜನ್ಮವನ್ನು ಪಡೆದಿದ್ದೇವೆ. ಇನ್ನೊಂದು ಜನ್ಮ ಬಂದು ಇಂತಹ ಕಷ್ಟಗಳನ್ನು ಅನುಭವಿಸಬಾರದು ಎನ್ನುವುದೇ ಈ ಜನ್ಮದ ಉದ್ದೇಶ. ಆದ್ದರಿಂದ ಪ್ರತಿಯೊಬ್ಬ ಮನುಷ್ಯನೂ ತತ್ತ್ವಜ್ಞಾನ ಸಂಪಾದನೆ ಮಾಡಿಕೊಂಡು ಒಳ್ಳೆಯ ಮನುಷ್ಯನಾಗಬೇಕು. ಹಾಗೆ ಮಾಡಿಕೊಳ್ಳದೇ ಹೋದರೆ,

ಪುನರಪಿ ಜನನಂ ಪುನರಪಿ ಮರಣಮ್ ।
ಪುನರಪಿ ಜನನೀ ಜಠರೇ ಶಯನಮ್ ॥

ಜನನ ಮರಣಗಳ ಚಕ್ರವೇ ಮುಂದುವರಿಯುತ್ತಾ ಇರುತ್ತದೆ. ಕಾರಣ ಈ ಜನ್ಮ ಸಾಫಲ್ಯಕ್ಕೋಸ್ಕರ ಸ್ವಲ್ಪವಾದರೂ ವಿಚಾರ ಮಾಡಬೇಕು.

ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್ ।

ಸ್ವಲ್ಪವೇ ವಿಚಾರ ಮಾಡಿದರೂ ಕೂಡ ಸಂಸ್ಕಾರ ಬರುತ್ತದೆ. ಸಂಸ್ಕಾರದಿಂದ ನಾವು ಮೇಲೆ ಮೇಲೆ ಹೋಗಬಹುದು. ಅದಕ್ಕೋಸ್ಕರ ವಿಚಾರಗೋಷ್ಠಿ ತುಂಬ ಅವಶ್ಯ. ಇವರಲ್ಲಿಯೂ ಶಂಕರಾಚಾರ್ಯರನ್ನು ಕುರಿತಾಗುವುದು ಅತ್ಯಂತ ವಿಶೇಷ. ಋಷಿಗಳು, ಮಹಾಪುರುಷರುಗಳನ್ನು ಕುರಿತಾಗಿ ಮಾಡಲ್ಪಡುವ ಅನೇಕ ಗೋಷ್ಠಿಗಳಲ್ಲಿ, ಅವರು ಎಲ್ಲಿ ಹುಟ್ಟಿದರು ? ಎಲ್ಲಿ ಹೋದರು ? ಎಲ್ಲಿಂದ ಬಂದರು ? ಎಂಬ ವಿಷಯವೇ ಮಹತ್ವದ್ದಾಗಿ ರುತ್ತದೆ. ನದಿಯೊಂದು ತನ್ನ ಪ್ರವಾಹದಗುಂಟ ಎಷ್ಟು ಜನರಿಗೆ

ಪ್ರಯೋಜನಕಾರಿಯಾಯಿತು ಎಂಬುದು ಮಹತ್ವವೇ ವಿನಃ ಅದರ ಮೂಲ ಮತ್ತು ಅಂತ್ಯ ಮಹತ್ವದ್ದಲ್ಲ. ಸಮುದ್ರಕ್ಕೆ ಹೋಗಿ ಸೇರಿದ ಮೇಲೆ ವಿಚಾರ ಮಾಡಿ ಏನು ಪ್ರಯೋಜನ ? ಅದೇ ಪ್ರಕಾರವಾಗಿ ಮಹಾಪುರುಷರು ಎಲ್ಲಿ ಹುಟ್ಟಿದರು ? ಎಲ್ಲಿ ಮುಕ್ತಿ ಹೊಂದಿದರು ? ಎಂದು ವಿಚಾರಿಸುವುದು ವ್ಯರ್ಥ.

ನದೀಮೂಲಂ ಋಷಿಮೂಲಂ ನ ವಿಚಾರಯೇತ್ ॥

ಮಹಾಪುರುಷರು ತಮ್ಮ ಜೀವನದಲ್ಲಿ ನಮಗೇನು ಕೊಟ್ಟಿದ್ದಾರೆ ? ಆ ಕೊಟ್ಟ ವಿಷಯ ನಮಗೆಷ್ಟು ಉಪಯೋಗವಾಗುತ್ತದೆ ? ನಾವು ಎಷ್ಟು ಉಪಯೋಗ ಮಾಡಿಕೊಳ್ಳಬಹುದು ? ಈ ರೀತಿಯ ವಿಚಾರಗೋಷ್ಠಿ ತುಂಬ ಅವಶ್ಯ. ಶಂಕರಾಚಾರ್ಯರೇ ಹೇಳಿದ್ದಾರೆ "ವಿಚಾರ ಮಾಡು" ವಿಚಾರಃ ಕರ್ತವ್ಯಃ ।

ಅವರು ಪ್ರಾರಂಭ ಮಾಡಿದ ವಿಚಾರವನ್ನು ಈ ಪರಂಪರೆಯಲ್ಲಿ ಇಂದಿಗೂ ನಡೆಸುತ್ತಾ ಇದ್ದೇವೆ. ಶಂಕರಾಚಾರ್ಯರನ್ನು ಕುರಿತಾದ ಈ ವಿಚಾರಗೋಷ್ಠಿಯಲ್ಲಿ ಒಂದೊಂದು ವಿಷಯವನ್ನು ಇಟ್ಟುಕೊಂಡು ತಾವೆಲ್ಲ ವಿಚಾರ ಮಾಡಬೇಕು. ಅಂತಹ ವಿಚಾರ ಮಂಥನದಿಂದ ಬಂದ ಸತ್ವಯುತವಾದ ತಾತ್ವಿಕ ವಿಚಾರಗಳು ಪೂಜನೀಯ. ಸರ್ವದಾ ಗ್ರಾಹ್ಯ. ಈ ಮಾರ್ಗವನ್ನು ಅನುಸರಿಸಿದವರಿಗೆ ಸೋಲಿಲ್ಲ. ಜಯ. ಜಯ. ಈ ಸಮ್ಮೇಳನ ಸ್ವರ್ಣವಲ್ಲೀ ಮಹಾಸಂಸ್ಥಾನದ ಆಶ್ರಯದಲ್ಲಿ ನೆರವೇರುತ್ತಿರುವುದು ನಮಗೂ ತುಂಬಾ ಸಂತೋಷ ತಂದಿದೆ. ಸಮ್ಮೇಳನದ ವಿಚಾರ ಸಂಕಿರಣ ಯಶಸ್ವಿಯಾಗಲಿ. ನಿಮಗೆಲ್ಲರಿಗೂ ಶಂಕರರ ವಿಚಾರಧಾರಾ ಸ್ನಾನದಿಂದ ಪಾವಿತ್ರ್ಯವುಂಟಾಗಿ ಅವರ ಉಪದೇಶದ ಬೆಳಕು ಸನ್ಮಾರ್ಗವನ್ನು ತೋರಿಸಲಿ. ಲೋಕಕ್ಕೆಲ್ಲ ಮಂಗಳವುಂಟಾಗಲಿ.

**ನಾರಾಯಣ ನಾರಾಯಣ ನಾರಾಯಣ**

# ಬ್ರಹ್ಮಸೂತ್ರ ಶಾಂಕರ ಭಾಷ್ಯ – ಒಂದು ವಿಮರ್ಶೆ

ಪ್ರೊ. ಎಂ. ಎಲ್. ನರಸಿಂಹ ಮೂರ್ತಿ

ಶ್ರುತಿಸ್ಮೃತಿ ಪುರಾಣಾನಾಮಾಲಯಂ ಕರುಣಾಲಯಮ್ ।
ನಮಾಮಿ ಭಗವತ್ಪಾದಂ ಶಂಕರಂ ಲೋಕಶಂಕರಮ್ ॥

ಸಹಸ್ರಾರು ವರ್ಷಗಳಿಂದಲೂ ವೇದ, ಸ್ಮೃತಿ, ಸದಾಚಾರಗಳ ನೆಲೆವೀಡಾಗಿ, ಋಷಿ-ಮುನಿಗಳ ಸಂಕುಲವನ್ನೇ ಕಂಡ ನಾಡಾಗಿ, ಭೋಗಕ್ಕಿಂತಲೂ ತ್ಯಾಗಕ್ಕೇ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದ ದಿವ್ಯ ದೇಶವಾಗಿ, ಇತಿಹಾಸ, ಪುರಾಣಗಳ ಆವಿರ್ಭಾವದ ನೆಲೆಯಾಗಿ, ಸಾರಸ್ವತಲೋಕದ ಕೇಂದ್ರಬಿಂದುವಾಗಿ ವಿಶೇಷತಃ ಕರ್ಮಭೂಮಿಯಾಗಿ ಪ್ರಸಿದ್ಧಿಯನ್ನು ಹೊಂದಿರುವ ಭೂಮಿ ನಮ್ಮ ಭರತಭೂಮಿ. ಈ ಭೂಮಿಯಲ್ಲಿ ಅದೆಷ್ಟೋ ಮಹಾಮಹಿಮರು ಆಗಿಹೋಗಿದ್ದಾರೆ. ಆದರೆ ಅವರೆಲ್ಲರ ಆದರ್ಶಗಳು ಇಂದಿಗೂ ಎಂದೆಂದಿಗೂ ಪ್ರಸ್ತುತವಾದವುಗಳಾಗಿವೆ. ವಿಶೇಷವಾಗಿ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಉತ್ತುಂಗಕ್ಕೇರಿದ, ಬೇರೆಲ್ಲ ದೇಶಗಳೂ ನಮ್ಮ ಕಡೆಗೆ ತಿರುಗಿ ನೋಡುವಂತೆ ಮಾಡಿದ ಕೀರ್ತಿ, ಜ್ಞಾನಗಂಗೆಯನ್ನೇ ಹರಿಸಿದ ಯಶಸ್ಸು ಇಲ್ಲಿನ ಋಷಿ, ಮುನಿ, ಯತಿಗಳಿಗೇ ಸಲ್ಲುತ್ತದೆ. ಇಂತಹ ವ್ಯಕ್ತಿಗಳ ಸಾಲಲ್ಲಿ ಒಮ್ಮೆ ಕಣ್ಣು ಹಾಯಿಸಿದಾಗ ಎಂದೆಂದೂ ಮನದಲ್ಲಿ ಅಳಿಯದೆ ಉಳಿಯುವಂತಹ ವ್ಯಕ್ತಿಯೆಂದರೆ ಭಗವತ್ಪಾದ ಆದಿಶಂಕರರು. ಅವರ ಮೇರು ವ್ಯಕ್ತಿತ್ವವನ್ನು ವರ್ಣಿಸುವುದಾಗಲೀ ಅಥವಾ ಪೂರ್ಣ ತಿಳಿಯುವುದಾಗಲೀ ನಮಗೆ ಕಷ್ಟಸಾಧ್ಯವಾದುದು.

ಭಗವತ್ಪಾದ ಶಂಕರರು ತಮ್ಮ ಜನ್ಮದಿಂದ ಈ ಭರತಭೂಮಿಯನ್ನು ಪಾವನಗೊಳಿಸಿ ಇಂದಿಗೆ ಹನ್ನೆರಡು ಶತಮಾನಗಳೇ ಸಂದಿವೆ. ಭಗವತ್ಪಾದರು ಸಾಕ್ಷಾತ್ ಶಿವನ ಅಂಶಸಂಭೂತರೆಂದೇ ಅವರ ಭಕ್ತರ, ಅನುಯಾಯಿಗಳ ಅನಿಸಿಕೆ. ಅವರು ಅವತರಿಸಿದ ಸಮಯದಲ್ಲಿ ಭಾರತದಲ್ಲಿ ನಾಸ್ತಿಕ ಮತದ ಅದರಲ್ಲೂ ವಿಶೇಷವಾಗಿ ಬೌದ್ಧ ಮತದ ಪ್ರಾಬಲ್ಯ ಹೆಚ್ಚಾಗಿತ್ತು. ವೇದ ಮತ್ತು ವೈದಿಕ ದರ್ಶನಗಳ ಬಗ್ಗೆ, ಹಾಗೂ

ಯಜ್ಞಯಾಗಾದಿಗಳ ಬಗ್ಗೆ ಜನರಲ್ಲಿ ತಿರಸ್ಕಾರ ಭಾವನೆ ಪ್ರಜ್ವಲಿಸುತ್ತಿತ್ತು. ಇಂತಹ ಕ್ಲಿಷ್ಟ ಸಮಯದಲ್ಲಿ ಜನ್ಮ ತಳೆದ ಶಂಕರರು ತಮ್ಮ ಅಸಾಧಾರಣ ಪ್ರತಿಭೆಯಿಂದ ನಾಸ್ತಿಕ ಮತಗಳನ್ನೆಲ್ಲಾ ಖಂಡಿಸಿ ಪರಮಾರ್ಥ ಸತ್ಯವನ್ನು ಲೋಕಕ್ಕೆ ತೋರಿಸಿಕೊಟ್ಟ ಮಹನೀಯರು. ಕುಮಾರಿಲ ಭಟ್ಟರೆಂಬ ಪ್ರಸಿದ್ಧ ಮೀಮಾಂಸಕರು ಬೌದ್ಧರ ಮತವನ್ನು ಖಂಡಿಸಿದ್ದರೂ ಆ ಕಾರ್ಯ ಅಪೂರ್ಣವಾಗಿತ್ತು. ಅದನ್ನು ಪೂರ್ಣಗೊಳಿಸಿ ವೈದಿಕ ಸಿದ್ಧಾಂತವನ್ನೂ ಸನಾತನ ಧರ್ಮವನ್ನೂ ಪುನಃ ಪ್ರತಿಷ್ಠಾಪಿಸಿದರು.

ಇಲ್ಲೊಂದು ವಿಚಾರವನ್ನು ಹೇಳಲೇಬೇಕು. ಭಗವತ್ಪಾದರು ಅದ್ವೈತವೆಂಬ ಮತವನ್ನು ಹೊಸದಾಗಿ ಹುಟ್ಟು ಹಾಕಿದವರಲ್ಲ. ಹಾಗಾದರೆ ಮತ್ತೇನು ? ಅವರು ಕೇವಲ ಅವೈದಿಕ ಅಥವಾ ನಾಸ್ತಿಕ ಸಿದ್ಧಾಂತಗಳನ್ನು ಖಂಡಿಸಿ ವೈದಿಕ ಸಿದ್ಧಾಂತವನ್ನು ಪುನಃ ಪ್ರತಿಷ್ಠಾಪಿಸಿದರು. ಅರ್ಥಾತ್ ಜೀರ್ಣಾವಸ್ಥೆಯಲ್ಲಿದ್ದ ವೈದಿಕ ಸಿದ್ಧಾಂತವನ್ನು ಉದ್ಧರಿಸಿದರು. ಆದರೆ ಮುಂದೆ ರಾಮಾನುಜ, ಮಧ್ವಾದಿಗಳು ತಮ್ಮ ತಮ್ಮ ಮತವನ್ನು ಬೇರೆ ಬೇರೆಯಾಗಿ ಪ್ರತಿಪಾದಿಸಿದುದರಿಂದ, ಭಗವತ್ಪಾದರು ಉದ್ಧರಿಸಿದ ಸಿದ್ಧಾಂತವನ್ನು ಅದ್ವೈತಮತವೆಂದು ಕರೆಯಲಾರಂಭಿಸಿದರು. ಮುಖ್ಯವಾಗಿ ಭಗವತ್ಪಾದರು ಪ್ರತಿಪಾದಿಸಿದ ಸಿದ್ಧಾಂತವೇ ಹಿಂದಿನಿಂದಲೂ ಇದ್ದಂತಹ ವೈದಿಕ ಸಿದ್ಧಾಂತವಾಗಿತ್ತು. ಹಾಗಾದರೆ ಭಗವತ್ಪಾದರು ಮಾಡಿದ್ದೇನು ? ಭಗವತ್ಪಾದರು ಹಿಂದಿನಿಂದ ಪ್ರಸಿದ್ಧವಾದ ಸಿದ್ಧಾಂತವನ್ನೇ ಬಹಳ ವ್ಯವಸ್ಥಿತವಾದ ರೀತಿಯಲ್ಲಿ ಶ್ರುತಿ, ಸ್ಮೃತಿ, ಯುಕ್ತಿ ಮತ್ತು ಅನುಭವ ಪ್ರಮಾಣಗಳ ಮೂಲಕ ತಮ್ಮ ಅನ್ಯಾದೃಶ ಪ್ರತಿಭೆಯಿಂದ ಸುಲಲಿತವಾದ ಗಂಭೀರ ಶೈಲಿಯಲ್ಲಿ ಪುನಃ ಯಾರಿಂದಲೂ ತಿರಸ್ಕರಿಸಲಾಗದಂತಹ ರೀತಿಯಲ್ಲಿ ವಿಚಾರದ ಒರೆಗಲ್ಲಿನಲ್ಲಿ ಪರೀಕ್ಷಿಸಿ ಪುನಃ ಪ್ರತಿಷ್ಠಾಪಿಸಿದರು. ಭಗವತ್ಪಾದರಿಗಿಂತ ಮೊದಲಿನ ಇತರ ದಾರ್ಶನಿಕರು ತಮ್ಮ ತಮ್ಮ ಸಿದ್ಧಾಂತಗಳನ್ನು ಪ್ರತಿಪಾದಿಸುವಾಗ ಭಗವತ್ಪಾದರು ಪ್ರತಿಪಾದಿಸಿದ ಸಿದ್ಧಾಂತವನ್ನೇ ಪೂರ್ವಪಕ್ಷವನ್ನಾಗಿಟ್ಟುಕೊಂಡಿರುವುದನ್ನು ಗಮನಿಸಿದರೆ ಅವರು ಪ್ರತಿಪಾದಿಸಿದ ಪ್ರಾಚೀನತೆ ಸ್ಪಷ್ಟವಾಗಿ ತಿಳಿಯುತ್ತದೆ. ಹಾಗಾದರೆ ಭಗವತ್ಪಾದರು ಅದ್ವೈತ ಮತವನ್ನು ಹುಟ್ಟು ಹಾಕಲಿಲ್ಲವೇ ? ಇಲ್ಲವೇ ಇಲ್ಲ, ಇಲ್ಲವೆಂದಾದಲ್ಲಿ ಅವರು ಮಾಡಿದ್ದೇನು ? ಕ್ಷೀಣದೆಶೆಯನ್ನು ತಲುಪಿದ ವೈದಿಕದರ್ಶನದ ಉದ್ಧಾರವನ್ನು ಮಾತ್ರ ಮಾಡಿದರೆಂದೇ ಹೇಳಬೇಕಾಗುತ್ತದೆ. ಬೇರೆಯವರ ಮತದ ದೃಷ್ಟಿಯಿಂದ ಇದನ್ನು ಅದ್ವೈತಮತವೆನ್ನಲಾಗುತ್ತಿದೆಯೇ ಹೊರತು ಇದೇ ಹಿಂದಿನಿಂದಲೂ ಇದ್ದಂತಹ ನಿಜವಾದ ಔಪನಿಷದ್ದರ್ಶನ.

ಭಗವತ್ಪಾದರಿಗಿಂತಲೂ ಮೊದಲು ಅನೇಕರು ಈ ವೈದಿಕಸಿದ್ಧಾಂತವನ್ನು ಪ್ರತಿಪಾದಿಸುವಾಗ ಶ್ರುತಿ ಸೂತ್ರಗಳನ್ನು ವ್ಯಾಖ್ಯಾನಿಸುವಾಗ ಅಲ್ಲಲ್ಲಿ ಎಡವಿದ್ದುದನ್ನು ಭಗವತ್ಪಾದರು ತೋರಿಸಿ ಪುನಃ ನಿರ್ದುಷ್ಟವಾದ ವಿವರಣೆಯನ್ನು ನೀಡಿ ವೈದಿಕದರ್ಶನವನ್ನು ಸಂದೇಹಕ್ಕೆ ಆಸ್ಪದವಿಲ್ಲದಂತೆ ಪ್ರತಿಪಾದಿಸಿರುತ್ತಾರೆ.

ಆಚಾರ್ಯ ಶಂಕರಭಗವತ್ಪಾದರಿಗಿಂತ ಮೊದಲು ಅನೇಕ ಆಚಾರ್ಯರು ವೈದಿಕ ದರ್ಶನದ ರಹಸ್ಯವನ್ನು ಅನೇಕ ಭಾಷ್ಯ, ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಈ ವೈದಿಕ ದರ್ಶನವನ್ನು ತಿಳಿಯಬೇಕಾದರೆ ಮುಖ್ಯವಾಗಿ ಪ್ರಸ್ಥಾನತ್ರಯಗಳ ಕಡೆ ಗಮನ ಹರಿಸುವುದು ಆವಶ್ಯಕ. ಶ್ರುತಿಪ್ರಸ್ಥಾನ. ಸ್ಮೃತಿಪ್ರಸ್ಥಾನ ಹಾಗೂ ಸೂತ್ರಪ್ರಸ್ಥಾನವೆಂದು ಪ್ರಸ್ಥಾನತ್ರಯವನ್ನು ಹೆಸರಿಸಲಾಗಿದೆ. ಈ ಪ್ರಸ್ಥಾನತ್ರಯಗಳಲ್ಲಿ ಏನು ಹೇಳಿದೆ ಎಂಬುದನ್ನು ತಿಳಿಯಲು ಭಗವತ್ಪಾದರು ಬರೆದಂತಹ ಭಾಷ್ಯವನ್ನು ನೋಡಬೇಕಾದುದು ಆವಶ್ಯಕ.

## ಪ್ರಸ್ಥಾನತ್ರಯ ಭಾಷ್ಯಗಳು

ಭಗವತ್ಪಾದರಿಂದ ರಚಿತವಾಗಿರುವ ಗ್ರಂಥಗಳನ್ನು ೧) ಭಾಷ್ಯಗಳು ೨) ಪ್ರಕರಣಗಳು ೩) ಸ್ತೋತ್ರಗಳೆಂಬುದಾಗಿ ಮೂರು ವಿಧವಾಗಿ ವಿಂಗಡಿಸಬಹುದಾಗಿದೆ. ಅಧಿಕಾರಿ ಭೇದವನ್ನನುಸರಿಸಿ ಭಗವತ್ಪಾದರು ಈ ರೀತಿ ಮೂರುವಿಧವಾದ ರಚನೆಗಳಿಂದ ಲೋಕದಲ್ಲಿರುವ ಎಲ್ಲರೂ ಶ್ರೇಯೋಭಾಗಿಗಳಾಗುವ ಮಾರ್ಗವನ್ನು ತೋರಿಸಿಕೊಟ್ಟು ನಿಜವಾದ ಅರ್ಥದಲ್ಲಿ ಜಗದ್ಗುರುವೆನಿಸಿದ್ದಾರೆ. ಇವುಗಳಲ್ಲಿ ಭಾಷ್ಯಗಳು ಉತ್ತಮಾಧಿಕಾರಿಗಳನ್ನೂ, ಪ್ರಕರಣಗಳು ಮಧ್ಯಮಾಧಿಕಾರಿಗಳನ್ನೂ ಹಾಗೂ ಸ್ತೋತ್ರಗಳು ಮಂದಾಧಿಕಾರಿಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ರಚಿತವಾದವುಗಳು.

ಇವುಗಳಲ್ಲಿ ಮೊದಲನೆಯದಾದ ಭಾಷ್ಯವನ್ನು ಶ್ರುತಿಪ್ರಸ್ಥಾನ. ಸ್ಮೃತಿಪ್ರಸ್ಥಾನ ಮತ್ತು ಸೂತ್ರಪ್ರಸ್ಥಾನವೆಂಬ ಭೇದವನ್ನನುಸರಿಸಿ ಮೂರು ವಿಭಾಗ ಮಾಡಲಾಗಿದೆ. ಶ್ರುತಿಪ್ರಸ್ಥಾನವೆಂದರೆ ಉಪನಿಷತ್ತುಗಳು. ಅವುಗಳ ಅರ್ಥವಿವರಣೆ ಮಾಡಲು ಹೊರಟ ಭಾಷ್ಯ ಉಪನಿಷದ್ಭಾಷ್ಯ, ಸ್ಮೃತಿ ಪ್ರಸ್ಥಾನವೆಂದರೆ ಭಗವದ್ಗೀತೆ. ಅದರ ಅರ್ಥ ವಿವರಣೆಗಾಗಿ ಬರೆದ ಭಾಷ್ಯ ಗೀತಾಭಾಷ್ಯ. ಸೂತ್ರಪ್ರಸ್ಥಾನವೆಂದರೆ ಶ್ರುತಿಸ್ಮೃತಿಗಳ ತಾತ್ಪರ್ಯವೇನೆಂಬುದನ್ನು ನ್ಯಾಯ(ಯುಕ್ತಿ)ದಿಂದ ನಿರ್ಣಯಿಸಲು ರಚಿತವಾದ ಬಾದರಾಯಣ ಸೂತ್ರಗಳು. ಅವುಗಳ ಅರ್ಥವಿವರಣೆ ಮಾಡಲು ಹೊರಟ ಭಾಷ್ಯ ಸೂತ್ರಭಾಷ್ಯ. ವೇದಾಂತವೆಂದರೆ ಉಪನಿಷತ್ತು. ಸಮಗ್ರ ವೇದಾಂತಶಾಸ್ತ್ರವು ಉಪನಿಷತ್ತುಗಳನ್ನೇ ಆಧಾರವಾಗಿ ಹೊಂದಿದೆ. ಶ್ರೀಕೃಷ್ಣನು ರಣಾಂಗಣದಲ್ಲಿ ಅರ್ಜುನನಿಗೆ ಮಾಡಿದ ಉಪದೇಶವನ್ನು ವ್ಯಾಸರು ಶ್ಲೋಕರೂಪದಲ್ಲಿ ರಚನೆ ಮಾಡಿ ಕೊಟ್ಟಿಸಿದುದರಿಂದ ಗೀತೆಯು ಪೌರುಷೇಯ. ಶ್ರುತ್ಯರ್ಥವನ್ನೇ ಪ್ರತಿಬಿಂಬಿಸಿ ಕೊಡುತ್ತಿರುವುದರಿಂದ ಸ್ಮೃತಿ ಎಂದೆನಿಸಿಕೊಳ್ಳುತ್ತದೆ. ಅಂದರೆ ಶ್ರುತ್ಯರ್ಥವನ್ನು ಸ್ಮರಣೆಗೆ ತಂದುಕೊಡುತ್ತದೆ. ಶ್ರುತ್ಯರ್ಥಾನುಸಾರಿಯಾಗಿದ್ದಾಗಲೇ ಈ ಸ್ಮೃತಿಗೂ ಪ್ರಾಮಾಣ್ಯ. ಶ್ರುತ್ಯರ್ಥವನ್ನು ಯುಕ್ತಿಯಿಂದ ತಿಳಿಸಲು ಬಾದರಾಯಣರು ಸೂತ್ರಗಳನ್ನು ರಚಿಸಿದುದರಿಂದ ಅವೂ ಪೌರುಷೇಯವಾದವುಗಳೇ. ಈ ಸೂತ್ರಗಳು ಶ್ರುತಿಸ್ಮೃತಿಯನ್ನು ಆಧಾರವಾಗಿಟ್ಟುಕೊಂಡೇ ಯುಕ್ತಿಪುರಸ್ಸರವಾಗಿ ವಿಚಾರಮಾಡಿ ಶ್ರುತಿಯಲ್ಲಿ ಹೇಳಿದ

ಸಿದ್ಧಾಂತವನ್ನು ಪ್ರತಿಪಾದಿಸುವುದರಿಂದ ವೇದಾಂತದರ್ಶನದಲ್ಲಿ ಸೂತ್ರಗಳಿಗೆ ಪ್ರಾಶಸ್ತ್ಯ ಬಂದಿರುತ್ತದೆ. ಏಕೆಂದರೆ ನಮಗೆ ಶ್ರುತಿಸ್ಮೃತಿಗಳ ಅರ್ಥ ಸರಿಯಾಗಿ ಆಗಿದೆಯೋ ಇಲ್ಲವೋ ಎಂಬುದನ್ನು ನಿರ್ಣಯಿಸಬೇಕಾದರೆ ಅವುಗಳನ್ನು ಯುಕ್ತಿಯ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸುವುದು ಅತ್ಯವಶ್ಯ. ಯುಕ್ತಿಯಿಂದ ತತ್ತ್ವವನ್ನಾಗಲೀ ಸಿದ್ಧಾಂತವನ್ನಾಗಲೀ ಪ್ರತಿಪಾದನೆ ಮಾಡಿದಾಗ ತತ್ತ್ವವಿಮರ್ಶಕರ ದೃಷ್ಟಿಯಲ್ಲಿ ಅದಕ್ಕೆ ಹೆಚ್ಚಿನ ಮಹತ್ವ. ಹಾಗಾಗಿ ಈ ಸೂತ್ರಪ್ರಸ್ಥಾನವೆಂಬುದು ಇತರ ಪ್ರಸ್ಥಾನಗಳಿಗಿಂತ ಹೆಚ್ಚಿನ ಮಹತ್ತ್ವವನ್ನು ಪಡೆದಿರುವುದು ಸ್ವಾಭಾವಿಕ. ಇದೇ ರೀತಿ ಸೂತ್ರಭಾಷ್ಯವೂ ಕೂಡ ಇತರ ಭಾಷ್ಯಗಳಿಗಿಂತ ಹೆಚ್ಚಿನ ಮಹತ್ತ್ವವನ್ನು ಪಡೆದಿದೆ.

ಭಗವತ್ಪಾದರಿಂದ ಬಾದರಾಯಣ ಸೂತ್ರಗಳಿಗೆ ರಚಿತವಾದ ಈ ಸೂತ್ರ ಭಾಷ್ಯವು ಸಮನ್ವಯ, ಅವಿರೋಧ, ಸಾಧನ ಹಾಗೂ ಫಲ ಎಂಬ ಹೆಸರಿನ ನಾಲ್ಕು ಅಧ್ಯಾಯಗಳಲ್ಲಿ ವಿಭಕ್ತವಾಗಿದೆ. ಒಂದೊಂದು ಅಧ್ಯಾಯವೂ ನಾಲ್ಕು ಪಾದಗಳಿಂದ ಕೂಡಿದ್ದು ಒಟ್ಟು ಹದಿನಾರು ಪಾದಗಳಾಗಿವೆ. ಒಟ್ಟು ಬಾದರಾಯಣರಿಂದ **"ಅಥಾತೋ ಬ್ರಹ್ಮಜಿಜ್ಞಾಸಾ"** ಎಂದು ಮೊದಲ್ಗೊಂಡು **"ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್"** ಎಂಬಲ್ಲಿಯವರೆಗೆ ಐದುನೂರ ಐವತ್ತೈದು (೫೫೫) ಸೂತ್ರಗಳು ರಚಿತವಾಗಿವೆ. ಪುನಃ ಈ ಐದುನೂರಐವತ್ತೈದು ಸೂತ್ರಗಳನ್ನು ನೂರತೊಂಭತ್ತೊಂದು (೧೯೧) ಅಧಿಕರಣಗಳಲ್ಲಿ ವಿಷಯಾನುಸಾರವಾಗಿ ವಿಂಗಡಿಸಲಾಗಿದೆ. ಈ ಅಧಿಕರಣಗಳು ಕೆಲವು ಒಂದೊಂದೇ ಸೂತ್ರಗಳನ್ನೊಳಗೊಂಡಿವೆ. ಕೆಲವು ಅಧಿಕರಣಗಳು ಹಲವು ಸೂತ್ರಗಳನ್ನೊಳಗೊಂಡಿವೆ. ಅಧಿಕರಣವೆಂದರೆ –

ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಃ ।
ಪ್ರಯೋಜನಂ ಸಂಗತಿಶ್ಚ ಶಾಸ್ತ್ರೇಽಧಿಕರಣಂ ವಿದುಃ ॥

ಎಂದು ಹೇಳಲಾಗಿದೆ. ಅಂದರೆ ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ ವಿಚಾರಕ್ಕೆ ಪ್ರಯೋಜನ ಮತ್ತು ಸಂಬಂಧಗಳನ್ನೊಳಗೊಂಡ ಕ್ರಮಪೂರ್ವಕ ವಿಚಾರಸರಣಿಯನ್ನು ಅಧಿಕರಣವೆನ್ನಲಾಗುತ್ತದೆ. ಈ ರೀತಿಯಾದ ವಿಚಾರ ಪದ್ಧತಿಯನ್ನು ನಾವು ಪೂರ್ವೋತ್ತರ ಮೀಮಾಂಸಾ ಶಾಸ್ತ್ರಗಳಲ್ಲಿ ಕಾಣಬಹುದು.

## ಬ್ರಹ್ಮಸೂತ್ರ ಶಾಂಕರಭಾಷ್ಯದ ಉದಯ

ಬಾದರಾಯಣರಿಂದ ರಚಿತವಾದ ಬ್ರಹ್ಮಸೂತ್ರಗಳು ಬಹಳ ಗಂಭೀರವಾಗಿದ್ದು ವ್ಯಾಖ್ಯಾನವಿಲ್ಲದೇ ಅರ್ಥೈಸುವುದು ಬಹಳ ಕಷ್ಟ. ಸೂತ್ರಗಳೆಂದ ಮೇಲೆ ಸಂಕ್ಷಿಪ್ತವಾಗಿಯೇ ಇರುತ್ತವೆ. ಸೂತ್ರವೆಂದರೆ–

ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋ ಮುಖಮ್ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥

ಎಂಬುದಾಗಿ ವಿವರಿಸಲಾಗಿದೆ. ಅಂದರೆ ಅಲ್ಪಾಕ್ಷರಗಳನ್ನೊಳಗೊಂಡ, ಸಂಶಯಕ್ಕಾಸ್ಪದವಿಲ್ಲದಿರುವ, ಸಾರವತ್ತಾದ ವಿಶಾಲವಾದ ಅರ್ಥವನ್ನೊಳಗೊಂಡ, ನಿರರ್ಥಕ ಶಬ್ದಗಳಿಲ್ಲದ, ಅನಿಂದಿತವಾದದ್ದನ್ನು ಸೂತ್ರವೆನ್ನುತ್ತಾರೆ. ಮಂದಮತಿಗಳಿಗೆ ಸೂತ್ರದ ಅಭಿಪ್ರಾಯವನ್ನು ತಿಳಿಯುವುದು ಕಷ್ಟ. ಅದಕ್ಕಾಗಿ ಸೂತ್ರಪ್ರಸ್ಥಾನವು ವೃತ್ತಿ ಅಥವಾ ವ್ಯಾಖ್ಯಾನವನ್ನು ಬಯಸುತ್ತದೆ. ಭಗವತ್ಪಾದರಿಗಿಂತ ಮೊದಲು ಕೆಲವರು ಬ್ರಹ್ಮಸೂತ್ರಗಳಿಗೆ ಭಾಷ್ಯ(ವೃತ್ತಿ)ವನ್ನು ಬರೆದಿದ್ದರೆಂದು ತಿಳಿದುಬರುತ್ತದೆ. ಅವರಲ್ಲಿ ಪ್ರಮುಖವಾಗಿ ಬೋಧಾಯನ, ಉಪವರ್ಷ, ಭರ್ತೃಪ್ರಪಂಚ, ಬ್ರಹ್ಮನಂದಿ, ಟಂಕ, ಗೃಹದೇವ, ಭಾರುಚಿ, ಕಪರ್ದಿ, ಭರ್ತೃಹರಿ, ಸುಂದರ ಪಾಂಡ್ಯ, ದ್ರವಿಡಾಚಾರ್ಯ ಹಾಗೂ ಬ್ರಹ್ಮದತ್ತ ಎಂಬ ಹೆಸರುಗಳು ಕೇಳಿಬರುತ್ತವೆ. ಆದರೆ ಅವುಗಳೆಲ್ಲ ಈಗ ಉಪಲಬ್ಧವಿಲ್ಲ. ಬೋಧಾಯನ ಹಾಗೂ ಉಪವರ್ಷ ಒಬ್ಬನೇ ವ್ಯಕ್ತಿಯೆಂದೂ ಬೇರೆ ಬೇರೆಯಲ್ಲವೆಂದೂ ಒಂದು ಅಭಿಪ್ರಾಯವಿದೆ. ಉಪವರ್ಷನ ಬಗ್ಗೆ ಶಾಂಕರ, ಶಾಬರ, ಶ್ರೀಭಾಷ್ಯತತ್ತ್ವಟೀಕೆ ಮತ್ತು ಭಾಸ್ಕರಭಾಷ್ಯಗಳಲ್ಲಿ ಸ್ಪಷ್ಟವಾದ ಉಲ್ಲೇಖವಿದೆ. ಬ್ರಹ್ಮಸೂತ್ರಗಳಿಗೆ ಉಪವರ್ಷನಿಂದ ರಚಿತವಾದದ್ದೇ ಅತ್ಯಂತ ಪ್ರಾಚೀನವಾದ ಭಾಷ್ಯ ಅಥವಾ ವೃತ್ತಿ ಎಂಬುದು ವಿದ್ವಾಂಸರ ಅಭಿಮತ. ಹಾಗೆಯೇ ಭರ್ತೃಪ್ರಪಂಚನಿಂದ ರಚಿತವಾದ ವೃತ್ತಿಯೂ ಪ್ರಾಚೀನವಾದುದೇ. ಇದೂ ಕೂಡ ಭಗವತ್ಪಾದರ ಭಾಷ್ಯದಲ್ಲಿ ಅಲ್ಲಲ್ಲಿ ಪೂರ್ವಪಕ್ಷ ರೂಪದಲ್ಲಿ ಉಲ್ಲೇಖಿಸಿರುವುದನ್ನು ಬಿಟ್ಟರೆ ಮತ್ತೆ ಸಂಪೂರ್ಣವಾಗಿ ಉಪಲಬ್ಧವಿಲ್ಲ. ಬ್ರಹ್ಮಸೂತ್ರ ಶಾಂಕರಭಾಷ್ಯದಲ್ಲಿ ಸಮನ್ವಯಾಧಿಕರಣ,[೧] ಆನಂದಮಯಾಧಿಕರಣ,[೨] ತದನನ್ಯತ್ವಾಧಿಕರಣ,[೩] ಕಾರ್ಯಾಧಿಕರಣ,[೪] ಉಭಯಲಿಂಗಾಧಿಕರಣ[೫]ಗಳಲ್ಲಿ ಭರ್ತೃಪ್ರಪಂಚರ ಮತವನ್ನು ಉಲ್ಲೇಖಿಸಿ ಖಂಡಿಸಿರುವುದು ಗೋಚರವಾಗುತ್ತದೆ. ಹೀಗೆಲ್ಲಾ ಅನೇಕ ವೃತ್ತಿ(ಭಾಷ್ಯ)ಗಳು ಇದ್ದಾಗ್ಯೂ ಭಗವತ್ಪಾದರು ಮತ್ತೇಕೆ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದರು ಎಂಬ ಶಂಕೆ ಯಾರಿಗಾದರೂ ಬರುವುದು ಸಹಜ. ಅದಕ್ಕೆ ಸಮಾಧಾನವಿಷ್ಟೆ. ಈ ಹಿಂದೆ ಉದಾಹರಿಸಿದ ಹಾಗೂ ಉಪಲಬ್ಧವಿದ್ದ ವೃತ್ತಿಗಳಲ್ಲಿ ವಿಶೇಷವಾಗಿ ಭೇದಾಭೇದವಾದದಿಂದಲೋ, ಬ್ರಹ್ಮನಿಗೆ ಅವಸ್ಥಾವಸ್ಥಾನವರ್ಣನೆಯಿಂದಲೋ ವಿಜ್ಞಾನಾತ್ಮನಿಗೆ ಅಂದರೆ ಜೀವನಿಗೆ ವಿಕಾರಸ್ವರೂಪ ವರ್ಣನೆಯಿಂದಲೋ ಅಥವಾ ಜ್ಞಾನಕರ್ಮ ಸಮುಚ್ಚಯವಾದದಿಂದಲೋ ಶ್ರುತಿಯ ತಾತ್ಪರ್ಯವನ್ನು ಸರಿಯಾಗಿ ತಿಳಿಸದೇ ವೇದಸಂಮತವಾದ ಸಿದ್ಧಾಂತ ಪ್ರತಿಪಾದನೆಯಾದುದರಿಂದ ಶ್ರುತಿ ತಾತ್ಪರ್ಯವನ್ನು

---

೧. ಬ್ರ. ಸೂ. ೧-೧-೪

೨. ಬ್ರ. ಸೂ. ೧-೧-೧೨

೩. ಬ್ರ. ಸೂ. ೨-೧-೧೪

೪. ಬ್ರ. ಸೂ. ೪-೩-೭

೫. ಬ್ರ. ಸೂ. ೩-೨-೧೧

ನಿರ್ದುಷ್ಟವಾಗಿ ತಿಳಿಸುವ ಒಂದು ಭಾಷ್ಯದ ಅವಶ್ಯಕತೆ ಉಂಟಾಗಿತ್ತು. ಅದಕ್ಕಾಗಿಯೇ ಬ್ರಹ್ಮಸೂತ್ರಗಳಿಗೆ ಭಗವತ್ಪಾದರಿಂದ ಭಾಷ್ಯದ ನಿರ್ಮಾಣವಾಯಿತು. ಭಾಷ್ಯವೆಂದರೆ **"ಆಕ್ಷಿಪ್ಯ ಭಾಷಣಾದ್ ಭಾಷ್ಯಮ್"** ಅಂದರೆ ಪೂರ್ವಪಕ್ಷವನ್ನು ಮಾಡಿ ಹೇಳಬೇಕಾದ ಸಿದ್ಧಾಂತವನ್ನು ಹೇಳುವುದು ಎಂದು ಸಾಮಾನ್ಯವಾಗಿಯೂ, ವಿಶೇಷವಾಗಿ –

> ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಸಾರಿಭಿಃ ।
> ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥

ಎಂಬುದಾಗಿ ಲಕ್ಷಣವನ್ನು ಹೇಳಲಾಗಿದೆ. ಸೂತ್ರವನ್ನನುಸರಿಸಿದ ಪದಗಳಿಂದ ಸೂತ್ರಾರ್ಥವನ್ನು ವಿವರಿಸುತ್ತ ವ್ಯಾಖ್ಯಾನದಲ್ಲಿರುವ ವಿಶೇಷ ಪದಗಳ ವಿವರಣೆಯನ್ನು ಎಲ್ಲಿ ನೀಡಲಾಗುವುದೋ ಅದೇ ಭಾಷ್ಯವೆಂದು ಕರೆಯಲ್ಪಡುತ್ತದೆ.

ಭಗವತ್ಪಾದ ಶಂಕರರು ಬಾದರಾಯಣಸೂತ್ರಗಳಿಗೆ ಅತ್ಯಂತ ಮನೋಹರವಾದ ಹಾಗೂ ಅತಿಗಂಭೀರವಾದ ಭಾಷ್ಯವನ್ನು ಬರೆದು ವೈದಿಕದರ್ಶನದ ಹಾಗೂ ಸನಾತನ ಧರ್ಮದ ಹಿರಿಮೆಯನ್ನು ಸ್ಫುಟವಾಗಿ ತೋರಿಸಿದ್ದಾರೆ. ಬ್ರಹ್ಮಸೂತ್ರಶಾಂಕರಭಾಷ್ಯಕ್ಕೆ 'ಭಾಮತೀ' ಎಂಬ ಹೆಸರಿನ ಅತ್ಯಂತ ಪ್ರೌಢವಾದ ವ್ಯಾಖ್ಯಾನವನ್ನು ಬರೆದಂತಹ ವಾಚಸ್ಪತಿಮಿಶ್ರರು ಭಗವತ್ಪಾದರ ಸೂತ್ರಭಾಷ್ಯವನ್ನು **"ಭಾಷ್ಯಂ ಪ್ರಸನ್ನಗಂಭೀರಂ"** ಎಂಬುದಾಗಿ ಅನ್ವರ್ಥವಾಗಿ ಉಲ್ಲೇಖಿಸಿದ್ದಾರೆ. ಪಾತಂಜಲ ಮಹಾಭಾಷ್ಯಕ್ಕೆ ಸಮನಾದ ಗೌರವಾದರಗಳನ್ನು ಪಡೆದಿರುವ ಭಾಷ್ಯವೆಂದರೆ ಭಗವತ್ಪಾದರ ಭಾಷ್ಯ ಮಾತ್ರವೆಂದರೆ ಅತಿಶಯೋಕ್ತಿಯಾಗಲಾರದು. ಈ ಬ್ರಹ್ಮಸೂತ್ರ ಶಾಂಕರಭಾಷ್ಯದ ಸ್ವರೂಪವನ್ನು ಇನ್ನು ಮುಂದೆ ಸ್ವಲ್ಪ ವಿವೇಚಿಸೋಣ.

## ಬ್ರಹ್ಮಸೂತ್ರ ಭಾಷ್ಯದ ಸ್ವರೂಪ

ಈ ಮೊದಲೇ ಹೇಳಿದಂತೆ ಬಾದರಾಯಣಸೂತ್ರಗಳನ್ನು ನಾಲ್ಕು ಅಧ್ಯಾಯಗಳಲ್ಲಿ ವಿಭಜಿಸಿ ತದನುಸಾರವಾಗಿ ಭಾಷ್ಯವನ್ನು ರಚಿಸಲಾಗಿದೆ. ಒಂದೊಂದು ಅಧ್ಯಾಯವೂ ನಾಲ್ಕು ಪಾದಗಳಿಂದ ಕೂಡಿದೆ. ಸೂತ್ರಗಳನ್ನು ಈ ರೀತಿ ನಾಲ್ಕು ಅಧ್ಯಾಯಗಳನ್ನಾಗಿ ಮಾಡಿರುವುದು ಸೂತ್ರಕಾರರಿಂದಲೇ ಸೂಚಿತವಾಗಿದೆ. ಪ್ರತಿ ಅಧ್ಯಾಯದ ಕೊನೆಯ ಸೂತ್ರದ ಕೊನೆಯ ಪದವನ್ನು ಎರಡು ಸಾರಿ ಹೇಳುವುದರ ಮೂಲಕ ಇದನ್ನು ತಿಳಿಸಲಾಗಿದೆ. ಹೇಗೆಂದರೆ ಮೊದಲನೇ ಅಧ್ಯಾಯದ ಕೊನೆಯಲ್ಲಿ **"ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ"** ಎಂದು ವ್ಯಾಖ್ಯಾತ ಶಬ್ದವನ್ನೂ ಎರಡನೇ ಅಧ್ಯಾಯದ ಕೊನೆಯಲ್ಲಿ **"ವೈಶೇಷ್ಯಾತ್ತು ತದ್ವಾದಸ್ತದ್ವಾದಃ"** ಎಂದು ತದ್ವಾದ ಶಬ್ದವನ್ನೂ, ಮೂರನೇ ಅಧ್ಯಾಯದ ಕೊನೆಯಲ್ಲಿ **"ಏವಂ ಮುಕ್ತಿಫಲಾ ನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ"** ಎಂದು ತದವಸ್ಥಾವಧೃತೇ ಶಬ್ದವನ್ನು ಎರಡೆರಡು ಬಾರಿ ಹೇಳಿರುತ್ತಾರೆ. ನಾಲ್ಕನೇ ಅಧ್ಯಾಯದ ಕೊನೆಯಲ್ಲಿ ಮಾತ್ರ

'ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್'' ಎಂದು ಸಂಪೂರ್ಣ ಸೂತ್ರವನ್ನೇ ಎರಡು ಬಾರಿ ಹೇಳಲಾಗಿದೆ. ಇದರರ್ಥವೇನೆಂದರೆ ಸಂಪೂರ್ಣ ಶಾಸ್ತ್ರವು ಇಲ್ಲಿಗೆ ಮುಕ್ತಾಯವಾಯಿತೆಂದು. ಹೀಗೆ ಸೂತ್ರ ಜೋಡಣೆಯ ಕ್ರಮದಲ್ಲಿಯೇ ಇಂತಹ ರಹಸ್ಯಗಳನ್ನಿಟ್ಟಿದ್ದಾರೆ. ಇದೆಲ್ಲ ಭಾಷ್ಯದ ಆಧಾರವಿಲ್ಲದೆ ಮಂದಮತಿಗಳಿಗೆ ತಿಳಿಯುವುದಿಲ್ಲ.

ಮೇಲೆ ಹೇಳಿದ ನಾಲ್ಕು ಅಧ್ಯಾಯಗಳೂ ಕ್ರಮವಾಗಿ ಸಮನ್ವಯ, ಅವಿರೋಧ, ಸಾಧನ ಮತ್ತು ಫಲವೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಒಂದೊಂದು ಅಧ್ಯಾಯದಲ್ಲಿರುವ ನಾಲ್ಕು ಪಾದಗಳ ವಿಭಾಗಕ್ಕೂ ಕೂಡ ಹಿನ್ನೆಲೆ ಉಂಟು.

## ಸಮನ್ವಯಾಧ್ಯಾಯ

ಸಮನ್ವಯವೆಂಬ ಹೆಸರಿನ ಮೊದಲನೆ ಅಧ್ಯಾಯದ ಮೊದಲ ಪಾದದಲ್ಲಿ ಸ್ಪಷ್ಟವಾಗಿ ಬ್ರಹ್ಮಲಿಂಗವುಳ್ಳ ಅಂದರೆ ಸ್ಪಷ್ಟವಾಗಿ ಬ್ರಹ್ಮನನ್ನು ಬೋಧಿಸುವ ಶ್ರುತಿ ವಾಕ್ಯಗಳಿಗೆ ಬ್ರಹ್ಮನಲ್ಲಿ ತಾತ್ಪರ್ಯವನ್ನು ಹೇಳುತ್ತಾ ಅನ್ವಯವನ್ನು ತೋರಿಸಲಾಗಿದೆ. ಈ ಪಾದದಲ್ಲಿ ಒಟ್ಟು ಹನ್ನೊಂದು ಅಧಿಕರಣಗಳಿವೆ. ಹಾಗೇ ಎರಡನೇ ಮತ್ತು ಮೂರನೇ ಪಾದಗಳಲ್ಲಿ ಅಸ್ಪಷ್ಟಬ್ರಹ್ಮಲಿಂಗವನ್ನು ಬೋಧಿಸುವ ಅಂದರೆ ಬ್ರಹ್ಮಗಮಕ ವಾಕ್ಯಗಳಲ್ಲಿ ಸ್ಪಷ್ಟತೆ ಇಲ್ಲದಿರುವಾಗ ಬರುವ ಸಂಶಯವನ್ನು ಪರಿಹರಿಸಿ ಆ ಎಲ್ಲ ಶ್ರುತಿ ವಾಕ್ಯಗಳಿಗೂ ಅದ್ವಿತೀಯ ಬ್ರಹ್ಮನಲ್ಲೇ ತಾತ್ಪರ್ಯವೆಂದು ತೋರಿಸಲಾಗಿದೆ. ಎರಡನೇ ಪಾದದಲ್ಲಿ ಏಳು ಅಧಿಕರಣಗಳೂ ಹಾಗೂ ಮೂರನೇ ಪಾದದಲ್ಲಿ ಹದಿಮೂರು ಅಧಿಕರಣಗಳೂ ಇವೆ. ಇನ್ನು ನಾಲ್ಕನೇ ಪಾದದಲ್ಲಿ ಅವ್ಯಕ್ತ ಮೊದಲಾದ ಕೆಲವೊಂದು ಪದಗಳ ಅರ್ಥದಲ್ಲಿ ಸಂದೇಹಕ್ಕೆ ಆಸ್ಪದವಿರುವುದರಿಂದ ಬ್ರಹ್ಮಕಾರಣವಾದವು ಸರಿಯಲ್ಲ ಎಂಬ ಶಂಕೆ ಮೂಡಿ ಅವ್ಯಕ್ತಾದಿ ಪದಗಳ ಅರ್ಥನಿರ್ಣಯವನ್ನು ಬ್ರಹ್ಮಕಾರಣವಾದಕ್ಕನುಕೂಲವಾಗುವ ರೀತಿಯಲ್ಲಿ ಪ್ರದರ್ಶಿಸಿ ಎಲ್ಲ ವೇದಾಂತಗಳಿಗೂ ಬ್ರಹ್ಮನಲ್ಲೇ ಸಮನ್ವಯವನ್ನು ತೋರಿಸಲಾಗಿದೆ. ಈ ಪಾದದಲ್ಲಿ ಒಟ್ಟು ಎಂಟು ಅಧಿಕರಣಗಳಿವೆ. ಒಟ್ಟಿನಲ್ಲಿ ಪ್ರಥಮಾಧ್ಯಾಯದ ನಾಲ್ಕೂ ಪಾದಗಳಲ್ಲಿ ಒಟ್ಟಾಗಿ ಮೂವತ್ತೊಂಬತ್ತು ಅಧಿಕರಣಗಳಿವೆ.

## ಅವಿರೋಧಾಧ್ಯಾಯ

ಎರಡನೆಯ ಅಧ್ಯಾಯಕ್ಕೆ ಅವಿರೋಧಾಧ್ಯಾಯವೆಂದು ಹೆಸರು. ಈ ಅಧ್ಯಾಯದಲ್ಲಿ ಮೊದಲನೇ ಅಧ್ಯಾಯದಲ್ಲಿ ಹೇಳಿದ ಬ್ರಹ್ಮನಲ್ಲಿ ಎಲ್ಲಾ ವೇದಾಂತ ವಾಕ್ಯಗಳ ಸಮನ್ವಯಕ್ಕೆ ವಿರೋಧವನ್ನು ತೋರಿಸಿ ಅದನ್ನು ಪರಿಹರಿಸಲಾಗಿದೆ. ಎರಡನೇ ಅಧ್ಯಾಯದ ಮೊದಲನೇ ಪಾದದಲ್ಲಿ ಬ್ರಹ್ಮನಲ್ಲಿ ಹೇಳಿದ ಎಲ್ಲ ವೇದಾಂತಗಳ ಸಮನ್ವಯಕ್ಕೆ ಸಾಂಖ್ಯಾದಿಗಳ ಸ್ಮೃತಿ ಮತ್ತು ಯುಕ್ತಿಗಳಿಂದ ವಿರೋಧವನ್ನು ಶಂಕೆಮಾಡಿ

ಪರಿಹಾರ ಮಾಡಲಾಗಿದೆ. ಈ ಪಾದದಲ್ಲಿ ಒಟ್ಟು ಹದಿಮೂರು ಅಧಿಕರಣಗಳಿವೆ. ಎರಡನೇ ಪಾದದಲ್ಲಿ ಸಾಂಖ್ಯಾದ್ಯಾಗಮಗಳು ಭ್ರಾಂತಿಮೂಲವೆಂದು ತಿಳಿಸುತ್ತ ಬ್ರಹ್ಮನಲ್ಲಿ ಸಮನ್ವಯಕ್ಕೆ ಅವಿರೋಧವನ್ನು ಹೇಳಲಾಗಿದೆ. ಈ ಪಾದದಲ್ಲಿ ಒಟ್ಟು ಎಂಟು ಅಧಿಕರಣಗಳಿವೆ. ಮೂರನೇ ಪಾದದಲ್ಲಿ ಬೇರೆ ಬೇರೆ ಉಪನಿಷತ್ತುಗಳಲ್ಲಿ ಬರುವ ಸೃಷ್ಟಿಶ್ರುತಿಗಳಿಗೂ ಜೀವಾತ್ಮಶ್ರುತಿಗಳಿಗೂ ಪರಸ್ಪರ ವಿರೋಧವನ್ನು ಶಂಕೆಮಾಡಿ ಪರಿಹಾರವನ್ನೂ ಮತ್ತು ಆಕಾಶಾದಿ ಮಹಾಭೂತಗಳ ಉತ್ಪತ್ತಿಲಯ ಕ್ರಮವನ್ನು ತಿಳಿಸುತ್ತಾ ಅವಿರೋಧವನ್ನು ಪ್ರತಿಪಾದಿಸಲಾಗಿದೆ. ಈ ಪಾದದಲ್ಲಿ ಒಟ್ಟು ಹದಿನೇಳು ಅಧಿಕರಣಗಳಿವೆ. ಈ ಅಧ್ಯಾಯದ ನಾಲ್ಕನೇ ಪಾದದಲ್ಲಿ ಲಿಂಗಶರೀರ ಶ್ರುತಿಗಳ ವಿರೋಧವನ್ನು ಶಂಕೆಮಾಡಿ ಪರಿಹರಿಸಿ ಅವಿರೋಧವನ್ನು ತೋರಿಸಲಾಗಿದೆ. ಈ ಪಾದದಲ್ಲಿ ಒಟ್ಟು ಒಂಭತ್ತು ಅಧಿಕರಣಗಳೂ ಎಲ್ಲಾ ಸೇರಿ ದ್ವಿತೀಯಾಧ್ಯಾಯದಲ್ಲಿ ನಲವತ್ತೇಳು ಅಧಿಕರಣಗಳಿವೆ.

## ಸಾಧನಾಧ್ಯಾಯ

ಸಾಧನಾಧ್ಯಾಯವೆಂಬ ಹೆಸರಿನಿಂದ ಮೂರನೇ ಅಧ್ಯಾಯವು ಪ್ರಸಿದ್ಧವಾಗಿದೆ. ಈ ಅಧ್ಯಾಯದಲ್ಲಿ ಬ್ರಹ್ಮಜ್ಞಾನಕ್ಕೆ ಬೇಕಾಗುವ ವೈರಾಗ್ಯ, ಮುಮುಕ್ಷತ್ವಾದಿಗಳನ್ನು ತಿಳಿಸಲಾಗಿದೆ. ಈ ಅಧ್ಯಾಯದ ಪ್ರಥಮ ಪಾದದಲ್ಲಿ ಜೀವನ ಜಾಗ್ರದವಸ್ಥಾ ವಿಚಾರ ಪುರಸ್ಸರವಾಗಿ ಲೋಕಾಂತರಗಮನಾಗಮನಗಳನ್ನು ವಿವರಿಸುತ್ತಾ ಅನಿತ್ಯವಾದುದರಲ್ಲಿ ವೈರಾಗ್ಯವನ್ನು ಸಾಧನವನ್ನಾಗಿ ಹೇಳಲಾಗಿದೆ. ಈ ಪಾದದಲ್ಲಿ ಒಟ್ಟು ಆರು ಅಧಿಕರಣಗಳಿವೆ. ದ್ವಿತೀಯ ಪಾದದಲ್ಲಿ ಸ್ವಪ್ನಾದಿಜೀವನ ಅವಸ್ಥೆಗಳನ್ನು ವಿಚಾರ ಮಾಡುತ್ತಾ ಆತ್ಮನ ಸ್ವಯಂ ಜ್ಯೋತಿಷ್ಟ್ವವನ್ನೂ ಮತ್ತು ತ್ವಂಪದಾರ್ಥವನ್ನೂ ಹಾಗೂ ತತ್‌ಪದಾರ್ಥವನ್ನೂ ವಿವೇಚಿಸಲಾಗಿದೆ. ತತ್ತ್ವಂಪದಾರ್ಥ ವಿಚಾರವು ಬ್ರಹ್ಮಜ್ಞಾನಕ್ಕೆ ಸಾಧನವೆಂದೂ ಅರ್ಥಾತ್ ತಿಳಿಸಲಾಗಿದೆ. ಇಲ್ಲಿ ಒಟ್ಟು ಎಂಟು ಅಧಿಕರಣಗಳಿವೆ. ಮೂರನೇ ಪಾದದಲ್ಲಿ ತತ್ತ್ವಮಸಿ ವಾಕ್ಯಾರ್ಥವನ್ನೂ ಮತ್ತು ಉಪಾಸನೆಯನ್ನೂ ಸಾಧನವನ್ನಾಗಿ ವಿಮರ್ಶೆ ಮಾಡಿ ತಿಳಿಸಲಾಗಿದೆ. ಇದರಲ್ಲಿ ಒಟ್ಟು ಮೂವತ್ತಾರು ಅಧಿಕರಣಗಳಿವೆ. ನಾಲ್ಕನೇ ಪಾದದಲ್ಲಿ ಸಮ್ಯಗ್ದರ್ಶನಕ್ಕೆ ಬೇಕಾದ ಸನ್ಯಾಸಾದಿ ಉಪಾಯಗಳನ್ನು ವಿವೇಚಿಸಲಾಗಿದೆ. ಇಲ್ಲಿ ಒಟ್ಟು ಹದಿನೇಳು ಅಧಿಕರಣಗಳಿವೆ. ಎಲ್ಲಾ ಸೇರಿ ಮೂರನೇ ಅಧ್ಯಾಯದಲ್ಲಿ ಒಟ್ಟು ಅರವತ್ತೇಳು ಅಧಿಕರಣಗಳಿವೆ.

## ಫಲಾಧ್ಯಾಯ

ನಾಲ್ಕನೆಯ ಅಧ್ಯಾಯವನ್ನು ಫಲಾಧ್ಯಾಯವೆಂದು ಹೆಸರಿಸಲಾಗಿದೆ. ಈ ಅಧ್ಯಾಯದ ಮೊದಲ ಪಾದದಲ್ಲಿ ಶ್ರವಣಾದಿ ಅಂತರಂಗ ಸಾಧನ ವಿಚಾರಗಳನ್ನು ಕೆಲವು ಅಧಿಕರಣಗಳಲ್ಲಿ ಮಾಡಿ ನಂತರ ಜೀವನ್ಮುಕ್ತಿಯನ್ನು ವಿವೇಚಿಸಲಾಗಿದೆ. ಈ ಪಾದದಲ್ಲಿ ಒಟ್ಟು ಹದಿನಾಲ್ಕು ಅಧಿಕರಣಗಳಿವೆ. ದ್ವಿತೀಯ ಪಾದದಲ್ಲಿ ಅಪರವಿದ್ಯಾಫಲ ಅಂದರೆ

ಉಪಾಸನಾದಿಗಳ ಫಲಪ್ರಾಪ್ತಿಗಾಗಿ ಉತ್ಕ್ರಾಂತಿಯನ್ನೂ ವಿಶದವಾಗಿ ತಿಳಿಸಲಾಗಿದೆ. ಈ ಪಾದದಲ್ಲಿ ಒಟ್ಟು ಹನ್ನೊಂದು ಅಧಿಕರಣಗಳಿವೆ. ಮೂರನೆಯ ಪಾದದಲ್ಲಿ ಉಪಾಸನಾದ್ಯಪರ ವಿದ್ಯಾಫಲಪ್ರಾಪ್ತಿ ಮಾರ್ಗವನ್ನು ಅಂದರೆ ಅರ್ಚಿರಾದಿ ಅಥವಾ ದೇವಯಾನ ಮಾರ್ಗವನ್ನು ತಿಳಿಸಲಾಗಿದೆ. ಈ ಪಾದದಲ್ಲಿ ಒಟ್ಟು ಆರು ಅಧಿಕರಣಗಳಿವೆ. ನಾಲ್ಕನೇ ಹಾಗೂ ಅಂತಿಮ ಪಾದದಲ್ಲಿ ಜ್ಞಾನ ಮತ್ತು ಉಪಾಸನೆಗಳ ಫಲ ನಿರ್ಣಯವನ್ನೂ ಮಾಡಲಾಗಿದೆ. ಇದರಲ್ಲಿ ಒಟ್ಟು ಏಳು ಅಧಿಕರಣಗಳಿವೆ. ಎಲ್ಲಾ ನಾಲ್ಕೂ ಅಧ್ಯಾಯಗಳ ಅಧಿಕರಣಗಳು ಸೇರಿ ನೂರತೊಂಭತ್ತೊಂದು ಅಧಿಕರಣಗಳಾಗಿವೆ.

## ಶಾಸ್ತ್ರಾರಂಭ

ಬಾದರಾಯಣ ಸೂತ್ರಗಳು **"ಅಥಾತೋ ಬ್ರಹ್ಮಜಿಜ್ಞಾಸಾ"**[೧] ಎಂಬ ಸೂತ್ರದಿಂದ ಆರಂಭವಾಗಿವೆ. ಈ ಸೂತ್ರದ ವ್ಯಾಖ್ಯಾನರೂಪದಲ್ಲಿ ಭಗವತ್ಪಾದರ ಭಾಷ್ಯ ಆರಂಭವಾಗಬೇಕು. ಸೂತ್ರದ ಅರ್ಥವರ್ಣನಾತ್ಮಕವಾದ ವ್ಯಾಖ್ಯಾನಕ್ಕೇ ಭಾಷ್ಯವೆನ್ನುವುದು ಎಂದು ಹಿಂದೆ ಹೇಳಿದ್ದಾಗಿದೆ. ಆದರೆ ಭಗವತ್ಪಾದ ಶಂಕರರು ಈ ಸೂತ್ರವನ್ನು ವ್ಯಾಖ್ಯಾನಿಸುವುದಕ್ಕಿಂತ ಮೊದಲು **"ಯುಷ್ಮದಸ್ಮತ್‌ಪ್ರತ್ಯಯಗೋಚ-ರಯೋಃ"......**[೨] ಎಂದಾರಂಭಿಸಿ ಪೀಠಿಕಾರೂಪದಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾರೆ. ಇದರಲ್ಲಿ ಸೂತ್ರಾರ್ಥದ ಸ್ಪರ್ಶವೇ ಇಲ್ಲದಿರುವುದರಿಂದ ಇದು ಭಾಷ್ಯವಾಗಲಾರದೆಂದು ಒಂದು ಶಂಕೆ. ಆದರೆ ಈ ವ್ಯಾಖ್ಯಾನ ಭಾಗವನ್ನು ಅಧ್ಯಾಸ ಭಾಷ್ಯವೆನ್ನುತ್ತಾರೆ. ಏಕೆಂದರೆ ಸಾಕ್ಷಾತ್ ಸೂತ್ರಾರ್ಥ ವಿವರಣೆ ಇಲ್ಲಿ ಇಲ್ಲದಿದ್ದರೂ ಮೊದಲಿನ ಸೂತ್ರಾರ್ಥಕ್ಕೆ ಸಂಬಂಧಿಸಿದುದನ್ನು ಇಲ್ಲಿ ಹೇಳುವ ಮೂಲಕ ಅಂದರೆ ವಿಷಯ ಪ್ರಯೋಜನಗಳನ್ನು ತಿಳಿಸುವ ಮೂಲಕ ಶಾಸ್ತ್ರಾರಂಭ ಸಮರ್ಥನೆಯನ್ನು ಮಾಡಿದ್ದಾರೆ. ಇಲ್ಲದಿದ್ದರೆ ವಿಷಯ ಪ್ರಯೋಜನಗಳಿಲ್ಲದಿದ್ದಲ್ಲಿ ಬ್ರಹ್ಮ ಜಿಜ್ಞಾಸೆಯನ್ನು ಏಕೆ ಮಾಡಬೇಕು ಎಂಬ ಪ್ರಶ್ನೆ ಏಳುತ್ತದೆ. ಅಧ್ಯಾಸ ಭಾಷ್ಯವೆಂದು ಕರೆಯಲಾಗುವ ಈ ಭಾಗದಲ್ಲಿ ಅಧ್ಯಾಸದ ವಿವರಣೆಯನ್ನು ನೀಡಲಾಗಿದೆ.

ಅಧ್ಯಾಸವೆಂದರೆ ಒಂದು ವಸ್ತುವಿನಲ್ಲಿ ಮತ್ತೊಂದನ್ನು ಆರೋಪಿಸಿ ತಿಳಿದುಕೊಂಡಿರುವುದೆಂದರ್ಥ. ಈ ರೀತಿಯಾದ ಆರೋಪ ಮಾಡಿಕೊಂಡಿರುವುದಕ್ಕೆ ಕಾರಣವೇನು ? ಅದರ ಸ್ವರೂಪವೇನು ಅದನ್ನು ಹೋಗಲಾಡಿಸುವ ಬಗೆ ಹೇಗೆ ? ಯಾವುದರಲ್ಲಿ ಯಾವುದನ್ನು ಆರೋಪಮಾಡಿಕೊಳ್ಳಲಾಗಿದೆ ಎಂಬೆಲ್ಲ ವಿಷಯಗಳನ್ನು ವಿವೇಚಿಸುತ್ತಾ "ಅಹಂ" 'ಮಮ' 'ನಾನು' 'ನನ್ನದು' ಎಂದು ಆತ್ಮನಲ್ಲಿ ಅನಾತ್ಮ ಹಾಗೂ ಅದರ ಧರ್ಮವನ್ನೂ ಅನಾತ್ಮದಲ್ಲಿ ಆತ್ಮ ಮತ್ತು ಅದರ ಧರ್ಮವನ್ನು ಆರೋಪಿಸಿಕೊಂಡು ಲೋಕದಲ್ಲಿ ಎಲ್ಲರೂ ನಾನು ಜೀವ, ಕರ್ತಾ, ಭೋಕ್ತಾ,

---

೧. ಬ್ರ. ಸೂ. ೧-೧-೧

೨. ಅಧ್ಯಾಸಭಾಷ್ಯ

ಇತ್ಯಾದಿಯಾಗಿ ತಿಳಿದುಕೊಂಡಿರುತ್ತಾರೆ. ಇದರಿಂದಲೇ ಎಲ್ಲಾ ಅನರ್ಥಗಳೂ ಉಂಟಾಗುತ್ತವೆ. ವಸ್ತುತಃ ಜೀವ ಮತ್ತು ಬ್ರಹ್ಮ ಒಂದೇ. ಹಿಂದೆ ಹೇಳಿದ ಆರೋಪದಿಂದ ಜೀವ ಬ್ರಹ್ಮರಲ್ಲಿ, ನಾನು ಬ್ರಹ್ಮನಲ್ಲ. ಬ್ರಹ್ಮ ಬೇರೆ, ನಾನು ಬ್ರಹ್ಮಕ್ಕಿಂತ ಬೇರೆಯಾದವನು ಎಂಬ ಭೇದವನ್ನು ಕಲ್ಪಿಸಿಕೊಂಡು ಅನರ್ಥ ಸಂಸಾರದಲ್ಲಿ ಮುಳುಗೇಳುತ್ತಾ ಜೀವನು ನರಳುತ್ತಿದ್ದಾನೆ ಎಂದು ತಿಳಿಸಿ **"ಅಸ್ಯ ಅನರ್ಥಹೇತ್ವೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಚ ಸರ್ವೇ ವೇದಾಂತಾಃ ಆರಭ್ಯಂತೇ"**[೮] ಎಂದು ಅಧ್ಯಾಸಭಾಷ್ಯದಲ್ಲಿ ಇಂತಹ ಅನರ್ಥಕ್ಕೆ ಕಾರಣವಾದುದರ ನಿವೃತ್ತಿ ಮತ್ತು ಜೀವ ಬ್ರಹ್ಮೈಕ್ಯಜ್ಞಾನಸಿದ್ಧಿಗಾಗಿಯೇ ಎಲ್ಲಾ ವೇದಾಂತಗಳೂ ಆರಂಭವಾಗಿವೆ ಎಂದು ಭಾಷ್ಯಕಾರರು ವಿಷಯ ಪ್ರಯೋಜನವನ್ನು ತಿಳಿಸುತ್ತ ಸಮರ್ಥನೆಯನ್ನು ಮಾಡಿದ್ದಾರೆ. ಹೀಗೆ ವಿಷಯ ಪ್ರಯೋಜನವುಳ್ಳದ್ದರಿಂದ **"ಅಥಾತೋ ಬ್ರಹ್ಮ ಜಿಜ್ಞಾಸಾ"**[೯] ಎಂದು ಶಾಸ್ತ್ರವು ಆರಂಭವಾಗಿದೆ. ಮುಖ್ಯವಾಗಿ ಈ ಅಧ್ಯಾಸವನ್ನಿಟ್ಟುಕೊಂಡೇ ಅದರ ನಿವೃತ್ತಿ ಮೂಲಕ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವುದೇ ವೇದಾಂತ ಶಾಸ್ತ್ರದ ಪ್ರಧಾನ ಉದ್ದೇಶ.

## ಚತುಃಸೂತ್ರೀ

ಬಾದರಾಯಣರಿಂದ ರಚಿತವಾದ ಸೂತ್ರಗಳಲ್ಲಿ ಮೊದಲಿನ ನಾಲ್ಕು ಸೂತ್ರಗಳಿಗೆ ವಿಶೇಷ ಪ್ರಾಧಾನ್ಯವಿದೆ. ಇವು ಚತುಃಸೂತ್ರೀ ಎಂಬುದಾಗಿ ಪ್ರಸಿದ್ಧವಾಗಿವೆ. **"ಅಥಾತೋ ಬ್ರಹ್ಮ ಜಿಜ್ಞಾಸಾ"**[೧೦] ಎಂದು ಮೊದಲನೇ ಸೂತ್ರದಿಂದ ಬ್ರಹ್ಮನ ವಿಚಾರವನ್ನು ಮಾಡಬೇಕೆಂದು ಹೇಳುತ್ತಾ ಶಾಸ್ತ್ರದ ಆರಂಭವನ್ನು ಮಾಡಿದ್ದಾಯಿತು. ಆ ಬ್ರಹ್ಮನಿಗೆ ಏನು ಲಕ್ಷಣ ಹಾಗೂ ಅದಕ್ಕೆ ಪ್ರಮಾಣವೇನು ಎಂಬ ಪ್ರಶ್ನೆ ಎದುರಾದಾಗ ಅದಕ್ಕೆ ಸಮಾಧಾನದ ರೂಪದಲ್ಲಿ **"ಜನ್ಮಾದ್ಯಸ್ಯಯತಃ"**[೧೧] ಹಾಗೂ **"ಶಾಸ್ತ್ರಯೋನಿತ್ವಾತ್"**[೧೨] ಎಂಬ ಎರಡನೇ ಹಾಗೂ ಮೂರನೇ ಸೂತ್ರಗಳು ಹೊರಟಿವೆ. ಅಂದರೆ ಜಗತ್ತಿನ ಉತ್ಪತ್ತಿಸ್ಥಿತಿ ಲಯಗಳು ಯಾವುದರಿಂದಾಗುವುವೋ ಅದು ಬ್ರಹ್ಮ ಎಂದು ಜಗದುತ್ಪತ್ತಿಸ್ಥಿತಿ ಲಯ ಕಾರಣತ್ವವನ್ನು ಬ್ರಹ್ಮಲಕ್ಷಣವೆಂದೂ ಋಗ್ವೇದಾದಿ ಶಾಸ್ತ್ರಗಳು ಬ್ರಹ್ಮನ ವಿಷಯದಲ್ಲಿ ಪ್ರಮಾಣವೆಂದೂ ತಿಳಿಸಲಾಗಿದೆ. ಇಂತಹ ಲಕ್ಷಣ ಮತ್ತು ಪ್ರಮಾಣದಿಂದ ಸಿದ್ಧವಾದ ಅದ್ವಿತೀಯ ಬ್ರಹ್ಮನಲ್ಲೇ ಸಕಲ ವೇದಾಂತದ ಅಥವಾ ಉಪನಿಷತ್ತುಗಳ ತಾತ್ಪರ್ಯವಿದೆ ಎಂದು ತಿಳಿಸಲು **"ತತ್ತು ಸಮನ್ವಯಾತ್"**[೧೩] ಎಂಬುದಾಗಿ ನಾಲ್ಕನೇ ಸೂತ್ರವನ್ನು ಹೇಳಲಾಗಿದೆ.

---

೮. ಅಧ್ಯಾಸಭಾಷ್ಯ
೯. ಬ್ರ. ಸೂ. ೧-೧-೧
೧೦. ಬ್ರ. ಸೂ. ೧-೧-೧
೧೧. ಬ್ರ. ಸೂ. ೧-೧-೨
೧೨. ಬ್ರ. ಸೂ. ೧-೧-೩
೧೩. ಬ್ರ. ಸೂ. ೧-೧-೪

ತತ್ತ್ವದರ್ಶನಕ್ಕಾಗಿ ಸ್ವಪಕ್ಷಸ್ಥಾಪನೆ ಹಾಗೂ ಪರಪಕ್ಷನಿರಾಕರಣೆ ಎರಡೂ ಅತ್ಯಂತ ಆವಶ್ಯವೆಂಬುದು ದಾರ್ಶನಿಕ ದೃಷ್ಟಿ. ಹಾಗೆಯೇ **'ಅಥಾತೋ ಬ್ರಹ್ಮ ಜಿಜ್ಞಾಸಾ'**[೧೪] ಎಂದಾರಂಭಿಸಿ **'ತತ್ತು ಸಮನ್ವಯಾತ್'**[೧೫] ಎಂಬಲ್ಲಿಯವರೆಗೆ ನಾಲ್ಕು ಅಧಿಕರಣಗಳಲ್ಲಿ ಸ್ವಪಕ್ಷರೂಪದಲ್ಲಿ ಹೇಳಬೇಕಾದುದನ್ನು ಹೇಳಿಯಾಯಿತು. ಮುಂದಿನ ಗ್ರಂಥದ ಆವಶ್ಯಕತೆಯೇನು ? ಎಂಬ ಪ್ರಶ್ನೆ ಬರುವದು ಸಹಜವಷ್ಟೇ. ಅದಕ್ಕೆ ಉತ್ತರವಿಷ್ಟೇ. ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿ ಅದರ ಲಕ್ಷಣವನ್ನೂ ಪ್ರಮಾಣವನ್ನೂ ತಿಳಿಸಿ ಎಲ್ಲಾ ವೇದಾಂತಗಳೂ ಬ್ರಹ್ಮನಲ್ಲೇ ತಾತ್ಪರ್ಯವನ್ನು ಹೊಂದಿವೆ ಎಂದು ಹೇಳಲಾಯಿತಷ್ಟೆ. ಅದರ ನಂತರ ಸಾಂಖ್ಯ, ನೈಯಾಯಿಕ ಮೊದಲಾದ ದಾರ್ಶನಿಕರು ಆಕ್ಷೇಪ ಮಾಡುತ್ತಾರೆ. ಯಾವ ವೇದಾಂತ ವಾಕ್ಯಗಳನ್ನು ಆಧರಿಸಿ ಜಗತ್ಕಾರಣ ಬ್ರಹ್ಮವೆಂದು ಹೇಳಲಾಗುತ್ತಿದೆಯೋ ಅದೇ ವಾಕ್ಯಗಳ ಆಧಾರದ ಮೇಲೆ ಬ್ರಹ್ಮಕ್ಕಿಂತ ಬೇರೆಯಾದ (ಪ್ರಕೃತಿ), ಪರಮಾಣುಗಳು ಜಗತ್ತಿಗೆ ಕಾರಣವೆಂದು ಸಾಂಖ್ಯಾದಿಗಳು ಆಕ್ಷೇಪಿಸುತ್ತಾರೆ. ಇವರ ಆಕ್ಷೇಪವನ್ನು ನಿರಾಕರಿಸದೆ ಬ್ರಹ್ಮವೇ ಜಗತ್ತಿಗೆ ಕಾರಣವೆಂಬ ಸಿದ್ಧಾಂತವು ದೃಢವಾಗುವುದಿಲ್ಲ. ಆದುದರಿಂದ ಪರಪಕ್ಷನಿರಾಕರಣಪೂರ್ವಕ ಸ್ವಪಕ್ಷದಾರ್ಢ್ಯಕ್ಕಾಗಿ ಮುಂದಿನ ಗ್ರಂಥದ ಬೆಳವಣಿಗೆಯಾಗಿದೆ ಎಂದು ಸ್ವತಃ ಭಾಷ್ಯಕಾರರೇ ಈಕ್ಷತ್ಯಧಿಕರಣದ ಪೀಠಿಕಾಭಾಷ್ಯದಲ್ಲಿ ತಿಳಿಸಿದ್ದಾರೆ. ಹೀಗೆ ಗ್ರಂಥವು ಬೆಳೆದು ನಾಲ್ಕು ಅಧ್ಯಾಯಗಳ ರೂಪದಲ್ಲಿದ್ದು ಭಗವತ್ಪಾದರ ಭಾಷ್ಯವೂ ಹಾಗೇ ಬೆಳೆದು ಬಂದಿದೆ. ಬಹಳ ವಿಸ್ತೃತರೂಪದಲ್ಲಿರುವ ಇದರ ವಿಚಾರಗಳನ್ನು ಸಂಕ್ಷೇಪ ಮಾಡಿ ತಿಳಿಸುವುದು ಬಹಳ ಕಷ್ಟವಾಗಿದ್ದರೂ ಕೆಲವೊಂದು ಮುಖ್ಯ ಸಿದ್ಧಾಂತಗಳನ್ನು ಸೀಮಿತವಾಗಿ ಇಲ್ಲಿ ವಿಚಾರ ಮಾಡಲು ಪ್ರಯತ್ನಿಸಲಾಗಿದೆ.

## ಅಧ್ಯಾಸಸ್ವರೂಪ

ಅಧ್ಯಾಸವೆಂದರೇನು ? ಎಂದು ತಿಳಿದುಕೊಳ್ಳಬೇಕಾದುದು ಬಹಳ ಮುಖ್ಯ. ಏಕೆಂದರೆ ವೇದಾಂತ ಶಾಸ್ತ್ರದ ಸಂಪೂರ್ಣ ಬೆಳವಣಿಗೆ ಈ ಅಧ್ಯಾಸವೆಂಬುದನ್ನವಲಂಬಿಸಿಯೇ ಇದೆ. ಇದನ್ನು ತಿಳಿಯದೇ ವೇದಾಂತವನ್ನು ತಿಳಿದುಕೊಳ್ಳಲಾಗುವುದಿಲ್ಲ. ಬಾದರಾಯಣಸೂತ್ರಗಳಿಗೆ ಭಾಷ್ಯವನ್ನು ಬರೆಯಲು ಹೊರಟ ಭಾಷ್ಯಕಾರರಾದ ಭಗವತ್ಪಾದರು ನೇರವಾಗಿ ಮೊದಲನೇ ಸೂತ್ರದ ಭಾಷ್ಯವನ್ನು ಆರಂಭಿಸಲಿಲ್ಲ. ಬದಲಾಗಿ **"ಯುಷ್ಮದಸ್ಮತ್‌ಪ್ರತ್ಯಯಗೋಚರಯೋಃ"**[೧೬] ಎಂದಾರಂಭಿಸಿ **"ನೈಸರ್ಗಿಕೋಽಯಂ ಲೋಕವ್ಯವಹಾರಃ"**[೧೭] ಎಂದು ಅಧ್ಯಾಸವನ್ನು ವಿವರಿಸಿದ್ದಾರೆ.

---

೧೪. ಬ್ರ. ಸೂ. ೧-೧-೧

೧೫. ಬ್ರ. ಸೂ. ೧-೧-೪

೧೬. ಅಧ್ಯಾಸಭಾಷ್ಯ

೧೭. ಅಧ್ಯಾಸಭಾಷ್ಯ

ವಿಷಯ ಬೇರೆ, ವಿಷಯೀ ಬೇರೆ. ಆತ್ಮನನ್ನು ವಿಷಯೀ ಎಂದೂ ಆತ್ಮಕ್ಕಿಂತ ಬೇರೆಯಾದುದನ್ನು ವಿಷಯವೆಂದೂ ವಿಂಗಡಿಸಲಾಗಿದೆ. ಸತ್ಯಸ್ವರೂಪನಾದ ಚಿದ್ರೂಪನಾದ ಆತ್ಮನನ್ನೂ ಜ್ಞಾನಕ್ಕೆ ವಿಷಯವಾಗಿ ತೋರುವ ಅನಾತ್ಮವನ್ನು ಅಂದರೆ ಆತ್ಮಕ್ಕಿಂತ ಬೇರೆಯಾದುದನ್ನೂ ಒಂದರಲ್ಲಿ ಇನ್ನೊಂದನ್ನು ಕಲಬೆರಕೆ ಮಾಡಿಕೊಂಡು ತಿಳಿದುಕೊಂಡಿರುವುದೇ ಅಧ್ಯಾಸ. ಅಂದರೆ ಒಂದನ್ನು ಇನ್ನೊಂದರಲ್ಲಿ ಆರೋಪಿಸಿಕೊಂಡು ಹಾಗೆಯೇ ಒಂದರ ಧರ್ಮವನ್ನು ಇನ್ನೊಂದರಲ್ಲಿ ಆರೋಪಿಸಿಕೊಂಡು ಅವೆರಡರ ಭೇದವನ್ನು ಅರಿಯದೇ ವಿಚಾರಮಾಡದೇ ಅವೆರಡನ್ನೂ ಒಂದೇ ಎಂದು ತಿಳಿಯುವುದು. ಹೇಗೆಂದರೆ ಒಂದು ಕಾದ ಕಬ್ಬಿಣದ ಚೆಂಡಿನಲ್ಲಿ ದಹನ ಶಕ್ತಿಯನ್ನು ತಿಳಿದು ಕಬ್ಬಿಣದ ಚೆಂಡು ಸುಡುತ್ತದೆ ಎಂದುಕೊಂಡಂತೆ. ವಸ್ತುತಃ ಕಬ್ಬಿಣದ ಚೆಂಡು ಬೇರೆ, ಅದರಲ್ಲಿ ತಾದಾತ್ಮ್ಯವಾಗಿ ಸೇರಿಕೊಂಡ ಅಗ್ನಿ ಬೇರೆ. ಅಗ್ನಿಯಲ್ಲಿರುವ ದಹನಶಕ್ತಿಯನ್ನು ನಾವು ಚೆಂಡಿನಲ್ಲಿ ನೋಡಿದಂತೆ, ಹೀಗೇ ಅನೃತವಾದ ದೇಹೇಂದ್ರಿಯಾದಿಗಳಲ್ಲಿ ಸತ್ಯಸ್ವರೂಪನಾದ ಆತ್ಮನನ್ನು ಆರೋಪಿಸಿಕೊಂಡು ದೇಹೇಂದ್ರಿಯಾದಿಗಳೇ ತಾನೆಂದೂ, ದೇಹ ಇಂದ್ರಿಯಾದಿಗಳಲ್ಲಿ ಆತ್ಮನನ್ನಾರೋಪಿಸಿಕೊಂಡು ಆತ್ಮನ ಸತ್ಯತ್ವಾದಿಗಳನ್ನು ದೇಹೇಂದ್ರಿಯಾದಿಗಳಲ್ಲಿ ತಿಳಿಯುತ್ತಾ, ದೇಹೇಂದ್ರಿಯಾದಿಗಳ ಧರ್ಮಗಳಾದ, ಸ್ಥೂಲತ್ವ, ಅಂಧತ್ವ ಮೊದಲಾದವುಗಳನ್ನು ಆತ್ಮನಲ್ಲಿ ಆರೋಪಮಾಡಿ ತಿಳಿದುಕೊಂಡಿರುವುದಕ್ಕೇ ಅಧ್ಯಾಸವೆಂದು ಹೆಸರು. ಇಂತಹ ಅಧ್ಯಾಸಕ್ಕೆ ಮಿಥ್ಯಾಜ್ಞಾನವೇ ಕಾರಣ. ಇದರಿಂದ ತಾನಲ್ಲದಿರುವ ದೇಹೇಂದ್ರಿಯಾದಿಗಳಲ್ಲಿ ತಾನೆಂದೂ, ತನಗಿಂತ ಬೇರೆಯಾಗಿರುವ ಪುತ್ರಾದಿಗಳಲ್ಲಿ ತನ್ನವೆಂದೂ ವ್ಯವಹಾರ ಉಂಟಾಗುತ್ತದೆ. ಇದನ್ನೇ ಭಾಷ್ಯಕಾರರು ಸತ್ಯಾನೃತಮಿಥುನೀಕರಣವೆಂದಿದ್ದಾರೆ. ಸತ್ಯ ಮತ್ತು ಅನೃತ ಎರಡೂ ಒಟ್ಟಾಗಿ ಎಲ್ಲಿ ತೋರುತ್ತದೋ ಆ ಜ್ಞಾನವನ್ನೇ ಭ್ರಾಂತಿ ಎನ್ನುವರು. ಇದು ಮುಂದೊಮ್ಮೆ ಬಾಧಿತವಾಗಲೇಬೇಕು. ಬಾಧಿತವಾಗುವವರೆಗೆ ಈ ಜ್ಞಾನವು ಪ್ರಮಾಣಾತ್ಮಕವೆಂದೇ ಒಪ್ಪಲಾಗುತ್ತದೆ. ಈ ರೀತಿಯಾದ 'ಅಹಂ' 'ಮಮ' 'ನಾನು' 'ನನ್ನದು' ಎಂಬ ಅಧ್ಯಾಸವೇ ಜೀವಾತ್ಮನ ಸರ್ವವ್ಯವಹಾರಗಳಿಗೂ ಮೂಲ. ಇದೇ ಸಂಸಾರವೆಂಬ ಅನರ್ಥಕ್ಕೆ ಬೀಜರೂಪವಾಗಿರುವುದು. ಈ ರೀತಿಯ ಅಧ್ಯಾಸವಿದ್ದ ಸಮಯದಲ್ಲೇ ಎಲ್ಲಾ ಪ್ರಮಾಣಗಳಿಗೂ ಶಾಸ್ತ್ರಗಳಿಗೂ ಪ್ರಾಮಾಣ್ಯ. ಈ ಅಧ್ಯಾಸಕ್ಕೆ ಅವಿದ್ಯೆಯೇ ಮೂಲಕಾರಣ. ಆದುದರಿಂದ ಇಂತಹ ಅನರ್ಥಕ್ಕೆ ಕಾರಣವಾದುದರ ನಾಶಕ್ಕಾಗಿ, ಜೀವಬ್ರಹ್ಮೈಕ್ಯವನ್ನು ತಿಳಿಸುವುದಕ್ಕಾಗಿಯೇ ಎಲ್ಲಾ ಉಪನಿಷತ್ತುಗಳೂ ಹೊರಟಿವೆ.

ಜಗತ್ತು, ಜೀವ, ಈಶ್ವರ, ಬ್ರಹ್ಮ ಇತ್ಯಾದಿಯಾಗಿ ವಿಭಿನ್ನ ಕಲ್ಪನೆಗಳು ಹಾಗೂ ಅವುಗಳ ಪರಸ್ಪರ ಸಂಬಂಧ ಕಲ್ಪನೆ ಎಲ್ಲಾ ಅವಿದ್ಯಾಭೂಮಿಯಲ್ಲೇ ಆಗುತ್ತವೆ. ನಮಗೆ ತೋರುವ ನಾಮರೂಪಾದಿಗಳು ಆತ್ಮನಿಗಿಂತ ಬೇರೆಯೋ ಅಲ್ಲವೋ ಅವುಗಳ ಸ್ವರೂಪವೇನು ಎಂಬುದನ್ನು ಹೇಳಲಿಕ್ಕಾಗದಿರುವುದರಿಂದಲೇ ಅನಿರ್ವಚನೀಯವೆನ್ನಲಾಗಿದೆ. ಈ ಅವಿದ್ಯೆಯನ್ನೇ ಅವ್ಯಾಕೃತ, ಅವ್ಯಕ್ತ, ಅಕ್ಷರ, ಪ್ರಕೃತಿ,

ಮಾಯೆ, ಬೀಜ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. **"ಸರ್ವಜ್ಞಸ್ಯ ಈಶ್ವರಸ್ಯ ಆತ್ಮಭೂತೇ ಇವ ಅವಿದ್ಯಾಕಲ್ಪಿತೇ ನಾಮರೂಪೇ ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯೇ ಸಂಸಾರಪ್ರಪಂಚ ಬೀಜಭೂತೇ ಸರ್ವಜ್ಞಸ್ಯ ಈಶ್ವರಸ್ಯ ಮಾಯಾಶಕ್ತಿಃ ಪ್ರಕೃತಿರಿತಿ ಚ ಶ್ರುತಿ ಸ್ಮೃತ್ಯೋರಭಿಲಪ್ಯೇತೇ"**[೧೮] ಎಂದೂ ಹಾಗೂ **"ಅವಿದ್ಯಾತ್ಮಿಕಾ ಹಿ ಬೀಜಶಕ್ತಿಃ ಅವ್ಯಕ್ತಶಬ್ದನಿರ್ದೇಶ್ಯಾ ಪರಮೇಶ್ವರಾಶ್ರಯಾ ಮಾಯಾಮಯೀ ಮಹಾಸುಪ್ತಿಃ ಯಸ್ಯಾಂ ಸ್ವರೂಪ ಪ್ರತಿಬೋಧರಹಿತಾಃ ಶೇರತೇ ಸಂಸಾರಿಣೋ ಜೀವಾಃ । ತದೇತದವ್ಯಕ್ತಂ ಕ್ವಚಿತ್ ಆಕಾಶಶಬ್ದನಿರ್ದಿಷ್ಟಂ, ಕ್ವಚಿದಕ್ಷರಶಬ್ದೋದಿತಂ ಕ್ವಚಿನ್ಮಾಯೇತಿ ಸೂಚಿತಮ್"**[೧೯] ಎಂಬುದಾಗಿ ಸೂತ್ರಭಾಷ್ಯದಲ್ಲಿ ಅವಿದ್ಯೆಯನ್ನು ವಿವರಿಸಿದ್ದಾರೆ.

## ಆತ್ಮ ಅಥವಾ ಬ್ರಹ್ಮ

ನಮ್ಮೆಲ್ಲರ ಪರಮಾರ್ಥಸ್ವರೂಪನಾದ ಆತ್ಮನು ಒಬ್ಬನೇ. ಅವನು ಸ್ವಯಂ ಸಿದ್ಧನಾದುದರಿಂದ ಯಾವ ಪ್ರಮಾಣದಿಂದಲೂ ಸಾಧಿಸಲ್ಪಡಬೇಕಾಗಿಲ್ಲ. ಆತ್ಮನನ್ನು ತಿರಸ್ಕರಿಸುವುದೂ ಅಶಕ್ಯ. ಏಕೆಂದರೆ ಯಾರು ಪ್ರಮಾಣಗಳಿಂದ ಆತ್ಮನನ್ನು ಸಾಧಿಸಿ ತೋರಿಸಲು ಅಥವಾ ನಿರಾಕರಿಸಲು ಉದ್ಯುಕ್ತನಾಗುವನೋ ಅವನ ಪರಮಾರ್ಥ ಸ್ವರೂಪವಾಗಿ ಆತ್ಮಸಿದ್ಧವೇ ಆಗಿರುವುದರಿಂದ ಸಾಧಿಸಲಾಗಲೀ ಅಥವಾ ನಿರಾಕರಿಸಲಾಗಲೀ ಸಾಧ್ಯವಿಲ್ಲ. ಲೋಕದಲ್ಲಿ ಎಲ್ಲರಿಗೂ 'ನಾನು ಇದ್ದೇನೆ' ಎಂಬ ಅನುಭವ ಇದೆ. ಯಾರಿಗೂ 'ನಾನು ಇಲ್ಲ' ಎಂಬ ಅನುಭವ ಇಲ್ಲ. ಆತ್ಮನನ್ನು ಸೂತ್ರಭಾಷ್ಯದಲ್ಲಿ ಹೀಗೆ ವಿವರಿಸಲಾಗಿದೆ– **"ನಹಿ ಆತ್ಮಾ ಆಗಂತುಕಃ ಕಸ್ಯಚಿತ್, ಸ್ವಯಂಸಿದ್ಧತ್ವಾತ್, ನಹ್ಯಾತ್ಮಾ ಆತ್ಮನಃ ಪ್ರಮಾಣಮಪೇಕ್ಷ್ಯ ಸಿಧ್ಯತಿ. ತಸ್ಯ ಹಿ ಪ್ರತ್ಯಕ್ಷಾದೀನಿ ಪ್ರಮಾಣಾನಿ ಅಪ್ರಸಿದ್ಧ ಪ್ರಮೇಯ ಸಿದ್ಧಯೇ ಉಪಾದೀಯಂತೇ. ನ ಚೇದೃಶಸ್ಯ ನಿರಾಕರಣಂ ಸಂಭವತಿ. ಆಗಂತುಕಂ ಹಿ ವಸ್ತು ನಿರಾಶ್ರಿಯತೆ, ನ ಸ್ವರೂಪಮ್. ಯ ಏವ ಹಿ ನಿರಾಕರ್ತಾ ತದೇವ ತಸ್ಯಸ್ವರೂಪಮ್"**[೨೦] ಎಂದು. ಅಷ್ಟೇ ಅಲ್ಲ. ಈ ಆತ್ಮನು ಎಲ್ಲರಿಗೂ ಅಪರೋಕ್ಷನೇ. **"ಅಪರೋಕ್ಷತ್ವಾಚ್ಚ ಪ್ರತ್ಯಗಾತ್ಮಪ್ರಸಿದ್ಧೇಃ"**[೨೧] ಎನ್ನಲಾಗಿದೆ.

ಈ ಆತ್ಮನು ಉಪನಿಷತ್ತಿನಿಂದ ಮಾತ್ರ ತಿಳಿಯಲ್ಪಡುವವನು. ಅಸಂಸಾರಿ ಬ್ರಹ್ಮ, ಇವನನ್ನು ಇಲ್ಲವೆಂದಾಗಲೀ ಗೊತ್ತಿಲ್ಲವೆಂದಾಗಲೀ ಹೇಳಲಾಗದು. ಆತ್ಮವೆಂಬ ಶಬ್ದದಿಂದ ಹೇಳಲ್ಪಡುವಂತಹುದನ್ನು ನಿರಾಕರಿಸಲಾಗದು. **"ಯೋಽಸೌ ಉಪನಿಷತ್ಸ್ವೇವಾಧಿಗತಃ ಪುರುಷೋಽಸಂಸಾರೀ, ಬ್ರಹ್ಮ, ನಾಸೌ, ನಾಸ್ತಿ, ನಾಧಿಗಮ್ಯತೇ**

---

೧೮. ಸೂ. ಭಾ. ೨-೧-೧೪
೧೯. ಸೂ. ಭಾ. ೧-೪-೩
೨೦. ಸೂ. ಭಾ. ೨-೩-೭
೨೧. ಅಧ್ಯಾಸಭಾಷ್ಯ

**ಇತಿ ವಾ ಶಕ್ಯಂ ವದಿ ತುಮ್, ಸ ಏಷ ನೇತಿನೇತ್ಯಾತ್ಮಾ ಇತ್ಯಾತ್ಮಶಬ್ದಾತ್, ಆತ್ಮನಶ್ಚ ಪ್ರತ್ಯಾಖ್ಯಾತುಮಶಕ್ಯತ್ವಾತ್''**[೨೨] ಎಂದು ಇದನ್ನೇ ಹೇಳಲಾಗಿದೆ.

ಆತ್ಮವೆಂಬುದು ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ, ಅದಕ್ಕೆ ವಿರುದ್ಧವಾದ ಅಕರ್ತೃ ಅಭೋಕ್ತೃ ಸ್ವರೂಪನಾದವನು ಆತ್ಮ ಅಥವಾ ಬ್ರಹ್ಮ. ಆ ಬ್ರಹ್ಮನೇ ನಾನು. ನಾನು ಹಿಂದೆಯೂ ಕರ್ತೃ, ಭೋಕ್ತೃ ಆಗಿರಲಿಲ್ಲ, ಈಗಲೂ ಆಗಿಲ್ಲ, ಮುಂದೆಯೂ ಆಗೊಲ್ಲವೆಂದು ಜ್ಞಾನಿಯಾದವನು ಅರಿಯುತ್ತಾನೆ. **''ಪೂರ್ವಸಿದ್ಧಕರ್ತೃತ್ವಭೋಕ್ತೃತ್ವ-ವಿಪರೀತಂ ಹಿ ತ್ರಿಷ್ವಪಿ ಕಾಲೇಷು ಅಕರ್ತೃತ್ವಾಭೋಕ್ತೃತ್ವಸ್ವರೂಪಂ ಬ್ರಹ್ಮಾಹಮಸ್ಮಿ. ನೇತಃ ಪೂರ್ವಮಪಿ ಕರ್ತಾ ಭೋಕ್ತಾ ವಾಹಮಾಸಮ್, ನೇದಾನೀಂ ನಾಪಿ ಭವಿಷ್ಯತ್ ಕಾಲೆ' ಇತಿ ಬ್ರಹ್ಮವಿದವಗಚ್ಛತಿ''**[೨೩] ಎಂದು ಸೂತ್ರಭಾಷ್ಯದಲ್ಲಿ ವಿವರಿಸಲಾಗಿದೆ.

ಬ್ರಹ್ಮ ಆತ್ಮ ಎಂಬೆಲ್ಲಾ ಶಬ್ದಗಳು ಒಂದೇ ಅರ್ಥದಲ್ಲಿ ಪ್ರಯುಕ್ತವಾಗಿವೆ. ಆತ್ಮವೆಂಬುದು ಸರ್ವಸಂಸಾರಧರ್ಮಗಳಿಂದ ರಹಿತವಾದುದು. ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವವುಳ್ಳದ್ದು **''ಸತ್ಯಂ ಜ್ಞಾನಮನಂತಂ ಬ್ರಹ್ಮ''**[೨೪] ಎಂಬಂತೆ ಸತ್ಯಜ್ಞಾನ, ಅನಂತ ರೂಪದಲ್ಲಿರುವುದು, **''ನ ಜಾಯತೇ ಮ್ರಿಯತೇ ವಾ''**[೨೫] ಎಂದಂತೆ ಉತ್ಪತ್ತಿ ವಿನಾಶಾದಿ ವಿಕಾರವಿಲ್ಲದಿರುವುದು **'ಅವಿನಾಶೀ ವಾಽರೇಽಯಮಾತ್ಮಾ''**[೨೬] ಎಂದಂತೆ ಅವಿನಾಶಿಯಾದುದು. ಶರೀರೇಂದ್ರಿಯಗಳು ಸರ್ವವ್ಯಾಪಕನಾದ ಆತ್ಮನಿಗೆ ಉಪಾಧಿಗಳು. ಅವನಿಗೆ ಪರಿಮಾಣವಿಲ್ಲ. ಅವನು ಪ್ರಮಾಣವೇದ್ಯನೂ ಅಲ್ಲ. ಹಾಗಾಗಿ ಅವನು ಅಪ್ರಮೇಯನು. ಅವನು ಸ್ವಯಂ ಪ್ರಕಾಶನು, ಅವನಿಂದ ಎಲ್ಲವೂ ಪ್ರಕಾಶಿತವಾಗುವುದೇ ಹೊರತು **''ತಸ್ಯಭಾಸಾ ಸರ್ವಮಿದಂ ವಿಭಾತಿ''**[೨೭] ಎಂದು ಶ್ರುತಿಯಲ್ಲಿ ಹೇಳಿದಂತೆ ಅವನನ್ನು ಬೇರಾವುದೂ ನಾಶಪಡಿಸುವುದಿಲ್ಲ ಎಂಬುದಾಗಿ ಉಪನಿಷತ್ತು, ಗೀತೆ ಮತ್ತು ಸೂತ್ರಭಾಷ್ಯದಲ್ಲೂ ವಿಸ್ತಾರವಾಗಿ ಆತ್ಮಸ್ವರೂಪವನ್ನು ವಿವರಿಸಲಾಗಿದೆ.

## ಜೀವಸ್ವರೂಪ

ವಸ್ತುತಃ ಜೀವನಿಗೂ ಬ್ರಹ್ಮನಿಗೂ ಭೇದವೆಂಬುದು ಇಲ್ಲವೇ ಇಲ್ಲ. ಜೀವನ ನಿಜವಾದ ಸ್ವರೂಪವೆಂದರೆ ಸದ್‌ಬ್ರಹ್ಮಾತ್ಮಸ್ವರೂಪವೇ. ಅವನೂ ಅಕರ್ತೃವೇ, ಅಭೋಕ್ತೃವೇ. ಅವಿದ್ಯಾಧ್ಯಾಸದಿಂದ ಬ್ರಹ್ಮಸ್ವರೂಪನಾದ ತನ್ನನ್ನು ಜೀವನೆಂದು ತಿಳಿದುಕೊಂಡಿದ್ದೇವೆ. ಈ ಅವಿದ್ಯೆಯಿಂದಲೇ ಪ್ರಮಾತೃತ್ವಾದಿಧರ್ಮಗಳನ್ನು ಆತ್ಮನಲ್ಲಿ

---

೨೨. ಸೂ. ಭಾ. ೧-೧-೪

೨೩. ಸೂ. ಭಾ. ೪-೧-೧೩

೨೪. ತೈ. ಉ. ೨-೧

೨೫. ಕಠ ೧-೨-೧೮

೨೬. ಬೃ. ೪-೫-೧೪

೨೭. ಕಠ ೧-೫-೧೫

ಆರೋಪಿಸಿಕೊಂಡು ನಾನು ಕರ್ತಾ, ಭೋಕ್ತಾ, ಜೀವ ಇತ್ಯಾದಿಯಾಗಿ ತನ್ನನ್ನು ಗುರುತಿಸಿಕೊಳ್ಳುತ್ತಾನೆ. ಪ್ರಮಾತಾ ಎಂದರೆ ಅರಿಯುವವನು. ಆಗ ಅರಿಯುವವನಿಗೆ ಅರಿಯಲ್ಪಡುವುದು ಭಿನ್ನವಾಗಿರಲೇಬೇಕು. ಅದನ್ನೇ ಪ್ರಮೇಯವೆನ್ನಲಾಗುತ್ತದೆ. ಅರಿಯಲು ಒಂದು ಸಾಧನ ಬೇಕು. ಅದೇ ಪ್ರಮಾಣವೆಂದಾಯಿತು. ಹೀಗೆ ಪ್ರಮಾತೃ, ಪ್ರಮಾಣ, ಪ್ರಮೇಯ ಎಂಬ ತ್ರಿಪುಟೀ ಭೇದವುಂಟಾಯಿತು. ಹೀಗೆ ಎಲ್ಲಾ ಲೌಕಿಕವ್ಯವಹಾರವೂ ಭೇದರೂಪದಲ್ಲಿಯೇ ತೋರುತ್ತದೆ. ಪರಮಾರ್ಥವಾಗಿ ಈ ಆತ್ಮನನ್ನು ಅದರ ಸ್ವರೂಪದಲ್ಲಿ ನಾವು ತಿಳಿದುಕೊಳ್ಳದೆ ಬೇರೆ ರೀತಿಯಲ್ಲಿ ತಿಳಿದುಕೊಂಡು ಅದನ್ನೇ ಜೀವವೆಂದು ಅರಿತಿದ್ದೇವೆ. ಇದಕ್ಕೆ ಕಾರಣ ಅವಿದ್ಯೆ. ಪರಮಾರ್ಥವಾಗಿ ಜೀವ ಬೇರೆಯಲ್ಲ ಬ್ರಹ್ಮ ಬೇರೆಯಲ್ಲ. **'ಅಹಂ ಬ್ರಹ್ಮಾಸ್ಮಿ'** ಎಂದು ಅನುಭವರೂಪದಲ್ಲಿ ಆತ್ಮಸಾಕ್ಷಾತ್ಕಾರವಾದಾಗ ತನ್ನಲ್ಲಿ ಮೊದಲು ಆರೋಪಿಸಿಕೊಂಡ ಜೀವತ್ವ, ಕರ್ತೃತ್ವ, ಭೋಕ್ತೃತ್ವಗಳೆಲ್ಲ ತಾನಾಗಿಯೇ ಹೊರಟುಹೋಗುತ್ತವೆ. ಆದುದರಿಂದಲೇ **'ಜೀವೋ ಬ್ರಹ್ಮೈವ ನಾಪರಃ'**[೨೮] ಎಂದು ಜೀವ ಬ್ರಹ್ಮರಿಗೆ ಭೇದವಿಲ್ಲವೆನ್ನಲಾಗಿದೆ. ಇದನ್ನು ತಿಳಿಸುವುದಕ್ಕಾಗಿಯೇ ವೇದಾಂತದಲ್ಲಿ ಸೃಷ್ಟಿಪ್ರಕ್ರಿಯೆಯನ್ನು ಹೇಳಿ ತನ್ಮೂಲಕ ಕಾರ್ಯ ಮತ್ತು ಕಾರಣಗಳೆಂಬ ಭೇದವನ್ನು ತಿಳಿಸಿ ಪರಮಾರ್ಥವಾಗಿ ಕಾರ್ಯಕಾರಣಗಳಿಗೆ ಭೇದವನ್ನು ನಿಷೇಧಮಾಡಲಾಗಿದೆ. **'ತದನನ್ಯತ್ವಮಾರಂಭಣಶಬ್ದಾದಿಭ್ಯಃ'**[೨೯] ಎಂಬ ಬ್ರಹ್ಮಸೂತ್ರದಲ್ಲಿ ಮತ್ತು ಅದರ ಭಾಷ್ಯದಲ್ಲಿ ಈ ವಿವರಣೆಯನ್ನು ಕಾಣಬಹುದಾಗಿದೆ.

ಹಾಗೆಯೇ ಬ್ರಹ್ಮಕ್ಕೂ ಪ್ರಪಂಚಕ್ಕೂ ಸೃಷ್ಟಿಪ್ರಕ್ರಿಯೆಯ ಮೂಲಕ ಕಾರ್ಯಕಾರಣಭಾವವನ್ನು ತಿಳಿಸಿ ಕಾರಣಕ್ಕಿಂತ ಕಾರ್ಯಕ್ಕೆ ಬೇರೆಯಾದ ಅಸ್ತಿತ್ವವಿಲ್ಲವೆಂಬುದನ್ನು 'ಮಣ್ಣು-ಮಡಕೆ, ಸುವರ್ಣ-ಆಭರಣ ದೃಷ್ಟಾಂತಗಳ ಮೂಲಕ ತಿಳಿಸಿ ಭೇದವೆಂಬುದು ಕೇವಲ ಶಬ್ದವ್ಯವಹಾರ ಮಾತ್ರವೆನ್ನಲಾಗಿದೆ. ಹಾಗೆಯೇ ಅಂತಃಕರಣವೆಂಬ ಉಪಾಧಿಸಂಬಂಧದಿಂದ ಬ್ರಹ್ಮನೇ ಜೀವನೆನಿಸಿಕೊಳ್ಳುತ್ತಾನೆಯೇ ಹೊರತು ಜೀವನು ಬ್ರಹ್ಮನಿಗಿಂತ ಬೇರೆಯಲ್ಲ. ಆದುದರಿಂದಲೇ **'ತತ್ತ್ವಮಸಿ'**[೩೦] ಎಂಬ ಮಹಾವಾಕ್ಯದಲ್ಲಿ ಜೀವಬ್ರಹ್ಮೈಕ್ಯವನ್ನು ಹೇಳಿದೆ. ಈ ಮಹಾವಾಕ್ಯದಲ್ಲಿರುವ ತ್ವಂಪದದಿಂದ ಜೀವನನ್ನು ಹೇಳಲಾಗುತ್ತಿದೆ. ಆ ತ್ವಂಪದಾರ್ಥ ವಿವರಣೆಗೆ ಹೊರಟ ಸೂತ್ರ ಮತ್ತು ಭಾಷ್ಯಗಳನ್ನು ಪರಿಶೀಲಿಸಿದಾಗ ಮೂರನೇ ಅಧ್ಯಾಯದ ಮೊದಲ ಪಾದದಲ್ಲಿ ಜಾಗ್ರದಾದ್ಯವಸ್ಥೆಗಳನ್ನು ಎರಡನೇ ಪಾದದಲ್ಲಿ ಸ್ವಪ್ನ, ಸುಷುಪ್ತಿ ಅವಸ್ಥೆಗಳನ್ನೂ ವಿಚಾರಮಾಡಿ ಜೀವಸ್ವರೂಪವನ್ನು ವಿವೇಚಿಸಿರುವುದು ಕಂಡುಬರುತ್ತದೆ. ಇಂತಹ ಅವಸ್ಥಾತ್ರಯವುಳ್ಳ ಜೀವನಿಗೆ ಇರುವ ಧರ್ಮಗಳೆಲ್ಲ ಬ್ರಹ್ಮನಲ್ಲಿರುವ ಧರ್ಮಕ್ಕಿಂತ ವಿರುದ್ಧವಾಗಿದ್ದಾಗ ಅವೆರಡರ ಐಕ್ಯ ಹೇಗೆ ಸಂಭವಿಸುತ್ತದೆ ಎಂಬ ಪ್ರಶ್ನೆ

---

೨೮. ಬ್ರಹ್ಮಜ್ಞಾನಾವಲೀ ಮಾಲಾ -೨೦
೨೯. ಬ್ರ. ಸೂ. ೨-೧-೧೪
೩೦. ಛಾಂ. ೬-೮-೭

ಸಹಜವಷ್ಟೆ. ಆದರೆ ಇಲ್ಲಿ ಸ್ವಾರಸ್ಯವೇನೆಂದರೆ ಒಂದು ವೇಳೆ ಜೀವ ಮತ್ತು ಬ್ರಹ್ಮ ಎರಡು ತತ್ತ್ವಗಳಾಗಿದ್ದರೆ ಅವುಗಳಿಗೆ ಐಕ್ಯವನ್ನು ಹೇಳಲು ಸಾಧ್ಯವೇ ಇರುತ್ತಿರಲಿಲ್ಲ. ಏಕೆಂದರೆ ಲೋಕದಲ್ಲಿ ಯಾವ ಎರಡು ವಸ್ತುಗಳೂ ಒಂದು ಎಂದಾಗಲು ಸಾಧ್ಯವೇ ಇಲ್ಲ. ಹಾಗಾದರೆ ಇಲ್ಲಿ ಜೀವಬ್ರಹ್ಮೈಕ್ಯ ಹೇಗೆಂದರೆ ಜೀವ ಮತ್ತು ಬ್ರಹ್ಮ ಎಂಬುದು ತಾತ್ತ್ವಿಕವಾಗಿ ಭಿನ್ನವಲ್ಲ. ಒಂದೇ ಇದ್ದದ್ದು ಎರಡಾಗಿ ಕಾಣುತ್ತದೆ ಅಷ್ಟೆ. ಅದ್ವೈತವೆಂದರೆ ಎರಡಾಗಿ ವಸ್ತುಸ್ಥಿತಿಯಲ್ಲಿ ಇರುವುದನ್ನು ಒಂದಾಗಿ ಮಾಡಿ ಹೇಳುವುದಲ್ಲ. ಕೇವಲ ಪರಮಾರ್ಥತಃ ಒಂದೇ ಆಗಿದ್ದು ಎರಡಾಗಿ ತೋರಿದ್ದನ್ನು ನಿಷೇಧಿಸುತ್ತದೆ ಅಷ್ಟೆ. ಅದು ಐಕ್ಯದಲ್ಲಿ ಪರ್ಯವಸಾನವಾಗುತ್ತದೆ. ಈ ಅರ್ಥದಲ್ಲಿಯೇ **'ಜೀವೋ ಬ್ರಹ್ಮೈವ ನಾಪರಃ'** [೩೧] ಎಂದಿರುವುದು. ಆದುದರಿಂದ ಜೀವನ ಜೀವಸ್ವರೂಪವು ಕಲ್ಪಿತವು. ಅವನು ಪರಮಾರ್ಥತಃ ಬ್ರಹ್ಮನೇ. ಇದನ್ನೇ ಭಗವತ್ಪಾದರು **'ಉತ್ಪತ್ತ್ಯಶ್ರವಣಾದ್ಧಿ ಪರಸ್ಯೈವ ಬ್ರಹ್ಮಣಃ ಪ್ರವೇಶಶ್ರವಣಾತ್ ತಾದಾತ್ಮ್ಯೋಪದೇಶಾಚ್ಚ ಪರಮೇವ ಬ್ರಹ್ಮ ಜೀವ ಇತ್ಯುಕ್ತಮ್'** [೩೨] ಎಂದು ಸೂತ್ರಭಾಷ್ಯದಲ್ಲಿ ವಿವರಿಸಿದ್ದಾರೆ. ಹಾಗೆಯೆ **"ಕರ್ತಾ ಚಾಯಂ ಜೀವಃಸ್ಯಾತ್"** [೩೩] ಎಂದು ಕರ್ತೃತ್ವಾದಿಧರ್ಮವನ್ನು ಅಧ್ಯಸ್ತ ಧರ್ಮವೆಂದಿದ್ದಾರೆ. ಅಂದರೆ ಆತ್ಮನಲ್ಲಿರುವ ಈ ಕರ್ತೃತ್ವ ಸ್ವಾಭಾವಿಕವಾದದ್ದೋ ಅಥವಾ ಉಪಾಧಿನಿಮಿತ್ತವಾದದ್ದೋ ಎಂದು ಶಂಕೆಮಾಡಿ (ತಕ್ಷಾಧಿಕರಣದಲ್ಲಿ [೩೪]) ಆತ್ಮನಲ್ಲಿ ಸ್ವಾಭಾವಿಕ ಕರ್ತೃತ್ವವಿಲ್ಲ, ಅದು ಉಪಾಧಿನಿಮಿತ್ತವಾದುದು **"ತಸ್ಮಾದುಪಾಧಿಧರ್ಮಾಧ್ಯಾಸೇನೈವ ಆತ್ಮನಃ ಕರ್ತೃತ್ವಂ, ನ ಸ್ವಾಭಾವಿಕಮ್, ತಥಾಚ ಶ್ರುತಿ :- 'ಧ್ಯಾಯತೀವ ಲೇಲಾಯತೀವ'** [೩೫] ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಉಪಾಧಿಸಂಬಂಧವಾಗಿಯೇ ಭೋಕ್ತೃತ್ವವೂ ಕೂಡ **"ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ"** [೩೬] ಎಂದು ಶ್ರುತಿಯಲ್ಲೂ ಇಂದ್ರಿಯಾದಿ ಸಂಬದ್ಧನಾದವನಿಗೇ ಭೋಕ್ತೃತ್ವವೆನ್ನಲಾಗಿದೆ. ಆದುದರಿಂದ ಜೀವನದಲ್ಲಿ ಕಾಣುವ ಧರ್ಮವೆಲ್ಲವೂ ಉಪಾಧಿ ನಿಮಿತ್ತವೇ. ಉಪಾಧಿಧರ್ಮಗಳ ಹೊರತಾಗಿ ಶುದ್ಧರೂಪದಲ್ಲಿ ನೋಡಿದಾಗ ಅವನೇ ಬ್ರಹ್ಮ. ಬ್ರಹ್ಮನೇ ಜೀವನಾಗಿ ತೋರುವುದಕ್ಕೆ ಮೂಲ ಕಾರಣವೇ ಅಧ್ಯಾಸ ಎಂಬುದೇ ಶಾಂಕರ ಸಿದ್ಧಾಂತ.

## ಅಧ್ಯಾರೋಪಾಪವಾದ ಪ್ರಕ್ರಿಯೆ

ನಿತ್ಯಶುದ್ಧ ಬುದ್ಧ ಮುಕ್ತಸ್ವರೂಪನಾದ ಆತ್ಮನಲ್ಲಿ ಪ್ರಮಾತೃತ್ವಾದಿದ್ವೈತವೆಲ್ಲ ಅವಿದ್ಯೆಯಿಂದ ಆರೋಪಿತವಾಗಿದೆ. ದೇಹೇಂದ್ರಿಯಾದಿಗಳಲ್ಲಿ 'ಅಹಂ' 'ಮಮ' 'ನಾನು'

---

೩೧. ಬ್ರಹ್ಮಜ್ಞಾನಾವಲೀ ಮಾಲಾ -೨೦
೩೨. ಸೂ. ಭಾ. ೨-೩-೨೯
೩೩. ಸೂ. ಭಾ. ೨-೩-೩೩
೩೪. ಬ್ರ. ಭಾ. ೨-೩-೪೦
೩೫. ಸೂ. ಭಾ. ೨-೩-೪೦
೩೬. ಕಠ ೧-೩-೪

'ನನ್ನದು' ಎಂಬ ರೂಪದಿಂದಲೇ ಈ ಅಧ್ಯಾರೋಪ ಆರಂಭವಾಗುತ್ತದೆ. ಆದುದರಿಂದ ಅದನ್ನು ಹೋಗಲಾಡಿಸಿ ತತ್ತ್ವವನ್ನು ತಿಳಿಸುವುದಕ್ಕಾಗಿಯೇ ವೇದಾಂತ ಪ್ರವೃತ್ತವಾಗಿದೆ. ಸ್ವತಃಸಿದ್ಧ ಸ್ವರೂಪನಾದ ಆತ್ಮನಲ್ಲಿ ಅವನದಲ್ಲದ ಧರ್ಮಗಳನ್ನು ನಿಷೇಧಿಸಿ ತಿಳಿಸುವುದರ ಮೂಲಕವೇ ವೇದಾಂತವಾಕ್ಯಗಳಿಗೂ ಪ್ರಾಮಾಣ್ಯ ಬರುತ್ತದೆ. ಈ ಆರೋಪಿತಧರ್ಮನಿಷೇಧವೆಂದರೆ ಗೀತಾಭಾಷ್ಯದಲ್ಲಿ ಭಾಷ್ಯಕಾರರೇ ಪೂರ್ವಿಕರ ಒಂದು ವಚನವನ್ನು ಉದಾಹರಿಸಿ ಹೇಳಿದ್ದಾರೆ– **"ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ"** ಎಂದು. ಅಂದರೆ ಸ್ಥೂಲಬುದ್ಧಿಯಿಂದ ಆತ್ಮನಲ್ಲಿ ಆರೋಪಿಸಿ ಹೇಳುವ ವಿಶೇಷಗಳೆಲ್ಲವನ್ನೂ ನಿಷೇಧಿಸಿ ಆರೋಪಿತವಾದವುಗಳ ಅಧಿಷ್ಠಾನ ಅಥವಾ ಆಶ್ರಯವನ್ನು ತಿಳಿಸುವ ಕ್ರಮವೇ ಈ ಅಧ್ಯಾರೋಪ ಅಪವಾದ ಪ್ರಕ್ರಿಯೆ. ಇದನ್ನನುಸರಿಸಿಯೇ ಶ್ರುತಿಯಲ್ಲಿ **"ನೇತಿ ನೇತಿ"**[೩೭] **"ಅಸ್ಥೂಲಮನಣು.."**[೩೮] ಎಂಬಿತ್ಯಾದಿರೂಪದಲ್ಲಿ ನಿಷೇಧಮುಖದಿಂದ ಬ್ರಹ್ಮನನ್ನು ತಿಳಿಸಲಾಗಿದೆ. ಬ್ರಹ್ಮವೆಂಬುದು ವಸ್ತುತಃ ಅದ್ವಿತೀಯ, ನಿಷ್ಪ್ರಪಂಚ ಸ್ವರೂಪವುಳ್ಳದ್ದು. ಆದುದರಿಂದ ನಿಷ್ಪ್ರಪಂಚಸ್ವರೂಪನಾದ ಬ್ರಹ್ಮನಲ್ಲಿ ಪ್ರಪಂಚವನ್ನು ಕಲ್ಪಿಸಿ ನಂತರ ನಿಷೇಧಿಸುವುದು ಉಪದೇಶಕ್ಕಾಗಿಯೇ ಹೊರತು ಪ್ರಪಂಚದ ಸದ್ರೂಪವನ್ನು ತಿಳಿಸಲು ಅಲ್ಲ. ಪ್ರಪಂಚವು ನಿಷೇಧಿಸಲ್ಪಡುವುದರಿಂದ ಸದ್ರೂಪವಲ್ಲ. ವೇದಾಂತದಲ್ಲಿ ಅಧ್ಯಾರೋಪವನ್ನು ಹೇಳಿದ ಮಾತ್ರಕ್ಕೆ ಅದರ ಪ್ರಾಮಾಣ್ಯಕ್ಕೇನೂ ಚ್ಯುತಿ ಬರುವುದಿಲ್ಲ. ಏಕೆಂದರೆ ಸ್ವತಃ ಸಿದ್ಧನಾದ ಆತ್ಮನು ಯಾವ ಪ್ರಮಾಣಕ್ಕೂ ವಿಷಯನಾಗದಿರುವುದರಿಂದ ಅತ್ಯಂತ ದುರ್ಜ್ಞೇಯನಾಗಿಯೇ ಉಳಿಯುತ್ತಾನಲ್ಲ ಎಂಬ ದೃಷ್ಟಿಯಿಂದ ಶ್ರುತಿಯೇ ಅನೇಕ ವಿಧವಾದ ಅಧ್ಯಾರೋಪವನ್ನು ಹೇಳಿ ನಂತರ ಅದಕ್ಕೆ ಅಪವಾದ ಅಂದರೆ ನಿವೃತ್ತಿಯನ್ನು ಹೇಳುತ್ತಾ, ತನ್ಮೂಲಕ ಆರೋಪಿತವಾದುದರ ಮಿಥ್ಯಾತ್ವವನ್ನೂ ತಿಳಿಸುತ್ತಾ ಆರೋಪಕ್ಕೆ ಅಧಿಷ್ಠಾನವಾದ ಬ್ರಹ್ಮನನ್ನು ತಿಳಿಸುತ್ತದೆ. ಈ ಬ್ರಹ್ಮನು ನಿರ್ವಿಶೇಷನೂ ಅವಿಷಯನೂ ಆಗಿರುವುದರಿಂದಲೇ ಆರೋಪಿತ ಪ್ರತಿಷೇಧ ಮಾರ್ಗದಿಂದ ಮಾತ್ರ ತಿಳಿಯಲು ಸಾಧ್ಯವೆಂಬುದು ಪ್ರಸ್ಥಾನತ್ರಯಸಂಮತವಾದ ಅಭಿಪ್ರಾಯ. **"ನಹಿ ಶಾಸ್ತ್ರಮಿದಂತಯಾ ವಿಷಯಭೂತಂ ಬ್ರಹ್ಮ ಪ್ರತಿಪಿಪಾದಯಿಷತಿ, ಕಿಂ ತರ್ಹಿ ಪ್ರತ್ಯಗಾತ್ಮತ್ವೇನ ಅವಿಷಯತಯಾ ಪ್ರತಿಪಾದಯತ್ ಅವಿದ್ಯಾಕಲ್ಪಿತಂ ವೇದ್ಯವೇದಿತೃ ವೇದನಾದಿಭೇದಮಪನಯತಿ"**[೩೯] ಎಂಬುದಾಗಿ ಸೂತ್ರಭಾಷ್ಯದಲ್ಲಿ ಹಾಗೂ **"ದರ್ಶಯತಿ ಚಾಥೋ ಅಪಿ ಸ್ಮರ್ಯತೇ"**[೪೦] ಎಂಬ ಸೂತ್ರದ ಭಾಷ್ಯದಲ್ಲಿ **"ದರ್ಶಯತಿ ಚ ಶ್ರುತಿಃ ಪರರೂಪ ಪ್ರತಿಷೇಧೇನೈವ ಬ್ರಹ್ಮನಿರ್ವಿಶೇಷತ್ವಾತ್, 'ಅಥಾತ ಆದೇಶೋ ನೇತಿ ನೇತಿ'**

---

೩೭. ಬೃ. ೨-೩-೬

೩೮. ಬೃ. ೩-೮-೮

೩೯. ಸೂ. ಭಾ. ೧-೧-೪

೪೦. ಬ್ರ. ಸೂ. ೩-೨-೧೭

**'ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ' 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಇತ್ಯೇವ ಮಾದ್ಯಾ"**[೪೧] ಎಂದೂ, **"ಅತ ಏವ ಚೋಪಮಾ ಸೂರ್ಯಕಾದಿವತ್"**[೪೨] ಎಂಬ ಸೂತ್ರದ ಭಾಷ್ಯದಲ್ಲಿ **"ಯತ ಏವಚಾಯಮಾತಾ ಚೈತನ್ಯರೂಪೋ ನಿರ್ವಿಶೇಷೋ ವಾಙ್ಮನಸಾತೀತಃ ಪರಪ್ರತಿಷೇಧೋಪದೇಶ್ಯಃ"**[೪೩] ಎಂದು ವಿವರಿಸುತ್ತಾ ಅಧ್ಯಾರೋಪ ಅಪವಾದ ಪ್ರಕ್ರಿಯೆಯನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಆದುದರಿಂದಲೇ ಉತ್ಕ್ರಾಂತಿಗತ್ಯಾಗತಿಗಳಾಗಲೀ, ಆತ್ಮನಲ್ಲಿ ಸಾಮಾನ್ಯ ವಿಶೇಷದೃಷ್ಟಿಯಾಗಲೀ ಅವಸ್ಥಾತ್ರಯದೃಷ್ಟಿಯಾಗಲೀ ಬಂಧಮೋಕ್ಷವೇ ಮೊದಲಾದ ಎಲ್ಲಾ ವ್ಯವಹಾರವನ್ನೂ ಈ ಅಧ್ಯಾರೋಪದೃಷ್ಟಿಯಿಂದಲೇ ಹೇಳಿರುವುದು. ಈ ಅರ್ಥದಲ್ಲೇ ಸೃಷ್ಟಿ ಪ್ರಕ್ರಿಯೆಯೂ ಕೂಡಾ ಹೇಳಲ್ಪಟ್ಟಿದೆ. ಗೀತೆಯಲ್ಲೂ ಕೂಡ **"ಮತ್‌ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ"**[೪೪] ಎಂದು ಅಧ್ಯಾರೋಪ ಮಾಡಿ ಹೇಳಿ ನಂತರ **"ನ ಚ ಮತ್‌ಸ್ಥಾನಿ ಭೂತಾನಿ ಪಶ್ಯಮೇ ಯೋಗಮೈಶ್ವರಮ್"**[೪೫] ಎಂದು ಅಪವಾದವನ್ನು ಹೇಳಲಾಗಿದೆ. ಒಟ್ಟಿನಲ್ಲಿ ಆತ್ಮೈಕತ್ವವನ್ನು ತಿಳಿಸಲು ಬ್ರಹ್ಮನಲ್ಲಿ ಜಗತ್‌ಸೃಷ್ಟಿಯನ್ನು ಹೇಳಿ ನಂತರ ಬ್ರಹ್ಮನಲ್ಲಿ ಜಗತ್ತನ್ನು ನಿಷೇಧಿಸಲಾಗಿದೆ. ಅದರಿಂದ ನಿಷ್ಪ್ರಪಂಚ ಬ್ರಹ್ಮಸ್ವರೂಪವನ್ನೇ ಹೇಳಿದಂತಾಯಿತು. ಇದನ್ನು ತಿಳಿಸುವುದಕ್ಕಾಗಿಯೇ ಶಾಸ್ತ್ರದ ಪ್ರವೃತ್ತಿ ಇದನ್ನೇ ಸೂತ್ರಭಾಷ್ಯದಲ್ಲಿ ಕಾಣಬಹುದು. **"ವಾಕ್ಯಾರ್ಥ ವಿಚಾರಣಾಧ್ಯವಸಾನನಿರ್ವೃತ್ತಾ ಹಿ ಬ್ರಹ್ಮಾವಗತಿಃ ನಾನು ಮಾನಾದಿಪ್ರಮಾಣಾಂತರ-ನಿರ್ವೃತ್ತಾ"**[೪೬] ಎಂದೂ ಹಾಗೂ **"ರೂಪಾದ್ಯಭಾವಾದ್ಧಿ ನಾಯಮರ್ಥಃ ಪ್ರತ್ಯಕ್ಷಸ್ಯಗೋಚರಃ, ಲಿಂಗಾದ್ಯಭಾವಾಚ್ಚ ನಾನು ಮಾನಾದೀನಾಮ್, ಆಗಮ ಮಾತ್ರಸಮಧಿಗಮ್ಯ ಏವ ತ್ವಯಮರ್ಥೋ ಧರ್ಮವತ್"**[೪೭] ಎಂದು ಬ್ರಹ್ಮನು ಶಾಸ್ತ್ರಮಾತ್ರದಿಂದ ತಿಳಿಯಲ್ಪಡುವವನು ಎಂದು ಹೇಳುತ್ತಾ ಬ್ರಹ್ಮವು ಅಪ್ರಮೇಯವಾಗಿದ್ದರೂ ಬೇರೆ ಯಾವ ವಿಧದಲ್ಲೂ ಅದನ್ನು ತಿಳಿಸಲಾಗದುದರಿಂದ ಆಗಮದಿಂದ ಅಂದರೆ ಇದುವರೆಗೆ ಹೇಳಿದ ಅಧ್ಯಾರೋಪ ಅಪವಾದ ಪ್ರಕ್ರಿಯೆಯ ಮೂಲಕ ತಿಳಿಯಲು ಸಾಧ್ಯ ಎಂದು ಶಾಸ್ತ್ರ ಪ್ರಾಮಾಣ್ಯವನ್ನೂ ತೋರಿಸಲಾಗಿದೆ. ಸೃಷ್ಟಿಯನ್ನು ಹೇಳಿ ಬ್ರಹ್ಮನು ಜಗತ್ಕಾರಣ ಎಂದು ಹೇಳುವುದೂ ಇದಕ್ಕಾಗಿಯೇ. **"ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ"**[೪೮] ಎಂಬ ಸೂತ್ರದ

---

೪೧. ಸೂ. ಭಾ. ೩-೨-೧೭
೪೨. ಬ್ರ. ಸೂ. ೩-೨-೧೮
೪೩. ಸೂ. ಭಾ. ೩-೨-೧೮
೪೪. ಭ. ಗೀ. ೯-೪
೪೫. ಭ. ಗೀ. ೯-೫
೪೬. ಸೂ. ಭಾ. ೧-೧-೨
೪೭. ಸೂ. ಭಾ. ೨-೧-೬
೪೮. ಬ್ರ. ಸೂ. ೧-೪-೧೪

ಭಾಷ್ಯದಲ್ಲಿ **"ಯಥಾ ಭೂತೋಹ್ಯೇಕಸ್ಮಿನ್ ವೇದಾಂತೇ ಸರ್ವಜ್ಞಃ ಸರ್ವೇಶ್ವರಃ ಸರ್ವಾತ್ಮಾ, ಏಕೋಽದ್ವಿತೀಯಃ ಕಾರಣತ್ವೇನ ವ್ಯಪದಿಷ್ಟಃ ತಥಾಭೂತ ಏವ ವೇದಾಂತಾಂತರೇಷ್ವಪಿ ವ್ಯಪದಿಶ್ಯತೇ.... 'ಬಹುಸ್ಯಾಂ ಪ್ರಜಾಯೇಯ' ಇತಿ ಚಾತ್ಮವಿಷಯೇಣ ಬಹುಭವನಾನುಶಂಸನೇನ ಸೃಜ್ಯಮಾನಾನಾಂ ವಿಕಾರಣಾಂ ಸ್ರಷ್ಟುರಭೇದಮಭಾಷತ"**[೪೯] ಎಂಬುದಾಗಿ ಭಾಷ್ಯಕಾರರು ಜಗತ್‌ಸೃಷ್ಟಿ, ಬ್ರಹ್ಮನಿಗೆ ಕಾರಣತ್ವ, ಕಾರ್ಯಕಾರಣಭಾವ, ದೃಗ್‌ದೃಶ್ಯಭೇದ, ಪಂಚಕೋಶವಿವರಣೆ ಇತ್ಯಾದಿಗಳು ಅಧ್ಯಾರೋಪ ದೃಷ್ಟಿಯಿಂದಲೇ ಹೇಳಿದವುಗಳು. ಅಂದರೆ ಲೋಕದಲ್ಲಿ ಎಲ್ಲರ ಅನುಭವದಲ್ಲಿರುವ ಭೇದವನ್ನಿಟ್ಟುಕೊಂಡು ವಿಚಾರಮಾಡುವುದು. ಅಪವಾದವೆಂದರೆ ಶ್ರುತಿ, ಸ್ಮೃತಿ, ಯುಕ್ತಿ, ಮತ್ತು ಅನುಭವದ ಆಧಾರದ ಮೇಲೆ ಅದು ನಿಜವಲ್ಲವೆಂದು ತೋರಿಸುವುದು. ಒಂದು ಪರಮಾರ್ಥವನ್ನು ಇಟ್ಟುಕೊಂಡೇ ಅಪರಮಾರ್ಥವನ್ನು ಅಲ್ಲಗಳೆಯಬೇಕಾಗುವುದು. ತಾತ್ತ್ವಿಕವಾಗಿ ವಸ್ತುಸ್ವರೂಪವು ಒಂದೇ ಆಗಿದ್ದು ಅದನ್ನು ಲೋಕಸಿದ್ಧಪ್ರಮಾಣಗಳಿಂದ ತಿಳಿಯಲು ಆಗದಿರುವಾಗ ಅಂತಹ ಬ್ರಹ್ಮಸ್ವರೂಪವನ್ನು ನಿಷೇಧಮುಖದಿಂದಲೇ ತಿಳಿಸಬೇಕು. ನಿಷೇಧ ಮಾಡಬೇಕಾದರೆ ಮೊದಲು ಅದನ್ನು ಆರೋಪಿಸಿರಬೇಕು. ಹೀಗೆ ಅಧ್ಯಾರೋಪ ಮತ್ತು ಅಪವಾದದಿಂದ ನಿಷ್ಪ್ರಪಂಚ ಬ್ರಹ್ಮಸ್ವರೂಪವನ್ನು ತಿಳಿಸುವ ಒಂದು ಪ್ರಕ್ರಿಯೆ ಶಾಂಕರಸಿದ್ಧಾಂತದಲ್ಲಿ ಮಹತ್ತರವಾದ ಸ್ಥಾನವನ್ನು ಪಡೆದಿದೆ. ಈ ಸಿದ್ಧಾಂತವು ಶ್ರುತಿಯಲ್ಲಿಯೇ ಪ್ರತಿಪಾದಿತವಾಗಿದೆ.

## ಸಾಧನ ವಿವೇಕ

ಸೂತ್ರಭಾಷ್ಯದ ಮೊದಲಿನ ಅಧ್ಯಾಯದಲ್ಲಿ ಎಲ್ಲಾ ವೇದಾಂತಗಳೂ ಅದ್ವಿತೀಯ ಬ್ರಹ್ಮನಲ್ಲಿಯೇ ತಾತ್ಪರ್ಯವನ್ನು ಹೊಂದಿವೆ ಎಂದು ತಿಳಿಸಿ ಆ ಬ್ರಹ್ಮನಿಗೇ ಜಗದುತ್ಪತ್ತಿ ಸ್ಥಿತಿಲಯ ಕಾರಣತ್ವವನ್ನೂ ಹೇಳಿ ಆ ಬ್ರಹ್ಮನೇ ನಮ್ಮೆಲ್ಲರ ಆತ್ಮ ಎಂದು ತಿಳಿಸುತ್ತಾ ಸಮನ್ವಯವನ್ನು ತೋರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಜಗತ್ಕಾರಣತ್ವಕ್ಕೆ ಸಾಂಖ್ಯಾದಿಗಳ ವಿರೋಧವನ್ನು ಶಂಕೆ ಮಾಡಿ ಪರಿಹಾರ ಮಾಡಿ ಬ್ರಹ್ಮನ ಜಗತ್ಕಾರಣತ್ವವನ್ನು ದೃಢೀಕರಿಸಲಾಗಿದೆ.

ಮೂರನೆಯ ಸಾಧನಾಧ್ಯಾಯದಲ್ಲಿ ಜೀವಾತ್ಮನ ಸಂಸಾರಗತಿ ಅಂದರೆ ಈ ಲೋಕದ ಫಲವನ್ನನುಭವಿಸಿ ಲೋಕಾಂತರಕ್ಕೆ ಹೋಗುವ ಪ್ರಕಾರ, ಅವನ ನಾನಾವಿಧವಾದ ಅವಸ್ಥೆಗಳು ಬ್ರಹ್ಮಸ್ವರೂಪ, ವಿದ್ಯಾಪ್ರಭೇದ, ಸಮ್ಯಗ್‌ದರ್ಶನದಿಂದ ಪುರುಷಾರ್ಥಸಿದ್ಧಿ, ಸಮ್ಯಗ್‌ದರ್ಶನೋಪಾಯ ವಿಧಿ ಭೇದಗಳು ಇತ್ಯಾದಿಗಳನ್ನು ವಿವರಿಸಲಾಗಿದೆ.

ಬ್ರಹ್ಮಜ್ಞಾನಪ್ರಾಪ್ತಿಗೆ ಸಾಧನವಾದ ವೈರಾಗ್ಯವನ್ನು ತಿಳಿಸುವ ಉದ್ದೇಶದಿಂದ ಹಾಗೂ 'ತತ್ತ್ವಮಸಿ' ಮಹಾವಾಕ್ಯಾರ್ಥ ನಿರೂಪಿಸುವ ಉದ್ದೇಶದಿಂದ ತ್ವಂ ಪದಾರ್ಥವಾದ ಜೀವನ ಅವಸ್ಥಾತ್ರಯವರ್ಣನೆ ಮಾಡಲಾಗಿದೆ. "ತದಂತರ

೪೯. ಸೂ. ಭಾ. ೧-೪-೧೪

**ಪ್ರತಿಪತ್ತೌರಂಹತಿ....**"[೫೦] ಎಂಬ ಸೂತ್ರದಿಂದ ಮೊದಲ್ಗೊಂಡು ಬಹಳ ಸೂತ್ರಗಳಲ್ಲಿ ಜೀವನ ಜಾಗ್ರದವಸ್ಥೆಯನ್ನು ವಿವೇಚಿಸಿ ನಂತರ "**ಸಂಧ್ಯೇ ಸೃಷ್ಟಿರಾಹ ಹಿ**"[೫೧] ಎಂಬ ಸೂತ್ರದಿಂದಾರಂಭವಾಗುವ ಸಂಧ್ಯಾಧಿಕರಣದಲ್ಲಿ ಸ್ವಪ್ನಾವಸ್ಥೆಯನ್ನೂ "**ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಚ**"[೫೨] ಎಂದಾರಂಭವಾಗುವ ತದಭಾವಾಧಿಕರಣದಲ್ಲಿ ಸುಷುಪ್ತ್ಯವಸ್ಥೆಯನ್ನೂ ವಿವೇಚಿಸಿ ನಂತರ "**ನ ಸ್ಥಾನತೋಽಪಿ....**"[೫೩] ಇತ್ಯಾದಿ ಸೂತ್ರಗಳಿಂದ ತತ್ತ್ವದಾರ್ಥ ಬ್ರಹ್ಮಸ್ವರೂಪವನ್ನು ಪರಾಮರ್ಶೆ ಮಾಡಿ ಜೀವಬ್ರಹ್ಮೈಕ್ಯವನ್ನು ವಿವರಿಸಲಾಗಿದೆ. ಹಾಗೂ ಸಗುಣಬ್ರಹ್ಮಫಲವನ್ನು ಕೊಡುವ ಸಾಧನಗಳಾದ ಕರ್ಮ. ಉಪಾಸನಾದಿಗಳನ್ನು ವಿಸ್ತಾರವಾಗಿ ಹೇಳಲಾಗಿದೆ. ಕೊನೆಯಲ್ಲಿ ವೇದಾಂತಜನ್ಯ ಆತ್ಮಜ್ಞಾನವೇ ಮೋಕ್ಷಸಾಧನ ಎಂದೂ ಸಿದ್ಧಾಂತ ಮಾಡಲಾಗಿದೆ. ಅಂದರೆ ವಿದ್ಯೆಯನ್ನು ಪರಾಪರಭೇದದಿಂದ ವಿಂಗಡಿಸಿ ಎರಡು ವಿಧವಾದ ಸಾಧನವನ್ನೂ ವಿಶೇಷವಾಗಿ ವಿವೇಚಿಸಲಾಗಿದೆ.

## ಮೋಕ್ಷ

ನಾಲ್ಕನೆಯ ಫಲಾಧ್ಯಾಯದಲ್ಲಿ ಮೊದಲಿನ ಕೆಲವು ಅಧಿಕರಣಗಳಲ್ಲಿ ಅವಶಿಷ್ಟಸಾಧನವಿಚಾರ ಮಾಡುತ್ತಾ ಬ್ರಹ್ಮಜ್ಞಾನಕ್ಕೆ ಅಂತರಂಗ ಸಾಧನಗಳಾದ ಶ್ರವಣ ಮನನ ನಿದಿಧ್ಯಾಸನಗಳನ್ನು ವಿಚಾರ ಮಾಡಲಾಗಿದೆ. ನಂತರ ಕೆಲವು ಅಧಿಕರಣಗಳಲ್ಲಿ ಉಪಾಸನೆ ಮಾಡಿದವರ ಫಲ ಚಿಂತನೆಯನ್ನು ಮಾಡಿ ಜ್ಞಾನದಿಂದ ಕೈವಲ್ಯಪ್ರಾಪ್ತಿರೂಪ ಫಲವನ್ನು ಹೇಳಲಾಗಿದೆ. ಸಗುಣೇಶ್ವರನ ಉಪಾಸನಾದಿಗಳಿಂದಲೂ ಮೋಕ್ಷರೂಪ ಫಲವನ್ನು ಹೇಳಲಾಗಿದ್ದರೂ ಅದು ಕ್ರಮಮುಕ್ತಿ. ಅಂದರೆ ಉಪಾಸಕರು ಅರ್ಚಿರಾದಿಮಾರ್ಗದಿಂದ ಹಿರಣ್ಯಗರ್ಭಸಾಯುಜ್ಯವನ್ನು ಪಡೆದು ಅಲ್ಲಿ ಕಲ್ಪದ ಕೊನೆಯವರೆಗೂ ಇದ್ದು ಕೊನೆಯಲ್ಲಿ ಆ ಹಿರಣ್ಯಗರ್ಭನೊಡನೆ ತಾವೂ ಕೂಡ ಜ್ಞಾನವನ್ನು ಪಡೆದೇ ಮೋಕ್ಷವನ್ನು ಹೊಂದುತ್ತಾರೆ. ಇದನ್ನೇ–

> ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
> ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮ್ ॥

ಎಂಬ ಶ್ಲೋಕದಲ್ಲಿ ವಿವರಿಸಲಾಗಿದೆ. ಜ್ಞಾನೋತ್ಪತ್ತಿಯಾದ ನಂತರ ಹಿಂದೆ ಮಾಡಿದ ಕರ್ಮಗಳ ಫಲಗಳು ನಾಶವಾಗುತ್ತವೆ. ಜ್ಞಾನ ಬಂದಮೇಲೆ ಮಾಡುವ ಕರ್ಮಗಳಲ್ಲಿ ಕರ್ತೃತ್ವ, ಭೋಕ್ತೃತ್ವ ಬುದ್ಧಿ ಇಲ್ಲದಿರುವುದರಿಂದ ಕರ್ಮಫಲಸಂಬಂಧ ಉಂಟಾಗುವುದಿಲ್ಲ. ಪ್ರಾರಬ್ಧ ಕರ್ಮಕ್ಕೆ ಮಾತ್ರ ಜ್ಞಾನದಿಂದ ನಾಶವಿಲ್ಲ. ಅದನ್ನು ಅನುಭವಿಸಲೇ ಬೇಕು. ಜ್ಞಾನದಿಂದ ಬರುವ ಮೋಕ್ಷವೆಂದರೆ ಬೇರೆ ಯಾವುದೋ ಒಂದು

---

೫೦. ಬ್ರ. ಸೂ. ೩-೧-೧
೫೧. ಬ್ರ. ಸೂ. ೩-೨-೧
೫೨. ಬ್ರ. ಸೂ. ೩-೨-೭
೫೩. ಬ್ರ. ಸೂ. ೩-೨-೧೧





ಲೋಕದ ಫಲವಲ್ಲ. ತನ್ನ ಸ್ವರೂಪದ ಸಾಕ್ಷಾತ್ಕಾರದಿಂದ ಭವಬಂಧ ವಿಮೋಚನೆಯೇ ಮೋಕ್ಷ. ಮೋಕ್ಷವೆಂದರೆ ಬಿಡುಗಡೆ ಎಂದರ್ಥ. ಬಿಡುಗಡೆ ಯಾವುದರಿಂದ ಎಂದರೆ ಅಜ್ಞಾನದಿಂದುಂಟಾದ ಬಂಧದಿಂದ. ಸಗುಣೋಪಾಸನೆಯಿಂದ ಈಶ್ವರಸಾಯುಜ್ಯವನ್ನು ಪಡೆದವರು ಅಂದರೆ ಕ್ರಮಮುಕ್ತಿಗೆ ಅರ್ಹರಾದವರು ಪುನಃ ಈ ಪ್ರಪಂಚಕ್ಕೆ ಬರುವುದಿಲ್ಲ. ಜನ್ಮ ಮರಣಗಳ ಬಂಧದಿಂದ ಬಿಡುಗಡೆ ಪಡೆಯುತ್ತಾರೆ ಎಂದರ್ಥ. ಹೀಗಿರುವಾಗ ಜ್ಞಾನದಿಂದ ಮೋಕ್ಷವನ್ನು ಪಡೆದಂತಹ ಜ್ಞಾನಿಗಳಂತೂ ಸರ್ವಥಾ ಮತ್ತೆ ಈ ಭವಬಂಧನದಲ್ಲಿ ಸಿಲುಕಿಕೊಳ್ಳದೇ ಬಿಡುಗಡೆ ಹೊಂದುತ್ತಾರೆ. ಸಗುಣೋಪಾಸಕರಾದರೋ ಮುಕ್ತಿಗಾಗಿ ಕಲ್ಪಾಂತದವರೆಗೆ ಕಾಯಬೇಕಾಗುತ್ತದೆ. ಜ್ಞಾನಿಗಾದರೋ ಜ್ಞಾನ ಬಂದ ಕ್ಷಣದಿಂದಲೇ ಭವ ಬಂಧದಿಂದ ಬಿಡುಗಡೆಯಾಗುವುದು. ಅಂತಹವರನ್ನೇ ಜೀವನ್ಮುಕ್ತರೆನ್ನುವುದು. ಪ್ರಾರಬ್ಧಕರ್ಮದ ಫಲವಾಗಿ ಬಂದ ಜ್ಞಾನಿಯ ದೇಹವು ಬಿದ್ದುಹೋಗುವವರೆಗೆ ವಿದೇಹಕೈವಲ್ಯ ವಿಳಂಬವಾಗುವುದು ಅಷ್ಟೇ. ಅದನ್ನೇ **"ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ"**[೫೪] ಎಂದು ಛಾಂದೋಗ್ಯದಲ್ಲಿ ಹೇಳಿದೆ. ಮುಕ್ತನಾದವನಿಗೆ ಪುನಃ ಸಂಸಾರಾಗಮನವಿಲ್ಲವೆಂಬುದನ್ನೇ **"ನಸ ಪುನರಾವರ್ತತೇ"**[೫೫] ಎಂಬ ಶ್ರುತಿಯಲ್ಲೂ **"ಅನಾವೃತ್ತಿಃ ಶಬ್ದಾತ್"**[೫೬] ಎಂಬ ಸೂತ್ರದಲ್ಲೂ ತಿಳಿಸಲಾಗಿದೆ.

## ಉಪಸಂಹಾರ

ಈ ರೀತಿಯಾಗಿ ಉತ್ತಮಾಧಿಕಾರಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಭಗವತ್ಪಾದರು ರಚಿಸಿದಂತಹ ಸೂತ್ರಭಾಷ್ಯದ ಆಶಯವನ್ನು ಸಂಕ್ಷೇಪ ರೂಪದಲ್ಲಿ ತಿಳಿಸುವುದು ಬಹಳ ಕಷ್ಟ ಸಾಧ್ಯವೇ ಸರಿ. ಆದರೂ ಒಂದು ಪ್ರಾಮಾಣಿಕ ಪ್ರಯತ್ನ ಮಾತ್ರ ಇದಾಗಿದೆ. ಸರ್ವಜನರೂ ನಿರತಿಶಯಾನಂದರೂಪನಾದ ಬ್ರಹ್ಮನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಲಿ, ತನ್ಮೂಲಕ ಶ್ರೇಯೋಭಾಗಿಗಳಾಗಲಿ ಎಂಬ ಮಹತ್ತರ ಉದ್ದೇಶದಿಂದಲೇ ಭಾಷ್ಯ, ಪ್ರಕರಣ ಹಾಗೂ ಸ್ತೋತ್ರಗಳನ್ನು ರಚಿಸಿ ಸರ್ವರಿಗೂ ಮುಕ್ತಿ ಮಾರ್ಗವನ್ನು ಉಪದೇಶಿಸಿದ ಭಗವತ್ಪಾದ ಶಂಕರರು ನಿಜವಾಗಿಯೂ ಲೋಕಕಲ್ಯಾಣವನ್ನು ಬಯಸಿದ ನಿಜವಾದ ಜಗದ್ಗುರುಗಳು. ಅಂತಹ ಮಹಾಮಹಿಮರು ತೋರಿಸಿದ ಮಾರ್ಗವನ್ನನುಸರಿಸಿ ಎಲ್ಲರೂ ಶ್ರೇಯೋಭಾಗಿಗಳಾಗೋಣ.

ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈಶ್ರೀಗುರವೇ ನಮಃ ॥

**ಓಂ ತತ್ಸತ್**

***

---

೫೪. ಛಾಂ. ೬-೧೪-೨

೫೫. ನಿರಾಲಂಬೋಪನಿಷತ್ ೩೩

೫೬. ಬ್ರ. ಸೂ. ೪-೪-೨೨

# ಶ್ರೀ ಶಂಕರ ಭಗವತ್ಪಾದರ ಭಗವದ್ಗೀತಾ ಭಾಷ್ಯ

ವಿದ್ವಾನ್ ಶ್ರೀರಾಮಚಂದ್ರಶರ್ಮಾ ತ್ಯಾಗಲಿ

ಭಾರತೀಯ ವೇದಾಂತಾಭ್ಯಾಸಕ್ಕೆ ಮೂರು ಮಾರ್ಗಗಳು. ಈ ಮಾರ್ಗಗಳನ್ನು ''ಪ್ರಸ್ಥಾನ'' ಎಂದು ಕರೆಯಲಾಗಿದೆ. ''ಪ್ರಸ್ಥಾನ'' ಶಬ್ದಕ್ಕೆ ''ನಡೆ'', ''ಪ್ರಯಾಣ'' ಮುಂತಾದ ಅರ್ಥಗಳಿದ್ದರೂ ವೇದಾಂತ ಶಾಸ್ತ್ರದಲ್ಲಿ ''ಮಾರ್ಗ'' ಎನ್ನುವರ್ಥವೇ ರೂಢವಾಗಿದೆ. ''ನಡೆ''. ''ಗಮನ'' ಎಂಬ ಅರ್ಥವನ್ನೇ ಇಟ್ಟುಕೊಂಡರೂ ಬಾಧಕವಿಲ್ಲ.

ಪ್ರಸ್ಥಾನತ್ರಯದಲ್ಲಿ ಶ್ರುತಿಪ್ರಸ್ಥಾನವು ಮೊದಲನೆಯದು. ಭಾರತೀಯ ಸಕಲಜ್ಞಾನಗಳಿಗೆ ಮೂಲಾಧಾರವಾದದ್ದು ವೇದ. ವೇದವು ವಿಶ್ವದ ಅದ್ಭುತ ಸೃಷ್ಟಿ. ಅದು ಬದುಕನ್ನು ಸಾರ್ಥಕಪಡಿಸಿಕೊಳ್ಳುವ ಅನೇಕ ವಿಚಾರಗಳನ್ನು ಬೋಧಿಸುತ್ತ, ಉಪಾಸನೆ, ಕರ್ಮ, ಧ್ಯಾನ ಮುಂತಾದ ಮಾರ್ಗಗಳನ್ನು ವಿವರಿಸುತ್ತ, ಅಂತತಃ ಜ್ಞಾನವೇ ಸರ್ವಶ್ರೇಷ್ಠವೆಂದು ಸಾರುತ್ತ, ವೇದಾಂತದಲ್ಲಿ ಕೊನೆಗೊಳ್ಳುತ್ತದೆ. ಆ ವೇದಾಂತವೇ ಉಪನಿಷತ್ತು. ವೇದದ ಕೊನೆಯ ನಿರ್ಣಯವಾದ ಉಪನಿಷತ್ತಿನ ಅರ್ಥಾನುಸಂಧಾನವೇ ಶ್ರುತಿ ಪ್ರಸ್ಥಾನ. ಉಪನಿಷದ್ಭಾಗದ ನಿರ್ಣಯವೇ ಸಕಲ ಶ್ರುತಿಯ ತಾತ್ಪರ್ಯವಾದ್ದರಿಂದ. ಇದು ಕೇವಲ ಔಪನಿಷತ್ಪ್ರಸ್ಥಾನವೆನ್ನಿಸದೇ ಸಮಗ್ರಶ್ರುತಿಪ್ರಸ್ಥಾನವೇ ಆಗಿದೆ.

ಎರಡನೆಯದು ಸ್ಮೃತಿಪ್ರಸ್ಥಾನ. ಇದೇ ಪ್ರಕೃತ ಪ್ರಬಂಧದ ವಿಷಯವಾಗಿದೆ.

ಮೂರನೆಯದು ಸೂತ್ರಪ್ರಸ್ಥಾನ. ಇದನ್ನು ತರ್ಕ ಅಥವಾ ನ್ಯಾಯ ಪ್ರಸ್ಥಾನವೆಂದೂ ಕರೆಯುತ್ತಾರೆ. ಮೊದಲೆರಡು ಪ್ರಸ್ಥಾನಗಳನ್ನು ನ್ಯಾಯ-ಯುಕ್ತಿಗಳ ಮೂಲಕ ತೂಗಿ ನೋಡುವುದರಿಂದ ಈ ಹೆಸರು. ಮಹರ್ಷಿ ಬಾದರಾಯಣರು ರಚಿಸಿದ ೫೫೫ ಶಾರೀರಕ = ಬ್ರಹ್ಮಸೂತ್ರಗಳೇ ಸೂತ್ರ ಪ್ರಸ್ಥಾನಕ್ಕೆ ಆಧಾರವಾದವುಗಳು.

ಶ್ರೀ ಆಚಾರ್ಯ ಶಂಕರ ಭಗವತ್ಪಾದರು ಈ ಮೂರೂ ಪ್ರಸ್ಥಾನಗಳಿಗೆ ಭಾಷ್ಯವನ್ನು ರಚಿಸಿ, ಸಕಲಾಗಮ ತತ್ತ್ವಸಾರವಾದ ಅದ್ವೈತ ತತ್ತ್ವವನ್ನು ಪ್ರತಿಪಾದಿಸಿ ಸ್ಥಾಪಿಸಿದ್ದಾರೆ.

ಮೂಲತಃ ಪ್ರಸ್ಥಾನತ್ರಯದ ಕಲ್ಪನೆ ಶ್ರೀ ಶಂಕರಾಚಾರ್ಯರಿಂದಲೇ ಮೊದಲಾಗಿದೆ. ಶ್ರೀ ಶಂಕರರಿಗಿಂತ ಪೂರ್ವದಲ್ಲಿ ವ್ಯಾಖ್ಯಾನ, ವೃತ್ತಿ, ವಿವರಣೆಗಳು ಇದ್ದರೂ ಪ್ರಸ್ಥಾನತ್ರಯ ಪ್ರಸ್ತಾಪವು ಎಲ್ಲೂ ಕಂಡುಬರುವುದಿಲ್ಲ.

ಒಂದೇ ಗುರಿಯನ್ನು ಹೊಂದಿದ ಈ ಮೂರೂ ಮೌಲಿಕ ಗ್ರಂಥಗಳನ್ನು ಸಮಗ್ರವಾಗಿ ಆಲೋಚನೆ ಮಾಡದೇ ತತ್ತ್ವಸಾರವನ್ನು ನಿರ್ಣಯಿಸಲು ಸಾಧ್ಯವಾಗದೆಂದೇ ಬಗೆದು ಆಚಾರ್ಯರು ಪ್ರಸ್ಥಾನತ್ರಯ ಭಾಷ್ಯರಚನೆಯನ್ನು ಮಾಡಿದರು.

ಸ್ಮೃತಿ ಪ್ರಸ್ಥಾನವು ಏಕಮೇವಾದ್ವಿತೀಯ ಗ್ರಂಥವಾದ ಶ್ರೀ ಭಗವದ್ಗೀತೆಗೆ ಸೇರಿದ್ದು. ಶ್ರುತ್ಯುಕ್ತ ಅರ್ಥವನ್ನು ಲೌಕಿಕ ಭಾಷೆಯ ಮೂಲಕ ಸ್ಮರಣೆಗೆ ತರುವ ಗ್ರಂಥಗಳೇ ಸ್ಮೃತಿಗಳು. ಪುರುಷಾರ್ಥಚತುಷ್ಟಯಗಳಲ್ಲಿ ಮೊದಲ ಮೂರು ಪುರುಷಾರ್ಥಗಳ ಸಾಧನ-ಸಾಧ್ಯಗಳನ್ನು ವಿವರಿಸುವ ಸ್ಮೃತಿಗಳು ನೂರಾರು ಇವೆ; ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ ಮುಂತಾದವು. ಅವುಗಳಲ್ಲೂ ಚರಮಪುರುಷಾರ್ಥವಾದ ಮೋಕ್ಷದ ವಿಚಾರವೂ, ಅದರ ಸಾಧನಾ-ಸ್ವರೂಪ ವಿಚಾರಗಳೂ ಅಲ್ಪ ಪ್ರಮಾಣದಲ್ಲಿ ಬಂದಿವೆ. ಮೋಕ್ಷ ವಿಚಾರವನ್ನು ಪ್ರಧಾನವಾಗಿ ವಿವರಿಸುವ ಸನತ್ಸುಜಾತೀಯ, ಅನುಗೀತಾ, ಅಷ್ಟಾವಕ್ರಗೀತಾ, ಯೋಗವಾಸಿಷ್ಠ, ಮುಂತಾದವೂ ಇವೆ. ಆದರೆ ಶ್ರೀ ಶಂಕರಾಚಾರ್ಯರು ಸ್ಮೃತಿ ಪ್ರಸ್ಥಾನವಾಗಿ ಸ್ವೀಕರಿಸಿದ್ದು ಶ್ರೀ ಭಗವದ್ಗೀತೆಯನ್ನು ಮಾತ್ರ. ಇದಕ್ಕೆ ಕಾರಣ ಭಗವದ್ಗೀತೆಯ ಮಹತ್ತ್ವ. ಭಗವದ್ಗೀತೆ ಹೆಸರೇ ಸೂಚಿಸುವಂತೆ ಸ್ವಯಂ ಪರಮಾತ್ಮನೇ ಹೇಳಿದ್ದು. ಬ್ರಹ್ಮಮೀಮಾಂಸೆಯು ಯಾರ ವಿಚಾರವನ್ನು ಮಾಡಲು ಹೊರಟಿದೆಯೋ, ಆ ಗಮ್ಯ ವಸ್ತುವೇ = ಬ್ರಹ್ಮವೇ ತನ್ನ ಸ್ವರೂಪವನ್ನು ಬಣ್ಣಿಸಿ ಹೇಳಿದಾಗ, ಅಧಿಕ ಮಹತ್ತ್ವವನ್ನು ಪಡೆಯುತ್ತದೆ. ಭಗವದ್ಗೀತೆಯು ಪರಮ ಪ್ರಮಾಣವಾದದ್ದೆಂದು ಅನೇಕ ಮೇಧಾವಿಗಳು, ಋಷಿಗಳು, ವಿಚಾರವಂತರು, ಧಾರ್ಮಿಕರು, ಏಕಾಭಿಪ್ರಾಯವಾಗಿ ಸಾರಿದಾಗ, ಅದರ ಪ್ರತಿಷ್ಠೆ ಉತ್ತುಂಗವಾಯಿತು. ಸ್ವತಃ ಪರಮಾತ್ಮನಾದ ಕೃಷ್ಣನು–

"ಗೀತಾಶ್ರಯೇಽಹಂ ತಿಷ್ಠಾಮಿ ಗೀತಾಮೇ ಚೋತ್ತಮಂ ಗೃಹಂ ।
ಗೀತಾಮೇ ಪರಮಾ ವಿದ್ಯಾ ಬ್ರಹ್ಮರೂಪಾ ನ ಸಂಶಯಃ ॥"

ವರಾಹ ಪುರಾಣ

"ನಾನು ಗೀತೆಯ ಆಶ್ರಯದಲ್ಲೇ ಇದ್ದೇನೆ. ಗೀತೆಯೇ ನನ್ನ ಉತ್ತಮವಾದ ಮನೆ. ಗೀತೆಯೇ ನನ್ನ (ನನ್ನನ್ನು ಅರಿಯುವ) ಶ್ರೇಷ್ಠ ಬ್ರಹ್ಮರೂಪದ ವಿದ್ಯೆ. ಸಂಶಯ ಬೇಡ." ಇಷ್ಟೇ ಅಲ್ಲ "ಗೀತಾಜ್ಞಾನ ಮುಪಾಶ್ರಿತ್ಯ ತ್ರೀಲ್ಲೋಕಾನ್ ಪಾಲಯಾಮ್ಯಹಂ" ಗೀತೆಯು ನೀಡುವ ಜ್ಞಾನವನ್ನು ಅವಲಂಬಿಸಿಯೇ ಮೂರು ಲೋಕಗಳನ್ನೂ ಪಾಲಿಸುತ್ತೇನೆ" ಎಂದು ಘೋಷಿಸಿದ್ದಾನೆ. ಇದು ಕೇವಲ ಭಾವನಾತ್ಮಕವಾದ ಉದ್ಗಾರವಲ್ಲ. ನಿಜಕ್ಕೂ ಭಗವದ್ಗೀತೆ ಅಂಥ ಶ್ರೇಷ್ಠ ಸಮಗ್ರ ಗ್ರಂಥ.

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ।
ಪಾರ್ಥೋವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥

ಎಲ್ಲ ಉಪನಿಷತ್ತುಗಳೂ ಹಸುಗಳು. ಗೋಪಾಲಪುತ್ರ ಕೃಷ್ಣನೇ ಹಾಲು ಹಿಂಡುವವನು. ಅರ್ಜುನನೇ ಕರು. ಗೀತಾಮೃತವೇ ಹಾಲು. ಜ್ಞಾನಿಯೇ ಆ ಹಾಲನ್ನು ಸವಿಯುವವನು'' ಎಂಬ ರೂಪಕೋಕ್ತಿಯಂತೆ ''ಸಮಸ್ತ ವೇದಾರ್ಥ ಸಾರಸಂಗ್ರಹದ ಜೊತೆಗೆ ತತ್ಕಾಲ ಪರ್ಯಂತವಾದ ಅನ್ಯಾನ್ಯ ಕಪಿಲಾದಿ ಮೇಧಾವಿಗಳ, ಜನಕಾದಿರಾಜರ, ಜನಸಾಮಾನ್ಯರ. ಜೀವನದಲ್ಲಿ ಮೂಡಿಬಂದ, ಜೀವನ ಪ್ರಯೋಗದಲ್ಲಿ ವಿಶ್ವಾಸ ಶ್ರದ್ಧೆಗಳಿಂದ ಒಡಮೂಡಿದ ಎಲ್ಲ ವಿಚಾರಗಳನ್ನು ತನ್ನೊಳಗೆ ಅರಗಿಸಿಕೊಂಡು ಆಲೋಚನೆ ಮಾಡಿ ಸಾರತಮಜ್ಞಾನದ ತವನಿಧಿಯಾಗಿ ರೂಪಗೊಂಡಿದೆ. ಇಷ್ಟೇ ಅಲ್ಲ. ವರ್ತಮಾನ, ಭವಿಷ್ಯದ ನಾನಾವಾದ, ಜ್ಞಾನ, ದರ್ಶನಗಳನ್ನೂ ತನ್ನೊಳಗೆ ಸೆರೆಹಿಡಿದು ಕಾಲಕಾಲಕ್ಕೆ ತನ್ನ ವಿರಾಟ್ ಸ್ವರೂಪದ ಅನೇಕ ಮುಖಗಳ ದರ್ಶನವನ್ನು ನೀಡುತ್ತ ನಡೆದಿದೆ. ಭಗವದ್ಗೀತೆಗಿಂತ ಹಿಂದೆ ಜೀವ, ಜಗತ್ತು, ಬ್ರಹ್ಮ ಇವುಗಳ ವಿಷಯದಲ್ಲಿ ಅನೇಕ ಬಗೆಯಲ್ಲಿ ರೂಪಗೊಂಡ ವಿಚಾರಗಳೂ ಮತಗಳೂ ವಾದಗಳೂ ಇದ್ದವು. ಬೋಧಾಯನ, ಭರ್ತೃಪ್ರಪಂಚ, ಪೂರ್ಣಕಶ್ಯಪ, ಅಜಿತ ಕೇಶ ಕಂಬಲ, ಜಾಬಾಲಿ, ಪ್ರಕೃಧಕಾತ್ಯಾಯನ, ಮಂಖಲಿ, ಕಪಿಲ, ವ್ಯಾಸ, ಹಿರಣ್ಯಗರ್ಭ, ಆತ್ರೇಯ, ಕಾಶ್ಯಪ, ಆಸ್ಮರಥ್ಯ, ಔಡುಲೋಮಿ, ಕಾಷ್ಣಾಜಿನಿ, ಜೈಮಿನಿ ಇವರೆಲ್ಲ ಗೀತಾ ಪೂರ್ವದ ನಾನಾ ಮತ, ವಾದಗಳ ಪ್ರವರ್ತಕರು. ಇವರಲ್ಲಿ ಕೆಲವರು ನಾಸ್ತಿಕರಾದರೆ, ಇನ್ನು ಕೆಲವರು ಆಸ್ತಿಕರು.

ಭಗವದ್ಗೀತೆ ಈ ಎಲ್ಲ ವೈದಿಕ-ಅವೈದಿಕ, ಜಾನಪದ ವಿಚಾರಗಳನ್ನು ಮಥಿಸಿ, ಜೀವ, ಜಗತ್ತು, ಪರಮಾತ್ಮ ಇವುಗಳ ನಿರ್ದಿಷ್ಟ ಸ್ವರೂಪವನ್ನು ನಿರ್ಧರಿಸಿ, ಪರಮಾನಂದ ಸ್ವರೂಪದ ಮುಕ್ತಿಯ ರಾಜಮಾರ್ಗವನ್ನು ನಿರ್ಮಿಸಿತು. ಇಂದಿಗೂ ಸಾವಿರಾರು ಸೈದ್ಧಾಂತಿಕ ಗ್ರಂಥರಾಶಿಯಲ್ಲಿ ಭಗವದ್ಗೀತೆ ಸರ್ವೋನ್ನತ ಸ್ಥಾನದಲ್ಲಿ ನೆಲೆನಿಂತಿದೆ. ವಿಶ್ವದ ಶ್ರೇಷ್ಠ ಅನುಭಾವಿಗಳಾದ ಯೋಗಿ ಅರವಿಂದರು ''ಭಗವದ್ಗೀತೆಯೇ ಜಗತ್ತಿನ ಭಾವೀ ಧರ್ಮದ ಸರ್ವಜನಸಮ್ಮತ ಶಾಸ್ತ್ರವಾಗುತ್ತದೆ'' ಎಂದು ಭವಿಷ್ಯ ನುಡಿದಿದ್ದಾರೆ.

ಜಗತ್ತಿನ ಶ್ರೇಷ್ಠ ಚಿಂತಕರಾದ ಗಾಂಧೀಜಿ, ಅಮೇರಿಕದ ತತ್ತ್ವಜ್ಞಾನಿ ಥೋರೋ (ಇವನು ಭಗವದ್ಗೀತೆಯನ್ನು ಕುರಿತು ಬರೆದ ಗ್ರಂಥವನ್ನು ಓದಿಯೇ ಗಾಂಧೀಜಿಯವರು ಗೀತೆಯ ಮಹತ್ತ್ವವನ್ನು ಅರಿತು ಅಭ್ಯಾಸ ಮಾಡಿದರು) ಜರ್ಮನ್ ತತ್ತ್ವಜ್ಞಾನಿ ಶೋಫೆನ್ ಹೇರ್, ಇಂಗ್ಲೆಂಡಿನ ಹಕ್ಸಲೇ, ನೋಬೆಲ್ ಪ್ರಶಸ್ತಿ ವಿಜೇತ ರಷ್ಯದ ಸೋರೋಕಿನ್ ಇವರೆಲ್ಲ ಭಗವದ್ಗೀತೆಯನ್ನು ಅಧ್ಯಯನ ಮಾಡಿ, ಇದೊಂದು ಭೂಮಂಡಲದಲ್ಲೇ ಸಾರ್ವತ್ರಿಕ, ಸಾರ್ವಕಾಲಿಕವಾದ ಶಾಶ್ವತ ಶ್ರೇಷ್ಠ ಗ್ರಂಥವೆಂದು ಪ್ರಶಂಸಿದ್ದಾರೆ.

ಘಜನೀ ಮಹಮ್ಮದನ ಜೊತೆಗಾರ ಆಲ್ಬರೂನಿ, ಅಕ್ಬರನ ಕಾಲದ ಫೈಜಿ ಗೀತೆಯನ್ನು ಮುಕ್ತ ಕಂಠದಿಂದ ಕೊಂಡಾಡಿದ್ದಾರೆ. ವಿಶ್ವಯುದ್ಧ ಸಂಘಟಕರಾದ ಹಿಟ್ಲರ್, ಮುಸೋಲಿನಿ ಇವರೂ ಭಗವದ್ಗೀತೆಯನ್ನು ಅಧ್ಯಯನ ಮಾಡಿದವರೇ ! ಮುಸೋಲಿನಿ ಪ್ರತಿದಿನ ಗೀತೆಯ ಹನ್ನೆರಡನೇ ಅಧ್ಯಾಯವನ್ನು ಪಠನ ಮಾಡುತ್ತಿದ್ದನಂತೆ !

ಈ ಕಾಲದಲ್ಲೂ ವಿಶ್ವವ್ಯಾಪಿಯಾಗಿ ಹಬ್ಬುತ್ತ, ಎಲ್ಲ ರಾಷ್ಟ್ರಗಳ ತತ್ತ್ವಚಿಂತಕರನ್ನು ಆಕರ್ಷಿಸುತ್ತ, ಲಕ್ಷಾನುಲಕ್ಷ ವ್ಯಾಖ್ಯಾನ-ಟೀಕೆ, ಭಾಷ್ಯಗಳನ್ನೂ, ವಿಚಾರ ಪ್ರಬಂಧಗಳನ್ನೂ ಹೊಂದುತ್ತಿರುವ ಶ್ರೀಮದ್ಭಗವದ್ಗೀತೆಗೆ ಪ್ರಪ್ರಥಮವಾಗಿ, ಸಮಗ್ರವಾಗಿ, ಇರುವ ಭಾಷ್ಯವೆಂದರೆ ಶ್ರೀ ಶಂಕರ ಭಗವತ್ಪಾದರರದು ಮಾತ್ರ. ಆದಿಕವಿ ವಾಲ್ಮೀಕಿ, ಆದಿಕಾವ್ಯ ರಾಮಾಯಣ ಎಂಬಂತೆ ಶ್ರೀಗೀತೆಗೆ ಶ್ರೀ ಶಂಕರರೆ ಆದಿಭಾಷ್ಯಕಾರರು. ಶ್ರೀ ಶಂಕರಭಾಷ್ಯವೇ ಆದಿ ಭಾಷ್ಯ. ಅವರಿಂದಲೇ ಗೀತೆ ಪ್ರಸ್ಥಾನ ತ್ರಯದಲ್ಲಿ ಏಕಮೇವಾದ್ವಿತೀಯ ಸ್ಥಾನವನ್ನು ಪಡೆದದ್ದು. ಸ್ವಯಂ ಸಿದ್ಧಮಹತ್ವ ಉಳ್ಳದ್ದಾದರೂ ಶ್ರೀ ಶಂಕರರು ತಮ್ಮ ವಿಚಾರದೋಹನಕ್ಕೆ ಸ್ವೀಕರಿಸಿದ್ದರಿಂದ ಗೀತೆಗೆ ಪ್ರತಿಷ್ಠೆಯ ಕೋಡು ಮೂಡಿಸಿತು. ವಿಶ್ವದ ಶ್ರೇಷ್ಠಾತಿಶ್ರೇಷ್ಠ ಮೇಧಾವಿಗಳಾದ ಶ್ರೀ ಶಂಕರಾಚಾರ್ಯರು ಗೀತೆಗೆ ನೀಡಿದ ಪ್ರತಿಷ್ಠೆಯಿಂದ ಮುಂದಿನ ಅನ್ಯಾನ್ಯ ಮತಾಚಾರ್ಯರೂ, ಚಿಂತಕರೂ, ಗೀತೆಯನ್ನು ತಮ್ಮ ಚಿಂತನೆಯ ಆಧಾರಗ್ರಂಥವಾಗಿ ಸ್ವೀಕರಿಸುವ ಪರಿಪಾಠವೇ ಉಂಟಾಯಿತು.

ಶ್ರೀ ಶಂಕರರು ಗೀತೆಗೆ ಭಾಷ್ಯವನ್ನು ತಮ್ಮ ವಿಚಾರಪ್ರತಿಪಾದನೆಗೆ ಎಂದೇ ಚಿಂತಿಸಲಿಲ್ಲ. ಆದರೆ ಗೀತೆ ಅನೇಕ ಅಪವ್ಯಾಖ್ಯಾನಗಳಿಂದ ದೂಷಿತವಾದದ್ದನ್ನು ಗಮನಿಸಿ ಗೀತೆಯ ನಿಜವಾದ ಅರ್ಥವನ್ನು ಲೋಕಕ್ಕೆ ತಿಳಿಸಿಕೊಡುವುದಕ್ಕಾಗಿ, ತನ್ಮೂಲಕ ಲೋಕವು ತಪ್ಪು ವಿಚಾರಕ್ಕೆ ಪಕ್ಕಾಗದೇ ಸರಿಯಾದ ಮಾರ್ಗವನ್ನು ಅನುಸರಿಸಲಿಕ್ಕಾಗಿ ಬರೆದರು. ಅವರ ಮಾತಿನಲ್ಲೇ ಹೇಳುವುದಾದರೆ–

"ತದಿದಂ ಗೀತಾಶಾಸ್ತ್ರಂ ಸಮಸ್ತ ವೇದಾರ್ಥ ಸಾರಸಂಗ್ರಹ ಭೂತಂ ದುರ್ವಿಜ್ಞೇಯಾರ್ಥಂ । ತದರ್ಥಾವಿಷ್ಕರಣಾಯ ಅನೇಕೈಃ ವಿವೃತ ಪದಪದಾರ್ಥ ವಾಕ್ಯಾರ್ಥನ್ಯಾಯಂ ಅಪಿ, ಅತ್ಯಂತ ವಿರುದ್ಧಾನೇಕಾರ್ಥತ್ವೇನ ಲೌಕಿಕೈಃ ಗೃಹ್ಯಮಾಣಂ ಉಪಲಭ್ಯ ಅಹಂ ವಿವೇಕತಃ ಅರ್ಥನಿರ್ಧಾರಣಾರ್ಥಂ ಸಂಕ್ಷೇಪತೋ ವಿವರಣಂ ಕರಿಷ್ಯಾಮಿ." "ಈ ಗೀತಾಶಾಸ್ತ್ರವು ಸಮಸ್ತ ವೇದಗಳ ಅರ್ಥದ ಸಾರಸಂಗ್ರಹವಾಗಿದೆ. ಆದರೆ ಇದರ ಅರ್ಥವನ್ನು ತಿಳಿಯುವುದು ಕಷ್ಟ. ಇದರ ಅರ್ಥವನ್ನು ಪ್ರಕಾಶಪಡಿಸಲು ಅನೇಕರು ಪದಚ್ಛೇದ ಪದಾರ್ಥ, ವಾಕ್ಯಾರ್ಥ, ನ್ಯಾಯಾದಿಗಳ ಮೂಲಕ ವಿವರಿಸಿದ್ದರೂ, ಲೋಕದ ಜನ ಅತ್ಯಂತ ವಿರುದ್ಧಾರ್ಥಗಳನ್ನೇ ಗ್ರಹಿಸುತ್ತಿರುವುದನ್ನು ಗಮನಿಸಿ ವಿವೇಕಪೂರ್ವಕವಾಗಿ ಗೀತೆಯ ಅರ್ಥವನ್ನು ನಿರ್ಧರಿಸಿ ಹೇಳಲು ಸಂಕ್ಷಿಪ್ತವಾಗಿ ವಿವರಿಸುತ್ತೇನೆ."

ಶ್ರೀ ಶಂಕರರ ದೃಷ್ಟಿಯಲ್ಲಿ ಗೀತೆ ಕೇವಲ ಅರ್ಜುನನನ್ನು ತಿದ್ದುವುದಕ್ಕೆ ಪ್ರಕಟವಾದದ್ದಲ್ಲ. ಭಗವಂತನ ಉದ್ದೇಶವೇ ಗೀತೆಯಲ್ಲಿ ಪ್ರಕಟವಾಗಿದೆ. ಇದನ್ನು ಹೀಗೆ ಸ್ಪಷ್ಟಪಡಿಸಿದ್ದಾರೆ– "ಭಗವಂತನು ಈ ಲೋಕವನ್ನು ಸೃಷ್ಟಿಸಿದನು. ಇದರ ಸ್ಥಿತಿಗಾಗಿ ಮತ್ತು ಪ್ರಾಣಿಗಳು ತಮ್ಮ ಉನ್ನತಿ ಮತ್ತು ಮುಕ್ತಿಯನ್ನು ಪಡೆಯಲಿಕ್ಕಾಗಿ

ಎರಡು ಬಗೆಯ ಧರ್ಮವನ್ನು ಸೃಷ್ಟಿಸಿದನು. ಒಂದು ಪ್ರವೃತ್ತಿರೂಪಧರ್ಮ. ಇನ್ನೊಂದು ನಿವೃತ್ತಿರೂಪಧರ್ಮ. ಮೊದಲನೆಯ ಪ್ರವೃತ್ತಿಧರ್ಮವನ್ನು ಮರೀಚಿ ಮುಂತಾದ ಪ್ರಜಾಪತಿಗಳಿಗೂ, ಎರಡನೆಯ ನಿವೃತ್ತಿಧರ್ಮವನ್ನು ಸನಕಾದಿ ಋಷಿಗಳಿಗೂ ಕಲಿಸಿದನು. ಆದರೆ ದೀರ್ಘಕಾಲದ ಪ್ರಭಾವದಿಂದ ಅನುಸರಿಸುವವರ ಹೃದಯದಲ್ಲಿ ನಾನಾ ಕಾಮನೆಗಳು ಉಂಟಾಗಿ ವಿವೇಕ-ವಿಜ್ಞಾನಗಳ ಹ್ರಾಸ ಉಂಟಾಗಿ, ಅಧರ್ಮವು ಪ್ರವೃದ್ಧವಾಗಿ ಧರ್ಮವನ್ನು ಹತ್ತಿಕ್ಕಿದಾಗ, ಲೋಕದ ಸ್ಥಿತಿಯ ರಕ್ಷಣೆಯು ಬ್ರಾಹ್ಮಣತ್ವದ ರಕ್ಷಣೆಯಿಂದ ಮಾತ್ರ ಸಾಧ್ಯ. ಏಕೆಂದರೆ ವರ್ಣಾಶ್ರಮಾದಿ ಧರ್ಮವು ಬ್ರಾಹ್ಮಣತ್ವಾಧೀನವಾಗಿದೆ. ಆದ್ದರಿಂದ ಆ ಬ್ರಾಹ್ಮಣತ್ವದ ರಕ್ಷಣೆಗಾಗಿ ಆದಿಕರ್ತನು ವಸುದೇವ-ದೇವಕಿಯರ ಪುತ್ರನಾಗಿ ಜನಿಸಿದನು. ವಿಶ್ವದ ಪ್ರಾಣಿಗಳ ಮೇಲಿನ ದಯೆಯಿಂದ ವೈದಿಕವಾದ ಪ್ರವೃತ್ತಿ-ನಿವೃತ್ತಿ ಧರ್ಮಗಳನ್ನು ಅರ್ಜುನನಿಗೆ ಉಪದೇಶಿಸಿದನು. ಅರ್ಜುನನಂಥವರು ಸ್ವೀಕರಿಸಿದರೆ ಧರ್ಮವು ಲೋಕವ್ಯಾಪಿಯಾಗಿ ಹಬ್ಬುತ್ತದೆ. ಏಕೆಂದರೆ "ಗುಣಾಧಿಕ್ಯೈಃ ಹಿ ಗೃಹೀತಃ ಅನುಷ್ಠೀಯಮಾನಃ ಚ ಧರ್ಮಃ ಪ್ರಚಯಂ ಗಮಿಷ್ಯತಿ" ಅಧಿಕ ಗುಣವಂತ ವ್ಯಕ್ತಿಗಳು ಪರಿಗ್ರಹಿಸಿ ಆಚರಿಸಿದ ಧರ್ಮವು ಅಧಿಕ ವಿಸ್ತಾರವನ್ನು ಪಡೆಯುತ್ತದೆ. ಆ ಧರ್ಮವನ್ನು ಭಗವಂತನು ಉಪದೇಶಿಸಿದಂತೆಯೇ ಸರ್ವಜ್ಞನೂ, ಭಗವದ್ರೂಪನೂ ಆದ ವೇದವ್ಯಾಸನು ಗೀತೆ ಎಂಬ ಏಳುನೂರು ಶ್ಲೋಕಗಳಿಂದ ಗ್ರಂಥರೂಪಗೊಳಿಸಿದನು."

ಈ ಮೇಲಿನ ಮಾತುಗಳಿಂದ ಶ್ರೀ ಶಂಕರರು ಗೀತೆಯ ಆವಿರ್ಭಾವ, ಅದರ ಸ್ವರೂಪ, ಉದ್ದೇಶ, ವ್ಯಾಪ್ತಿ ಇವುಗಳನ್ನು ಸ್ಪಷ್ಟಪಡಿಸಿದ್ದಾರೆ. ಇದರಿಂದ ಶ್ರೀ ಕೃಷ್ಣನು ಶ್ಲೋಕರೂಪವಾಗಿಯೇ ಹೇಳಿದನೆ ? ಯುದ್ಧಕ್ಕಾಗಿ ಬಂದ ಅರ್ಜುನನಿಗೆ ಇವುಗಳನ್ನೆಲ್ಲ ಏಕೆ ಉಪದೇಶಿಸಿದನು ? ಆಗ ಇಷ್ಟೊಂದು ಕಾಲಾವಕಾಶವಿತ್ತೆ ? ಮುಂತಾದ ಪ್ರಶ್ನೆಗಳಿಗೂ ಉತ್ತರ ದೊರಕುತ್ತದೆ.

ಆದಿಶಂಕರರು ಗೀತೆಗೆ ಬರೆದ ಅರ್ಥವಿವರಣೆಗೆ "ಭಾಷ್ಯ"ವೆಂದು ಹೆಸರು. ಭಾಷ್ಯವೆಂದರೆ– "ಸೂತ್ರಸ್ಥಂ ಪದಮಾದಾಯ ವಾಕ್ಯೈಃ ಸೂತ್ರಾನು ಸಾರಿಭಿಃ । ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥ ಸೂತ್ರಗಳಲ್ಲಿ (ಮೂಲಗ್ರಂಥಗಳಲ್ಲಿ) ಇರುವ ಪದಗಳನ್ನು ತೆಗೆದುಕೊಂಡು ಮೂಲ ಗ್ರಂಥಕ್ಕೆ ಅನುಗುಣವಾದ ವಾಕ್ಯಗಳನ್ನು ವಿವರಿಸುತ್ತ, ತಾವು ಪ್ರಯೋಗಿಸಿದ ಪದಗಳನ್ನೂ ವಿವರಿಸುವುದಕ್ಕೆ "ಭಾಷ್ಯ"ವೆಂದು ಹೆಸರು. ಶಂಕರಭಾಷ್ಯವು ಈ ಲಕ್ಷಣಕ್ಕೆ ಅನುಗುಣವಾಗಿಯೇ ಇದೆ.

ಇದು ಭಾಷ್ಯ ಪ್ರಕಾರದ ಸಾಮಾನ್ಯ ಲಕ್ಷಣ ಮಾತ್ರ. ಶಾಂಕರಭಾಷ್ಯದಲ್ಲಿ ಈ ಲಕ್ಷಣದ ಜೊತೆಗೆ "ಪದಚ್ಛೇದಃ ಪಾದಾರ್ಥೋಕ್ತಿಃ ವಿಗ್ರಹೋ ವಾಕ್ಯಯೋಜನಾ । ಆಕ್ಷೇಪಸ್ಯ ಸಮಾಧಾನಂ ವ್ಯಾಖ್ಯಾನಂ ಪಂಚ ಲಕ್ಷಣಂ" "ಪದಗಳನ್ನು ಬಿಡಿಸುವುದು,

ಪದದ ಅರ್ಥವನ್ನು ಹೇಳುವುದು, ಸಮಸ್ತ ಪದಗಳ ವಿಗ್ರಹವಾಕ್ಯವನ್ನು ತೋರಿಸುವುದು, ಪದಗಳನ್ನು ಕಾರಣಾನುಗುಣವಾಗಿ ಹೊಂದಿಸಿ ವಾಕ್ಯರೂಪವನ್ನು ನೀಡುವುದು, ಆಕ್ಷೇಪಗಳನ್ನು ಸಮಾಧಾನ ಮಾಡುವುದು" ಎಂಬ ವ್ಯಾಖ್ಯಾನ ವಿಧಾನವನ್ನೂ ಅನುಸರಿಸಲಾಗಿದೆ. "ವಾಕ್ಯಂಯೋಜನಾ" ಎಂಬ ಅಂಶವು ಮಾತ್ರ ಕಾಣಬರದು.

ಭಗವದ್ಗೀತೆಯ ಶ್ಲೋಕಗಳಲ್ಲಿಯ ಪದಗಳಿಗೆ ಇದ್ದ ಕ್ರಮದಲ್ಲೇ ಅರ್ಥವನ್ನು ಬರೆಯಲಾಗಿದೆ. ಅಗತ್ಯವಿದ್ದಲ್ಲಿ ಮಾತ್ರ ಕೊನೆಯಲ್ಲಿ ತಮ್ಮ ವಾಕ್ಯಗಳಿಂದ ಅಭಿಪ್ರಾಯವನ್ನು ಸಂಗ್ರಹಿಸಿ ಹೇಳಲಾಗಿದೆ. ಅತ್ಯಂತ ಸರಳವಾದ ಪದಗಳಿಗೆ ಅರ್ಥವನ್ನು ಬರೆಯುವುದಿಲ್ಲ. ಅಗತ್ಯವಿದ್ದಾಗ ಶ್ಲೋಕದ ಪೂರ್ವದಲ್ಲಿ ಪೂರ್ವಪಕ್ಷ ಅಥವಾ ಸಿದ್ಧಾಂತದ ಸ್ವವಾಕ್ಯಗಳ ಅವತರಣಿಕೆಯನ್ನು ನೀಡುತ್ತಾರೆ.

"ಸನ್ಯಾಸ ಕರ್ಮಯೋಗಯೋಃ ಭಿನ್ನಪುರುಷಾನುಷ್ಠೇಯಯೋಃ ವಿರುದ್ಧಯೋಃ ಫಲೇ ಅಪಿ ವಿರೋಧೋಯುಕ್ತಃ, ನ ತು ಉಭಯೋಃ ನಿಶ್ರೇಯ ಸಕರತ್ವಂ ಏವ ಇತಿ ಪ್ರಾಪ್ತೇ—" ಇದು ಅವತರಣಿಕೆ.

ಸಾಂಖ್ಯಯೋಗೌ ಪೃಥ್‌ಗ್ ಬಾಲಾಃ ಪ್ರವದಂತಿ ನ ಪಂಡಿತಾಃ ।
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಂ ॥

ಸಾಂಖ್ಯಯೋಗೌ ಪೃಥ್‌ಗ್ ವಿರುದ್ಧಬಿನ್ನಫಲೌ ಬಾಲಾಃ ಪ್ರವದಂತಿ ನ ಪಂಡಿತಾಃ । **ಪಂಡಿತಾಸ್ತು ಜ್ಞಾನಿನಃ ಏಕಂ ಫಲಂ ಅವಿರುದ್ಧಂ ಇಚ್ಛಂತಿ । ಕಥಂ ?** ಏಕಮಪಿ **ಸಾಂಖ್ಯಯೋಗಯೋಃ** ಸಮ್ಯಕ್ ಆಸ್ಥಿತಃ **ಸಮ್ಯಕ್ ಅನುಷ್ಠಿತವಾನ್ ಇತ್ಯರ್ಥಃ ।** ಉಭಯೋಃ ವಿಂದತೇ ಫಲಂ । **ಉಭಯೋಃ ತದೇವ ಹಿ ನಿಃಶ್ರೇಯಸಂ ಫಲಂ । ಅತಃ ನ ಫಲೇ ವಿರೋಧೋಽಸ್ತಿ.** ಇದು ಶ್ಲೋಕಾರ್ಥ.

(ಆಕ್ಷೇಪ)— ನನು ಸನ್ಯಾಸಕರ್ಮಯೋಗಶಬ್ದೇನ ಪ್ರಸ್ತುತ್ಯ ಸಾಂಖ್ಯಯೋಗಯೋಃ ಫಲೈಕತ್ವಂ ಕಥಂ ಇಹ ಅಪ್ರಕೃತಂ ಬ್ರವೀತಿ ?

(ಸಮಾಧಾನ)— ನೈಷ ದೋಷಃ । ಯದ್ಯಪಿ ಅರ್ಜುನೇನ ಸನ್ಯಾಸಂ ಕರ್ಮಯೋಗಂ ಚ ಕೇವಲಂ ಅಭಿಪ್ರೇತ್ಯ ಪ್ರಶ್ನಃ ಕೃತಃ । ಭಗವಾಂಸ್ತು ತದ ಪರಿತ್ಯಾಗೇನೈವ ಸ್ವಾಭಿಪ್ರೇತಂ ಚ ವಿಶೇಷಂ ಸಂಯೋಜ್ಯ ಶಬ್ದಾಂತರವಾಚ್ಯತಯಾ ಪ್ರತಿವಚನಂ ದದೌ— "ಸಾಂಖ್ಯಯೋಗೌ." ಇತೀ ತಾವೇವ ಸಂನ್ಯಾಸಕರ್ಮಯೋಗೌ ಜ್ಞಾನತದುಪಾಯ ಸಮಬುದ್ಧಿತ್ವಾದ ಸಂಯುಕ್ತಾ ಸಾಂಖ್ಯಯೋಗ ಶಬ್ದವಾಚ್ಯಾ ಇತಿ ಭಗವತೋ ಮತಂ । ಅತಃ ನ ಅಪ್ರಕೃತ ಪ್ರಕ್ರಿಯಾ ಇತಿ ।

(ಅವತರಣಿಕೆ)— ಸನ್ಯಾಸ-ಕರ್ಮಯೋಗ ಇವು ಬೇರೆ ಬೇರೆಯ ವ್ಯಕ್ತಿಗಳು ಮಾಡತಕ್ಕವುಗಳು (ಆದ್ದರಿಂದ ಪರಸ್ಪರ) ವಿರುದ್ಧವಾಗಿರುತ್ತವೆ. (ಆದಕಾರಣದಿಂದ) ಫಲದಲ್ಲಿಯೂ (ಅನ್ಯೋನ್ಯ) ವಿರೋಧವು ಯುಕ್ತವಾಗಿರುತ್ತದೆ. ಆದ್ದರಿಂದ ಎರಡೂ

ನಿಃಶ್ರೇಯಸ್ಸನ್ನುಂಟು ಮಾಡುವವು ಎಂಬುದು (ನ್ಯಾಯವಲ್ಲ) ಎಂದು ಆಕ್ಷೇಪವು ಬಂದಾಗ (ಭಗವಂತನು ಈ ಉತ್ತರವನ್ನು) ಹೇಳುತ್ತಾನೆ.

(ಶ್ಲೋಕ) – ಸಾಂಖ್ಯಯೋಗಗಳು ಬೇರೆ ಬೇರೆ ಎಂದು ಹುಡುಗರು ಹೇಳುತ್ತಾರೆಯೇ ಹೊರತು ಪಂಡಿತರು ಹೇಳುವುದಿಲ್ಲ. ಒಂದನ್ನೇ ಚೆನ್ನಾಗಿ ಇಟ್ಟುಕೊಂಡಿರುವವನು ಎರಡರ ಫಲವನ್ನೂ ಪಡೆಯುತ್ತಾನೆ.

(ಶ್ಲೋಕಾರ್ಥ ಭಾಷ್ಯ) – ಸಾಂಖ್ಯಯೋಗಗಳು ಬೇರೆ ಬೇರೆ ವಿರುದ್ಧವಾದ ಬೇರೆ ಫಲವುಳ್ಳವು ಎಂದು ಬಾಲರು ಹೇಳುತ್ತಾರೆಯೇ ಹೊರತು ಪಂಡಿತರಲ್ಲ. ಪಂಡಿತರು ಎಂದರೆ ಜ್ಞಾನಿಗಳು ವಿರುದ್ಧವಲ್ಲದ ಒಂದೇ ಫಲವನ್ನು ಅಭಿಪ್ರಾಯಪಡುತ್ತಾರೆ. ಹೇಗೆ ? ಸಾಂಖ್ಯಯೋಗಗಳಲ್ಲಿ ಒಂದನ್ನು ಚೆನ್ನಾಗಿ ಹೊಂದಿದವನು ಅಂದರೆ ಚೆನ್ನಾಗಿ ಅನುಷ್ಠಾನ ಮಾಡಿದವನು ಎರಡರ ಫಲವನ್ನೂ ಪಡೆಯುತ್ತಾನೆ. ಎರಡಕ್ಕೂ ಅದೇ ಮೋಕ್ಷವೇ ಫಲ. ಆದ್ದರಿಂದ ಫಲದಲ್ಲಿ ವಿರೋಧವಿಲ್ಲ.

(ಆಕ್ಷೇಪ) – ಸನ್ಯಾಸ ಕರ್ಮಯೋಗ ಶಬ್ದಗಳಿಂದ ಪ್ರಾರಂಭಿಸಿ ಸಾಂಖ್ಯಯೋಗಗಳಿಗೆ ಒಂದೇ ಫಲವೆಂದು ಅಪ್ರಕೃತವಾದದ್ದನ್ನು ಹೇಳುತ್ತಾನೆ ! (ಇದು) ಹೇಗೆ ?

(ಸಮಾಧಾನ) – ಇದು ದೋಷವಲ್ಲ. ಅರ್ಜುನನು ಕೇವಲ ಸಂನ್ಯಾಸ ಕರ್ಮಯೋಗಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಪ್ರಶ್ನೆಮಾಡುತ್ತಾನೆ. ಭಗವಂತನು ಅದನ್ನು ಬಿಡದೇ ತನ್ನ ವಿಶೇಷ ಅಭಿಪ್ರಾಯವನ್ನೂ ಸೇರಿಸಿ 'ಸಾಂಖ್ಯಯೋಗೌ...." ಎಂದು ಶಬ್ದಾಂತರದಿಂದ ಉತ್ತರವನ್ನು ನೀಡಿದನು. ಆ ಸಂನ್ಯಾಸಕರ್ಮಯೋಗಗಳೇ ಜ್ಞಾನದಿಂದಲೂ ಅದಕ್ಕೆ ಸಾಧನವಾದ ಸಮಬುದ್ಧಿತ್ವವೇ ಮುಂತಾದ್ದರಿಂದ ಕೂಡಿದರೆ ಸಾಂಖ್ಯಯೋಗ ಎಂಬ ಶಬ್ದಗಳಿಂದ ಕರೆಯಲ್ಪಡುವವು ಎಂದು ಭಗವಂತನ ಅಭಿಪ್ರಾಯ. ಆದ್ದರಿಂದ ಅಪ್ರಕೃತ ಪ್ರಕ್ರಿಯೆಯೇನೂ ಅಲ್ಲ."

ಈ ಮೇಲಿನ ಭಾಗದಿಂದ ಭಾಷ್ಯ ಲಕ್ಷಣವನ್ನೂ ಶ್ರೀ ಶಂಕರರ ಶೈಲಿಯ ಆಪಾತ ಜ್ಞಾನವನ್ನೂ ಹೊಂದಿರಬಹುದು. ಸಂಸ್ಕೃತ ವಾಙ್ಮಯದಲ್ಲೇ ಶ್ರೀ ಶಾಂಕರ ಭಾಷ್ಯದ ಶೈಲಿಯು ಪರಮೋತ್ಕೃಷ್ಟವಾದದ್ದು. ಗದ್ಯವೇ ಆದರೂ ಪದ್ಯದ ಲಯ, ನಾದ, ಲಾಲಿತ್ಯ, ಮಾಧುರ್ಯಗಳನ್ನು ಹೊಂದಿ ಬಾಯಿ ಚಪ್ಪರಿಸಿ ಓದುವಂತೆ ಮಾಡುತ್ತದೆ. ಕಾವ್ಯವನ್ನು ಓದುವ ಆನಂದವು ದೊರಕುತ್ತದೆ. ಶಾಂಕರಭಾಷ್ಯಕ್ಕೆ ಭಾಮತೀ ವ್ಯಾಖ್ಯಾನವನ್ನು ಬರೆದ ಶ್ರೀ ವಾಚಸ್ಪತಿ ಮಿಶ್ರರು– "ಭಾಷ್ಯಂ ಪ್ರಸನ್ನ ಗಂಭೀರಂ" ಶ್ರೀಭಗವತ್ಪಾದರ ಭಾಷ್ಯವು ಪ್ರಸನ್ನವೂ ಗಂಭೀರವೂ ಆಗಿದೆ ಎಂದು ಬಣ್ಣಿಸಿದ್ದಾರೆ. ಪ್ರಸನ್ನತೆ ಕಾವ್ಯಶೈಲಿಯ ವಿಶೇಷ ಪ್ರಸಾದಗುಣ.

ಎಲ್ಲೂ ಪದಗಳ ಅರ್ಥಗಳ ಕ್ಲೇಶವಿರಕೂಡದು. ವಾಕ್ಯಗಳಲ್ಲಿ ಪದಾನ್ವಯವು ಕಷ್ಟವಾಗಿ ಅಪಾರ್ಥ, ಅನ್ಯಾರ್ಥಗಳಿಗೆ ಎಡೆಯಾಗಕೂಡದು. ಎಲ್ಲಕ್ಕಿಂತ ಮಿಗಿಲಾಗಿ ಓದುವಾಗ ಆನಂದವಾಗಬೇಕು. ಗಂಭೀರತೆ ಇನ್ನೊಂದು ಗುಣ. ನ್ಯೂನವೂ ಅಧಿಕವೂ ಆಗದಂತೆ ಪದ ವಾಕ್ಯಗಳ ಪ್ರಯೋಗ, ಅರ್ಥ ಸಮೃದ್ಧಿ, ಅಮಂಗಲ, ಅಶ್ಲೀಲಗ್ರಾಮ್ಯ ಪ್ರಯೋಗರಾಹಿತ್ಯ, ಉದಾರತೆ, ಆಳವಾದ ವಿಚಾರ ಇವು ಗಂಭೀರ ಗುಣಗಳು. ಪ್ರಸನ್ನತೆ, ಗಾಂಭೀರ್ಯವೆಂಬ ಈ ಎರಡೂ ಗುಣಗಳು ಶಾಂಕರಭಾಷ್ಯವಲ್ಲಿ ಸಾದ್ಯಂತವಾಗಿ ಮೈಗೂಡಿ ಬಂದಿವೆ. ವಾದ-ವಿವಾದ ವಿಷಯಗಳಲ್ಲೂ ಸ್ವಮತ ಪ್ರತಿಷ್ಠಾಪನೆಯ ಹಮ್ಮು, ಪರಮತ ಖಂಡನೆಯ ಬಿಮ್ಮು ಇಲ್ಲ. ಪೂರ್ವಪಕ್ಷವನ್ನೂ ಉದಾರವಾಗಿ ಸಕಲ ಪರಿಕರದೊಡನೆ ಪ್ರಸ್ತಾಪಿಸುತ್ತಾರೆ, ಇದೇ ಸಿದ್ಧಾಂತವೇನೋ ಎಂಬ ಭ್ರಮೆ ಬರುವಂತೆ, ಅಥವಾ ಈ ಪೂರ್ವ ಪಕ್ಷವು ಅಕಾವ್ಯವಾದದ್ದು ಎನ್ನುವಂತೆ ದೃಢವಾದ ಪ್ರಮಾಣ ಪುರಸ್ಸರವಾದ ಉದಾಹರಣ ಭೂಯಿಷ್ಠವಾದ ವಿಷಯ ಪೋಷಕವಾದ ವಾದವನ್ನು ಮಂಡಿಸುತ್ತಾರೆ. ಸಿದ್ಧಾಂತವನ್ನೂ ಗಾಂಭೀರ್ಯಕ್ಕೆ ಚ್ಯುತಿ ಬರದಂತೆ, ಆಗ್ರಹಕ್ಕೆ ಅವಕಾಶ ಮಾಡದೇ ಯುಕ್ತಿ ಯುಕ್ತವಾಗಿ ಪ್ರಾಮಾಣಿಕವಾಗಿ ಅಗತ್ಯಾನುಗುಣ ವೈದಿಕ–ಲೌಕಿಕ ಉದಾಹರಣ ಪುರಃಸರವಾಗಿ ಮಂಡಿಸುತ್ತಾರೆ. ಶಾಸ್ತ್ರಗ್ರಂಥಗಳು ಖಂಡನ ಮಂಡನಮಯುವಾದವುಗಳು. ಎಲ್ಲರೂ ಖಂಡನ-ಮಂಡನಗಳಲ್ಲಿ ಸಮರ್ಥರಾಗಿರುವುದಿಲ್ಲ. ಕೆಲವರು ಖಂಡನದಲ್ಲಿ ಸಮರ್ಥರಾದರೆ ಮಂಡನದಲ್ಲಿ ಪೇಲವರಾಗುತ್ತಾರೆ. ಕೆಲವರಿಗೆ ಮಂಡನಾಸಾಮರ್ಥ್ಯವಿದ್ದಷ್ಟು ಖಂಡನಾ ಸಾಮರ್ಥ್ಯವಿರದು. ಶ್ರೀ ಶಂಕರಾಚಾರ್ಯರು ಮಾತ್ರ ಈ ಎರಡರಲ್ಲೂ ಸಿದ್ಧಹಸ್ತರು. ಆದ್ದರಿಂದಲೇ ಅಲ್ಪವಯಸ್ಸಿನಲ್ಲೇ ಶಾಸ್ತ್ರದಿಗ್ವಿಜಯವನ್ನು ಸಾಧಿಸಲು ಅವರು ಸಮರ್ಥರಾದರು. ಕಾವ್ಯಕೋಮಲ, ಶಾಸ್ತ್ರಕರ್ಕಶವೆಂದು ಸಾಹಿತ್ಯಾಭ್ಯಾಸಿಗಳ ಅನುಭವ. ಆದರೆ ಶ್ರೀ ಶಾಂಕರರ ಭಾಷ್ಯವು ಶಾಸ್ತ್ರವಾದರೂ ಕಾವ್ಯದ ಸೌಂದರ್ಯವನ್ನೂ, ಸೌಕುಮಾರ್ಯವನ್ನೂ ಹೊಂದಿದೆ. ಭಾಷ್ಯದ ಉದ್ದಕ್ಕೂ ಅಲ್ಲಲ್ಲಿ ಕೋಲ್ಮಿಂಚಿನಂತೆ ತಿಳಿಹಾಸ್ಯದ ನುಡಿಗಳು ಚಿಮ್ಮುತ್ತವೆ. "ನಹಿ ಪಿತ್ಥಪ್ರಶಮನಾರ್ಥಿನೋ ವೈದ್ಯೇನ ಮಧುರಂಶೀತಂಚ ಭೋಕ್ತವ್ಯಂ ಇತಿ ಉಪದಿಷ್ಟೇ ತಯೋರನ್ಯತರತ್ ಬ್ರೂಹಿ ಇತಿ ನ ಸಂಭವತಿ." ಪಿತ್ಥಶಾಂತಿಗೆ ಸಿಹಿ ಮತ್ತು ಶೀತವಾದದ್ದನ್ನು ಉಣ್ಣಬೇಕು ಎಂದು ವೈದ್ಯರು ಹೇಳಿದಾಗ, ಅವೆರಡರಲ್ಲಿ ಯಾವುದಾದರೊಂದೇ ಹೇಳಿ ಎನ್ನುವುದಾಗದು" "ವಂಧ್ಯಾಯಾಃ ಪುತ್ರತ್ಯಾಗಃ" "ಬಂಜೆ ಮಗನನ್ನು ಬಿಟ್ಟಳು" "ಧೇನುಃ ಅಪಿಗೌಃ ಅಗೌಃ ಕ್ಷೀರಾಖ್ಯಫಲಂ ನ ಪ್ರಯಚ್ಛತಿ." ಹಾಲು ಕೊಡದ ಹಸು ಹಸುವಾದರೂ ಹಸುವಲ್ಲ ಇತ್ಯಾದಿ.

ಶಾಬರಭಾಷ್ಯ, ಪಾತಂಜಲಭಾಷ್ಯ, ಶಾಂಕರಭಾಷ್ಯ ಈ ಮೂರನ್ನೇ ಸಂಸ್ಕೃತ ಸಾಹಿತ್ಯದ ವಿಶ್ವಮಟ್ಟಕ್ಕೆ ನಿಲ್ಲುವ ಶ್ರೇಷ್ಠ ಭಾಷ್ಯವೆಂದು ವಿದ್ವಾಂಸರು ಕೊಂಡಾಡುತ್ತಾರೆ.

ಈ ಮೂರರಲ್ಲೂ ಭಾಷೆಯ ಮತ್ತು ವಿಷಯ ಗೌರವದ ದೃಷ್ಟಿಯಿಂದ ಶಾಂಕರ ಭಾಷ್ಯವೇ ಮಿಗಿಲೆಂದು ಭಾವಿಸುತ್ತಾರೆ.

ಶ್ರೀ ಶಾಂಕರ ಭಾಷ್ಯದ ವಿಷಯ ಪ್ರತಿಪಾದನೆಯ ಸರಣಿ ಮೂರು ಬಗೆಯದು. ನ್ಯಾಯವಾಕ್ಯ ಪ್ರಯೋಗ ಶೈಲಿ. ಪ್ರಶ್ನೋತ್ತರ ಶೈಲಿ ಮತ್ತು ವಿವರಣ ಶೈಲಿ. ಗೀತಾ ಭಾಷ್ಯದಲ್ಲಿ ಈ ಮೂರೂ ಬಗೆಯನ್ನು ಕಾಣಬಹುದು.

ಭಗವದ್ಗೀತೆಯು ಉಪನಿಷತ್ತುಗಳನ್ನೇ ಪ್ರಧಾನ ಆಧಾರವಾಗಿ ಅವಲಂಬಿಸಿ ಕರ್ಮ, ಭಕ್ತಿ, ಧ್ಯಾನ, ಯಜ್ಞ, ಜ್ಞಾನ ಇವುಗಳನ್ನು ಪರಾಮರ್ಶಿಸಿ, ಇವುಗಳಲ್ಲಿ ಸಾಧನ-ಸಾಧ್ಯಗಳನ್ನು ನಿರ್ಣಯಿಸುತ್ತದೆ. ಇವುಗಳಲ್ಲಿ ಭಗವದ್ಗೀತೆಯು ನಿರ್ಣಯಿಸುವ ಸಾಧನಗಳು ಯಾವವು ? ಸಾಧ್ಯವು ಯಾವುದು ? ಎನ್ನುವ ವಿಚಾರದಲ್ಲೇ ಅಭಿಪ್ರಾಯಭೇದವು ತಲೆದೋರಿ ಶ್ರೀ ಶಂಕರಾಚಾರ್ಯರು ಗೀತೆಯ ನಿಜವಾದ ಅರ್ಥವನ್ನು ನಿಶ್ಚಯಿಸಿದರು. ಜ್ಞಾನ ಕರ್ಮವೆರಡನ್ನೂ ಸಮಾನವಾಗಿ ಸೇರಿಸಿಕೊಳ್ಳುವುದರಿಂದ ಕೈವಲ್ಯ ಪ್ರಾಪ್ತಿಯಾಗುತ್ತದೆ ಎಂಬುದು ಶ್ರೀ ಶಂಕರ ಪೂರ್ವದ ವ್ಯಾಖ್ಯಾನಕಾರರೊಬ್ಬರ ಮತ. ಇವರೊಬ್ಬ ವೃತ್ತಿಕಾರರು. ಇವರು ವಿಶಿಷ್ಟಾದ್ವೈತದಲ್ಲಿ ವರ್ಣಿತರಾದ ಬೋಧಾಯನರೇ, ಅಥವಾ ಏಕಾಯನ ಸಂಪ್ರದಾಯದವರಾದ ಭರ್ತೃ ಪ್ರಪಂಚರೇ ಎಂದು ನಿರ್ಣಯಿಸುವುದು ಕಷ್ಟ.

ಇನ್ನೊಂದು ಮತ –ಕ್ಷೇತ್ರಜ್ಞನಾದ ಈಶ್ವರನನ್ನು ಧ್ಯಾನ ಮಾಡುವುದರಿಂದ ಸ್ವಸ್ವರೂಪ ಪ್ರಾಪ್ತವಾಗುತ್ತದೆ. ಈ ವಾದವೂ ಯಾರದೆಂದು ಸ್ಪಷ್ಟವಾಗಿ ತಿಳಿಯದು.

ಶ್ರೀ ಶಂಕರರು ಗೀತಾಭಾಷ್ಯದಲ್ಲಿ ಈ ಎರಡು ವಾದಗಳನ್ನೇ ಪ್ರಮುಖವಾಗಿ ಖಂಡಿಸಿದ್ದಾರೆ. ಶ್ರುತ್ಯುಕ್ತಕರ್ಮಗಳನ್ನು ಮಾಡಲೇಬೇಕಾಗಿರುವುದರಿಂದ, ಕರ್ಮವನ್ನು ಬಿಡುವಂತಿಲ್ಲ. ಮೋಕ್ಷಕ್ಕೆ ಜ್ಞಾನವು ಅವಶ್ಯವಾದದ್ದು. ಆದ್ದರಿಂದ ಜ್ಞಾನಕರ್ಮ ಸಮುಚ್ಚಯದಿಂದ ಕೈವಲ್ಯವೆಂದು ಇವರ ವಾದ. ಕಾಮ್ಯಕರ್ಮಗಳನ್ನು ಬಿಟ್ಟರೂ ನಿತ್ಯಕರ್ಮಗಳನ್ನು ಬಿಡುವಂತಿಲ್ಲ. ಪ್ರತ್ಯವಾಯ ಉಂಟಾಗುತ್ತದೆ. ಒಟ್ಟಿನಲ್ಲಿ ಕರ್ಮಜ್ಞಾನ ಸಮುಚ್ಚಯವನ್ನು ಒಪ್ಪಬೇಕು ಎಂದು ವಾದಿಸುತ್ತಾರೆ.

ಇನ್ನೂ ಕೆಲವರು ಜ್ಞಾನವೂ ಉಪಾಸನಾರೂಪವಾದದ್ದು ಎಂದು ಭಾವಿಸಿ ಧ್ಯಾನಯೋಗದಿಂದ ಮುಕ್ತಿ ಎಂದು ಭಾವಿಸುತ್ತಾರೆ. ಕರ್ಮಣ್ಯೇ ವಾಧಿಕಾರಸ್ತೇ..... ಕುರುಕರ್ಮೈವ,..... ಸಂಗ್ರಾಮಂ ಧರ್ಮ್ಯಂ ನ ಕರಿಷ್ಯಸಿ, ಮುಂತಾದ ಗೀತಾವಾಕ್ಯಗಳನ್ನು ಉದಾಹರಿಸುತ್ತಾರೆ.

ಶ್ರೀ ಶಂಕರರು ಗೀತೆಯ ಮತ್ತು ಉಪನಿಷತ್ತುಗಳ ಉದಾಹರಣೆಗಳಿಂದಲೂ, ನ್ಯಾಯದಿಂದಲೂ ಕರ್ಮಾಧಿಕಾರವೇ ಬೇರೆ ಜ್ಞಾನಾಧಿಕಾರವೇ ಬೇರೆ ಎನ್ನುವುದನ್ನು ಸ್ಪಷ್ಟಪಡಿಸುತ್ತಾರೆ. ಸಮಸ್ತ ಗೀತೆಯನ್ನು ಪರಾಮರ್ಶಿಸಿ ಗೀತೆಯ

ಪರಮೋಪದೇಶವೇನು ? ಗೀತೆಯ ತಾತ್ಪರ್ಯವೇನು ? ಎನ್ನುವುದನ್ನು ಸಾಧಾರವಾಗಿ ನಿರ್ಣಯಿಸಿಕೊಟ್ಟಿದ್ದಾರೆ.

"ತಸ್ಯ ಅಸ್ಯ ಗೀತಾಶಾಸ್ತ್ರಸ್ಯ ಸಂಕ್ಷೇಪತಃ ಪ್ರಯೋಜನಂ ಪರಂ ನಿಶ್ರೇಯಸಂ ಸಹೇತುಕಸ್ಯ ಸಂಸಾರಸ್ಯ ಅತ್ಯಂತೋ ಪರಮ ಲಕ್ಷಣಂ । ತಚ್ಚ ಸರ್ವಕರ್ಮ ಸನ್ಯಾಸ ಪೂರ್ವಕಾತ್ ಆತ್ಮಜ್ಞಾನನಿಷ್ಠಾರೂಪಾತ್ ಧರ್ಮಾತ್ ಭವತಿ".

"ಸಂಕ್ಷೇಪವಾಗಿ ಈ ಗೀತಾಶಾಸ್ತ್ರದ ಪ್ರಯೋಜನವೆಂದರೆ, ಕಾರಣ ಸಹಿತವಾದ ಸಂಸಾರದ ಸಂಪೂರ್ಣ ಉಪರತಿ ರೂಪವಾದ ನಿಃಶ್ರೇಯಸ್ಸು ಅಂದರೆ ಮೋಕ್ಷ. ಆ ಮೋಕ್ಷಪ್ರಾಪ್ತಿಯು ಸರ್ವಕರ್ಮ ಸನ್ಯಾಸಪೂರ್ವಕವಾದ ಆತ್ಮಜ್ಞಾನನಿಷ್ಠಾರೂಪವಾದ ಧರ್ಮದಿಂದ ಉಂಟಾಗುತ್ತದೆ".

ಗೀತೆಯಲ್ಲಿ ಭಗವಂತನು ಎರಡು ಧರ್ಮಗಳನ್ನು ಹೇಳಿದ್ದಾನೆ. ಪ್ರವೃತ್ತಿ ಧರ್ಮ ಮತ್ತು ನಿವೃತ್ತಿಧರ್ಮ. ಈ ಎರಡು ಧರ್ಮದ ಅಧಿಕಾರಿಗಳು ಬೇರೆ. ಆದರೆ– "ಅಭ್ಯುದಯಾರ್ಥಃ ಅಪಿ ಯಃ ಪ್ರವೃತ್ತಿ ಲಕ್ಷಣೋಧರ್ಮಃ ವರ್ಣಾಶ್ರಮಾನ್ ಉದ್ದಿಶ್ಯ ವಿಹಿತಃ, ಸಃದೇವಾದಿಸ್ಥಾನ ಹೇತುಃ ಅಪಿ ಸನ್ ಈಶ್ವರಾರ್ಪಣಬುಧ್ಯಾ ಅನುಷ್ಠೀಯ ಮಾನಃ ಸತ್ವಶುದ್ಧನೇ ಭವತಿ ಫಲಾಭಿಸಂಧಿ ವರ್ಜಿತಃ । ಶುದ್ಧಸತ್ವಸ್ಯಚ ಜ್ಞಾನನಿಷ್ಠಾ ಪ್ರಾಪ್ತಿದ್ವಾರೇಣ, ಜ್ಞಾನೋತ್ಪತ್ತಿಹೇತುತ್ವೇನ ಚ ನಿಃಶ್ರೇಯಸ ಹೇತುತ್ವಮಪಿ ಪ್ರತಿಪದ್ಯತೇ ।

"ಸಾಂಸಾರಿಕ ಉನ್ನತಿಗೆ ಕಾರಣವಾಗಬಲ್ಲ ಪ್ರವೃತ್ತಿಧರ್ಮವು ವರ್ಣಾಶ್ರಮಗಳಿಗೆ ಹೇಳಲ್ಪಟ್ಟಿದೆ. ಅದರಿಂದ ಸ್ವರ್ಗಾದಿ ಪ್ರಾಪ್ತಿಯಾಗುತ್ತದೆ. ಆದರೆ ಫಲಾಕಾಂಕ್ಷೆ ಇಲ್ಲದೆ, ಈಶ್ವರಾರ್ಪಣ ಬುದ್ಧಿಯಿಂದ ಆಚರಿಸಿದರೆ ಅಂತಃಕರಣ ಶುದ್ಧಿಗೆ ಕಾರಣವಾಗುತ್ತದೆ. ಅಂತಃಕರಣ ಶುದ್ಧನಾದವನಿಗೆ ಜ್ಞಾನನಿಷ್ಠಾ ಯೋಗ್ಯತೆಯನ್ನು ನೀಡುವುದರ ಮೂಲಕ ಜ್ಞಾನೋತ್ಪತ್ತಿಗೆ ಕಾರಣವಾಗುವುದರಿಂದ ಪ್ರವೃತ್ತಿಧರ್ಮಗಳಿಗೂ (ಕರ್ಮಯೋಗಕ್ಕೂ) ಮೋಕ್ಷ ಕಾರಣತ್ವವುಂಟಾಗುತ್ತದೆ".

ಗೀತೆಯ ಮೊದಲಿಂದ ಕೊನೆಯವರೆಗೆ ಅನೇಕಬಾರಿ ಅನ್ಯಾನ್ಯ ಪ್ರಮಾಣಗಳಿಂದ ಈ ಮೇಲಿನ ತಮ್ಮ ಭಗವಂತನ, ಮತ್ತು ಗೀತೆಯ ಅಭಿಪ್ರಾಯವನ್ನು ಮನಮುಟ್ಟುವಂತೆ ಬಣ್ಣಿಸಿದ್ದಾರೆ. ಗೀತೆಯ ಅರ್ಜುನನು ಸಕಲಜೀವಿಗಳ ಪ್ರತಿನಿಧಿ. "ಯುದ್ಧದಲ್ಲಿ ಭೀಷ್ಮಾದಿಗಳನ್ನು ಹೇಗೆ ಕೊಲ್ಲಲಿ! ಎಂಬ ಶೋಕ-ಮೊಹಗಳು ಆವರಿಸುತ್ತವೆ. ಇದರಂತೆ ಸಕಲ ಪ್ರಾಣಿಗಳನ್ನೂ ಈ ಶೋಕ-ಮೋಹಗಳು ಆವರಿಸುತ್ತವೆ. ಇದಕ್ಕೆ ಕಾರಣವೇನು ? ಮಾಯೆ. ಮಾಯೆಯೂ ಅಪಹೃತಜ್ಞಾನಾಃ. ಮಾಯೆಯಿಂದ ಜ್ಞಾನವನ್ನು ಕಳೆದುಕೊಳ್ಳುತ್ತಾರೆ. ಸತ್ವ ರಜಸ್ ತಮಸ್ ಎಂಬ ಮೂರು ಗುಣಗಳನ್ನು ಹೊಂದಿದ ಮಾಯೆ, ಇದನ್ನೇ ಗೀತೆಯಲ್ಲಿ ಪ್ರಕೃತಿ ಎಂದೂ ಕರೆಯಲಾಗಿದೆ. ಶೋಕ

ಮೋಹಾದಿಯಾಗಿ ಜನ್ಮ ಜನ್ಮಾಂತರಗಳು ಪಾಪ-ಪುಣ್ಯಗಳು ಎಲ್ಲವೂ ಈ ಮಾಯೆಯಿಂದಲೇ ಉಂಟಾಗುವವು. ಈ ಮಾಯೆಯನ್ನು ಕಳೆಯಲು ಜ್ಞಾನದಿಂದ ಮಾತ್ರ ಸಾಧ್ಯ. ಈ ಜ್ಞಾನವು ಉಂಟಾಗಲಿಕ್ಕೆ ಅಂತಃಕರಣಶುದ್ಧಿಯು ಉಂಟಾಗಬೇಕು. ಕರ್ಮಯೋಗ, ಭಕ್ತಿಯೋಗ, ಧ್ಯಾನಯೋಗ, ಯಜ್ಞ, ತಪ, ಜಪ, ಇವುಗಳನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಿದಾಗ ಅಂತಃಕರಣ ಶುದ್ಧಿಯುಂಟಾಗುತ್ತದೆ. ಆಗ ಅಜ್ಞಾನವು ದೂರವಾಗಿ ಆತ್ಮಜ್ಞಾನವು ಉಂಟಾಗುತ್ತದೆ. ಅದೇ ಮೋಕ್ಷ.

ಶ್ರೀ ಶಂಕರ ಭಗವತ್ಪಾದರು ಪ್ರತಿಪಾದಿಸಿದ್ದು ಅದ್ವೈತ ಸಿದ್ಧಾಂತ. ಅದ್ವೈತ ಎಂದರೆ ಸರ್ವವ್ಯಾಪಿಯಾದ, ತ್ರೈಕಾಲಾಬಾಧಿತವಾದ ಬ್ರಹ್ಮ (=ಪರಮಾತ್ಮ) ಒಂದೇ ಸತ್ಯವಾದದ್ದು. ಲೋಕದ ಜನ ದೇವರು ಎಂದು ಹೇಳುವ ಈ ಪರಮಾತ್ಮನನ್ನು ಪರಬ್ರಹ್ಮ, ಚಿತ್‌ಬ್ರಹ್ಮ ಎಂದೆಲ್ಲ ಕರೆಯುತ್ತಾರೆ. ಈ ಪರಮಾತ್ಮನೂ ಜೀವನೂ ಬೇರೆಯಲ್ಲ, ಒಬ್ಬನೇ. ಯಾರೇ ಆದರೂ "ನಾನು" ಎಂಬ ಅನುಭವವನ್ನು ನಿರಾಕರಿಸಲು ಸಾಧ್ಯವಿಲ್ಲ. "ನಾನು ದೇವರನ್ನು ಒಪ್ಪುವುದಿಲ್ಲ" ಎನ್ನುವವನೂ "ನಾನು" ಎನ್ನುವುದನ್ನು ನಿರಾಕರಿಸಲು ಸಾಧ್ಯವಿಲ್ಲ. "ನಾನು" ಎಂದೇ ಹೇಳುತ್ತಾನೆ. ಆ ನಾನೇ ಆತ್ಮ. "ಕ್ಷೇತ್ರಜ್ಞಂ ಚಾಪಿಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ" ಆತ್ಮದ ಹೊರತಾದ ದೇಹಾದಿಗಳೆಲ್ಲ ಕ್ಷೇತ್ರಗಳು. ಕ್ಷೇತ್ರಜ್ಞನೇ ಜೀವ. "ನಾನು" ಎಂಬ ಅನುಭವದ ಕ್ಷೇತ್ರಜ್ಞ = ಜೀವನನ್ನೂ "ಮಾಂ ವಿದ್ಧಿ." ನಾನು = ಪರಮಾತ್ಮನು ಎಂದೇ ತಿಳಿ. ಅಂದರೆ ಜೀವನೂ ಪರಮಾತ್ಮನೂ ಒಂದೇ. ಆತ್ಮನ ಮೂಲವನ್ನು ಹುಡುಕುತ್ತ ಹೋದಾಗ ಪರಮಾತ್ಮನೇ ತಾನು. ನಾನೇ ಪರಮಾತ್ಮ ಎಂದು ಅರಿವಾಗುತ್ತದೆ. ಈ ಆತ್ಮತತ್ವದ ಹೊರತಾದ ಎಲ್ಲವೂ ಮಿಥ್ಯೆ. ಸುಳ್ಳು, ಶಾಶ್ವತವಾಗಿ ನಿಲ್ಲುವನಲ್ಲ. ಮಡಕೆ ಸತ್ಯವೆಂದರೆ ಒಡಿದಾಗ ಮಡಕೆ ಹೋಗಿ ಮಣ್ಣಾಗುತ್ತದೆ. ಮಣ್ಣಿನ ಮೂಲವನ್ನು ಹುಡುಕಿಕೊಂಡು ಹೋದಾಗ, ಆ ಮೂಲವಸ್ತುವನ್ನು "ಎನರ್ಜಿ" ಒಂದು ಶಕ್ತಿ ಎಂದು ವಿಜ್ಞಾನಿಗಳು ಗುರುತಿಸುತ್ತಾರೆ. ಹೀಗೆ ಸಕಲ ವಸ್ತುಗಳ ಮೂಲವೂ ಒಂದೇ "ಶಕ್ತಿ" ಎನ್ನುವಲ್ಲಿ ಕೊನೆಗೊಳ್ಳುತ್ತದೆ. ಆ ಸ್ಥಿತಿಯವರೆಗಿನ ಎಲ್ಲ ವಸ್ತುಗಳೂ "ಇಲ್ಲ" ಎನ್ನಿಸುತ್ತವೆ. ಇದೇ ಮಿಥ್ಯೆ. ಬ್ರಹ್ಮನ ಹೊರತಾದ ಎಲ್ಲವೂ ಮಿಥ್ಯೆಗಳೇ. ನಿರ್ವಿಕಾರವಾದ ಆತ್ಮ ಒಂದು ಮಾತ್ರ ಉಳಿಯುತ್ತದೆ.

ಈ ಇಲ್ಲವಾದವುಗಳೆಲ್ಲ ಇದ್ದಂತೆ ಕಾಣಲು, ಅದರಿಂದ ನಾನಾ ಬಗೆಯ ಸುಖ ದುಃಖಗಳನ್ನು ಹೊಂದಲು ಕಾರಣವಾದದ್ದು ಮಾಯೆ. ಇದನ್ನು ಭಗವದ್ಗೀತೆ ಪರಮಾತ್ಮನ ಅಚಿಂತ್ಯ ಶಕ್ತಿ ಎಂದು ಗುರುತಿಸುತ್ತದೆ. ಗೀತಾಭಾಷ್ಯದ ಆರಂಭದಲ್ಲಿ "ಸ ಭಗವಾನ್ ತ್ರಿಗುಣಾತ್ಮಿಕಾಂ ಸ್ವಾಂ ಮಾಯಾಂ ವಶೀಕೃತ್ಯ ದೇಹವಾನಿವ ಜಾತ ಇವ..... ಲಕ್ಷ್ಯತೇ" ಆ ಭಗವಂತನು ಸತ್ವ ರಜಸ್ ತಮಸ್‌ಗಳೆಂಬ ಮೂರು ಗುಣಗಳ ತನ್ನ ಮಾಯೆಯನ್ನು ವಶೀಕರಿಸಿಕೊಂಡು ದೇಹವನ್ನು ಧರಿಸಿದವನಂತೆ, ಹುಟ್ಟಿದವನಂತೆ.... ಕಾಣುತ್ತಾನೆ. "ಮಮ ಮಾಯಾ ದುರತ್ಯಯಾ" "ನನ್ನ ಮಾಯೆಯನ್ನು ಕಳೆಯುವುದು

ಕಷ್ಟ'' ಎಂದು ಭಗವಂತನೇ ಹೇಳುತ್ತಾನೆ. ಆ ಮಾಯೆಯನ್ನು ಕಳೆಯಲಿಕ್ಕೆ ಒಂದೇ ದಾರಿ – ಮಾಮೇವ ಏ ಪ್ರಪದ್ಯಂತೆ ಮಾಯಾಂ ಏತಾಂ ತರಂತಿ ತೇ''. ''ನನ್ನನ್ನೇ ಯಾರು ಸಂಪೂರ್ಣವಾಗಿ ಸೇರುತ್ತಾರೋ ಅವರು ಮಾಯೆಯನ್ನು ದಾಟುತ್ತಾರೆ. ಈ ಮಾಯಾ ಬಂಧನವಿರುವವರೆಗೆ ಸುಖದುಃಖಮಯವಾದ ಸಂಸಾರ. ಮೂಲವಸ್ತು ಪರಮಾತ್ಮನ ದರ್ಶನವಾಗುವವರೆಗೂ ಈ ಪಾಡು ತಪ್ಪಿದ್ದಲ್ಲ. ಈ ಮಾಯೆಯನ್ನೂ ಅದರಿಂದ ಉಂಟಾದ ತಪ್ಪು ತಿಳಿವಳಿಕೆಯನ್ನು ಹೋಗಲಾಡಿಸುವ ಕ್ರಮದಲ್ಲಿ ಕರ್ಮ, ಉಪಾಸನೆ, ಭಕ್ತಿ, ಧ್ಯಾನ, ದಾನ, ತಪಸ್ಸು, ಜಪ, ವಿಶ್ವರೂಪದರ್ಶನ, ಅಶ್ವತ್ಥದರ್ಶನ, ಸತ್ವರಜಸ್ತಮೋಗುಣಗಳ ವಿರಾಟ್ ಪ್ರಪಂಚದ ಬಣ್ಣನೆ ಮುಂತಾದವು ಗೀತೆಯ ೧೮ ಅಧ್ಯಾಯಗಳಲ್ಲಿ ಬಂದಿವೆ. ಶ್ರೀ ಭಗವತ್ಪಾದರು ಅವರೇ ಹೇಳುವಂತೆ ''ದುರ್ವಿಜ್ಞೇಯಾರ್ಥಂ'' ಅರ್ಥವನ್ನು ತಿಳಿಯಲು ಕಷ್ಟಕರವಾದ ಭಗವದ್ಗೀತೆಯನ್ನು ತಮ್ಮ ತೀಕ್ಷ್ಣಬುದ್ಧಿ ಶಕ್ತಿಯಿಂದ, ಪ್ರಖರಪಾಂಡಿತ್ಯದಿಂದ, ಅದ್ಭುತ ಬಹುಶ್ರುತತ್ವದಿಂದ, ಅಗಾಧ ಜ್ಞಾನದಿಂದ ಮಥಿಸಿ ಅತ್ಯಂತ ಪರಿಶುದ್ಧವಾದ, ಸಾರ್ವಕಾಲಿಕವಾದ, ಶಾಶ್ವತವಾದ ತತ್ತ್ವವನ್ನು ಲೋಕಕ್ಕೆ ನೀಡಿದ್ದಾರೆ.

ಸರ್ವಃ ಸಂಸಾರಃ ಕ್ರಿಯಾಕಾರಕ ಫಲಲಕ್ಷಣಃ ಸತ್ವರಜಸ್ತಮೋ ಗುಣಾತ್ಮಕಃ ಅವಿದ್ಯಾಪರಿಕಲ್ಪಿತಃ ''ಕ್ರಿಯಾಕಾರಕ ಫಲಲಕ್ಷಣವಾದ ಸತ್ವರಜಸ್ತಮೋ ಗುಣಾತ್ಮಕವಾದ ಸಂಸಾರವೆಲ್ಲವೂ ಅಜ್ಞಾನದಿಂದ ಕಲ್ಪಿತವಾದವುಗಳು.''

''ಭ್ರಾಂತಿ ಪ್ರತ್ಯಯ ನಿಮಿತ್ತ ಏವ ಅಯಂ ಸಂಸಾರಭ್ರಮಃ ನ ತು ಪರಮಾರ್ಥತಃ।'' ಈ ಸಂಸಾರವೆಂಬ ತಪ್ಪು ತಿಳಿವಳಿಕೆಯು ಭ್ರಾಂತಿಜ್ಞಾನದಿಂದ ಬಂದದ್ದೇ ಹೊರತು ಪಾರಮಾರ್ಥಿಕವಲ್ಲ. ಮಿಥ್ಯಾ ಪ್ರತ್ಯಯೇನ ಏವ ಅಸಂಗಸ್ಯ ಆತ್ಮನಃ ಸಂಗತಾತ್ಮತ್ಯಂ ಆಪದ್ಯತೇ. ಮಿಥ್ಯಾಜ್ಞಾನದಿಂದಲೇ ಸಂಗರಹಿತ ಆತ್ಮನಿಗೆ ಸಂಗಸ್ಥಿತಿಯು ಉಂಟಾಗುತ್ತದೆ.

''ಅವಿಕ್ರಿಯತ್ವಂ ಆತ್ಮನಃ ಶ್ರುತಿ ಸ್ಮೃತಿ ನ್ಯಾಯ ಪ್ರಸಿದ್ಧಂ।'' ಆತ್ಮವು ವಿಕಾರರಹಿತ ಎನ್ನುವುದು ಶ್ರುತಿಸ್ಮೃತಿನ್ಯಾಯಗಳಿಂದ ಸ್ಪಷ್ಟವಾಗಿ ಸಿದ್ಧವಾಗುತ್ತದೆ.

''ನ ಹಿ ಆತ್ಮಾನಾಮ ಕಸ್ಯಚಿತ್ ಕದಾಚಿತ್ ಅಪ್ರಸಿದ್ಧಃ, ಪ್ರಾಪ್ಯಃ ಹೇಯೋಃಪಾದೇಯೋ ವಾ''

''ಆತ್ಮವೆನ್ನುವುದು ಯಾರಿಗೂ ಎಂದಿಗೂ ಅಪ್ರಸಿದ್ಧವಲ್ಲ. ಇಲ್ಲವೆಂದು ಪಡೆದುಕೊಳ್ಳುವ, ಬೇಡವೆಂದು ಬಿಡಬೇಕಾದ ವಸ್ತುವಲ್ಲ (ನಿತ್ಯಸಿದ್ಧವಾದದ್ದು).

''ಸರ್ವಕರ್ಮಸನ್ಯಾಸ ಪೂರ್ವಕಾದಾತ್ಮಜ್ಞಾನ ನಿಷ್ಠಾ ಮಾತ್ರ ದೇವ ಕೇವಲಾತ್ ಕೈವಲ್ಯಂ ಪ್ರಾಪ್ಯತೇ.''

ಸರ್ವಕರ್ಮ ಸಂನ್ಯಾಸಪೂರ್ವಕವಾದ ಆತ್ಮಜ್ಞಾನನಿಷ್ಠೆಯಿಂದ ಮಾತ್ರ ಕೈವಲ್ಯವು (ಮೋಕ್ಷವು) ದೊರಕುತ್ತದೆ.

"ಅವಿದ್ವದ್ವಿಷಯಂ ಕರ್ಮ. ವಿದ್ವದ್ವಿವಕ್ಷಯಾ ಸರ್ವಕರ್ಮ ಸನ್ಯಾಸಪೂರ್ವಿಕಾ ಜ್ಞಾನನಿಷ್ಠಾ."

ಕರ್ಮವು ಅಜ್ಞಾನಿಗಳಿಗೆ ಸೇರಿದ್ದು. ಸರ್ವಕರ್ಮ ಸನ್ಯಾಸಪೂರ್ವಕ ಜ್ಞಾನನಿಷ್ಠೆ ಜ್ಞಾನಿಗಳಿಗೆ ಸೇರಿದ್ದು.

ಅಜ್ಞಾನಾಂ ಏವ ಹಿ ಕರ್ಮಯೋಗಃ ನ ಜ್ಞಾನಿನಾಂ । ಅಜ್ಞಾನಿಗಳಿಗೇ ಕರ್ಮಯೋಗ. ಜ್ಞಾನಿಗಳಿಗೆ ಅಲ್ಲ.

"ಅವಿದ್ಯಾಧ್ಯಾರೋಪಣ ನಿರಾಕರಣ ಮಾತ್ರಂ ಬ್ರಹ್ಮಣಿಕರ್ತವ್ಯಂ।" "ಬ್ರಹ್ಮನಲ್ಲಿ ಅವಿದ್ಯೆಯಿಂದ ಉಂಟಾದ ಆರೋಪದ ನಿರಾಕರಣೆಯನ್ನು ಮಾತ್ರ ಮಾಡಬೇಕಾದದ್ದು."

ಈ ಬಗೆಯ ನಿರ್ದಿಷ್ಟವೂ ನಿರ್ದುಷ್ಟವೂ, ಅಖಂಡಿತವೂ ಆದ ನುಡಿಗಳ ಭಾಷ್ಯ ರಚನೆಯ ಮೂಲಕ ಭಗವದ್ಗೀತೆಯ ಸತ್ಯವಾದ ಸಮ್ಯಕ್ ಸಿದ್ಧಾಂತವನ್ನು ಶ್ರೀ ಆಚಾರ್ಯ ಶಂಕರಭಗವತ್ಪಾದರು ಲೋಕಕ್ಕೆ ನೀಡಿದ್ದಾರೆ. ಲೋಕವು ಅದನ್ನು ಪಡೆದು ಧನ್ಯವಾಗಬೇಕು.

* * *

# ಶ್ರೀ ಶಂಕರ ಭಗವತ್ಪಾದರ ಉಪನಿಷದ್ಭಾಷ್ಯ

ಅನಂತ ಶರ್ಮಾ ಭುವನಗಿರಿ

ಭಾರತೀಯರ ಆಧ್ಯಾತ್ಮಿಕ ಚಿಂತನೆಯ ಪರಿಪಕ್ವ ಫಲಗಳೇ ಉಪನಿಷತ್ತುಗಳು. ಇವು ಭಾರತದಲ್ಲಷ್ಟೇ ಅಲ್ಲ, ಇಡೀ ವಿಶ್ವದಲ್ಲಿಯೇ ತತ್ತ್ವವಿಚಾರಕ್ಕಾಗಿ ಮಾಡಿದ ಮೊಟ್ಟಮೊದಲ ಗಂಭೀರ ಪ್ರಯತ್ನ. ಸಾಮಾನ್ಯವಾಗಿ ಮೊದಲು ಮೂಡಿಬಂದ ಸಿದ್ಧಾಂತಗಳು ಕಾಲಕಳೆದಂತೆಲ್ಲ ಪರಿಷ್ಕಾರಗೊಳ್ಳುತ್ತ ಬದಲಾಗುತ್ತ ಹೋಗುವುದುಂಟು. ಆದರೆ ವೇದಾಂತಗಳೆಂದು ಕರೆಯಲ್ಪಡುವ ಉಪನಿಷತ್ತುಗಳಲ್ಲಿ ಅಂದು ನಿರ್ಣೀತವಾದ ಸಿದ್ಧಾಂತವೆ ಇಂದಿಗೂ ಅಚಲವಾಗಿ ನಿಂತಿದೆ. ಅದಕ್ಕಿಂತ ಒಂದು ಹೆಜ್ಜೆಯೂ ನಾವು ಮುಂದೆ ಹೋಗಲಾರದವರಾಗಿದ್ದೇವೆ ಎನ್ನುವುದೆ ಅದರ ಮಹತ್ತ್ವವನ್ನು ಸಾರುತ್ತದೆ. ಇಂದು ಉಪನಿಷತ್ತುಗಳೆಂಬ ಹೆಸರಿನಿಂದ ಸುಮಾರು ಇನ್ನೂರಕ್ಕೂ ಹೆಚ್ಚು ಗ್ರಂಥಗಳು ಲಭ್ಯವಿದ್ದರೂ ಅವುಗಳಲ್ಲಿ ಹತ್ತು ಉಪನಿಷತ್ತುಗಳು ಮಾತ್ರ ಶ್ರೇಷ್ಠ ಹಾಗೂ ಪ್ರಾಚೀನತಮಗಳೆಂಬ ಆದರಕ್ಕೆ ಪಾತ್ರವಾಗಿವೆ. ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ– ಹೀಗೆ ಈ ಹತ್ತು ಉಪನಿಷತ್ತುಗಳಿಗೆ ಶಂಕರಭಗವತ್ಪಾದರ ವಿಸ್ತೃತ ಭಾಷ್ಯವಿದೆ. ಶ್ವೇತಾಶ್ವತರ, ಕಾಷೀತಕೀ, ಜಾಬಾಲ, ಕೈವಲ್ಯ, ಮಹಾನಾರಾಯಣ– ಈ ಉಪನಿಷತ್ತುಗಳ ವಾಕ್ಯಗಳನ್ನು ಆಚಾರ್ಯರು ತಮ್ಮ ಭಾಷ್ಯದಲ್ಲಿ ಉದ್ಧರಿಸಿದ್ದಾರೆ. ಆದ್ದರಿಂದ ಈ ಎಲ್ಲ ಉಪನಿಷತ್ತುಗಳೂ ಅತಿ ಪ್ರಾಚೀನವಾದವುಗಳೆಂಬುದು ನಿಶ್ಚಿತ. ಮೇಲೆ ಹೇಳಿದ ಹತ್ತು ಉಪನಿಷತ್ತುಗಳಿಗೇ ಅಲ್ಲದೆ ಇನ್ನೂ ಕೆಲವು, ಉದಾ: ಶ್ವೇತಾಶ್ವತರ, ನೃಸಿಂಹಪೂರ್ವತಾಪಿನಿ, ನೃಸಿಂಹಉತ್ತರತಾಪಿನಿ, ಅಥರ್ವಶಿರ, ಅಥರ್ವಶಿಖಾ, ವಜ್ರಸೂಚೀ– ಉಪನಿಷತ್ತುಗಳಿಗೂ ಶಂಕರಾಚಾರ್ಯಕೃತವೆಂದು ಹೇಳಲಾದ ಭಾಷ್ಯಗಳು ಸಿಗುತ್ತವೆ. ಆದರೆ ವಿಮರ್ಶಕರು ಈ ಭಾಷ್ಯಗಳನ್ನು ಆಚಾರ್ಯರವೆಂದು ಒಪ್ಪಲು ಸಿದ್ಧರಿಲ್ಲ. ಇವುಗಳಲ್ಲಿ ಶ್ವೇತಾಶ್ವತರೋಪನಿಷತ್ತಿನ ಭಾಷ್ಯ ಸುಂದರವಾಗಿ

ಸಿದ್ಧಾಂತಾನುಗುಣವಾಗಿ ಇದ್ದರೂ ಅದರ ಶೈಲಿ ಆಚಾರ್ಯರ ಶೈಲಿಗಿಂತ ಸುತರಾಂ ಭಿನ್ನವಾಗಿದೆ. ಆದ್ದರಿಂದ ಉಪನಿಷದ್ಭಾಷ್ಯದ ಮೇಲಿನ ವಿಚಾರಕ್ಕೆ ನಾವು ಸರ್ವಸಮ್ಮತವಾದ ದಶೋಪನಿಷದ್ಭಾಷ್ಯಗಳನ್ನಷ್ಟೆ ವಿಷಯವನ್ನಾಗಿ ಪರಿಗಣಿಸಬೇಕಾಗಿದೆ.

ಆಚಾರ್ಯರು ಭಾಷ್ಯ ಬರೆಯುವುದಕ್ಕೆ ಮೊದಲೆ ಉಪನಿಷತ್ತುಗಳ ಮೇಲೆ ಅನೇಕ ವ್ಯಾಖ್ಯಾನಗಳು ಬರೆಯಲ್ಪಟ್ಟಿದ್ದಂತೆ ತೋರುತ್ತದೆ. ತೈತ್ತಿರೀಯ ಭಾಷ್ಯದ ಪ್ರಾರಂಭದಲ್ಲಿ ಅವರು– ಯಾವ ಹಿರಿಯರು ಪದವಾಕ್ಯಪ್ರಮಾಣಗಳನ್ನು ಅನುಸರಿಸಿ ಎಲ್ಲ ವೇದಾಂತಗಳನ್ನು ವ್ಯಾಖ್ಯಾನ ಮಾಡಿದ್ದಾರೊ ಅವರನ್ನು ಸದಾ ನಮಿಸುತ್ತೇವೆ[1] ಎಂದು ಹೇಳುತ್ತಾರೆ. ತಮ್ಮ ಭಾಷ್ಯಗಳಲ್ಲಿ ಅಲ್ಲಲ್ಲಿ "ಕೆಲವರು ಹೀಗೆ ಹೇಳುತ್ತಾರೆ.." ಎಂದು ಪ್ರಾರಂಭಿಸಿ ಪ್ರಾಚೀನರ ವ್ಯಾಖ್ಯಾನಗಳನ್ನು ಖಂಡಿಸಿದ್ದೂ ಉಂಟು. ಪ್ರಾಯಶಃ ಪ್ರಾಚೀನ ವ್ಯಾಖ್ಯಾನಗಳಲ್ಲಿ ಕೆಲವು ಆಚಾರ್ಯರ ಗೌರವಕ್ಕೆ ಪಾತ್ರರಾದಂಥ ವ್ಯಕ್ತಿಗಳು ರಚಿಸಿದ ಶುದ್ಧ ವಾಖ್ಯಾನಗಳಿರಬೇಕು. ಇನ್ನೂ ಕೆಲವು ಅಪವ್ಯಾಖ್ಯಾನಗಳಿರಬಹುದು. ಇವುಗಳಲ್ಲಿ ಮೊದಲನೆಯದು ಸರಿಯಾದ ವ್ಯಾಖ್ಯಾನವಾದರೂ ಸಂಕ್ಷಿಪ್ತವಾದ್ದರಿಂದಲೊ, ನಾನಾ ಆಕ್ಷೇಪಗಳಿಗೆ ಅಲ್ಲಿ ಸರಿಯಾದ ಸಮಾಧಾನವಿಲ್ಲದ್ದರಿಂದಲೊ ಆಚಾರ್ಯರು ವಿಸ್ತಾರವಾದ ವ್ಯಾಖ್ಯಾನಕ್ಕೆ ಕೈ ಹಾಕಿರಬೇಕು. ಇದರಿಂದಾಗಿ ಅಪವ್ಯಾಖ್ಯಾನಗಳನ್ನು ಖಂಡಿಸಲೂ ಅವರಿಗೆ ಅವಕಾಶ ಸಿಕ್ಕಂತಾಯಿತು. ಅಂಥ ಶ್ರೇಷ್ಠ ವ್ಯಾಖ್ಯಾನಕಾರರನ್ನೇ ತೈತ್ತರೀಯ ಭಾಷ್ಯದ ಆರಂಭದಲ್ಲಿ ಅವರು ಸ್ಮರಿಸಿದ್ದು. ಭಾಷ್ಯ ಮಧ್ಯದಲ್ಲಿಯೂ 'ಆಚಾರ್ಯರು ಹೀಗೆ ಹೇಳುತ್ತಾರೆ....'[2] ಎಂದು ಅವರ ಅಭಿಪ್ರಾಯವನ್ನು ಆದರಪೂರ್ವಕವಾಗಿ ಉದ್ಧರಿಸಿದ್ದು ಉಂಟು. ಈಗ ಆ ವ್ಯಾಖ್ಯಾನಗಳಾಗಲಿ ಅವುಗಳನ್ನು ರಚಿಸಿದವರ ಹೆಸರುಗಳಾಗಲಿ ಉಪಲಬ್ಧವಿಲ್ಲ.

ಈ ಭಾಷ್ಯಗಳಲ್ಲಿ ಆಚಾರ್ಯರು ಯಾವುದನ್ನು ಮೊದಲು ಬರೆದರು, ಯಾವುದನ್ನು ಅನಂತರ ಬರೆದರು ಎಂಬುದನ್ನು ನಿರ್ಧರಿಸಲು ಸರಿಯಾದ ಆಧಾರಗಳಿಲ್ಲ. ತೈತ್ತಿರೀಯ ಭಾಷ್ಯಕ್ಕೆ ಆದಿಯಲ್ಲಿಯೂ, ಮಾಂಡೂಕ್ಯಭಾಷ್ಯಕ್ಕೆ ಆದಿ ಅಂತ್ಯಗಳಲ್ಲಿಯೂ ಮಂಗಲ ಶ್ಲೋಕಗಳಿವೆ. ಮಾಂಡೂಕ್ಯೋಪನಿಷತ್ತಿಗೆ ಹೊಂದಿಕೊಂಡಿರುವ ಕಾರಿಕೆಗಳು ಆಚಾರ್ಯರ ಪರಮಗುರುಗಳಾದ ಗೌಡಪಾದರಿಂದ ರಚಿತವಾದದ್ದೆಂಬ ಪ್ರತೀತಿಯಿದೆ. ಇದನ್ನು ಪುಷ್ಟೀಕರಿಸುವಂತೆ ಮಂಗಲ ಶ್ಲೋಕದಲ್ಲಿ 'ಪರಮಗುರುವನ್ನು ನಮಿಸುತ್ತೇನೆ'[3] ಎಂಬ ವಾಕ್ಯವಿದೆ. ಹೀಗಿದ್ದರೂ ಮಾಂಡೂಕ್ಯ ಭಾಷ್ಯವು ಮೊದಲನೆಯದಲ್ಲವೆನ್ನುವುದಕ್ಕೆ ಆಂತರಿಕ ಪ್ರಮಾಣಗಳಿವೆ. ಗೀತಾ ಭಾಷ್ಯವನ್ನು ಬರೆದು ಮುಗಿಸಿದ[3A] ಮೇಲೆ ಯಾವುದೋ ಒಂದು ಕ್ರಮದಲ್ಲಿ ಈ ಭಾಷ್ಯಗಳ ರಚನೆಯಾಗಿರಬಹುದು.

---

೧. "ಯೈರಿಮೇ ಗುರುಭಿಃ...." ತೈ. ಭಾ ಮಂಗಲಶ್ಲೋಕ.

೨. 'ತತ್ರಾಹುರಾಚಾರ್ಯಾಃ' (ಛಾಂ. ಭಾ. ೪-೨-೩).

೩. 'ಪರಮ ಗುರುಮಮುಂ ಪಾದಪಾತೈರ್ನತೋಽಸ್ಮಿ' ಮಾಂ. ಭಾ. ಅಂತ್ಯದ ಮಂಗಳಶ್ಲೋಕ.

೩A. (ಛಾ. ೮-೧೨-೩).

ಉಪನಿಷತ್ತುಗಳಿಗೆ ಭಾಷ್ಯವನ್ನು ಬರೆಯಲು ಹೊರಟ ಆಚಾರ್ಯರ ದಾರಿ ಅಷ್ಟೇನೂ ಸುಗಮವಾಗಿರಲಿಲ್ಲ. ಗಹನವಾದ ತತ್ತ್ವವಿಚಾರ, ಉಪನಿಷತ್ತುಗಳ ಪ್ರಾಚೀನವಾದ ಭಾಷೆ, ಪ್ರಾಚೀನತಮವಾದ ಶೈಲಿ, ಪರಸ್ಪರ ವಿರುದ್ಧಾರ್ಥವನ್ನು ನೀಡುವಂತೆ ತೋರುವ ವಾಕ್ಯಗಳು ಈ ಅಡ್ಡಿಗಳನ್ನು ನಿವಾರಿಸಿಕೊಂಡು ಎಲ್ಲ ಉಪನಿಷತ್ತುಗಳಿಗೂ ಏಕವಾಕ್ಯತೆಯನ್ನು ಸಾಧಿಸುವುದು ಸುಲಭದ ಮಾತಲ್ಲ. ಆಚಾರ್ಯರ ಮೇಧಾಶಕ್ತಿ ಅದನ್ನು ಸಾಧಿಸಿತು. ತಾವು ಬರೆದುದೆ ವೇದಾಂತಗಳ ಸಹಜ ಹಾಗೂ ಸರಳವಾದ ಅರ್ಥ ಎಂದು ತೋರಿಸಿಕೊಟ್ಟದ್ದೆ ಅಲ್ಲದೆ ಅದಕ್ಕಿಂತ ಭಿನ್ನವಾದ ಯಾವ ಅರ್ಥವೂ ಸರಿಹೊಂದುವುದಿಲ್ಲವೆಂಬುದನ್ನೂ ಅಲ್ಲಿ ಪ್ರಬಲವಾಗಿ ಪ್ರತಿಪಾದಿಸಿದ್ದಾರೆ.

ಉಪನಿಷತ್ ಎಂಬುದಕ್ಕೆ ಬ್ರಹ್ಮವಿದ್ಯೆ ಎಂಬುದೆ ಮುಖ್ಯಾರ್ಥ. ಗ್ರಂಥದಲ್ಲಿಯೂ ಈ ಶಬ್ದ ಗೌಣವಾಗಿ ಪ್ರಯೋಗದಲ್ಲಿದೆ. ಈ ಶಬ್ದವು ಉಪ, ನಿ ಎಂಬ ಎರಡು ಉಪಸರ್ಗಗಳಿಂದ ಕೂಡಿದ 'ಷದಲ್ಶ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಧಾತುವಿನ ಅರ್ಥವನ್ನನುಸರಿಸಿ ಆಚಾರ್ಯರು ಉಪನಿಷತ್ತಿನ ಅರ್ಥವನ್ನು ವಿವರಿಸುತ್ತಾರೆ. ಯಾವ ಮುಮುಕ್ಷುಗಳು ಈ ವಿದ್ಯೆಯನ್ನು ಪಡೆದು ಸದಾ ಅದನ್ನೆ ಆಲಂಬಿಸಿರುತ್ತಾರೊ ಅವರ ಅವಿದ್ಯೆಯನ್ನು ನಾಶಮಾಡುವುದರಿಂದ, ಅಥವಾ ಅಂಥವರನ್ನು ಪರಬ್ರಹ್ಮದ ಬಳಿಗೆ ಒಯ್ಯುವುದರಿಂದ ಅಥವಾ ಅವರಿಗೆ ಮತ್ತೆ ಮತ್ತೆ ಬರುವ ಗರ್ಭವಾಸಾದಿ ದುಃಖಗಳನ್ನು ಕೊನೆಗೊಳಿಸುವುದರಿಂದ ಈ ವಿದ್ಯೆಗೆ ಉಪನಿಷತ್ ಎಂದು ಹೆಸರು.[೪] ಈ ವಿದ್ಯೆಯಲ್ಲಿ ಪರಮಶ್ರೇಯಸ್ಸು ಅಡಗಿರುವುದರಿಂದಲೂ ಇದು ಉಪನಿಷತ್ ಎಂದು ಹೆಸರಾಗಿದೆ.[೫] ಆಚಾರ್ಯರು ತಮ್ಮ ಭಾಷ್ಯವನ್ನು ಕೊನೆಯವರೆಗೂ ಈ ಅರ್ಥಗಳಿಗೆ ಪೋಷಕವಾಗುವಂತೆ ನೋಡಿಕೊಂಡಿದ್ದಾರೆ.

ಭಗವತ್ಪಾದರು ಉಪನಿಷತ್ತುಗಳಿಂದ ತೆಗೆದ ಮಥಿತಾರ್ಥವನ್ನು ನಾವು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು. ಸಕಲ ಉಪನಿಷತ್ತುಗಳಿಗೂ ಅಭಿಧೇಯವಾದದ್ದು ಅಥವಾ ಪರಮ ಪ್ರಮೇಯವಾದದ್ದು ಅದ್ವಿತೀಯ ಬ್ರಹ್ಮವೊಂದೆ.[೬] ಅದು ಸಚ್ಚಿದಾನಂದ ಸ್ವರೂಪಿ, ಅದುವೆ ಜಗತ್ಕಾರಣ. ಅದರಲ್ಲಿಯ ಸಕಲ ಪ್ರಪಂಚವೂ ಅಧ್ಯಸ್ತವಾಗಿದೆ. ಅದೇ ಸರ್ವರ ಆತ್ಮ. ಅದು ನಿರ್ಗುಣ, ಯಾವುದೇ ವಿಶೇಷವೂ ಅದಕ್ಕಿಲ್ಲ. ಅವಿದ್ಯೆಯಿಂದಾಗಿ ಅದಕ್ಕೆ ಜೀವಭಾವ, ಸಕಲ ಪ್ರಪಂಚವೂ ಅವಿದ್ಯಾಕೃತ, ಅವಿದ್ಯೆಯು ನಾಶವಾದರೆ ದ್ವೈತಪ್ರಪಂಚವೂ ನಾಶವಾಗುತ್ತದೆ. ಮುಕ್ತಿಯೇ ಪರಮ ಪುರುಷಾರ್ಥ,

---

೪. ಕಠ. ಭಾ. – ಅವತರಣಿಕೆ.

೫. ತೈ. ಭಾ. ಅವತರಣಿಕೆ.

೬. ಬೃ. ಭಾ. (೫-೧-೧, ೨-೧-೨೦).

ಮುಕ್ತಿಯೆಂದರೆ ದ್ವೈತ ಪ್ರಪಂಚದ ಬಿಡುಗಡೆ. ಇಲ್ಲಿ ಹೊಸದಾಗಿ ಪಡೆಯಬೇಕಾದದ್ದೇನೂ ಇಲ್ಲ.[೭] ರೋಗಿಯಾದವನು ರೋಗ ಕಳೆದ ಮೇಲೆ ಸ್ವಸ್ಥನಾದೆ ಎನ್ನುವಂತೆ ತನ್ನ ಸ್ವಾಭಾವಿಕ ರೂಪವನ್ನು ಪಡೆಯುವುದೆ ಮುಕ್ತಿ. ಆದ್ದರಿಂದ ಅವಿದ್ಯಾ ನಿವೃತ್ತಿಯನ್ನೆ ಮೋಕ್ಷವೆಂದು ಕರೆಯುವುದು.[೮] ವಿದ್ಯೆಯಿಂದ ಮಾತ್ರವೆ ಅವಿದ್ಯಾನಿವೃತ್ತಿಯಾಗುವುದರಿಂದ ಮುಕ್ತಿಗೆ ಜ್ಞಾನವೊಂದೆ ಸಾಧನ. ಶಾಸ್ತ್ರವಿಹಿತವಾದ ಕರ್ಮಗಳು ಚಿತ್ತಶುದ್ಧಿಯನ್ನುಂಟು ಮಾಡುವುದರ ಮೂಲಕ ಜ್ಞಾನಕ್ಕೆ ಕಾರಣವಾಗಬಲ್ಲವು.[೯]

ಈ ಸಿದ್ಧಾಂತವೆಂಬ ನವನೀತವನ್ನು ಉಪನಿಷತ್ತುಗಳೆಂಬ ಕ್ಷೀರದಿಂದ ಪಡೆಯಲು ಆಚಾರ್ಯರು ಸಂಪ್ರದಾಯದಿಂದ ಬಂದ ಮಾನದಂಡವನ್ನೆ ಬಳಸಿದ್ದಾರೆ. ವೇದದ ಪೂರ್ವಭಾಗವನ್ನು ಅರ್ಥೈಸಲು ಹಾಗೂ ಅದರ ತಾತ್ಪರ್ಯವನ್ನು ನಿರ್ಣಯಿಸಲು ಜೈಮಿನಿ ಮುಂತಾದವರು ಕೆಲವು ನಿಯಮಗಳನ್ನು ಅನುಸರಿಸಿದ್ದರು. ಬಾದರಾಯಣರೂ ಅದೇ ನಿಯಮಗಳನ್ನನುಸರಿಸಿ ವೇದಾಂತಗಳ ಪರಮ ತಾತ್ಪರ್ಯವನ್ನು 'ಇದಮಿತ್ಥಂ' ಎಂದು ನಿರ್ಣಯಿಸಿದ್ದರು. ಆಚಾರ್ಯರೂ ಸಹ ಆ ನಿಯಮಗಳನ್ನು ತಮ್ಮ ಮುಂದಿಟ್ಟುಕೊಂಡೆ ವೇದಾಂತಗಳ ಅರ್ಥವನ್ನು ರೂಪಿಸಿದರು. ಈ ದಾರಿಯಲ್ಲಿ ಅವರಿಗೆ ಬಂದ ದೊಡ್ಡ ತೊಡಕೆಂದರೆ ಅಲ್ಲಿ ಕಂಡುಬರುವ ವಿರುದ್ಧಾರ್ಥಕ ವಾಕ್ಯಗಳು. ಉಪನಿಷತ್ತುಗಳಲ್ಲಿ ಮೇಲ್ನೋಟಕ್ಕೆ ಪರಸ್ಪರ ವಿರುದ್ಧವಾಗಿ ತೋರುವ ಕೆಲವು ವಾಕ್ಯಗಳಿವೆ. ಕೆಲವು ಭೇದಪ್ರತಿಪಾದಕ ವಾಕ್ಯಗಳು. ಇನ್ನು ಕೆಲವು ಅಭೇದ ಪ್ರತಿಪಾದಕ ವಾಕ್ಯಗಳು. ಇವುಗಳ ವಿರೋಧವನ್ನು ಪರಿಹರಿಸಿ ಏಕವಾಕ್ಯತೆಯನ್ನು ತರದಿದ್ದಲ್ಲಿ ಸಂಪೂರ್ಣ ವೇದಾರ್ಥವೇ ಅಸ್ತವ್ಯಸ್ತವಾದೀತು. ಇದಕ್ಕಾಗಿ ವೇದಮೀಮಾಂಸಕರು ಒಪ್ಪಿದ ನ್ಯಾಯಗಳ ಜಾಡಿನಲ್ಲಿಯೇ ಸಾಗಿ ಆಚಾರ್ಯರು ವೇದಾಂತಗಳ ತಾತ್ಪರ್ಯವನ್ನು ನಿರ್ಧರಿಸುತ್ತಾರೆ. ಅನಧಿಗತ-ಅಬಾಧಿತಾರ್ಥವಿಷಯಕ ಜ್ಞಾನವೇ ಪ್ರಮಾ ಎಂಬುದು ಮೀಮಾಂಸಕರು ಒಪ್ಪಿದ ಪ್ರಮಾ ಲಕ್ಷಣ. ಇಂಥ ಪ್ರಮೆಗೆ ಸಾಧನವಾದದ್ದೆ ಪ್ರಮಾಣ. ವೇದಾಂತಗಳನ್ನು ಪ್ರಮಾಣಗಳೆಂದು ಒಪ್ಪಿಕೊಂಡಾಗ, ಅವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿದು ಬರದ ಮತ್ತು ಯಾವ ಕಾಲಕ್ಕೂ ಬಾಧಿಸಲ್ಪಡದ (ಇಲ್ಲವೆಂದಾಗದ) ವಿಷಯವನ್ನು ತಿಳಿಸುತ್ತವೆಯೆಂದು ಒಪ್ಪಿಕೊಳ್ಳಲೇಬೇಕು. ನಾನಾ ಭೇದಗಳನ್ನೊಳಗೊಂಡ ದ್ವೈತ ಪ್ರಪಂಚವು ಪ್ರತ್ಯಕ್ಷವಾಗಿಯೆ ತಿಳಿದುಬರುತ್ತದೆ. ಅದನ್ನು ತಿಳಿಸಲು ವೇದ ಬೇಕಿಲ್ಲ. ಅಂಥ ವಿಷಯವನ್ನು ತಿಳಿಸುವ ವೇದ ವಾಕ್ಯಗಳು ಅನುವಾದಕಗಳಾಗುತ್ತವೆಯೆ ವಿನಾ ಪ್ರಮಾಣಗಳಾಗುವುದಿಲ್ಲ. ಯಾವುದೇ ಇತರ ಪ್ರಮಾಣಗಳಿಂದ ತಿಳಿದು ಬರದ,

---

೭. ಮಾಂ. ಭಾ. ಟೀಕಿಕೆ.

೮. ಅವಿದ್ಯಾ ನಿವೃತ್ತಿಮಾತ್ರೇ ಮೋಕ್ಷವ್ಯವಹಾರಃ (ಬೃ. ಭಾ. ೪-೪-೬).

೯. ಕೇನ. ಭಾ. ೪-೮.

ಎಂದೆಂದಿಗೂ ಅವಿನಾಶಿಯಾದ ಬ್ರಹ್ಮತತ್ತ್ವವನ್ನು ತಿಳಿಸುವ ವೇದವಾಕ್ಯಗಳೇ ಪ್ರಮಾಣಗಳು. ಅಂಥ ಬ್ರಹ್ಮದಲ್ಲಿ ಯಾವುದೇ ದ್ವೈತ ಪ್ರಪಂಚವು 'ಇಲ್ಲ'ವೆಂದೂ ಅವು ತಿಳಿಸಿಕೊಡುತ್ತವೆ. ನಿಷೇಧವು ಪ್ರಾಪ್ತಿಪೂರ್ವಕವಾಗಿರಬೇಕಾದ್ದರಿಂದ ನಿಷೇಧ್ಯವಾದ ಪ್ರಪಂಚದ ಸ್ವರೂಪವನ್ನು ತಿಳಿಸಲು ಇತರ ವಾಕ್ಯಗಳಿವೆ. ಹೀಗೆ ಒಟ್ಟಾರೆ ಸಕಲ ವೇದಾಂತಗಳ ತಾತ್ಪರ್ಯವೂ ಅದ್ವಿತೀಯ ಬ್ರಹ್ಮವೊಂದೇ ಆಗಿದೆ. ಆದ್ದರಿಂದಲೆ ಬ್ರಹ್ಮವನ್ನು 'ಉಪನಿಷದೈಕ ವೇದ್ಯ' (ಉಪನಿಷತ್ತುಗಳಿಂದ ಮಾತ್ರ ತಿಳಿದು ಬರುವಂಥಾದ್ದು) ಎನ್ನುವುದು, ಅದ್ವೈತವೇ ವೇದಾಂತಗಳ ಪರಮ ತಾತ್ಪರ್ಯವೆಂದಾದರೆ ಪ್ರತ್ಯಕ್ಷಾದಿ ಪ್ರಮಾಣಗಳೊಡನೆ ವಿರೋಧ ಬಂದೀತೆಂಬ ಶಂಕೆಗೂ ಆಸ್ಪದವಿಲ್ಲ. ಆ ಪ್ರಮಾಣಗಳು ಪ್ರಪಂಚದ ವ್ಯಾವಹಾರಿಕ ಸತ್ಯತ್ವವನ್ನು ಮಾತ್ರ ತಿಳಿಸಿಕೊಡುತ್ತವೆಯಲ್ಲದೆ ಪಾರಮಾರ್ಥಿಕ ಸ್ವರೂಪವನ್ನಲ್ಲ. ಪ್ರತಿಯೊಂದು ಪ್ರಮಾಣಕ್ಕೂ ತನ್ನದೇ ಆದ ವಿಷಯವಿದೆ.[೧೦] ಆದ್ದರಿಂದ ಪ್ರಮಾಣಗಳಿಗೆ ಪರಸ್ಪರ ವಿರೋಧವಿಲ್ಲ.

ಹೀಗೆ ನಿರ್ಣಯಿಸಿದ ಆಚಾರ್ಯರ ಮತ ಅವರಿಗಿಂತ ಹಿಂದಿನವರಿಗೂ ಒಪ್ಪಿತವಾಗಿತ್ತು. ಆಚಾರ್ಯರಿಗಿಂತ ಹಿಂದೆ ವೇದಾಂತಗಳನ್ನು ವ್ಯಾಖ್ಯಾನಿಸಿದವರೆಲ್ಲ ಏಕಾತ್ಮವಾದಿಗಳೇ ಆಗಿದ್ದರು ಮತ್ತು ಜೀವಾತ್ಮ ಪರಮಾತ್ಮರ ಅಭೇದವನ್ನು ಒಪ್ಪಿದ್ದರು ಎಂಬುದಕ್ಕೆ ಭಾಷ್ಯದಲ್ಲಿ ಸೂಚನೆ ಸಿಗುತ್ತದೆ.[೧೧] ಬ್ರಹ್ಮಜ್ಞಾನದಿಂದ ಮಾತ್ರವೆ ಮುಕ್ತಿ, ಅದಕ್ಕೆ ಬೇರೆ ಮಾರ್ಗವೇ ಇಲ್ಲ.. ಎಂದು ಮುಂತಾಗಿ ಬೋಧಿಸುವ ವಾಕ್ಯಗಳು ಪ್ರಪಂಚವು ಅಜ್ಞಾನ ಕಲ್ಪಿತವೆಂದು ತೋರಿಸಿಕೊಟ್ಟು ಆಚಾರ್ಯರ ಕೆಲಸವನ್ನು ಬಹುಮಟ್ಟಿಗೆ ಸುಲಭವಾಗಿಸಿವೆ.

ಉಪನಿಷದ್ಭಾಷ್ಯದಲ್ಲಿ ಕರ್ಮದಿಂದಲೆ ಮುಕ್ತಿ ಎಂಬ ವಾದವನ್ನು ಪದೇ ಪದೇ ಉದ್ಧರಿಸಿ ಖಂಡಿಸಿದೆ. ಈ ವಾದದಲ್ಲಿ ಅನೇಕ ಪ್ರಕಾರಗಳಿವೆ. ಕೆಲವರ ಪ್ರಕಾರ ಕಾಮ್ಯನಿಷಿದ್ಧ ಕರ್ಮಗಳನ್ನು ಬಿಟ್ಟು ನಿತ್ಯಕರ್ಮಗಳನ್ನು ಮಾತ್ರ ಮಾಡುತ್ತಿದ್ದರೆ ಮುಕ್ತಿ. ಇನ್ನು ಕೆಲವರದು ವಿದ್ಯಾಸಹಿತವಾದ ಕರ್ಮದಿಂದ ಮುಕ್ತಿ, ವಿದ್ಯಾಕರ್ಮಗಳ ಸಮುಚ್ಚಯದಿಂದ ಮುಕ್ತಿ, ಕರ್ಮಸಹಿತವಾದ ವಿದ್ಯೆಯಿಂದ ಮುಕ್ತಿ ಹೀಗೆ ನಾನಾ ಪಕ್ಷಗಳನ್ನು ವಿವರಿಸಿ ಖಂಡಿಸಲಾಗಿದೆ. ಇದಕ್ಕಾಗಿ ಆಚಾರ್ಯರು ಬಳಸಿದ ಯುಕ್ತಿಯನ್ನು ಸ್ಥೂಲವಾಗಿ ಹೀಗೆ ಹೇಳಬಹುದು– ಕರ್ಮವು ವಯಸ್ಸು, ಲಿಂಗ, ವರ್ಣ, ಆಶ್ರಮ

---

೧೦. 'ನಚ ಪ್ರಮಾಣಂ ಪ್ರಮಾಣಾಂತರೇಣ ವಿರುಧ್ಯತೇ' 'ಸ್ವವಿಷಯಶೂರಾಣಿ ಹಿ ಪ್ರಮಾಣಾನಿ' ಬೃ. ಭಾ. ೨-೧-೨೦.

೧೧. ಏಕತ್ವವಾದೀ ಭವಾನ್. ವೇದಾರ್ಥಪರತ್ವಾತ್. ತೈ. ಭಾ. ೨-೮.
ಸರ್ವೋಪನಿಷತ್ಸು ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಪ್ರತಿಪತ್ತಿಃ ವಿಧೀಯತೇ ಇತಿ ಅವಿಪ್ರತಿಪತ್ತಿಃ ಸರ್ವೇಷಾಮುಪನಿಷದ್ವಾದಿನಾಂ. ಬೃ. ೨-೧-೨೦.
ಸರ್ವಶಾಖೋಪನಿಷತ್ಸು ಚ ಬ್ರಹ್ಮೈಕತ್ವವಿಜ್ಞಾನಂ ನಿಶ್ಚಿತೋಽರ್ಥಃ. ಬೃ. ೧-೪-೧೦.

ಮುಂತಾದ ಅಭಿಮಾನವನ್ನು ಆಶ್ರಯಿಸಿಯೆ ವಿಹಿತವಾಗಿರುತ್ತದೆ. ಆತ್ಮನನ್ನು ನಿಸ್ಸಂಗ-ನಿರ್ವಿಕಾರನೆಂದು ಹೇಳುವ ಶ್ರುತಿವಾಕ್ಯಗಳಿಂದುಂಟಾದ ಜ್ಞಾನವು ಈ ಅಭಿಮಾನವನ್ನು ಸಮೂಲವಾಗಿ ನಾಶಮಾಡುತ್ತದೆ. ಅದ್ದರಿಂದ ವಿದ್ಯಾಕರ್ಮಗಳು ಬೆಳಕು ಕತ್ತಲೆಗಳಂತೆ ಒಟ್ಟಿಗೆ ಇರಲಾರವು. ಕರ್ಮದ ಫಲವು ಉತ್ಪಾದ್ಯ, ಪ್ರಾಪ್ಯ, ಸಂಸ್ಕಾರ್ಯ, ವಿಕಾರ್ಯ ಈ ನಾಲ್ಕರಲ್ಲಿ ಒಂದಾಗಿರುತ್ತದೆ. ಜ್ಞಾನದ ಫಲವಾದ ಮೋಕ್ಷವು ಇದಾವುದೂ ಅಲ್ಲ. ಹೀಗೆ ಸ್ವರೂಪ ಫಲಗಳಲ್ಲಿ ಭೇದವಿರುವುದರಿಂದ ಇವು ಒಟ್ಟು ಸೇರಿ ಮೋಕ್ಷವನ್ನುಂಟುಮಾಡಲಾರವು.[೧೨] ಜ್ಞಾನದಿಂದ ಮಾತ್ರವೇ ಮೋಕ್ಷ. ಆದರೆ ಚಿತ್ತಶುದ್ಧಿಯನ್ನುಂಟುಮಾಡುವುದರ ಮೂಲಕ ಕರ್ಮವು ಜ್ಞಾನದ ಉತ್ಪತ್ತಿಗೆ ಸಾಧನವಾಗಬಹುದು.[೧೩]

ಆತ್ಮಜ್ಞಾನವನ್ನು ಪಡೆಯಲು ಸನ್ಯಾಸಾಶ್ರಮವೆ ಹೆಚ್ಚು ಅನುಕೂಲ ಎಂದು ಅವರು ಒತ್ತಿ ಒತ್ತಿ ಹೇಳುತ್ತಾರೆ. ಇದರಿಂದಾಗಿ 'ಶಂಕರರು ಸನ್ಯಾಸದ ಪಕ್ಷಪಾತಿಗಳು' ಎಂಬ ಟೀಕೆಗೂ ಅವರು ಗುರಿಯಾಗಬೇಕಾಯಿತು. ಅಂಥ ಟೀಕಾಕಾರರಲ್ಲಿ ಬಾಲಗಂಗಾಧರ ತಿಲಕರು ಪ್ರಮುಖರು. ಸನ್ಯಾಸಾಶ್ರಮವನ್ನು ಸ್ವೀಕರಿಸಿದರೂ ಸಹ ಆ ಆಶ್ರಮಕ್ಕೆ ಉಚಿತವಾದ ಕರ್ಮಗಳು ಅಲ್ಲೂ ಇವೆ. ಕರ್ಮದಿಂದ ಸರ್ವಥಾ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಹೀಗಿರುವಾಗ ಗೃಹಸ್ಥಾಶ್ರಮದಲ್ಲಿಯೆ ಇದ್ದು ಕರ್ಮಯೋಗಿಯಾಗಿಯೆ ಜ್ಞಾನವನ್ನು ಪಡೆಯಬಹುದು ಎಂಬುದು ಆ ಟೀಕಾಕಾರರ ಅಭಿಪ್ರಾಯ. ಆದರೆ ಈ ಆಕ್ಷೇಪ ಮೊದಲೆ ಸತ್ತು ಹುಟ್ಟಿದ ಕೂಸು. ಆಚಾರ್ಯರೆ ಈ ಆಕ್ಷೇಪಗಳನ್ನು ಎತ್ತಿಕೊಂಡು ಸಮಾಧಾನ ಹೇಳಿದ್ದಾರೆ. 'ಭಿಕ್ಷೆಬೇಡುವುದು ಅಪಮಾನಕರ ಹಾಗೂ ಕಷ್ಟವೆಂದು ತಿಳಿದು ಹೆದರಿದ ಕೆಲವು ಗೃಹಸ್ಥರು ತಾವು ಬುದ್ಧಿವಂತರೆಂದು ತೋರಿಸಿಕೊಳ್ಳುತ್ತ ಈ ರೀತಿಯ ಆಕ್ಷೇಪಗಳನ್ನು ಮಾಡುತ್ತಾರೆ' ಎಂದು ಮುಂತಾಗಿ ಅವರು ಮೊದಲೆ ಈ ವಾದದ ಪೊಳ್ಳುತನವನ್ನು ಬಯಲಿಗೆಳೆದಿದ್ದಾರೆ.[೧೪] ಸನ್ಯಾಸಾಶ್ರಮಕ್ಕೆ ಹೆಚ್ಚು ಒತ್ತುಕೊಟ್ಟಿದ್ದಕ್ಕೆ ಅವರು ಕಾರಣವನ್ನು ಹೀಗೆ ವಿವರಿಸುತ್ತಾರೆ. ಬ್ರಹ್ಮಸಂಸ್ಥನೆ ಮುಕ್ತನಾಗುತ್ತಾನೆಂದು ಶ್ರುತಿಗಳು ಹೇಳುತ್ತವೆ.[೧೫] ಅನ್ಯಾಸಕ್ತನಾಗದೆ ಸದಾ ಬ್ರಹ್ಮಚಿಂತನೆಯನ್ನು ಮಾಡುತ್ತಿರುವುದೆ ಬ್ರಹ್ಮಸಂಸ್ಥೆ. ಇದು ಗೃಹಸ್ಥಾಶ್ರಮಿಯಾದವನಿಗೆ ಸಾಧ್ಯವಿಲ್ಲ. ಆದ್ದರಿಂದ ಮುಕ್ತಿಯ ಬಗ್ಗೆ ತೀವ್ರವಾದ ಇಚ್ಛೆಯುಳ್ಳವನು ಸನ್ಯಾಸ ಸ್ವೀಕಾರ ಮಾಡಲೇ ಬೇಕು. 'ಅಕ್ಕಿಯ ಮೇಲೆ ಆಸೆ, ನೆಂಟರ ಮೇಲೆ ಪ್ರೀತಿ' ಎಂಬ ಭಾವನೆ ಇಲ್ಲಿ ಸಲ್ಲದು.

---

೧೨. ಈ ವಿಷಯದ ಚರ್ಚೆ ಭಾಷ್ಯದಲ್ಲಿ ಅನೇಕ ಕಡೆ ಬಂದಿದೆ. ಮುಖ್ಯವಾಗಿ ಈ ಭಾಗಗಳನ್ನು ನೋಡಬಹುದು. ಕೇನ, ಛಾಂದೋಗ್ಯ, ತೈತ್ತಿರೀಯದ ಪೀಠಿಕೆಗಳು, ಈಶ ೧-೮. ಛಾಂ. ೨-೨೩-೧, ತೈ. ೧-೧೧, ಬೃ. ೩-೩-೧.

೧೩. ಕೇನ. ೪-೮.

೧೪. ಐತರೇಯ ಪೀಠಿಕೆ.

೧೫. ಛಾಂ. ೧-೨೩-೧.

ಮಾನವರಿಗೆ ಪರಮಪುರುಷಾರ್ಥವನ್ನು ದೊರಕಿಸಿಕೊಡುವ ಶ್ರುತಿಯ ಬಗ್ಗೆ ಆಚಾರ್ಯರಿಗೆ ಪರಮಗೌರವ. ತಾಯಿತಂದೆಯವರಿಗಿಂತ ಸಾವಿರಪಟ್ಟು ಹಿತೈಷಿಯಾದ ವೇದವು ಬೋಧಿಸಿದ ಆತ್ಮೈಕತ್ವವನ್ನು ಆದರಿಸಬೇಕು ಎನ್ನುತ್ತಾರೆ.[೧೬] ಕೇವಲ ತತ್ತ್ವನಿರ್ಣಯವನ್ನು ಮಾಡಲು ಹೊರಡುವವರ ಬಗ್ಗೆ, ತರ್ಕಬಲದಿಂದಲೆ ವೇದಾರ್ಥವನ್ನು ತಮ್ಮ ಮೂಗಿನ ನೇರಕ್ಕೆ ಒಯ್ಯುವವರ ಬಗ್ಗೆ ಅವರಿಗೆ ತುಂಬ ಕೋಪ. ತಮ್ಮ ಭಾಷ್ಯದಲ್ಲಿ ಅಲ್ಲಲ್ಲಿ ಅವರು ಇಂಥ ಒಣತಾರ್ಕಿಕರನ್ನು ಟೀಕಿಸುತ್ತಾರೆ– ತರ್ಕದ ಬಲದಿಂದ ತಾತ್ಕಾಲಿಕವಾಗಿ ಕೆಲವು ಸಿದ್ಧಾಂತಗಳನ್ನು ಸ್ಥಾಪಿಸಬಹುದು. ಆದರೆ ಅದು ಶ್ರುತ್ಯರ್ಥವಾಗುವುದಿಲ್ಲ.[೧೭] ತಾರ್ಕಿಕರು ಶ್ರುತಿಪ್ರಾಮಾಣ್ಯವನ್ನು ಬಿಟ್ಟು ಆತ್ಮನು ಕರ್ತೃ-ಅಕರ್ತೃ ಮುಂತಾಗಿ ಪರಸ್ಪರ ವಿರುದ್ಧವಾಗಿ ವಾದಿಸುತ್ತ ಶಾಸ್ತ್ರಾರ್ಥವನ್ನೇ ಗೊಂದಲಗೊಳಿಸುತ್ತಾರೆ.[೧೮] ತಾವೇ ಪಂಡಿತರೆಂದು ಭಾವಿಸಿದ ಇವರು ಮನಸ್ಸಿಗೆ ಬಂದಂತೆ ವಾದಿಸುತ್ತಾರೆ. ಬ್ರಹ್ಮೈಕತ್ವದ ವಿಷಯದಲ್ಲಿ ಪ್ರತ್ಯಕ್ಷ ಅನುಮಾನ ಆಗಮಗಳ ವಿರೋಧವನ್ನೂ ತೋರಿಸುತ್ತಾರೆ.[೧೯] ಈ ತಾರ್ಕಿಕರೆಂದರೆ ಬಾಲಕೊಂಬುಗಳಿಲ್ಲದ ಗೂಳಿಗಳಂತೆ,[೨೦] ವೇದದಿಂದ ಮಾತ್ರವೇ ತಿಳಿದು ಬರುವ ಬ್ರಹ್ಮೈಕತ್ವದ ವಿಷಯದಲ್ಲಿ ಈ ತಾರ್ಕಿಕವಂಚಕರಿಗೆ ಪ್ರವೇಶವಿಲ್ಲ[೨೧]..... ಹೀಗೆ ಅಲ್ಲಲ್ಲಿ ತಾರ್ಕಿಕರ ಮೇಲೆ ತಮ್ಮ ಚಾಟಿಯನ್ನು ಬೀಸುತ್ತಾರೆ. ಇಲ್ಲೆಲ್ಲ ತಾರ್ಕಿಕರೆಂದರೆ ಹೆಚ್ಚಾಗಿ ಸಾಂಖ್ಯರೇ ಆಗಿರುತ್ತಾರೆ. ಜೈನ-ಬೌದ್ಧ-ಕಾಣಾದರನ್ನೂ ಅಲ್ಲಲ್ಲಿ ತರಾಟೆಗೆ ತೆಗೆದುಕೊಳ್ಳುತ್ತಾರೆ.

ಇವರೆಲ್ಲ ಶ್ರುತಿಯನ್ನು ಬಿಟ್ಟು ಸ್ವತಂತ್ರವಾಗಿ ಸಿದ್ಧಾಂತವನ್ನು ರೂಪಿಸಲು ಹೊರಟವರಾಯಿತು. ಉಪನಿಷತ್ತುಗಳನ್ನು ಪ್ರಮಾಣಗಳೆಂದು ಭಾವಿಸಿದವರಲ್ಲಿಯೂ ಸಹ ಕೆಲವರು ತಮ್ಮ ಅಪವ್ಯಾಖ್ಯಾನದಿಂದ ಶ್ರುತ್ಯರ್ಥವನ್ನೂ ಕಲುಷಿತಗೊಳಿಸಿದ್ದುಂಟು. ಅಂಥವರ ಮತವನ್ನು ಎತ್ತಿಕೊಂಡು ಖಂಡಿಸುವ ಸಂದರ್ಭದಲ್ಲಿ ಒಂದು ಮಾತು ಹೇಳುತ್ತಾರೆ. "ನೀವು ಹೇಳುವುದೆ ಶ್ರುತಿಯ ಅರ್ಥವಾಗುವುದಾದರೆ ಆಗಲಿ. ನನಗೇನೂ ದ್ವೇಷವಿಲ್ಲ,[೨೨] ಆದರೆ ಅದು ಶ್ರುತ್ಯರ್ಥವಾಗುವುದಿಲ್ಲ. ಹೀಗೆಲ್ಲ ಅಪಾರ್ಥ ಮಾಡುವುದಕ್ಕಿಂತ ಉಪನಿಷತ್ತನ್ನೆ ಕೈಬಿಡುವುದು ಉತ್ತಮ."[೨೩] ಹೀಗೆ ಭಾಷ್ಯದುದ್ದಕ್ಕೂ ಶ್ರುತ್ಯರ್ಥದ ರಕ್ಷಣೆಯಲ್ಲಿಯೇ ಸದಾ ಜಾಗರೂಕರಾಗಿರುತ್ತಾರೆ. ಶ್ರುತಿಯ ಪರಮತಾತ್ಪರ್ಯಕ್ಕೆ ಭಂಗಬಾರದಂತಹ ಅಮುಖ್ಯವಾದ ವಿಷಯಗಳಲ್ಲಿ ಬೇರೆಯವರ ವ್ಯಾಖ್ಯಾನವನ್ನು ಮನ್ನಿಸುವ ಗುಣವೂ ಅವರಿಗುಂಟು.

---

೧೬. ಕಠ. ೪-೧೫.
೧೭. 'ಶ್ರುತ್ಯರ್ಥಸ್ತು ನಭವತಿ'. ಐ. ೪-೧.
೧೮. ಬೃ. ೧-೪-೬.
೧೯. ಬೃ. ೨-೧-೨೦.
೨೦. ಬೃ. ೨-೧-೨೦.
೨೧. ಬೃ. ೨-೧-೨೦.
೨೨. ಬೃ. ೨-೩-೫.
೨೩. ಬೃ. ೫-೧-೧.

ಏಕಮೇವಾದ್ವಿತೀಯವಾದ ಬ್ರಹ್ಮವು ನಾನಾ ಜೀವರುಗಳಾಗಿ ಪ್ರಕಟಗೊಳ್ಳುವುದಕ್ಕೆ ಅಂತಃಕರಣರೂಪ ಉಪಾಧಿಯೆ ಕಾರಣವೆನ್ನುವುದು ವೇದಾಂತಕ್ಕೆ ಒಪ್ಪಿತವಾದ ವಿಷಯ. ಆದರೆ ಆ ಉಪಾಧಿಯ ಮುಂದಿನ ವೇದಾಂತಿಗಳು ಬೇರೆ ಬೇರೆ ವಿವರಣೆಯನ್ನು ಕೊಡುತ್ತಾರೆ. ಕೆಲವರು– ಒಬ್ಬನೇ ಸೂರ್ಯನು ಬೇರೆ ಬೇರೆ ಜಲಗಳಲ್ಲಿ ಬೇರೆ ಬೇರೆ ಪ್ರತಿಬಿಂಬವನ್ನು ಮೂಡಿಸುವಂತೆ, ಒಂದೇ ಬ್ರಹ್ಮವು ಬೇರೆ ಬೇರೆ ಅಂತಃಕರಣಗಳಲ್ಲಿ ಮೂಡಿಸಿದ ಪ್ರತಿಬಿಂಬವೇ ಜೀವ– ಎನ್ನುತ್ತಾರೆ. ಇದಕ್ಕೆ ಪ್ರತಿಬಿಂಬವಾದ ಎಂದು ಹೆಸರು. ಶ್ರುತಿಸೂತ್ರಗಳಲ್ಲಿ ಇದಕ್ಕೆ ಅನುಕೂಲವಾದ ಉದಾಹರಣೆಗಳಿವೆ. ಇನ್ನು ಕೆಲವರು– ಒಂದೇ ಆದ ಆಕಾಶವು ಘಟಾಕಾಶ ಮಠಾಕಾಶ ಮುಂತಾಗಿ ಅವಚ್ಛೇದಕ (ಇಲ್ಲಿ ಆವರಣ) ಭೇದದಿಂದ ಭಿನ್ನವಾಗಿ ತೋರುವಂತೆ ಅಂತಃಕರಣದ ಅವಚ್ಛೇದದಿಂದಾಗಿ ಜಿವರಲ್ಲಿ ಭಿನ್ನತೆ– ಎನ್ನುತ್ತಾರೆ. ಇದಕ್ಕೆ ಅವಚ್ಛೇದವಾದವೆಂದು ಹೆಸರು. ಈ ಎರಡೂ ವಾದಗಳಿಗೂ ಉಪನಿಷದ್ಭಾಷ್ಯದಲ್ಲಿ ಸೂಚನೆಯುಂಟು. ಆಚಾರ್ಯರು ಎರಡೂ ವಾದಗಳನ್ನು ಸಮನಾಗಿ ಕಂಡಿದ್ದಾರೆ. ಎರಡಕ್ಕೂ ಅನುಕೂಲವಾದ ಉದಾಹರಣೆಗಳು ಅವರ ಭಾಷ್ಯದಲ್ಲಿ ಸಿಗುತ್ತವೆ.[೨೪] ಅದ್ವಿತೀಯ ಆತ್ಮಬೋಧನೆಗೆ ಸಹಾಯವಾಗುವ ಯಾವುದೇ ಮಾರ್ಗವಾದರೂ ಸರಿ. ಅದು ಉಪಾದೇಯವೆ ಎಂಬುದು ಅವರ ನಿಲುವು.

ಶ್ರುತಿವಾಕ್ಯಗಳಿಗೆ ಅರ್ಥವನ್ನು ನೀಡುವ ರೀತಿಯೂ ಅಸದೃಶವಾದುದು. ಅನೇಕ ಕಡೆಗಳಲ್ಲಿ ವಾಚ್ಯಾರ್ಥಕ್ಕಿಂತ ಸೂಚ್ಯಾರ್ಥಕ್ಕೆ ಹೆಚ್ಚು ಮಹತ್ವವನ್ನು ನೀಡಲಾಗಿದೆ. ಔಚಿತ್ಯದ ಕಡೆಗೆ ಅವರ ವಿಶೇಷ ಲಕ್ಷ್ಯ. ಸತ್ಯಕಾಮನ ಕಥೆಯಲ್ಲಿ ಜಬಾಲಾಳ ಮಾತನ್ನು ಸರಿಯಾಗಿ ಅರ್ಥೈಸಲಿಲ್ಲ ಎಂಬ ಆಕ್ಷೇಪವೊಂದು ಅವರ ಮೇಲುಂಟು. ಹಾಗೇನಾದರೂ ಮಾಡಿದ್ದಿದ್ದರೆ ಆಕೆಯನ್ನು ಪತಿತೆಯನ್ನಾಗಿ ಚಿತ್ರಿಸಿದಂತಾಗುತ್ತಿತ್ತು. 'ತಾಯಿಯ ತಪ್ಪನ್ನು ಎತ್ತಿ ಆಡುವ ಅಧಿಕಾರ ಮಗನಿಗಿಲ್ಲ' ಎಂಬ ಧರ್ಮಶಾಸ್ತ್ರವೊಂದಿದೆಯಂತೆ. ಅದರಂತೆ ಆಕೆಯನ್ನು ಮಾತೃಭಾವದಿಂದ ಕಂಡ ಆಚಾರ್ಯರು ಆಕೆಯನ್ನು ಸಾಧ್ವಿಯನ್ನಾಗಿಯೆ ಚಿತ್ರಿಸಿದ್ದು ಅವರ ಆಶ್ರಮಕ್ಕೆ ಉಚಿತವಾಗಿಯೆ ಇದೆ. ಆತ್ಮೈಕ್ಯ ಸಿದ್ಧಿಯಲ್ಲಿಯೆ ಬದ್ಧರಾದ ಅವರಿಗೆ ವ್ಯಾವಹಾರಿಕ ವಿಷಯದಲ್ಲಿ ಹೆಚ್ಚಿನ ಆದರವಿರಲಿಲ್ಲ ಎನ್ನುವುದಕ್ಕೆ ಇದೂ ಒಂದು ಉದಾಹರಣೆ. ವ್ಯಾಕರಣಸೂತ್ರಗಳನ್ನು ಅನುಸರಿಸಿಯೆ ವ್ಯಾಖ್ಯಾನ ಮಾಡುವುದು ಅವರ ಮತ್ತೊಂದು ಗುಣ. ಉಪಸರ್ಗ ಪ್ರತ್ಯಯಗಳ ಅರ್ಥದೊಡನೆಯೆ ಧಾತುವಿನ ಅರ್ಥವನ್ನು ಅವರು ವಿವರಿಸುತ್ತಾರೆ. ಈ ಪದ್ಧತಿಯನ್ನು ನಾವು ಬೇರೆಯವರ ವ್ಯಾಖ್ಯಾನದಲ್ಲಿ ಕಾಣುವುದು ಕಷ್ಟ.

---

೨೪. ಪ್ರತಿಬಿಂಬ ವಾದಕ್ಕೆ ಪೋಷಕವಾದ ಉದಾಹರಣೆಗಳು– ಐ. ೫-೩, ಕಠ ೬-೫, ಮಾಂ. ೧-೬, ಕೇನ ೨-೪, ಛಾಂ. ೬-೩-೩, ೬-೧೬-೩, ಮುಂಡಕ. ೩-೨-೭, ಅವಚ್ಛೇದ ವಾದಕ್ಕೆ ಉದಾಹರಣೆಗಳು. ಈಶ ೧-೭, ಮಾಂಡೂಕ್ಯ ೧-೬, ೧-೭, ಮುಂಡಕ ೩-೨-೭, ಬೃ. ೨-೧-೧೦.

ಆಚಾರ್ಯರ ಶೈಲಿಯನ್ನು ಅನೇಕ ವಿಮರ್ಶಕರು ಮೆಚ್ಚಿದ್ದಾರೆ. ಅವರ ಸೂತ್ರಭಾಷ್ಯದ ಶೈಲಿ ಪ್ರಸನ್ನ ಗಂಭೀರವಾದದ್ದು. . ಗೀತಾಭಾಷ್ಯದಲ್ಲಿ ಪ್ರಸನ್ನತೆ ಸ್ವಲ್ಪ ಹೆಚ್ಚಾದರೆ ಉಪನಿಷದ್ಭಾಷ್ಯದಲ್ಲಿ ಗಾಂಭೀರ್ಯ ಹೆಚ್ಚು ಪ್ರಸನ್ನತೆ ಕಡಿಮೆ ಎನ್ನಿಸುತ್ತದೆ. ಅವರ ಪ್ರಖರವಾದ ಶೈಲಿಯು ಕೆಲವೊಂದು ಪ್ರಕರಣಗಳನ್ನು ದುರ್ಗಮವನ್ನಾಗಿ ಮಾಡಿದೆ. ಅದರಲ್ಲಿಯೂ ಬೃಹದಾರಣ್ಯಕಭಾಷ್ಯವು ಸಾಮಾನ್ಯರಿಗೆ ದುರವಗಾಹವೆ. ಈ ಭಾಷ್ಯವನ್ನು ಆಚಾರ್ಯರ ಶ್ರೇಷ್ಠ ಕೃತಿ ಎಂದು ಕರೆಯಬಹುದು. ವೇದಾಂತ ಸಿದ್ಧಾಂತದ ಮೇಲೆ ಬರುವ ಹೆಚ್ಚಿನ ಆಕ್ಷೇಪಗಳಿಗೆ ಇಲ್ಲಿ ಸಮಾಧಾನ ನೀಡಲಾಗಿದೆ. ಸ್ವಕಪೋಲಕಲ್ಪಿತಸಿದ್ಧಾಂತಗಳನ್ನು ಪ್ರಬಲವಾದ ಯುಕ್ತಿಗಳಿಂದ ಖಂಡಿಸಲಾಗಿದೆ. ಈ ಭಾಷ್ಯವನ್ನು ಅಧ್ಯಯನ ಮಾಡದಿದ್ದರೆ ಅದ್ವೈತ ಶಾಸ್ತ್ರಾಧ್ಯಯನ ಸಂಪೂರ್ಣವೆನ್ನಿಸಿಕೊಳ್ಳುವುದಿಲ್ಲ. ಇದರ ಮಹತ್ತ್ವವನ್ನು ಮನಗಂಡೆ ಸುರೇಶ್ವರಾಚಾರ್ಯರು ಹನ್ನೊಂದು ಸಾವಿರ ಶ್ಲೋಕಗಳ ವಾರ್ತಿಕವನ್ನು ಬರೆದು ಈ ಭಾಷ್ಯಕ್ಕೆ ವಿವರಣೆಯನ್ನಿತ್ತಿದ್ದಾರೆ.

ಉಪನಿಷದ್ಭಾಷ್ಯವನ್ನೂ ನಾವು ಎರಡು ಭಾಗವಾಗಿ ಮಾಡಿಕೊಂಡು ದೃಷ್ಟಿ ಹರಿಸಬಹುದು. ಒಂದು – ಉಪನಿಷದ್ ವಾಕ್ಯಗಳಿಗೆ ಆಚಾರ್ಯರು ಮಾಡಿದ ವ್ಯಾಖ್ಯಾನ. ಎರಡು – ಆ ವಾಕ್ಯಗಳ ಅರ್ಥವನ್ನೆ ಸಿದ್ಧಾಂತವನ್ನಾಗಿಟ್ಟುಕೊಂಡು ತಮ್ಮದೇ ಆದ ಪ್ರತಿಭೆಯಿಂದ ಮಾಡಿದ ಅದರ ಸಮರ್ಥನೆ, ಅದರ ವಿರುದ್ಧವಾದ ಅಭಿಪ್ರಾಯಗಳ ಖಂಡನೆ. ಇವುಗಳಲ್ಲಿ ಮೊದಲನೆಯದು ಅಂದರೆ ಉಪನಿಷತ್ತುಗಳಿಗೆ ಅರ್ಥ ನೀಡಿರುವುದು ಅತ್ಯಂತ ಸರಳ ಹಾಗೂ ಸಹಜವಾಗಿ ಮೂಡಿಬಂದಿದೆ. ಯಾವುದೇ ರೀತಿಯಲ್ಲಿಯೂ ಪದಗಳ ಹಿಗ್ಗಾಟ ಮುಗ್ಗಾಟ ಕಂಡುಬರುವುದಿಲ್ಲ. ಏಕಾಕ್ಷರ ಕೋಶ ಬಳಸಿ ತಮ್ಮ ಮನಸ್ಸಿನಲ್ಲಿರುವ ಅರ್ಥವನ್ನೆ ಅವುಗಳಲ್ಲಿ ತುಂಬುವ ಪ್ರಯತ್ನವನ್ನೂ ಮಾಡಿರುವುದಿಲ್ಲ. ಅವುಗಳನ್ನು ಹಾಗೇ ಓದಿಕೊಂಡು ಹೋದರೆ ಸಾಕು, ಉಪನಿಷದ್ ವಾಕ್ಯಗಳಿಗೂ ಆಚಾರ್ಯರು ನೀಡಿರುವ ಅರ್ಥಕ್ಕೂ ಇರುವ ಸಾಂಗತ್ಯ ಎದ್ದು ಕಾಣುತ್ತದೆ. ಇದಕ್ಕಾಗಿ ಬೇರೆಯವರ ಭಾಷ್ಯದೊಡನೆ ಆಚಾರ್ಯರ ಭಾಷ್ಯವನ್ನು ತುಲನೆ ಮಾಡುವ ಅವಶ್ಯಕತೆಯೇ ಬರದು. ಶಂಕರರ ಚರಿತ್ರೆಯಲ್ಲಿ ಅವರು ಪರಕಾಯಪ್ರವೇಶ ಮಾಡಿದ ಘಟನೆಯೊಂದು ವರ್ಣಿಸಲ್ಪಟ್ಟಿದೆ. ಪ್ರಕೃತದಲ್ಲಿ ಅವರು ಉಪನಿಷದ್ ಋಷಿಗಳ ಅಂತಃಕರಣವನ್ನು ಪ್ರವೇಶ ಮಾಡಿ ಅವರ ಅಭಿಪ್ರಾಯವನ್ನೇ ಯಥಾವತ್ತಾಗಿ ಸಂಗ್ರಹಿಸಿದ್ದಾರೆಂದರೆ ಪ್ರಾಯಶಃ ಅತಿರಂಜನೆಯಾಗಲಾರದು.

ಇನ್ನು ಸ್ವವ್ಯಾಖ್ಯಾನದ ರೀತಿಯೂ ಅಷ್ಟೆ. ಪೂರ್ವಪಕ್ಷಿಯ ಸ್ಥಾನದಲ್ಲಿ ತಾವೇ ನಿಂತು ಸಾಮಾನ್ಯರಿಗೆ ಅನೂಹ್ಯವಾದ ಆಕ್ಷೇಪಗಳನ್ನೂ ಎತ್ತಿಕೊಂಡು ಸಮಾಧಾನ ನೀಡುವ ಅವರ ಕೌಶಲ್ಯವನ್ನು ಓದಿಯೇ ಅನುಭವಿಸಬೇಕು. ಇಷ್ಟಾದರೂ ಅವರಿಗೆ ತರ್ಕದ ಮೇಲೆ ವ್ಯಾಮೋಹವಿಲ್ಲ. 'ನಮ್ಮ ಮತದಲ್ಲಿ ಮುಮುಕ್ಷುಗಳಿಗೆ ಶ್ರದ್ಧೆಯುಂಟಾಗಲಿ ಎಂದು ತಾರ್ಕಿಕ ಮತದ ದೋಷವನ್ನು ತೋರಿಸಿದ್ದೇನೆಯೇ ವಿನಾ ಅವರಂತೆ ವಾದ ಮಾಡುವ

ಹವ್ಯಾಸದಿಂದಲ್ಲ.'[೨೫] ಎನ್ನುತ್ತಾರೆ. ಹೀಗೆ ಸ್ವಪಕ್ಷಸಮರ್ಥನೆ ಪರಪಕ್ಷ ಖಂಡನೆಗಳನ್ನು ಮಾಡಲು ಯುಕ್ತಿಖಡ್ಗವನ್ನು ಬೀಸುತ್ತಿರುವಾಗಲೆ ಅವರ ಕವಿಹೃದಯವೂ ಜಾಗ್ರತವಾಗಿರುತ್ತದೆ. ರಮಣೀಯವಾದ ವಾಕ್ಯಪುಂಜಗಳು ಮಧ್ಯೆ ಮಧ್ಯೆ ಅವರ ಲೇಖನಿಯಿಂದ ಹೊರಬೀಳುತ್ತವೆ. ಒಂದು ಕಡೆ ಸಂಸಾರವನ್ನು ಸಮುದ್ರಕ್ಕೆ ಹೋಲಿಸುವಾಗ ಇನ್ನೊಮ್ಮೆ ಸಂಸಾರವನ್ನು ಅಶ್ವತ್ಥ ವೃಕ್ಷಕ್ಕೆ ಹೋಲಿಸುವಾಗ ಅವರ ಅದ್ಭುತರೂಪಕ ಶಕ್ತಿಯನ್ನು ನಾವು ನೋಡಬಹುದು.[೨೬] ಅಲ್ಲಲ್ಲಿ ಸುಂದರವಾದ ದೃಷ್ಟಾಂತಗಳಿಂದಲೂ ತಮ್ಮ ಭಾಷ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಇಲ್ಲಿಯವರೆಗೆ ಆಚಾರ್ಯರ ಉಪನಿಷದ್ಭಾಷ್ಯದ ಮೇಲೆ ಒಂದು ಪಕ್ಷಿನೋಟವನ್ನು ಹರಿಸಿದ್ದಾಯಿತು. ಇದರಲ್ಲಿ ಇಡೀ ಭಾಷ್ಯ ಹಾಗಿರಲಿ ಭಾಷ್ಯದ ಒಂದು ಭಾಗವಾದರೂ ಸಮಗ್ರವಾಗಿ ಮೂಡಿಬಂದಿದೆಯೆನ್ನುವ ಸಾಹಸವನ್ನು ಈ ಲೇಖಕ ಮಾಡಲಾರ. ವೈಶಾಲ್ಯ ಗಾಂಭೀರ್ಯಗಳಲ್ಲಿ ಸಮುದ್ರೋಪಮವಾದ ಭಾಷ್ಯವನ್ನು ಚಿಕ್ಕ ಉದ್ಧರಣೆಯಂತಹ ಬುದ್ಧಿಯಿಂದ ಅಳೆಯಲು ಹೊರಟರೆ ಅದು ಕಾಲಿದಾಸನು ಹೇಳಿದಂತೆ 'ಉಡುಪೇನಾಸ್ಮಿ ಸಾಗರಂ' ಆದೀತು. ಇಲ್ಲಿ ಅನುಕ್ತವಾದದ್ದು ಬೇಕಾದಷ್ಟಿದ್ದರೂ ಚಿಂತೆಯಿಲ್ಲ, ದುರುಕ್ತವಿರಬಾರದು ಎಂಬುದೆ ಲೇಖಕನ ಆಸೆ. ಈ ವಿಷಯದಲ್ಲಿ ವಿದ್ವಾಂಸರೇ ನಿರ್ಣಾಯಕರು.

* * *

---

೨೫. ಪ್ರಶ್ನ ೬-೩.

೨೬. ಐತರೇಯ ೨-೧, ಕಠ ೬-೧.

# ಆದಿ ಶಂಕರರ ಸ್ತೋತ್ರ ಸಾಹಿತ್ಯ



ವಿದ್ವಾನ್ ವಿ. ಎನ್. ಭಟ್ಟ

ಭಾರತಮಾತೆಯ ಉದರದಲ್ಲಿ ಜನಿಸಿ, ಸರ್ವಶ್ರೇಷ್ಠ ಯತಿಗಳಾಗಿ, ವೈರಾಗ್ಯ ಚಕ್ರವರ್ತಿಗಳಾಗಿ, ಜಗದ್ಗುರುಗಳಾಗಿ, ಜಗದ್ವಂದ್ಯರಾಗಿ, ಜಗನ್ಮಾನ್ಯರಾಗಿ, ಮಹಾಕವಿಗಳಾಗಿ, ಮಹಾದಾರ್ಶನಿಕರಾಗಿ, ಯುಗಪುರುಷರಾಗಿ, ಧರ್ಮೋಪದೇಶಕರಾಗಿ ಬೆಳಗಿದ ಅಸಾಮಾನ್ಯ ಚೇತನ ಶ್ರೀ ಶಂಕರಾಚಾರ್ಯರು. ಅವರಂತೆ ತಮ್ಮ ಅಲ್ಪಾಯುಷ್ಯದಲ್ಲಿ ಕಲ್ಪವನ್ನು ಸಾಧಿಸಿದ ಇನ್ನೊಬ್ಬ ಯೋಗಿಯಿಲ್ಲ. ನಿರ್ಗುಣ ಬ್ರಹ್ಮವನ್ನು ಪ್ರತಿಪಾದಿಸಿದರೂ ಅವರಷ್ಟು ಸಗುಣ ದೇವತಾ ಸ್ತೋತ್ರಗಳನ್ನು ರಚಿಸಿದ ಇನ್ನೊಬ್ಬ ಋಷಿ ಕವಿಯಿಲ್ಲ.

> "ನಾನೃಷಿಃ ಕುರುತೇ ಕಾವ್ಯಂ ಋಷಿಶ್ಚ ಕಿಲ ದರ್ಶನಾತ್,
> ದರ್ಶನಾತ್ ವರ್ಣನಾಚ್ಚೈವ ರೂಢಾ ಲೋಕೇ ಕವಿಶ್ರುತಿಃ"[೧]

ಎಂಬಂತೆ, ದಾರ್ಶನಿಕ ಪ್ರಜ್ಞೆಯುಳ್ಳವನೇ ಋಷಿ. ತಾನು ಕಂಡ ದರ್ಶನವನ್ನು ಬೇರೆಯವರಿಗೂ ಕಣ್ಣಿಗೆ ಕಟ್ಟುವಂತೆ ವರ್ಣಿಸಬಲ್ಲವನೇ ಋಷಿಕವಿಯೆನಿಸುತ್ತಾನೆ. ಇಂತಹ ಋಷಿಕವಿಗಳಾದ ಆಚಾರ್ಯ ಶಂಕರರು, ಕಾವ್ಯ ರಚನೆಯನ್ನೇ ಮುಖ್ಯ ಗುರಿಯಾಗಿ ಇಟ್ಟುಕೊಂಡಿದ್ದರೆ ವಾಲ್ಮೀಕಿ, ಕಾಳಿದಾಸಾದಿಗಳ ಸ್ಥಾನದಲ್ಲೇ ನಿಲ್ಲುತ್ತಿದ್ದರು ಎಂಬಲ್ಲಿ ಸಂಶಯವಿಲ್ಲ. ಅವರೊಬ್ಬ ವರಕವಿಗಳೇ ಹೊರತು, ನರಕವಿಗಳಲ್ಲ. ಅವರ ಕಾವ್ಯಲಹರಿಯ ಸವಿಯುಂಡಾಗ "ನಿನ್ನಾಂಗ ಆಡಾಕ, ನಿನ್ನಾಂಗ ಹಾಡಾಕ ಪಡೆದು ಬಂದಿರಬೇಕೋ ಗುರುದೇವ" ಎಂಬ ಬೇಂದ್ರೆಯವರ ವಾಕ್ಯ ನೆನಪಾಗುತ್ತದೆ.

---

೧. ವಿವೇಕ ಚೂಡಾಮಣಿ ಶ್ಲೋಕ – ೩೨.

ನಿರ್ಗುಣ ಬ್ರಹ್ಮೋಪಾಸನೆಗೆ ಸಗುಣ ಬ್ರಹ್ಮೋಪಾಸನೆಯೂ ಸಾಧನ. ಇದನ್ನರಿತೇ ಶಂಕರರು ಅದ್ವೈತಿಗಳಾದರೂ ನಾನಾ ದೇವತೆಗಳನ್ನು ಸ್ತುತಿಸಿದ್ದಾರೆ. ಸ್ತೋತ್ರಗಳಿಗೆ ಭಕ್ತಿಯೇ ಮೂಲ. ಭಕ್ತಿಯ ಪರಿಭಾಷೆ ಹಲವಾರು. ಪೂಜ್ಯ ಭಗವತ್ಪಾದರು ತಮ್ಮ ವಿವೇಕಚೂಡಾಮಣಿಯಲ್ಲಿ ಭಕ್ತಿಯ ಹಿರಿಮೆ ಗರಿಮೆಗಳನ್ನು ಈ ರೀತಿ ವಿವರಿಸಿದ್ದಾರೆ.

"ಮೋಕ್ಷ ಸಾಧನ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ" ಎಂಬಂತೆ ಭಕ್ತಿಯೇ ಮುಕ್ತಿಯ ಶ್ರೇಷ್ಠ ಸಾಧನ. ಶಂಕರರು ರಚಿಸಿರುವ ಸ್ತೋತ್ರಗಳಿಂದಲೂ ಇದು ಸುಸ್ಪಷ್ಟವಾಗುತ್ತದೆ.

"ಅಜ್ಞಾನಾಂ ಭಾವನಾರ್ಥಾಯ ಪ್ರತಿಮಾ ಸುಪ್ರತಿಷ್ಠಿತಾ" ಸಾಮಾನ್ಯ ಜನ ಏರಲಾರದ ಮಟ್ಟದ ಒಂದು ತತ್ವವನ್ನು ಬೋಧಿಸಿ, ಆ ಮಟ್ಟಕ್ಕೆ ಅವರ ಹತ್ತಿರ 'ಹಾರಿ' ಎನ್ನುವ ಬದಲು ತಾವೇ ಅ ಸ್ತರಕ್ಕೆ ಇಳಿದು ಬದ್ಧ ಜೀವಿಗಳನ್ನು ಉದ್ಧರಿಸುವ ಕಾರ್ಯವನ್ನು ಶ್ರೀ ಶಂಕರರು ಕೈಗೊಂಡರು. ಆಚಾರ್ಯ ಶಂಕರರಿಗೆ ಈ ಉಪಾಸನೆಗಳ ಅಗತ್ಯವಿಲ್ಲದಿದ್ದರೂ, ಜನರು ಸಗುಣನೋಪಾಸನೆಯ ಮೂಲಕವಾದರೂ ನಿರ್ಗುಣನೋಪಾಸನೆಯತ್ತ ಸಾಗಿ ಬರಲಿ ಎನ್ನುವುದೇ ಈ ಸ್ತೋತ್ರ; ಪ್ರಕರಣಾದಿಗಳ ಸರಳ ರಚನೆಯ ಉದ್ದೇಶವಾಗಿದೆ.

## ಶ್ರೀ ಶಂಕರರ ಸ್ತೋತ್ರ ಕಾವ್ಯವನ್ನು ಕುರಿತು ಜಿಜ್ಞಾಸೆ :

ಶ್ರೀ ಶಂಕರರು ನಾಮರೂಪರಹಿತವಾದ ಸಚ್ಚಿದಾನಂದ ರೂಪ ಆತ್ಮತತ್ವವನ್ನು ಜಗತ್ತಿಗೆ ನೀಡಿದ ಮಹಾತ್ಮರು. ಈ ಉದ್ದೇಶದಿಂದಲೇ ಪ್ರಸ್ಥಾನತ್ರಯಗಳಿಗೂ ಪಾಂಡಿತ್ಯಪೂರ್ಣ ಭಾಷ್ಯ ಬರೆದಿದ್ದಾರೆ. "ಭಾಷ್ಯಂಪ್ರಸನ್ನಂ ಗಂಭೀರಂ" [೨] ಎಂಬಂತೆ ಅವರ ಭಾಷ್ಯ ಪ್ರಸನ್ನವಾಗಿಯೂ, ಅಷ್ಟೇ ಗಂಭೀರವಾಗಿಯೂ ಇದೆ. ಇಂತಹ ನಿರ್ಗುಣ ನಿರಾಕಾರ ತತ್ವಕ್ಕೆ ಮೂರ್ತಿಪೂಜೆ ಸಹಜವಾಗಿಯೇ ವಿರೋಧ. ಆದ್ದರಿಂದ ಶಂಕರರು ದೇವತಾಮೂರ್ತಿಗಳನ್ನು ಕುರಿತು ಸ್ತೋತ್ರಕಾವ್ಯ ರಚಿಸಿದರೆ ? ಶ್ರೀ ಶಂಕರ ವಿರಚಿತವೆಂದು ಪ್ರಚಲಿತವಿರುವ ಸ್ತೋತ್ರಗಳನ್ನು ನಿಜವಾಗಿ ಅವರೇ ರಚಿಸಿದ್ದಾರೆಯೇ ? ಶಂಕರರ ಪರಂಪರೆಯಲ್ಲಿ ಬಂದ ಮುಂದಿನ ಆಚಾರ್ಯರೆಲ್ಲಾ ತಮ್ಮ ಅಂಕಿತವನ್ನು "ಶ್ರೀಮಜ್ಜಗದ್ಗುರು ಶಂಕರಾಚಾರ್ಯ"... ಎಂದೇ ಇಟ್ಟುಕೊಳ್ಳುವ ರೂಢಿ ಬೆಳೆದು ಬಂದಿರುವುದರಿಂದ ಈ ಸ್ತೋತ್ರ ಸಾಹಿತ್ಯವನ್ನು ಅವರುಗಳು ರಚಿಸಿರಬಹುದೆ ? ಇತ್ಯಾದಿ ಜಿಜ್ಞಾಸೆ ವಿಮರ್ಶಕರಲ್ಲಿ ಇದ್ದೇ ಇದೆ.

---

೨. ಭಾಮತಿ – ವಾಚಸ್ಪತಿಮಿಶ್ರರು.

## ಜಿಜ್ಞಾಸೆಯ ಉಪಶಮನ

ಶ್ರೀ ಶಂಕರರನ್ನು ಕುರಿತು ಪ್ರಸಿದ್ಧವಾದ ಈ ಸ್ತುತಿಪದ್ಯ ಮೇಲಿನ ಪ್ರಶ್ನೆಗಳಿಗೆ ಉತ್ತರವನ್ನು ನೀಡುತ್ತದೆ.

"ಶ್ರುತಿ ಸ್ಮೃತಿಪುರಾಣಾನಾಂ ಆಲಯಂ ಕರುಣಾಲಯಮ್
ನಮಾಮಿ ಭಗವತ್ಪಾದಂ ಶಂಕರಂ, ಲೋಕಶಂಕರಮ್"

ಅಂದರೆ, ಶ್ರುತಿ–ಸ್ಮೃತಿ ಪುರಾಣಗಳ ನೆಲೆಯೂ, ಕರುಣಾಮಯರೂ, ಲೋಕಕಲ್ಯಾಣ ಚಿಂತನಪರರೂ ಆದ ಶಂಕರ ಭಗವತ್ಪಾದರನ್ನು ನಮಿಸುತ್ತೇನೆ. ಈ ಪದ್ಯ ಶಂಕರರ ಅಗಾಧ ವಿದ್ವತ್ತನ್ನು ಪರಿಚಯಿಸುವದರೊಂದಿಗೆ, ಜನಕೋಟಿಯ ಉದ್ಧಾರದಲ್ಲಿ ಅವರಿಗಿರುವ ತುಡಿತ–ಮಿಡಿತಗಳನ್ನೂ, ಲೋಕ ಕಲ್ಯಾಣಕ್ಕಾಗಿ ಕರುಗುವ, ಮರುಗುವ ಅವರ ಹೃದಯ ವೈಶಾಲ್ಯವನ್ನೂ ಪರಿಚಯಿಸುತ್ತದೆ. ಮಹಾಪುರುಷರ ಹೃದಯ ವಜ್ರ ಕಠಿಣವಾದಂತೆ ಕುಸುಮ ಕೋಮಲವೂ ಹೌದು. ಸಂಸಾರ ಬಂಧನದಲ್ಲಿ ಸಿಲುಕಿದ ಬದ್ಧ ಜೀವಿಗಳಲ್ಲಿ ಅವರಿಗೆ ಅಪಾರ ಅನುಕಂಪ. ಅಜ್ಞಾನವಶರಾದವರಲ್ಲಂತೂ ಅತೀವ ಕಾರುಣ್ಯ. ತಮ್ಮ ಜೀವಿತಾವಧಿಯಲ್ಲಿ ಎರಡು ಬಾರಿ ಆಸೇತು ಶೀಮಾಚಲಪರ್ಯಂತ ಸಮಗ್ರ ಭಾರತದ ಪರ್ಯಟನವನ್ನು ಕೈಗೊಂಡ ಶಂಕರರು, ಈ ದೇಶದ ಕೋಟ್ಯಾಂತರ ಜೀವಿಗಳ ಸ್ಥಿತಿಗತಿಗಳನ್ನು ಪ್ರತ್ಯಕ್ಷ ಕಂಡಿದ್ದಾರೆ. ಅವರ ಆತ್ಮೋದ್ಧಾರವನ್ನು ಕುರಿತು ಚಿಂತಿಸಿದ್ದಾರೆ. ಕೇವಲ ಪಂಡಿತವರ್ಗವನ್ನು ತೃಪ್ತಿಪಡಿಸುತ್ತಾ, ಸಾಮಾನ್ಯ ಜನತೆಯಿಂದ ದೂರ ನಿಲ್ಲುವುದು ಅವರ ಜಾಯಮಾನವಲ್ಲ. ಈ ಕಾರಣದಿಂದಲೇ ಪ್ರೌಢವಾದ ಭಾಷ್ಯಗಳನ್ನು ಬರೆದಂತೆಯೇ ಸರಳವಾದ ಸುಲಭವಾದ ಚಿಕ್ಕ ಗಾತ್ರದ ಪ್ರಕರಣಗಳನ್ನು ರಚಿಸಿದ್ದಾರೆ. ಶ್ರೀಸಾಮಾನ್ಯರ ಉದ್ಧಾರದ ಬಗೆಗೆ ಅತೀವ ತುಡಿತ–ಮಿಡಿತವುಳ್ಳ ಅವರು, ಇನ್ನೂ ಒಂದು ಮೆಟ್ಟಿಲು ಕೆಳಗಿಳಿದು ಹೃದಯಂಗಮವಾದ ದೇವತಾ ಸ್ತೋತ್ರಗಳನ್ನು ರಚಿಸಿದ್ದಾರೆ.

ಸಾಮಾನ್ಯ ಜನರ ಆತ್ಮೋದ್ಧಾರಕ್ಕಾಗಿ ಭಗವತ್ಪಾದರು ಅನುಗ್ರಹಿಸಿದ ಈ ಸ್ತೋತ್ರಗಳು ಅನುಪಮವಾದವು. ಭಾಷ್ಯಾದಿಗಳಲ್ಲಿ ನಾಳಿಕೇರಪಾಕದಿಂದ ಪ್ರತಿಪಾದಿಸಿದ ಗಾಢ–ಗೂಢ ತತ್ವವನ್ನೇ ಅವರು ತಮ್ಮ ಈ ಸ್ತೋತ್ರ ಕಾವ್ಯಗಳಲ್ಲಿ ದ್ರಾಕ್ಷಾಪಾಕದಿಂದ ಜನಸಾಮಾನ್ಯರಿಗೂ ಅರ್ಥವಾಗುವಂತೆ ಸರಳವಾಗಿ ಸುಲಭವಾಗಿ ಸುಂದರವಾಗಿ ಪ್ರತಿಪಾದಿಸಿದ್ದಾರೆ. ಕಾವ್ಯ ಮಾಧುರ್ಯ, ಗೇಯಗುಣ, ಲಾಲಿತ್ಯ, ಸಾಹಿತ್ಯ ದೃಷ್ಟಿಯಿಂದ ಆಚಾರ್ಯರ ಸ್ತೋತ್ರಕಾವ್ಯಗಳು ಮೌಲಿಕವಾಗಿವೆ, ಸಾರ್ವಕಾಲಿಕವಾಗಿವೆ. ಇಲ್ಲಿ ಸಹೃದಯರನ್ನು ಕಾವ್ಯಾನಂದದಲ್ಲಿ ಮುಳುಗಿಸಿ, ತನ್ಮೂಲಕ ಗಹನವಾದ ತತ್ವಬೋಧನಗೈದಿದ್ದಾರೆ. ಶ್ರೀ ಗುರುವಿನ ಕರುಣಾಧಾರೆಯಂತೆ ಪ್ರವಹಿಸುತ್ತಿರುವ ಈ ಸ್ತೋತ್ರ ಸಾಹಿತ್ಯವನ್ನು ಸಾರಾಸಗಟಾಗಿ ಶ್ರೀ ಶಂಕರಕೃತವಲ್ಲವೆಂದು ದೂರೀಕರಿಸುವುದು ಸಾಧುವೂ ಅಲ್ಲ, ಸಾಧ್ಯವೂ ಇಲ್ಲ.

## ಶ್ರೀ ಶಂಕರಾಚಾರ್ಯಕೃತ ಸ್ತೋತ್ರಗಳು

ಭಕ್ತಿಮಾರ್ಗ, ಸಾಮಾನ್ಯರಿಗೂ ಎಟುಕುವಂತಹುದು. ಆದ್ದರಿಂದ ಆಚಾರ್ಯರು ಅದ್ವೈತವಾದಿಗಳಾಗಿದ್ದರೂ ಗಣೇಶ, ಶಕ್ತಿ, ಶಿವ, ವಿಷ್ಣು, ಸುಬ್ರಹ್ಮಣ್ಯ ಮುಂತಾದ ಸ್ತೋತ್ರಗಳನ್ನು ರಚಿಸಿ ಸಾಮಾನ್ಯರೂ ಅಸಾಮಾನ್ಯ ಮಟ್ಟಕ್ಕೆ ಏರುವ ದಾರಿ ತೋರಿಸಿಕೊಟ್ಟರು. ಒಂದು ಶಂಶೋಧನೆಯಂತೆ ಸುಮಾರು ೨೪೦ ಸ್ತೋತ್ರಗಳು ಶ್ರೀಶಂಕರರ ಹೆಸರಿನಿಂದ ಹಸ್ತಲಿಖಿತ ಪುಸ್ತಕಗಳಲ್ಲಿ ದೊರೆತಿವೆ. ಅವುಗಳಲ್ಲಿ ಕನಿಷ್ಠ ೧೫ ಭುಜಂಗಪ್ರಯಾತಗಳಿದ್ದರೆ, ಸುಮಾರು ೩೫ ಅಷ್ಟಕಗಳಿವೆ.

ಶ್ರೀ ಶಂಕರರು ನಾನಾ ದೇವತೆಗಳನ್ನು ಕುರಿತು ರಚಿಸಿದ ಸ್ತೋತ್ರಗಳನ್ನು "ಏಳು ವಿಭಾಗ"ಗಳಲ್ಲಿ ವಿಂಗಡಿಸಬಹುದು.

**೧) ಗಣೇಶ ಸ್ತೋತ್ರಗಳು :-** ಮುಖ್ಯವಾಗಿ ನಾಲ್ಕು

೧) ಗಣೇಶ ಪಂಚರತ್ನ ೨) ಗಣೇಶ ಭುಜಂಗ ಪ್ರಯಾತ ೩) ಗಣೇಶಾಷ್ಟಕ ೪) ವರದ ಗಣೇಶ ಸ್ತೋತ್ರ.

**೨) ದೇವೀ ಸ್ತೋತ್ರಗಳು :-** ಮುಖ್ಯವಾಗಿ ಹತ್ತೊಂಬತ್ತು.

೧) ಸೌಂದರ್ಯಲಹರೀ ೨) ಆನಂದಲಹರೀ ೩) ಲಲಿತಾಪಂಚರತ್ನ ೪) ತ್ರಿಪುರಸುಂದರೀ ಮಾನಸ ಪೂಜಾ ೫) ತ್ರಿಪುರ ಸುಂದರೀ ವೇದಪಾದ ೬) ತ್ರಿಪುರ ಸುಂದರ್ಯಷ್ಟಕ ೭) ನವರತ್ನ ಮಾಲಿಕಾ ೮) ಕಲ್ಯಾಣವೃಷ್ಟಿಸ್ತವ ೯) ಗೌರೀದಶಕ ೧೦) ಭವಾನೀ ಭುಜಂಗ ೧೧) ದೇವೀ ಭುಜಂಗ ೧೨) ಶಾರದಾ ಭುಜಂಗ–ಪ್ರಯಾತಾಷ್ಟಕ ೧೩) ದೇವೀ ಚತುಷ್ಷಷ್ಟಿ ಉಪಚಾರ ಪೂಜಾ ೧೪) ಮೀನಾಕ್ಷೀ ಸ್ತೋತ್ರ ೧೫) ಮೀನಾಕ್ಷಿ ಪಂಚರತ್ನ ೧೬) ಅನ್ನಪೂರ್ಣಾಷ್ಟಕ ೧೭) ಭ್ರಮರಾಂಬಾಷ್ಟಕ ೧೮) ಮಂತ್ರ ಮಾತೃಕಾಪುಷ್ಪಮಾಲಾ ೧೯) ಕನಕಧಾರಾಸ್ತವ ಇತ್ಯಾದಿ.

**೩) ಶಿವ ಸ್ತೋತ್ರಗಳು :-** ಮುಖ್ಯವಾಗಿ ಹದಿನಾರು.

೧) ಶಿವ ಭುಜಂಗ ೨) ಶಿವಾನಂದಲಹರೀ ೩) ಶಿವಪಾದಾದಿ ಕೇಶಾಂತ ಸ್ತೋತ್ರ ೪) ಶಿವಕೇಶಾದಿ ಪಾದಾಂತ ಸ್ತೋತ್ರ ೫) ವೇದಸಾರ ಶಿವಸ್ತೋತ್ರ ೬) ಶಿವಾಪರಾಧ ಕ್ಷಮಾಪಣ ಸ್ತೋತ್ರ ೭) ಕಾಲಭೈರವಾಷ್ಟಕ ೮) ದ್ವಾದಶಲಿಂಗ ಸ್ತೋತ್ರ ೯) ಸುವರ್ಣ ಮಾಲಾಸ್ತುತಿ ೧೦) ದಶಶ್ಲೋಕಿ ಸ್ತುತಿ ೧೧) ಶಿವ ಪಂಚಾಕ್ಷರ ನಕ್ಷತ್ರಮಾಲಾ ೧೨) ಮೃತ್ಯುಂಜಯ ಮಾನಸಪೂಜಾ ೧೩) ದಕ್ಷಿಣಾಮೂರ್ತಿ ಸ್ತೋತ್ರ ೧೪) ದಕ್ಷಿಣಾ ಮೂರ್ತಿ ವರ್ಣಮಾಲಾ ೧೫) ದಕ್ಷಿಣಾ ಮೂರ್ತ್ಯಷ್ಟಕ ೧೬) ಶಿವನಾಮಾವಲ್ಯಷ್ಟಕ ಇತ್ಯಾದಿ.

**೪) ವಿಷ್ಣು ಸ್ತೋತ್ರಗಳು :-** ಮುಖ್ಯವಾಗಿ ಹನ್ನೊಂದು.

೧) ವಿಷ್ಣು ಭುಜಂಗಪ್ರಯಾತ ೨) ರಾಮ ಭುಜಂಗ ಪ್ರಯಾತ ೩) ವಿಷ್ಣುಪಾದಾದಿ ಕೇಶಾಂತ ೪) ಅಚ್ಯುತಾಷ್ಟಕ ೫) ಪಾಂಡುರಂಗಾಷ್ಟಕ ೬) ಗೋವಿಂದಾಷ್ಟಕ

೭) ಜಗನ್ನಾಥಾಷ್ಟಕ ೮) ಕೃಷ್ಣಾಷ್ಟಕ ೯) ಭಗವನ್ಮಾನಸಪೂಜಾ ೧೦) ಹರಿಮೀಡ್ ಸ್ತೋತ್ರ ೧೧) ಷಟ್ಪದಿ ಸ್ತೋತ್ರ ಇತ್ಯಾದಿ.

**೫) ಯುಗಲ ದೇವತಾ ಸ್ತೋತ್ರಗಳು :-** ಮುಖ್ಯವಾಗಿ ನಾಲ್ಕು.

೧) ಲಕ್ಷ್ಮೀನೃಸಿಂಹ ಪಂಚರತ್ನ ೨) ಲಕ್ಷ್ಮೀನೃಸಿಂಹ ಕರುಣಾರಸ ಸ್ತೋತ್ರ ೩) ಉಮಾಮಹೇಶ್ವರ ಸ್ತೋತ್ರ ೪) ಅರ್ಧನಾರೀಶ್ವರ ಸ್ತೋತ್ರ ಇತ್ಯಾದಿ.

**೬) ನದ್ಯಾದಿ ಸ್ತೋತ್ರಗಳು :-** ಮುಖ್ಯವಾಗಿ ಐದು.

೧) ಗಂಗಾಷ್ಟಕ ೨) ಯಮುನಾಷ್ಟಕ ೩) ನರ್ಮದಾಷ್ಟಕ ೪) ಮಣಿಕರ್ಣಿಕಾಷ್ಟಕ ೫) ಕಾಶೀ ಪಂಚಕ ಇತ್ಯಾದಿ.

**೭) ಇತರ ಸ್ತೋತ್ರಗಳು :-** ಮುಖ್ಯವಾಗಿ ನಾಲ್ಕು.

೧) ಪ್ರಾತಃಸ್ಮರಣಸ್ತೋತ್ರ ೨) ಗುರ್ವಷ್ಟಕ ೩) ಹನೂಮತ್ ಪಂಚರತ್ನ ೪) ಸುಬ್ರಹ್ಮಣ್ಯ ಭುಜಂಗ ಇತ್ಯಾದಿ.

ಹೀಗೆ ಅತಿ ಮುಖ್ಯವಾದ ಸುಮಾರು ೬೪ ಸ್ತೋತ್ರಗಳು ಶೃಂಗೇರಿ ಪರಮಾಚಾರ್ಯರಿಂದ ಅನುಮೋದಿಸಲ್ಪಟ್ಟು, ಶ್ರೀರಂಗದ ಶ್ರೀವಾಣೀವಿಲಾಸ ಮುದ್ರಣಾಲಯದವರು ಹೊರತಂದ "ಶಂಕರ ಗ್ರಂಥಾವಳಿ"ಯಲ್ಲಿ ಮುದ್ರಿತವಾಗಿವೆ.

## ಸ್ತೋತ್ರಗಳ ವಿಷಯದಲ್ಲಿ ವಿದ್ವಾಂಸರ ಅಭಿಪ್ರಾಯಗಳು

ಸುಮಾರು ೨೪೦ ಸ್ತೋತ್ರಗಳು ಶ್ರೀಶಂಕರರ ಹೆಸರಿನಲ್ಲಿ ದೊರೆಯುತ್ತಿದ್ದರೂ ಮೇಲಿನ ೬೪ ಸ್ತೋತ್ರಗಳನ್ನು ಬಿಟ್ಟು ಉಳಿದ ಬಹುತೇಕ ಸ್ತೋತ್ರಗಳ ಕೃತಕ ಶೈಲಿ ಹಾಗೂ ವಿಷಯಗಳನ್ನು ಪರಿಶೀಲಿಸಿ, ಬಹುಶಃ ಅವು ಶಂಕರಕೃತವಲ್ಲವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಪ್ರೊ. ಬಲದೇವ ಉಪಾಧ್ಯಾಯರು ತಮ್ಮ "ಶ್ರೀ ಶಂಕರಾಚಾರ್ಯರು" ಎಂಬ ಉದ್ಗ್ರಂಥದಲ್ಲಿ ಈ ವಿಷಯ ಚರ್ಚಿಸುತ್ತಾ "ಈ ಸ್ತೋತ್ರಗಳ ಶೈಲಿ ಮತ್ತು ವಿಷಯಗಳನ್ನು ವಿಚಾರ ಮಾಡಿದಲ್ಲಿ ಅಧಿಕ ಸ್ತೋತ್ರಗಳು ವಿಚಿತ್ರ ಕೃತ್ರಿಮತೆಯಿಂದ ಕೂಡಿರುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಆದುದರಿಂದ ಅವು ಶಂಕರಕೃತವೆಂದು ಸ್ವೀಕರಿಸಲು ಸಂಶಯಾಸ್ಪದವಾಗಿದೆ.... ಸುಮಾರು ೧೫ ಸ್ತೋತ್ರಗಳು 'ಭುಜಂಗಪ್ರಯಾತ' ವೃತ್ತದಲ್ಲಿದ್ದು ಇವು ಯಾವುದರ ಮೇಲೂ ಪ್ರಾಚೀನ ಗ್ರಂಥಕಾರರಿಂದ ರಚಿತವಾಗಿರುವ ವ್ಯಾಖ್ಯಾನಗಳು ದೊರಕುವುದಿಲ್ಲ. ಆದುದರಿಂದ "ಶಿವಭುಜಂಗ ಪ್ರಯಾತ" ವನ್ನು ಬಿಟ್ಟು ಅನ್ಯ ಸ್ತೋತ್ರಗಳು ಆದಿಶಂಕರರಿಂದ ರಚಿತವಾದುದೆಂದು ಅಂಗೀಕರಿಸಲು ನಮಗೆ ಅತ್ಯಂತ ಸಂದೇಹವಿದೆ. ಇದರ ನಂತರ ಸುಮಾರು ೩೫ ಅಷ್ಟಕಗಳಿವೆ.... ಇವುಗಳಲ್ಲಿ 'ದಕ್ಷಿಣಾಮೂರ್ತಿ ಅಷ್ಟಕ' ಹಾಗೂ 'ಗೋಪಾಲಾಷ್ಟಕ'ಗಳು ಮಾತ್ರ ಆದಿಶಂಕರರಿಂದ ರಚಿತವಾದುವೆಂದು ನಾವು ನಿಶ್ಚಿತರೂಪದಲ್ಲಿ ಆದರಿಸುತ್ತೇವೆ. ಏಕೆಂದರೆ ಇವೆರಡರ ಮೇಲೂ ಪ್ರಾಚೀನ

ವೇದಾಂತಾಚಾರ್ಯರಿಂದ ರಚಿತವಾದ ಭಾಷ್ಯಗಳು ಉಪಲಬ್ಧವಾಗಿವೆ. 'ಷಟ್ಪದೀ' ಮತ್ತು 'ದಶಶ್ಲೋಕೀ' ಸ್ತೋತ್ರಗಳೂ ಸೇರಿದಂತೆ ಉಳಿದ ಸುಮಾರು ೩೦ ಸ್ತೋತ್ರಗಳಿಗೆ ಪ್ರಾಚೀನ ಆಚಾರ್ಯರ ಭಾಷ್ಯವಿರುವ ನಿಮಿತ್ತ, ಅವು ಆದಿಶಂಕರರಿಂದ ರಚಿತವೆಂದು ಸ್ವೀಕರಿಸಲು ಯಾವ ವಿಧವಾದ ಸಂಶಯಕ್ಕೂ ಆಸ್ಪದವಿಲ್ಲ. ಹಾಗೇ 'ಆನಂದಲಹರೀ', 'ಗೋವಿಂದಾಷ್ಟಕ', 'ಹರಿಮೀಡೆ' ಇವು ಆಚಾರ್ಯರವೇ ಆಗಿವೆ. ಅನ್ಯಸ್ತೋತ್ರಗಳಲ್ಲಿ ಶಂಕರರ ರಚನೆಗಳಲ್ಲಿ ಕಾಣಲಾಗದ ಕೃತ್ರಿಮತೆಯು ತೋರುತ್ತದೆ'' ಎಂದು ಅಭಿಪ್ರಾಯಪಟ್ಟಿದ್ದಾರೆ.[೩]

ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ತಮ್ಮ ''ಶ್ರೀ ಶಂಕರಭಗವತ್ಪಾದ ವೃತ್ತಾಂತ ಸಾರಸರ್ವಸ್ವ'' ಎಂಬ ಬೃಹದ್ ಗ್ರಂಥದಲ್ಲಿ ಈ ವಿಷಯವನ್ನು ಚರ್ಚಿಸುತ್ತಾ:– ''ಆಚಾರ್ಯರ ಹೆಸರಿನಲ್ಲಿರುವ ಅನೇಕ ಸ್ತೋತ್ರಗಳು ಅವರೇ ಮಾಡಿದವೋ ಅಥವಾ ಮತ್ತೆ ಯಾರಾದರೂ ಮಠಾಧಿಪತಿಗಳಾದ ಶಂಕರಾಚಾರ್ಯ ಬಿರುದಾಂಕಿತರು ಮಾಡಿದವೋ– ಹೇಳುವುದಕ್ಕೆ ಬರುವುದಿಲ್ಲ. ಆಚಾರ್ಯರು ಅರ್ಚಾ (ಪ್ರತಿಮಾ) ಪೂಜೆಯನ್ನೇನೂ ತಿರಸ್ಕರಿಸಿಲ್ಲ. ಆದರೂ ಈಗ ಪ್ರಚಲಿತವಾಗಿರುವ ವಿವಿಧ ದೇವತಾ ಸ್ತೋತ್ರಗಳನ್ನೆಲ್ಲಾ ಅವರೇ ಮಾಡಿದರೆಂದು ನಿರ್ಧರಿಸುವುದು ಕಷ್ಟವಾಗಿದೆ...''[೪] ಎಂದು ಅಭಿಪ್ರಾಯಪಡುತ್ತಾರೆ. ಒಟ್ಟಾರೆ ವಿದ್ವಾಂಸರ ಅಭಿಪ್ರಾಯದಲ್ಲಿ 'ದಕ್ಷಿಣಾಮೂರ್ತಿಸ್ತೋತ್ರ, ಗೋಪಾಲಾಷ್ಟಕ, ಷಟ್ಪದಿ, ದಶಶ್ಲೋಕೀ, ಆನಂದಲಹರೀ, ಗೋವಿಂದಾಷ್ಟಕ ಮುಂತಾದ ಸ್ತೋತ್ರಗಳು ನಿಸ್ಸಂದೇಹವಾಗಿ ಆಚಾರ್ಯಕೃತ. 'ಸೌಂದರ್ಯಲಹರಿ'ಯನ್ನು ಒಳಗೊಂಡಂತೆ ಉಳಿದ ಕೃತಿಗಳ ಬಗ್ಗೆ ಭಿನ್ನಾಭಿಪ್ರಾಯವಿದ್ದೇ ಇದೆ. ಆ ಬಗ್ಗೆ ವಿಸ್ತಾರವಾದ ವಿಮರ್ಶೆ ಅವಶ್ಯವಿದ್ದು ಈ ಸೀಮಿತ ಪ್ರಬಂಧದಲ್ಲಿ ಅದನ್ನೆಲ್ಲಾ ವಿವರಿಸುವುದು ಸಾಧ್ಯವಾಗುವುದಿಲ್ಲ. ಜಿಜ್ಞಾಸೆಯ ಹೆಬ್ಬಾಗಿಲು ಇನ್ನೂ ತೆರೆದೇ ಇದೆ.

ಇಲ್ಲಿಯವರೆಗೆ ಶ್ರೀ ಶಂಕರರ ಸ್ತೋತ್ರ ಸಾಹಿತ್ಯವನ್ನು ಕುರಿತು ಸ್ಥೂಲವಾಗಿ ಇಡಿಇಡಿಯಾಗಿ ವಿಮರ್ಶಿಸಿದ್ದಾಯಿತು. ಇನ್ನು ಬಿಡಿಬಿಡಿಯಾಗಿ ಅವರ ಸ್ತೋತ್ರಗಳ ಕೆಲವು ಭಾಗಗಳನ್ನು ಆಯ್ದು ಅವುಗಳ ಶೈಲಿ, ಪ್ರಾಸ, ಬಂಧ, ಪಾಕ, ರಸ, ಅಲಂಕಾರ ಮುಂತಾದವುಗಳನ್ನು ಕುರಿತಂತೆ 'ಸ್ಥಾಲೀಪುಲಾಕನ್ಯಾಯ'ದಿಂದ ಕೆಲವು ಸ್ತೋತ್ರಗಳನ್ನು ಪರಿಶೀಲಿಸೋಣ.

''ಏಕಂ ಸದ್ ವಿಪ್ರಾ ಬಹುಧಾ ವದಂತಿ'' ಎಂಬ ಶ್ರುತಿವಾಕ್ಯದಂತೆ ಗಣಪತಿ, ದುರ್ಗಾ, ಶಿವ, ವಿಷ್ಣು, ಕಾರ್ತಿಕೇಯ, ಲಕ್ಷ್ಮೀನೃಸಿಂಹ ಮುಂತಾದ ದೇವತೆಗಳು

---

೩. ಪ್ರೊ. ಬಲದೇವ ಉಪಾಧ್ಯಾಯ 'ಶ್ರೀ ಶಂಕರಾಚಾರ್ಯರು' – ಪುಟ ೧೯೪-೧೯೫.
೪. ಶ್ರೀ ಶಂಕರಭಗವತ್ಪಾದ ಸಾರಸರ್ವಸ್ವ – ಪುಟ ೩೩೩.

ಮೇಲ್ನೋಟಕ್ಕೆ ಭಿನ್ನಭಿನ್ನವಾಗಿ ತೋರಿದರೂ ಎಲ್ಲಾ ದೇವತೆಗಳ ಸ್ತುತಿಯ ಮೂಲಕ ಸಾಧಕನ ಗಮ್ಯ ಒಂದೇ ಆಗಿದೆ.

"ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾ ಅರ್ಚಿತುಮಿಚ್ಛತಿ
ತಸ್ಯ ತಸ್ಯ ಅಚಲಾಂ ಶ್ರದ್ಧಾಂ ತಾಮೇವ ವಿಧಧಾಮ್ಯಹಮ್"

ಎಂಬ ಗೀತಾಚಾರ್ಯನ ಮಾತಿನಂತೆ ಯಾವ ಯಾವ ಭಕ್ತರಿಗೆ ಯಾವ ಯಾವ ದೇವರು ಇಷ್ಟವೋ ಅವರು ಅದನ್ನೇ ಶ್ರದ್ಧೆಯಿಂದ ಪೂಜಿಸಿ ತಮ್ಮ ಗುರಿಯನ್ನು ತಲುಪಬಹುದು.

## ಸ್ತೋತ್ರದ ಹಿರಿಮೆ

ಯಾವುದರಿಂದ ಸ್ತುತಿಸಲ್ಪಡುವುದೋ ಆ ಗುಣಸಂಕೀರ್ತನವೇ ಸ್ತೋತ್ರ. ಸ್ತವ್ಯ, ಸ್ತವಪ್ರಿಯ, ಸ್ತೋತ್ರಂ, ಸ್ತುತಿಃ, ಸ್ತೋತಾ' ಇವೆಲ್ಲವೂ ಭಗವಂತನ ನಾಮಾಂತರಗಳೇ ಆಗಿವೆ. ಸ್ತೋತ್ರವೆಂಬುದು ಹೊರಗಿನ ಜನರನ್ನು ಮೆಚ್ಚಿಸುವ ಸಾಧನವಲ್ಲ. ಅದು ಉದ್ದಿಷ್ಟ ದೇವರನ್ನು ಕುರಿತು ಮಾಡುವ ಮಾನಸ ಸ್ನಾನವೆನ್ನಬಹುದು.

"ಜ್ಞಾನಹ್ರದೇ ಧ್ಯಾನಜಲೇ ರಾಗದ್ವೇಷ ಮಲಾಪಹೇ ।
ಯಃ ಸ್ನಾತಿ ಮಾನಸೇ ತೀರ್ಥೇ ಸಯಾತಿ ಪರಮಾಂಗತಿಮ್"

ಅಂದರೆ, ರಾಗದ್ವೇಷಗಳೆಂಬ ಕೊಳೆಯನ್ನು ತೊಳೆಯುವ, ಧ್ಯಾನಜಲ ತುಂಬಿದ, ಮಾನಸ ಸರೋವರದಲ್ಲಿ ಯಾರು ಸ್ನಾನಮಾಡುತ್ತಾರೋ ಅವರು ಪರಮಗತಿಯನ್ನು ಹೊಂದುತ್ತಾರೆ. ಸಾವಿರ ಗಂಗಾಸ್ನಾನಗಳಿಂದಲೂ, ಕೋಟಿ ಪುಷ್ಕರ ಸ್ನಾನಗಳಿಂದಲೂ ನಾಶ ಹೊಂದುವಂತಹ ಪಾಪ, ಶ್ರೀಹರಿಯ ಸ್ತೋತ್ರಪಠನದಿಂದಲೂ ನಾಶವಾಗುತ್ತದೆ ಎಂಬ ಮಾತು ಸ್ಮರಣೀಯ.

## ಕಾವ್ಯದ ಮರ್ಮ

ಶಬ್ದಾರ್ಥಸಹಿತವಾಗಿ, ರಮಣೀಯವಾಗಿ, ಕಮನೀಯವಾಗಿ, ರಸಾರ್ದ್ರವಾಗಿ, ಕಾಂತಾಸಮ್ಮಿತೆಯಿಂದ ಪರೋಕ್ಷವಾಗಿ ಗಹನವಾಗಿ ತತ್ವವನ್ನು ಶ್ರೋತೃವಿನ ಹೃದಯಕ್ಕೆ ಮುಟ್ಟಿಸುವುದೇ ಕಾವ್ಯ. ಸಾಲಂಕೃತವಾದ ಭಾಷೆಯಲ್ಲಿ, ಧ್ವನಿಸಾಮರ್ಥ್ಯದಿಂದ ಹೇಳಬೇಕಾದ ವಿಷಯವನ್ನು ಸಹೃದಯನ ಹೃದಯಕ್ಕೆ ತಟ್ಟುವಂತೆ, ಮುಟ್ಟುವಂತೆ ಹೇಳುವುದು ಕಾವ್ಯನೀತಿ.

ಅಲಂಕಾರ ಪಿತಾಮಹ ಭಾಮಹಾಚಾರ್ಯರ ಈ ಮಾತು ತುಂಬಾ ಗಮನಾರ್ಹ.

"ಸ್ವಾದು ಕಾವ್ಯರಸೋನ್ಮಿಶ್ರಂ ಶಾಸ್ತ್ರಮಪ್ಯುಪಯುಂಜತೇ
ಪ್ರಥಮಾಲೀಢಮಧವಃ ಪಿಬನ್ತಿ ಕಟು ಭೈಷಜಮ್"[೫]

೫. ಭಾಮಹನ ಕಾವ್ಯಾಲಂಕಾರ ೫ನೇ ಅಧ್ಯಾಯ, ೩ನೇ ಶ್ಲೋಕ.

ಅಂದರೆ, 'ಸಿಹಿ ಜೇಸಿನೊಡನೆ ಬೆರೆತಾಗ ಕಹಿಯಾದ ಔಷಧವನ್ನೂ ಸೇವಿಸುವಂತೆ, ರುಚಿಕರವಾದ ಕಾವ್ಯರಸದೊಡನೆ ಕಲೆತಾಗ ಶಾಸ್ತ್ರವನ್ನೂ ಜನ ಸವಿಯುತ್ತಾರೆ. ಆಚಾರ್ಯ ಶಂಕರರು ಅಪೂರ್ವವಾಗಿ ಈ ಉದ್ದೇಶವನ್ನು ಸಾಧಿಸಿದ್ದಾರೆ. ಅವರಂಥ ದಾರ್ಶನಿಕರು, ಜ್ಞಾನಿಗಳು, ಭಕ್ತರು ಸಹೃದಯರು ಮಹಾಕವಿಗಳು ತೀರಾ ವಿರಳ. ಪ್ರಸಿದ್ಧವಾದ ಅವರ ಅದ್ವೈತ ಸಿದ್ಧಾಂತವನ್ನು ಕ್ಷಣಕಾಲ ಮರೆತರೂ, ಅವರು ವಾಲ್ಮೀಕಿ ಕಾಳಿದಾಸರಿಗಿಂತ ಯಾವ ರೀತಿಯಲ್ಲೂ ಕಡಿಮೆಯಿಲ್ಲದ ಕವಿವರ್ಯರಾಗಿದ್ದಾರೆ. ತಮ್ಮ ಈ ಕಾವ್ಯಪ್ರತಿಭೆಯು ವಾಗ್ದೇವತೆಯಾದ ಮಹಾದೇವಿಯ ಕೃಪೆ, ಎಂಬ ಸಮರ್ಪಣ ಬುದ್ಧಿ ಅವರ ಅನನ್ಯ ವಿನಯಕ್ಕೆ ಸಾಕ್ಷಿಯಾಗಿದೆ.

"ತವಸ್ತನ್ಯಂ ಮನ್ಯೇ ಧರಣಿಧರಕನ್ಯೇ ಹೃದಯತಃ
ಪಯಃಪಾರಾವಾರಃ ಪರಿವಹತಿ ಸಾರಸ್ವತಮಿವ
ದಯಾವತ್ಯಾ ದತ್ತಂ ದ್ರವಿಡಶಿಶುರಾಸ್ವಾದ್ಯ ತವ ಯತ್
ಕವೀನಾಂ ಪ್ರೌಢಾನಾಮಜನಿ ಕಮನೀಯಃ ಕವಯಿತಾ ॥"[೬]

ಅಂದರೆ, "ಹೇ ಗಿರಿರಾಜ ಪುತ್ರಿ, ನಿನ್ನ ಎದೆಹಾಲನ್ನು ನಿನ್ನ ಹೃದಯಾಂತರಾಳದಿಂದ ಜನಿಸಿ ಹರಿಯುತ್ತಿರುವ ಕ್ಷೀರ ಸಮುದ್ರದ ವಾಙ್ಮಯ ವಿಲಾಸವೆಂದು ತಿಳಿಯುವೆನು. ಏಕೆಂದರೆ ದಯಾವತಿಯಾದ ನಿನ್ನಿಂದ ಕೊಡಲ್ಪಟ್ಟ ಮೊಲೆಹಾಲನ್ನು ಕುಡಿದು ಈ ಸ್ತೋತ್ರಗಳನ್ನು ರಚಿಸಿದ, ದ್ರವಿಡ ದೇಶದ ಹುಡುಗನಾದ ನಾನು ಪ್ರೌಢ ಕವೀಶ್ವರರ ಮಧ್ಯದಲ್ಲಿ ಕಮನೀಯವಾದ ಕವಿಯಾದೆನು." ಹಾಗೇ ಅವರ ಈ ಕಾವ್ಯ ಯಾವ ಎತ್ತರಕ್ಕೆ ಏರಿತು ಎನ್ನುವುದನ್ನು ಈ ಕೆಳಗಿನ ಶ್ಲೋಕದಲ್ಲಿ ಕಾಣಬಹುದಾಗಿದೆ. ಹೇ, ಶಂಕರ, ಸರ್ವಾಲಂಕಾರ ಭೂಷಿತಳಾದ ಈ ಕಾವ್ಯಕನ್ಯೆಯನ್ನು ನಿನಗೆ ಅರ್ಪಿಸುತ್ತಿದ್ದೇನೆ.

"ಸರ್ವಾಲಂಕಾರಯುಕ್ತಾಂ ಲಲಿತಪದಯುತಾಂ ಸಾಧುವೃತ್ತಾಂ ಸುವರ್ಣಾಂ
ಸದ್ಭಿಃ ಸಂಸ್ತೂಯಮಾನಾಂ ಸರಸಗುಣಯುತಾಂ ಲಕ್ಷಿತಾಂ ಲಕ್ಷಣಾಢ್ಯಾಮ್ ।
ಉದ್ಯದ್ಭೂಷಾವಿಶೇಷಾಂ ಉಪಗತವಿನಯಾಂ ದ್ಯೋತಮಾನಾರ್ಥರೇಖಾಂ
ಕಲ್ಯಾಣೀಂ ದೇವ ಗೌರೀಪ್ರಿಯ ಮಮ ಕವಿತಾಕನ್ಯಕಾಂ ತ್ವಂ ಗೃಹಾಣ ॥"[೭]

ಅಂದರೆ, "ಹೇ ಗೌರಿಪತಿಯೇ ! ನನ್ನ ಕಾವ್ಯಕನ್ನಿಕೆಯು ಉಪಮೆ ರೂಪಕಾದಿ ಸರ್ವಾಲಂಕಾರ ಸಂಯುಕ್ತಳೂ, ಲಲಿತಪದಗಳೆಂಬ ಕೋಮಲಪಾದವುಳ್ಳವಳೂ, ಸ್ರಗ್ಧರಾ ಮುಂತಾದ ಒಳ್ಳೆಯ ವೃತ್ತಗಳೆಂಬ ಸದಾಚಾರಿಣಿಯೂ, ಸುಂದರವಾದ ಅಕ್ಷರಗಳೆಂಬ ಒಳ್ಳೆಯ

---

೬. ಸೌಂದರ್ಯ ಲಹರೀ – ಪದ್ಯ ೭೫.
೭. ಶಿವಾನಂದ ಲಹರೀ – ಪದ್ಯ ೯೮.

ಬಣ್ಣವುಳ್ಳವಳೂ, ವಿದ್ವಾಂಸರಿಂದ ಮೆಚ್ಚುಗೆ ಪಡೆದವಳೂ, ಶೃಂಗಾರಾದಿ ರಸ ಮತ್ತು ಮಾಧುರ್ಯಾದಿ ಗುಣಗಳೆಂಬ ಸದ್ಗುಣವುಳ್ಳವಳೂ, ಉತ್ತಮ ಕಾವ್ಯಲಕ್ಷಣಗಳೆಂಬ ಪ್ರಶಂಸನೀಯುವಾದ ಲಕ್ಷಣೋಪೇತಳೂ, ಶಬ್ದಾರ್ಥಾಲಂಕಾರಗಳಿಂದ ಕಂಗೊಳಿಸುವ ವಿಶೇಷಾಭರಣಯುಕ್ತಳೂ, ವಿನಯಗುಣದಿಂದೊಡಗೂಡಿದವಳೂ, ಅಭಿಧಾ, ಲಕ್ಷಣಾ, ವ್ಯಂಗ್ಯಾರ್ಥಗಳೆಂಬ ಧನರೇಖೆಗಳುಳ್ಳವಳೂ, ಮಂಗಳಕರಳೂ ಆಗಿದ್ದು ಇವಳನ್ನು ನೀನು ಕೃಪೆಯಿಟ್ಟು ಸ್ವೀಕರಿಸು. ಶಿವಾನಂದಲಹರಿಯ ಈ ಮಾತು ಅವರ ಕಾವ್ಯಕ್ಕೆ ಅಕ್ಷರಶಃ ಅನ್ವಯಿಸುತ್ತದೆ.

## ಶ್ರೀ ಶಂಕರರ ಸ್ತೋತ್ರ ಕಾವ್ಯದ ಶೈಲಿ

ಶ್ರೀ ಶಂಕರರ ಸ್ತೋತ್ರಗಳ ಭಾಷೆ ಮೃದು ಮಧುರ ಪದ ಪುಂಜರಂಜಿತವಾದದ್ದು. ಶೈಲಿ ಅತ್ಯಂತ ಸರಳ ಸುಂದರ; ಶಬ್ದಾಲಂಕಾರಗಳಲ್ಲಿ ಅನುಪ್ರಾಸ, ಯಮಕ ಹೆಚ್ಚು.

"ನಾನಾರ್ಥವಸ್ತೋನುಪ್ರಾಸಾ ನ ಚಾಪ್ಯಸದೃಶಾಕ್ಷರಾಃ ।
ಯಕ್ಕ್ಯಾನಯಾ ಮಧ್ಯಮಯಾ ಜಾಯಸ್ತೇ ಚಾರವೋ ಗಿರಃ"[೮]

ಎಂಬಂತೆ, ಒಂದನ್ನೊಂದು ಹೋಲುವ ಅಕ್ಷರಗಳು ಮತ್ತೆ ಮತ್ತೆ ಬಂದಿದ್ದು, ಅರ್ಥ ಮಾತ್ರ ಬೇರೆ–ಬೇರೆಯಾಗಿರುವುದೇ ಅನುಪ್ರಾಸ. 'ಸಾನುಪ್ರಾಸಾರಸಾವಹಃ' ಎಂಬಂತೆ ಅನುಪ್ರಾಸದಿಂದ ಮಾತು ರಸವತ್ತಾಗುತ್ತದೆ. ಆಚಾರ್ಯರ ಸುಂದರ ಅನುಪ್ರಾಸಭರಿತ ಪದ್ಯ ಓದುತ್ತಿದ್ದರೆ ನಾವು ನಮ್ಮನ್ನೇ ಮರೆಯುತ್ತೇವೆ. ಉದಾಹರಣೆ ಹೀಗಿದೆ.

"ನಿತಾಂತ ಕಾಂತದಂತಕಾಂತಿಮಂತಕಾಂತಕಾತ್ಮಜಂ
ಅಚಿಂತ್ಯರೂಪಮಂತಹೀನಮಂತರಾಯಕೃಂತನಂ ।
ಹೃದಂತರೇ ನಿರಂತರಂ ವಸಂತಮೇವ ಯೋಗಿನಾಂ
ತಮೇಕದಂತಮೇಕಮೇವ ಚಿಂತಯಾಮಿ ಸಂತತಂ ॥"[೯]

"ಸಾನಂದಮಾನಂದವನೇ ವಸಂತಂ
ಆನಂದಕಂದಂ ಹತಪಾಪವೃಂದಮ್ ।
ವಾರಾಣಸೀ ನಾಥಮನಾಥ ನಾಥಂ
ಶ್ರೀ ವಿಶ್ವನಾಥಂ ಶರಣಂ ಪ್ರಪದ್ಯೇ ॥"[೧೦]

ಅದರಂತೆ–

"ಸಕಲಕಲುಷಭಂಗೇ ಸ್ವರ್ಗಸೋಪಾನಸಂಗೇ
ತರಲತರ–ತರಂಗೇ ದೇವಿಗಂಗೇ ಪ್ರಸೀದ ।"[೧೧]

---

೮. ಕಾವ್ಯಾಲಂಕಾರ, ೨-೭.
೯. ಮಹಾಗಣೇಶ ಪಂಚರತ್ನಂ, ಪದ್ಯ-೫.
೧೦. ದ್ವಾದಶಜ್ಯೋತಿರ್ಲಿಂಗಸ್ತೋತ್ರಂ, ಪದ್ಯ-೭.
೧೧. ಗಂಗಾಷ್ಟಕ, ೧.

ಇಷ್ಟು ಸುಂದರವಾಗಿ ಪುಂಖಾನುಪುಂಖವಾಗಿ ಬರುವ ಅನುಪ್ರಾಸರಚನೆ ಅನ್ಯತ್ರ ದುರ್ಲಭ. ಅವರ ಕಲಾಕುಂಚದಲ್ಲಿ ಶಕ್ತಿಯುಕ್ತ ಶಬ್ದಗಳು, ಅನುಪ್ರಾಸಗಳು ಕುಣಿಯುತ್ತವೆ. ಭಗವಂತನನ್ನು ಭಕ್ತಿಭರಿತನಾಗಿ ಪ್ರಾರ್ಥಿಸುವ ಸಂದರ್ಭದಲ್ಲೂ ಅವರು ಬಳಸುವ ಸುಂದರ ಶಬ್ದಗಳನ್ನು ಅನ್ಯತ್ರ ಕಾಣಲಾರೆವು. ನಿದರ್ಶನ ಹೀಗಿದೆ.

"ಅವಿನಯಮಪನಯ ವಿಷ್ಣೋ !
ದಮಯ ಮನಃ, ಶಮಯ ವಿಷಯಮೃಗತೃಷ್ಣಾಂ ।
ಭೂತದಯಾಂ ವಿಸ್ತಾರಯ, ತಾರಯ ಸಂಸಾರ ಸಾಗರತಃ"[೧೨]

'ಹೇ ಭಗವಂತ ನನ್ನ ಅವಿನಯವನ್ನು ದೂರ ಮಾಡು. ಮನಸ್ಸನ್ನು ನಿಯಂತ್ರಿಸುವ ಶಕ್ತಿಕೊಡು. ಇಂದ್ರಿಯ ಸುಖವೆಂಬ ಬಿಸಿಲುಗುದುರೆಯನ್ನು ಅತಿಯಾಗಿ ಬೆನ್ನಟ್ಟಿ ಹೋಗದಂತೆ ನೋಡಿಕೊ. ಸಕಲ ಪ್ರಾಣಿಗಳಲ್ಲಿ ದಯೆಯಿಂದ ಕೂಡಿರುವಂತೆ ಅನುಗ್ರಹಿಸು. ಸಮರ್ಥ ಸಾರ್ಥಕ ಜೀವನ ನಡೆಸಿದ ಬಳಿಕ ನನ್ನನ್ನು ಈ ಸಂಸಾರ ಸಾಗರದಿಂದ ದಾಟಿಸು" ನಮ್ಮ ಜೀವನ ಹೇಗಿರಬೇಕು ? ಹೇಗೆ ನಡೆದುಕೊಂಡಾಗ ಬಾಳು ಅರ್ಥಪೂರ್ಣವಾಗುತ್ತದೆ ? ನಮ್ಮ ವ್ಯಕ್ತಿತ್ವ ವಿಕಸನಗೊಳ್ಳುವದೆಂತು ? ಎಂಬುದನ್ನು ಸುಂದರವಾದ 'ಯಮಕಾಲಂಕಾರ'ದಲ್ಲಿ ವರ್ಣಿಸಿರುವುದನ್ನು ಇಲ್ಲಿ ಕಾಣಬಹುದು.

ಇನ್ನು ಅರ್ಥಾಲಂಕಾರದತ್ತ ಬಂದಾಗ ರೂಪಕ, ಶ್ಲೇಷ, ಅರ್ಥಾಂತರನ್ಯಾಸ, ಸ್ವಭಾವೋಕ್ತಿ ಮುಂತಾದವುಗಳು ಶ್ರೀ ಶಂಕರರ ಸ್ತೋತ್ರಸಾಹಿತ್ಯದಲ್ಲಿ ವಿಶೇಷವಾಗಿ ಬಂದಿರುವುದನ್ನು ಕಾಣಬಹುದು. ಉದಾಹರಣೆ ಹೀಗಿದೆ.

"ಆತ್ಮಾ ತ್ವಂ ಗಿರಿಜಾ ಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಂ
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾಗಿರಃ
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್"[೧೩]

ಇಲ್ಲಿ ರೂಪಕಾಲಂಕಾರದ ಒಡಲಲ್ಲಿ ಸುಂದರ ಕಾವ್ಯ ಪ್ರತಿಮೆ ಮೂಡಿ ಬಂದಿರುವದು ಗಮನಾರ್ಹ. ಅಲ್ಲದೇ ಸಾಧಕನ ಸಮಸ್ತ ಜೀವನವೇ ಯೋಗವಾಗುವ ಕಲೆಯನ್ನು ಆಚಾರ್ಯರು ಇಲ್ಲಿ ಬೋಧಿಸಿದ್ದಾರೆ,

ಸ್ವಭಾವೋಕ್ತಿಯಲ್ಲಿ ಲೋಕಚಾರಿತ್ರ್ಯವನ್ನು ಕಟ್ಟಿಡುವ ವಿಶಿಷ್ಟ ಪ್ರತಿಭೆಯೂ ಶಂಕರರಲ್ಲಿದೆ.

---

೧೨. ಷಟ್ಪದೀ ಸ್ತೋತ್ರಂ. ೧.
೧೩. ಶಿವಮಾನಸಪೂಜಾ ಸ್ತೋತ್ರಂ, ಪದ್ಯ-೪.

"ಬಾಲಸ್ತಾವತ್ ಕ್ರೀಡಾಸಕ್ತಃ ತರುಣಸ್ತಾವತ್ ತರುಣೀಸಕ್ತಃ ।
ವೃದ್ಧಸ್ತಾವತ್ ಚಿಂತಾಸಕ್ತಃ ಪರೇಬ್ರಹ್ಮಣಿ ಕೋ ಽಪಿ ನ ಸಕ್ತಃ ॥"[೧೪]

"ಅಂಗಂ ಗಲಿತಂ ಪಲಿತಂ ಮುಂಡಂ, ದಶನವಿಹೀನಂ ಜಾತಂ ತುಂಡವಮ್
ವೃದ್ಧೋ ಯಾತಿ ಗೃಹೀತ್ವಾ ದಂಡಂ, ತದಪಿ ನ ಮುಂಚತಿ ಆಶಾಪಿಂಡಂ ॥"[೧೫]

ಅಂದರೆ ಮಕ್ಕಳಿಗೆ ಆಟದಲ್ಲಿ ಆಸಕ್ತಿ, ಯುವಕರಿಗೆ ಯುವತಿಯರೊಡನೆ ಕಲೆಯುವುದರಲ್ಲಿ ಆಸಕ್ತಿ, ಮುದುಕರಿಗೆ ಸದಾ ಚಿಂತೆ; ಆದರೆ ಯಾರಿಗೂ ಪರಬ್ರಹ್ಮ ಚಿಂತೆ ಮಾತ್ರ ಇಲ್ಲ. ಅಂಗಗಳು ಶಿಥಿಲಗೊಂಡಿವೆ. ತಲೆ ಬೆಳ್ಳಗಾಗಿದೆ. ಹಲ್ಲುಗಳು ಉದುರಿ ಹೋಗಿವೆ. ಇಂಥ ಮುದುಕ ದೊಣ್ಣೆಯೂರಿ ನಡೆಯುತ್ತಿದ್ದಾನೆ. ಆದರೂ ಆಶಾಪಿಂಡ ಮಾತ್ರ ಬಿಟ್ಟುಹೋಗುವುದಿಲ್ಲ. ಇಲ್ಲೆಲ್ಲ ಮಾನವನ ಸ್ವಭಾವವನ್ನು ಅತ್ಯಂತ ಸ್ವಾರಸ್ಯವಾಗಿ ಮಗುವಿಗೂ ಅರ್ಥವಾಗುವಂತೆ ಬರೆದಿರುವುದನ್ನು ಕಂಡಾಗ ಶಕ್ತಿಯುಕ್ತ ಕವಿಯಲ್ಲಿ ಭಾಷೆ ಹೇಗೆ ನರ್ತಿಸುತ್ತದೆ ಎಂಬುದನ್ನು ಅರಿಯುಬಹುದು. ಇಲ್ಲಿಯ 'ಸಕ್ತ', 'ರಕ್ತಃ', 'ಗಲಿತಂ', 'ಪಲಿತಂ', 'ಮುಂಡಂ', 'ತುಂಡಂ', 'ದಂಡಂ', 'ಪಿಂಡಂ' ಮುಂತಾದ ಪ್ರಾಸಬದ್ಧ ನುಡಿಗಳು ಓದಲೂ, ಕೇಳಲೂ, ಕಂಠಪಾಠಮಾಡಲೂ ಅತ್ಯಂತ ಹಿತಕರವಾಗಿರುವುದನ್ನು ಗಮನಿಸಬಹುದು. ಹಾಗೆಂದು ಅರ್ಥಗಾಂಭೀರ್ಯಕ್ಕೆ ಇಲ್ಲಿ ಕಿಂಚಿತ್ತೂ ಕೊರತೆಯಿಲ್ಲ. ಸ್ವಲ್ಪ ವಿಡಂಬನೆಯೂ ಇದ್ದೇ ಇದೆ. ಹಾಗೆ 'ಬಾಲಸ್ತಾವತ್' ಎಂಬ ಪದ್ಯದಲ್ಲಿ ಅರ್ಥಾಂತರನ್ಯಾಸ ಅಲಂಕಾರವು ಸುಂದರವಾಗಿ ಮೂಡಿ ಬಂದಿರುವುದನ್ನೂ ಮರೆಯಲಾಗದು.

ಆತ್ಮಸ್ವರೂಪವನ್ನು ಕಾವ್ಯ ಪರಿಭಾಷೆಯಲ್ಲಿ ಎಷ್ಟು ಸಲಭವಾಗಿ ಹೇಳಲು ಸಾಧ್ಯವೋ ಅಷ್ಟು ಸುಲಭವಾಗಿ ಶ್ರೀ ಶಂಕರರು ವರ್ಣಿಸಿರುವುದನ್ನು ಕಾಣುತ್ತೇವೆ.

"ರಜ್ಜುಃ ಅಜ್ಞಾನಾತ್ ಭಾತಿ ರಜ್ಜುಃ ಯಥಾಹಿ
ಸ್ವಾತ್ಮ ಅಜ್ಞಾನಾತ್ ಆತ್ಮನೋ ಜೀವಭಾವಃ ।
ಆಪ್ತೋಕ್ತ್ಯಾ ಹಿ ಭ್ರಾಂತಿನಾಶೇ ಸರಜ್ಜುಃ
ಜೀವೋ ನಾಹಂ ದೇಶಿಕೋಕ್ತ್ಯಾ ಶಿವೋಽಹಮ್..."[೧೬]

ಅಂದರೆ, ಇದು ಹಗ್ಗ ಎಂಬ ಅರಿವು ಇಲ್ಲದ್ದರಿಂದ ಹಗ್ಗದಲ್ಲಿ ಹಾವು ಎಂಬ ಭಾವ ತೋರಿಬರುವಂತೆ, ತನ್ನ ಸ್ವರೂಪದ ತಿಳಿವಳಿಕೆಯಿಲ್ಲದ್ದರಿಂದ ಆತ್ಮನಿಗೆ ಜೀವತ್ವವು ಪ್ರಾಪ್ತವಾಗಿದೆ. ನಮ್ಮ ಹಿತವನ್ನು ಬಯಸುವಾತನ ಮಾತಿನ ಮೂಲಕ ಭ್ರಮೆಯು ಹೋಗಿ, ಹಾವಿನ ಭಾವವು ದೂರವಾಗಿ ಮತ್ತೆ ಹಗ್ಗವೇ ಆಗಿ ತೋರುವಂತೆ,

---

೧೪. ಭಜಗೋವಿಂದ, ಪದ್ಯ-೭.
೧೫. ಭಜಗೋವಿಂದ, ಪದ್ಯ-೧೫.
೧೬. ಅದ್ವೈತ ಪಂಚರತ್ನ, ಪದ್ಯ-೨

ಆಚಾರ್ಯರ ಉಪದೇಶದ ಪ್ರಭಾವದಿಂದ ನಾನು ಜೀವನಲ್ಲ, ಶಿವನೇ ಆಗಿದ್ದೇನೆ ಎಂಬುದರ ಅರಿವಾಗುತ್ತದೆ.

"ಜಾಗ್ರತ್ ಸ್ವಪ್ನಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಂಭತೇ
ಯಾ ಬ್ರಹ್ಮಾದಿ ಪಿಪೀಲಿಕಾಂತತನುಷು ಪ್ರೋತಾ ಜಗತ್ಸಾಕ್ಷಿಣೀ ।
ಸೈವಾಹಂ ನ ಚ ದೃಶ್ಯವಸ್ತ್ವಿತಿ ದೃಢಪ್ರಜ್ಞಾಪಿ ಯಸ್ಯಾಸ್ತಿ ಚೇತ್
ಚಾಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ ॥"[೧೭]

ಅಂದರೆ, ಎಚ್ಚರ, ಕನಸು, ಗಾಢನಿದ್ರೆಗಳೆಂಬ ಮೂರು ಅವಸ್ಥೆಗಳಲ್ಲಿಯೂ ಸ್ಫುಟವಾಗಿ ಗೋಚರಿಸುವ, ಬ್ರಹ್ಮನಿಂದ ಇರುವೆಯುವರೆಗೆ ಸಮಸ್ತ ದೇಹಗಳಲ್ಲಿಯೂ ವ್ಯಾಪಿಸಿರುವ, ಜಗತ್ಸಾಕ್ಷಿಯಾದ ಚಿದ್ವಸ್ತುವೇ (ಪರಬ್ರಹ್ಮ) ನಾನು. ಹೊರಗೆ ತೋರುವ ಈ ಯಾವ ವಸ್ತುವೂ ಅಲ್ಲ; ಎಂಬ ನಿಶ್ಚಯ ಬುದ್ಧಿಯು ಯಾವನಿಗೆ ಇದೆಯೋ ಅವನು ಚಾಂಡಾಲನೇ ಆಗಿರಲಿ, ಬ್ರಾಹ್ಮಣನೇ ಆಗಿರಲಿ. ಅವನೇ ಗುರುವೆಂದು ನನ್ನ ಭಾವನೆ. ಹೀಗೆ ಸುಲಭವಾಗಿ ಆತ್ಮ ಸ್ವರೂಪವನ್ನು ತಿಳಿಸಲು ಯಾರಿಂದಲೂ ಸಾಧ್ಯವಿಲ್ಲ.

## ಶ್ರೀ ಶಂಕರರ ಸ್ತೋತ್ರಗಳಲ್ಲಿ ಕಂಡು ಬರುವ ಸಮಾನಾಂಶಗಳು

ಸಾಮಾನ್ಯವಾಗಿ ಶ್ರೀ ಶಂಕರರ ಸ್ತೋತ್ರಗಳಲ್ಲಿ ಕಂಡುಬರುವ ಸಮಾನಾಂಶವೆಂದರೆ, ಭಗವಂತನು ಅನಂತ. ಅದ್ವಿತೀಯ, ಸಚ್ಚಿದಾನಂದ ಸ್ವರೂಪ ನಾಮಾದಿಭೇದರಹಿತ, ಗುಣಾತೀತ, ಅವ್ಯಕ್ತ, ಅವನಿಂದಲೇ ಪ್ರಪಂಚದ ಉತ್ಪತ್ತಿ, ಸ್ಥಿತಿ, ಲಯ, ಅವನು ಆಕಾರರಹಿತ, ಓಂಕಾರಗಮ್ಯ, ಇಷ್ಟಾರ್ಥದಾಯಕ, ಭಕ್ತಿಜ್ಞಾನ ವೈರಾಗ್ಯವುಳ್ಳವರಾಗಿ ಈಶ್ವರಾರ್ಪಣ ಬುದ್ಧಿಯಿಂದ ಒಳ್ಳೆಯ ಕೆಲಸ ಮಾಡುವವರು ಮೋಕ್ಷಕ್ಕೆ ಅರ್ಹರು. ಭೂತದಯೆ, ತ್ಯಾಗ, ಇಂದ್ರಿಯನಿಗ್ರಹ, ಈಶ್ವರ ಪ್ರಣಿಧಾನಗಳು ಧರ್ಮಾಚರಣೆಯ ನಾಲ್ಕು ಬಹುಮುಖ್ಯ ಅಂಗಗಳು. ಇಂಥ ಧರ್ಮವನ್ನು ಬಿಡದೆ ಆಚರಿಸುವುದರಿಂದ ಈಶ್ವರಾನುಗ್ರಹದೊಂದಿಗೆ ಲೋಕಕಲ್ಯಾಣವೂ ಉಂಟಾಗುವುದು.

ಈ ರೀತಿಯ ಭಾವನೆಗಳಿಂದ ಕೂಡಿದ ವರ್ಣನೆ ಹರಿ – ಹರ – ಶಕ್ತಿ ಭೇದವಿಲ್ಲದೇ ಎಲ್ಲ ದೇವತೆಗಳಿಗೂ ಅನ್ವಯಿಸುವಂತೆ ವರ್ಣಿತವಾಗಿರುವುದು ಕಂಡುಬರುತ್ತದೆ. ನಿದರ್ಶನವಾಗಿ ಶ್ರೀ ರಾಮ ಸ್ತೋತ್ರದ ಒಂದು ಪದ್ಯವನ್ನು ನೋಡೋಣ.

"ವಿಶುದ್ಧಂ ಪರಂ ಸಚ್ಚಿದಾನಂದರೂಪಂ
ಗುಣಾಧಾರಮಾಧಾರಹೀನಂ ವರೇಣ್ಯಮ್
ಮಹಾಂತಂ ವಿಭಾಂತಂ ಗುಹಾಂತಂ ಗುಣಾಂತಂ
ಸುಖಾಂತಂ ಸ್ವಯಂ ಧಾಮ ರಾಮಂ ಪ್ರಪದ್ಯೇ"[೧೮]

---

೧೭. ಮನೀಷಾ ಪಂಚಕಂ – ೧.
೧೮. ಶ್ರೀರಾಮಭುಜಂಗ ಪ್ರಯಾತ್ ೧.

ಅಂದರೆ, 'ಅತ್ಯಂತ ಪರಿಶುದ್ಧನೂ, ಸರ್ವಶ್ರೇಷ್ಠನೂ, ಸಚ್ಚಿದಾನಂದ ಸ್ವರೂಪಿಯೂ ಸಕಲ ಸದ್ಗುಣಾಶ್ರಯನೂ, ಎಲ್ಲರಿಂದ ಸ್ತುತಿಸಲ್ಪಡುವವನೂ, ಸರ್ವ ವ್ಯಾಪಕನೂ, ವಿಶೇಷ ಕಾಂತಿಯಿಂದ ಬೆಳಗುವವನೂ, ಎಲ್ಲ ಜೀವಿಗಳ ಹೃದಯ ಗುಹೆಯಲ್ಲಿ ನೆಲಸಿರುವವನೂ, ಸತ್ವರಜಸ್ತಮೋ ಗುಣಗಳಿಗೆ ಅಧೀನನಾಗದವನೂ, ವಿಷಯ ಸುಖಗಳಿಂದ ದೂರವಿರುವವನೂ, ತನಗೆ ತಾನೇ ಆಶ್ರಯನೂ ಆದ ಶ್ರೀ ರಾಮಚಂದ್ರನನ್ನು ಆಶ್ರಯಿಸುತ್ತೇನೆ. ಅದೇ ರೀತಿ ವೇದ ಸಾರ ಶಿವಸ್ತುತಿಯ ಈ ಪದ್ಯವನ್ನು ನೋಡಬಹುದು.

> "ತ್ವತ್ತೋ ಜಗದ್ಭವತಿ ವೇದ ಭವಸ್ಮರಾರೇ
> ತ್ವಯ್ಯೇವ ತಿಷ್ಠತಿ ಜಗನ್ಮೃಡ ವಿಶ್ವನಾಥ ।
> ತ್ವಯ್ಯೇವ ಗಚ್ಛತಿ ಲಯಂ ಜಗದೇತದೀಶ
> ಲಿಂಗಾತ್ಮಕೇ ಹರ ಚರಾಚರ ವಿಶ್ವರೂಪಿನ್ ॥"[೧೯]

ಅಂದರೆ, 'ಹೇ ಮನ್ಮಥಾರಿಯೇ; ಜಗತ್ತಿನ ಸೃಷ್ಟಿ ನಿನ್ನಿಂದ; ಅದು ಉಳಿಯುವುದೂ ನಿನ್ನಿಂದ; ಅಳಿಯುವುದೂ ನಿನ್ನಿಂದ. ಹೇ ಮೃಡ ! ವಿಶ್ವನಾಥ, ಚರಾಚರರೂಪಿಯಾದ ವಿಶ್ವಸ್ವರೂಪಿಯೇ ನೀನಾಗಿರುವೆ.

ಶಿವಾನಂದ ಲಹರಿಯು ಭಕ್ತಿ ಮತ್ತು ಶರಣಾಗತಿಯ ಬಗ್ಗೆ ವಿವರ ನೀಡುತ್ತಿದ್ದು, ಭಕ್ತಿ ಯೋಗದ ತತ್ವ ಹಾಗೂ ಅನುಷ್ಠಾನದ ಬಗೆಗೆ ಅನೇಕ ಉಪಯುಕ್ತ ವಿಚಾರಗಳನ್ನು ಒಳಗೊಂಡಿದೆ.

> "ಸಾರೂಪ್ಯಂ ತವ ಪೂಜನೇ, ಶಿವಮಹಾದೇವೇತಿ ಸಂಕೀರ್ತನೇ
> ಸಾಮೀಪ್ಯಂ ಶಿವಭಕ್ತಿ ಧುರ್ಯ ಜನತಾ ಸಾಂಗತ್ಯ ಸಂಭಾಷಣೇ ।
> ಸಾಲೋಕ್ಯಂ ಚ ಚರಾಚರಾತ್ಮಕ ತನು ಧ್ಯಾನೇ ಭವಾನೀಪತೇ
> ಸಾಯುಜ್ಯಂ ಮಮ ಸಿದ್ಧ ಮತ್ರ ಭವತಿ ಸ್ವಾಮಿನ್ ಕೃತಾರ್ಥೋಽಸ್ಮ್ಯಹಂ"[೨೦]

ಅಂದರೆ, ಶ್ರೀ ಭವಾನಿವಲ್ಲಭನಾದ ಮಹೇಶ್ವರನೇ, ನಿನ್ನ ಪೂಜೆಯಿಂದ ಸಾರೂಪ್ಯ, ನಾಮ ಸಂಕೀರ್ತನೆಯಿಂದ ಸಾಮೀಪ್ಯ, ಶಿವಭಕ್ತರ ಸತ್ಸಂಗದಿಂದ ಸಾಲೋಕ್ಯ, ಸಮಸ್ತಜಗದಾತ್ಮಕವಾದ ನಿನ್ನ ಸ್ವರೂಪದ ಧ್ಯಾನದಿಂದ ಸಾಯುಜ್ಯವೆಂಬ ಮುಕ್ತಿ ನನಗೆ ಇಲ್ಲಿಯೇ ಲಭಿಸಿದೆ. ನಾನು ಇದರಿಂದಲೇ ಧನ್ಯನಾಗಿದ್ದೇನೆ.

## ಭಕ್ತಿಯ ಸ್ವರೂಪ

ಭಗವಂತನಲ್ಲಿ ಭಕ್ತಿಯಿರಬೇಕು. ಆದರೆ ಅದು ಸಕಾಮವಾಗಿರುವ ಬದಲು ನಿಷ್ಕಾಮವಾಗಿದ್ದರೆ ಚೆನ್ನ. ಧನಕನಕ ವಸ್ತುವಾಹನಾದಿಗಳನ್ನು ಬಯಸಿ ಭಜಿಸುವುದು, ಅಷ್ಟು ಶ್ರೇಷ್ಠವಾದ ಭಕ್ತಿಯಲ್ಲ. ಭಕ್ತಿಯ ಉದ್ದೇಶ ಭಗವತ್ ಪ್ರಾಪ್ತಿಃ ಅಥವಾ

೧೯. ವೇದ ಸಾರ ಶಿವಸ್ತೋತ್ರಂ ೨.
೨೦. ಶಿವಾನಂದಲಹರಿ, ಪದ್ಯ-೨೮.

ಜನ್ಮರಾಹಿತ್ಯವಾಗಿರಬೇಕು. ಆಚಾರ್ಯರ ಸ್ತೋತ್ರಗಳಲ್ಲಿ ಅಲ್ಲಲ್ಲಿ ಈ ಭಾವನೆ ಅಭಿವ್ಯಕ್ತವಾಗಿರುವುದನ್ನು 'ಜಗನ್ನಾಥಾಷ್ಟಕ'ದ ಈ ಪದ್ಯದಲ್ಲಿ ಕಾಣಬಹುದು.

"ನ ವೈ ಪ್ರಾರ್ಥ್ಯಂ ರಾಜ್ಯಂ ನ ಚ ಕನಕತಾ ಭೋಗವಿಭವೇ
ನ ಯಾಚೇಽಹಂ ರಮ್ಯಾಂ ನಿಖಿಲಜನಕಾಮ್ಯಾಂ ವರವಧೂಂ ।
ಸದಾ ಕಾಲೇ ಕಾಲೇ ಪ್ರಮಥಪತಿನಾ ಗೀತಚರಿತೋ ।
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ॥"[೨೦]

ಅಂದರೆ, 'ನಾನು ರಾಜ್ಯವನ್ನಾಗಲೀ, ಸುವರ್ಣ ಭೋಗ ಭಾಗ್ಯವನ್ನಾಗಲೀ, ಸಾಮಾನ್ಯವಾಗಿ ಎಲ್ಲ ಜನರೂ ಬಯಸುವ ಸುಂದರ ಕನ್ಯೆಯನ್ನಾಗಲೀ, ಬಯಸುವುದಿಲ್ಲ. ಸದಾ ಶಿವನಿಂದಲೂ ಹಾಡಲ್ಪಡುವ ಗುಣಗಳುಳ್ಳ ಜಗನ್ನಾಥಸ್ವಾಮಿಯು ನನ್ನ ಕಣ್ಣುಗಳಿಗೆ ಗೋಚರಿಸಿದರೆ ಸಾಕು. ಹೀಗೆ ಕೃಷ್ಣಾಷ್ಟಕದಲ್ಲಿ "ಶರಣ್ಯೋ ಲೋಕೇಶೋ ಮಮಭವತು ಕೃಷ್ಣೋಽಕ್ಷಿವಿಷಯಃ" ಎನ್ನುತ್ತಾರೆ. ಒಟ್ಟಾರೆ ಕಣ್‌ಮುಂದೆ ನಿಲ್ಲುವಂತೆ ಆಯಾ ದೇವತೆಗಳ ವರ್ಣನೆ ಆಚಾರ್ಯರ ವೈಶಿಷ್ಟ್ಯ.

ಭವಬಂಧನದಿಂದ ದೂರವಾಗುವ ನಿಷ್ಕಾಮ ಕರ್ಮಯೋಗ ನಮ್ಮದಾಗಬೇಕು ಎಂಬುದು ಇಲ್ಲಿಯ ಕಿವಿಮಾತು. ಭಕ್ತನ ಭಕ್ತಿಯಲ್ಲಿ ಸ್ವಾರ್ಥ ಕಾಮನೆ ಇರುವುದು ಒಳಿತಲ್ಲ. ಭಗವಂತನ ರೂಪ, ನಮ್ಮ ಕಣ್ಣಿನಲ್ಲಿ ತುಂಬಿರಬೇಕು. ಗುಣಗಾನ ಮಾತಿನಲ್ಲಿ ತುಂಬಿರಬೇಕು. ನಾಮಶ್ರವಣ ಕಿವಿಯಲ್ಲಿ ತುಂಬಿರಬೇಕು. ಭಗವಂತನ ಒಲುಮೆಯ ರೀತಿ, ಅವರ ಒಂದೊಂದು ಪದ್ಯದಲ್ಲೂ ಮೂಡಿಬಂದಿರುವುದು ಸುಸ್ಪಷ್ಟ. ಉದಾಹರಣೆಗಾಗಿ ಗಣೇಶ ಪಂಚರತ್ನಂ ಸ್ತೋತ್ರದಲ್ಲಿ 'ಪ್ರಪಂಚನಾಶಭೀಷಣಂ' ಅಂದರೆ ಆ ಗಣೇಶನು ಸಂಸಾರ ದುಃಖಿಗಳನ್ನು ದೂರ ಮಾಡುವವನೆಂದು ವರ್ಣಿತವಾಗಿದ್ದರೆ, 'ಶಿವಪ್ರಾತಃಸ್ಮರಣ ಸ್ತೋತ್ರ'ದಲ್ಲಿ ಶಿವನು 'ಸಂಸಾರ ರೋಗಹರ' ಅಂದರೆ, ಭವರೋಗ ವೈದ್ಯನಾಗಿದ್ದಾನೆ.

ಲಕ್ಷ್ಮೀನೃಸಿಂಹ ಸ್ತೋತ್ರದಲ್ಲಂತೂ ಸಾದ್ಯಂತವಾಗಿ ಎಂಟು ಶ್ಲೋಕಗಳಲ್ಲಿ ವಿವಿಧ ರೀತಿಯ ಅಲಂಕಾರೋಕ್ತಿಗಳಿಂದ ಸಂಸಾರದಲ್ಲಿ ಬಿದ್ದು ತೊಳಲಾಡುತ್ತಿರುವ ಜೀವನನ್ನು ಬಣ್ಣಿಸಿ, ಆ ಭಗವಂತನು ನಮ್ಮನ್ನು ಅಗಾಧವಾದ ಸಂಸಾರ ದುಃಖದಿಂದ ಕಾಪಾಡುವವನೆಂದು ವರ್ಣಿಸಿ 'ಕೈ ಹಿಡಿದು ನಡೆಸೆನ್ನನು' ಎಂದು ಬೇಡಿಕೊಳ್ಳಲಾಗಿದೆ.

"ಸಂಸಾರ ಸಾಗರನಿಮಜ್ಜನಮುಹ್ಯಮಾನಂ
ದೀನಂ ವಿಲೋಕಯ ವಿಭೋ ಕರುಣಾನಿಧೇ ಮಾಂ ।
ಪ್ರಹ್ಲಾದಖೇದಪರಿಹಾರಕೃತಾವತಾರ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥"[೨೨]

---

೨೦. ಜಗನ್ನಾಥಾಷ್ಟಕ. ಪದ್ಯ-೭.
೨೨. ಲಕ್ಷ್ಮೀನೃಸಿಂಹಕರುಣರಸಸ್ತೋತ್ರಂ ೧೦.

ಅಂದರೆ, 'ಕರುಣಾಮಯಿಯಾದ ಸ್ವಾಮಿಯೇ; ಸಂಸಾರ ಸಾಗರದಲ್ಲಿ ಮುಳುಗಿ ಮೋಹ ಪಾಶದಲ್ಲಿ ಸಿಲುಕಿರುವ ನನ್ನತ್ತ ಸ್ವಲ್ಪ ದೃಷ್ಟಿ ಹರಿಸು. ಹಿಂದೆ ಪ್ರಹ್ಲಾದನ ಕಷ್ಟಗಳನ್ನು ಪರಿಹರಿಸುವುದಕ್ಕಾಗಿ ಸ್ತಂಭದಿಂದ ಅವತರಿಸಿರುವ ಲಕ್ಷ್ಮೀನೃಸಿಂಹ ಸ್ವಾಮಿಯೇ ನನ್ನನ್ನು ಕೈಹಿಡಿದು ಮುನ್ನಡೆಸು.

'ಶಿವನಾಮಾವಲ್ಯಷ್ಟಕ'ದ ಪ್ರಾರಂಭದ ಎಂಟು ಪದ್ಯಗಳ ಮೊದಲ ಮೂರು ಪಾದಗಳಲ್ಲಿ ಶಿವನ ಗುಣಗಣಗಳನ್ನು ವರ್ಣಿಸಿ ಕೊನೆಯ ಪಾದದಲ್ಲಿ "ಸಂಸಾರ ದುಃಖಗಹನಾಜ್ಜಗದೀಶರಕ್ಷ' ಅಂದರೆ 'ಸಂಸಾರ ದುಃಖದಲ್ಲಿ ಬಿದ್ದು ಒದ್ದಾಡುತ್ತಿರುವ ನನ್ನನ್ನು ಕಾಪಾಡು' ಎಂದು ಪ್ರಾರ್ಥಿಸಲಾಗಿದೆ. ಹೀಗೆ ಶಿವಾಪರಾಧ ಕ್ಷಮಾಪಣಾ ಸ್ತೋತ್ರ ಮುಂತಾದೆಡೆ ಸಂಸಾರಜಾಲದಲ್ಲಿ ಬಿದ್ದು ಒದ್ದಾಡುತ್ತಿರುವ ಮಾನವನ ಬಾಲ್ಯ, ಕೌಮಾರ್ಯ, ವೃದ್ಧಾಪ್ಯಗಳ ಚಿತ್ರಣವನ್ನು ಅತ್ಯಂತ ಮಾರ್ಮಿಕವಾಗಿ ಕಣ್ಮುಂದೆ ನಿಲ್ಲುವಂತೆ ವರ್ಣಿಸಿ 'ತಾನು ಹಾಗೆ ಮಾಡಿಲ್ಲ' ಎಂದು ಶಿವನ ಕ್ಷಮೆ ಬೇಡುವ ನೆಪದಲ್ಲಿ ಪರೋಕ್ಷವಾಗಿ ನಮ್ಮ ನಡತೆ ಹೇಗಿರಬೇಕು ? ಎಂಬುದನ್ನು ವಿವರಿಸಿದ್ದಾರೆ.

"ಸ್ನಾತ್ವಾ ಪ್ರತ್ಯೂಷಕಾಲೇ ಸ್ನಪನವಿಧಿವಿಧೌ ನಾಹೃತಂ ಗಾಂಗತೋಯಂ
ಪೂಜಾರ್ಥಂ ವಾ ಕದಾಚಿದ್ಬಹುತರಗಹನೇ ಖಂಡಬಿಲ್ವೀದಲಂ ವಾ ।
ನಾನೀತಾ ಪದ್ಮಮಾಲಾ ಸರಸಿ ವಿಕಸಿತಾ ಗಂಧಪುಷ್ಪೈಸ್ತ್ವದರ್ಥಂ
ಕ್ಷಂತವ್ಯೋಮೇ ಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ।"[೨೩]

ಅಂದರೆ, 'ಹೇ ಮಹಾದೇವ; ಅರುಣೋದಯ ಸಮಯದಲ್ಲಿಯೇ ಎದ್ದು ಸ್ನಾನಾದಿ ಪ್ರಾತಃ ಕೃತ್ಯಗಳನ್ನು ಮಾಡಿ ನಿನ್ನ ವಿಧ್ಯುಕ್ತವಾದ ಅಭಿಷೇಕಕ್ಕೆ ಗಂಗಾಜಲವನ್ನು ನಾನು ಎಂತೂ ತರಲಿಲ್ಲ. ಬಹಳ ಗಹನವಾದ ಅರಣ್ಯಕ್ಕೆ ಹೋಗಿ ನಿನ್ನ ಪೂಜೆಗಾಗಿ ಅಖಂಡ ಬಿಲ್ವಪತ್ರೆಗಳನ್ನು ಒಂದು ದಿನವೂ ತರಲಿಲ್ಲ. ಸರೋವರದಲ್ಲಿ ಚೆನ್ನಾಗಿ ಅರಳಿದ ತಾವರೆ ಹೂಗಳ ಮಾಲೆಯನ್ನು ಸುಗಂಧ ಕುಸುಮಗಳೊಡನೆ ಕಟ್ಟಿ ತಂದು ಒಂದು ದಿನವೂ ನಿನಗೆ ಅರ್ಪಿಸಲಿಲ್ಲ. ಹೇ ಶಂಭೋ; ನನ್ನ ಈ ಅಪರಾಧಗಳನ್ನು ದಯವಿಟ್ಟು ಮನ್ನಿಸು".

ಶಿವಪೂಜೆಯನ್ನು ಹೇಗೆ ಮಾಡಬೇಕು ಎಂಬುದನ್ನು ಇಲ್ಲಿ ಸೂಚ್ಯವಾಗಿ ಸುಂದರವಾಗಿ ವಿವರಿಸಿರುವುದು ಗಮ್ಯ. "ಇದಂ ಉತ್ತಮಮತ್ ಅತಿಶಯನಿ ವ್ಯಂಗೇ ವಾಚ್ಯಾತ್ ಧ್ವನಿಃ ಬುಧೈಃ ಕಥಿತಃ"[೨೪]

ಎಂಬ ಮಮ್ಮಟನ ಮಾತಿನಂತೆ ವಾಚ್ಯಾಂಶಕ್ಕಿಂತಲೂ ವ್ಯಂಗ್ಯಾಂಶ ಪ್ರಧಾನವಾಗಿದ್ದರೆ, ಅದು ಉತ್ತಮ ಧ್ವನಿಕಾವ್ಯವೆಂಬುದು ಕಾವ್ಯಶಾಸ್ತ್ರ ಸಿದ್ಧಾಂತ. ಅಂತಹ ಕಾವ್ಯ, ಕ್ರಾಂತದರ್ಶಿಗಳಾದ ಶಂಕರರ ಕಲಾಕುಂಚದಿಂದ ಮೂಡಿ ಬಂದಿದೆ. ಅವರಲ್ಲಿ

---

೨೩. ಶಿವಾಪರಾಧಕ್ಷಮಾಪಣಸ್ತೋತ್ರ ೫.

೨೪. ಮಮ್ಮಟನ ಕಾವ್ಯಪ್ರಕಾಶ ೧-೪.

ಅದ್ಭುತವಾದ ಪ್ರತಿಭೆಯಿದೆ. ಲೋಕಶಾಸ್ತ್ರ, ಕಾವ್ಯಾದಿಗಳ ಅವಲೋಕನದಿಂದ ಬಂದ ನೈಪುಣ್ಯವಿದೆ. ಗೋವಿಂದಭಗವತ್ಪಾದರಂಥ ಸದ್ಗುರುವಿನ ಪೂರ್ಣಾನುಗ್ರಹವಿದೆ.

## ಶಂಕರರ ಸ್ತೋತ್ರದ ಅಂತರಾಳ

ಕೆಲವು ಸ್ತೋತ್ರಗಳಲ್ಲಿ, ಮಾನವನ ಗರ್ಭವಾಸ, ಜನನ, ಮುಪ್ಪು, ಮರಣ ಸಾಮಾನ್ಯವಾಗಿ ಆಗಾಗ ಬರುವ ಶಿರೋರೋಗ, ಕಣ್ಣಿನ ರೋಗ, ಹೃದ್ರೋಗ, ಹೊಟ್ಟೆನೋವು, ಲಘು ಶಂಕೆ, ಮೂಲವ್ಯಾಧಿ ಮುಂತಾದ ಅಧಿವ್ಯಾಧಿಗಳನ್ನು ಗಮನಿಸಿದಾಗ ಈ ಪ್ರಪಂಚ ಒಂದು ಸಾಗರ. ದುಃಖಭೂಯಿಷ್ಠ ಎಂಬುದು ಕಂಡುಬರುತ್ತದೆ. ನಿರಂತರವಾಗಿ ಬರುವ ದುಃಖ ದಾರಿದ್ರ್ಯಗಳ ಕಾರಣದಿಂದ ಮನುಷ್ಯ ಖಿನ್ನನಾಗುತ್ತಾನೆ. ಉದ್ವಿಗ್ನಗೊಳ್ಳುತ್ತಾನೆ. ಆಯಾಸಗೊಳ್ಳುತ್ತಾನೆ. ಅಂತಕನ ಘಂಟಾನಾದವು ಕಿವಿಗೆ ಬೀಳುವಾಗ, ಯಮದೂತರು ಭೀಷಣ ಮಾತುಗಳನ್ನು ಆಡುತ್ತ ಹತ್ತಿರ ಸುಳಿಯುವಾಗ, ಮಡದಿ ಮಕ್ಕಳೆಲ್ಲ ಮರಣ ಶಯ್ಯೆಯಲ್ಲಿರುವವರನ್ನು ನೋಡಿ ಕಣ್ಣೀರಿಡುವಾಗ, ನಮ್ಮನ್ನು ರಕ್ಷಿಸುವವರು ಯಾರು ? ಆಗ ಭಗವಂತನಲ್ಲಿಟ್ಟ ಅಚಲವಾದ ಭಕ್ತಿ ಮಾತ್ರ ನಮ್ಮನ್ನು ಉಳಿಸಬಲ್ಲದು. ಆದ್ದರಿಂದ "ಭಜಗೋವಿಂದಂ ಭಜಗೋವಿಂದಂ ಭಜಗೋವಿಂದಂ ಮೂಢಮತೆ" ಎಂದು ಆಚಾರ್ಯರು ಕಿವಿಮಾತು ಹೇಳಿದ್ದಾರೆ.

ನಮ್ಮ ಜೀವನದ ಒಂದೊಂದು ದಿನ ಕಳೆಯಿತೆಂದರೆ ಮರಣಕ್ಕೆ ಒಂದೊಂದು ದಿನ ಹತ್ತಿರ ಬಂದಂತೆ. ಆದ್ದರಿಂದ ನಮ್ಮ ಗಮ್ಯ ಎಂತಿರಬೇಕು ? ಜೀವನದ ಪರಮಗುರಿ ಚರಮಗುರಿ ಏನು ? ಎಂಬುದನ್ನು ಮನೋಜ್ಞವಾಗಿ ಒಂದೇ ಪದ್ಯದಲ್ಲಿ ವಿವರಿಸಿಬಿಡುತ್ತಾರೆ.

"ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ ಯಾತಿ ಕ್ಷಯಂ ಯೌವನಂ
ಪ್ರತ್ಯಾಯಾಂತಿ ಗತಾಃ ಪುನರ್ನ ದಿವಸಾಃ ಕಾಲೋ ಜಗದ್ಭಕ್ಷಕಃ ।
ಲಕ್ಷ್ಮೀಸ್ತೋಯತರಂಗಭಂಗಚಪಲಾ ವಿದ್ಯುಚ್ಚಲಂ ಜೀವಿತಂ
ತಸ್ಮಾನ್ಮಾಂ ಶರಣಾಗತಂ ಕರುಣಯಾ ತ್ವಂ ರಕ್ಷ ರಕ್ಷಾಧುನಾ ॥"[೨೫]

ಅಂದರೆ, 'ನೋಡನೋಡುತ್ತಲೇ ಆಯಸ್ಸು ಕಳೆದು ಹೋಗುತ್ತದೆ. ಯೌವನವು ದಿನದಿನಕ್ಕೂ ಜಾರಿ ಹೋಗುತ್ತದೆ. ಕಳೆದು ಹೋದ ದಿನಗಳು ಮತ್ತೆ ಎಂದೂ ಹಿಂದಿರುಗುವುದಿಲ್ಲ. ಕಾಲವೆಂಬುದು ಜಗತ್ತನ್ನೇ ತಿಂದು ತೇಗುತ್ತದೆ. ಲಕ್ಷ್ಮಿಯಾದರೋ ನೀರಿನ ಅಲೆಯಂತೆ ಚಂಚಲಳು. ಜೀವನವು ಮಿಂಚಿನಂತೆ ಕ್ಷಣಕಾಲ ಮಿಂಚಿ ಮರಳುತ್ತದೆ. ಆದ್ದರಿಂದ ಹೇ ಶಂಭೋ; ಶರಣು ಬಂದಿರುವ ನನ್ನನ್ನು ನೀನೇ ಕರುಣೆಯಿಟ್ಟು ರಕ್ಷಿಸು, ರಕ್ಷಿಸು. ಹಾಗೇ ಈ ಪದ್ಯ ಗಮನಿಸಿ :

---

೨೫. ಶಿವಾಪರಾಧಕ್ಷಮಾಪಣ ಸ್ತೋತ್ರ ೧೪.

"ಕಿಂ ಯಾನೇನ ಧನೇನ ವಾಜಿಕರಿಭಿಃ ಪ್ರಾಪ್ತೇನ ರಾಜ್ಯೇನ ಕಿಂ ?
ಕಿಂ ವಾ ಪುತ್ರ ಕಲತ್ರಮಿತ್ರ ಪಶುಭಿರ್ದೇಹೇನ ಗೇಹೇನ ಕಿಂ ?
ಜ್ಞಾತ್ವೈತತ್ಕ್ಷಣಭಂಗುರಂ ಸಪದಿ ರೇ ತ್ಯಾಜ್ಯಂ ಮನೋ ದೂರತಃ
ಸ್ವಾತ್ಮಾರ್ಥಂ ಗುರುವಾಕ್ಯತೋ ಭಜ ಭಜ ಶ್ರೀ ಪಾರ್ವತೀವಲ್ಲಭಂ"[೨೬]

ಅಂದರೆ, 'ಎಲೈ ಮಾನವ, ಈ ವಾಹನ, ಸಂಪತ್ತು, ಆನೆ, ಕುದುರೆ, ರಾಜ್ಯ, ಪುತ್ರ, ಮಿತ್ರ, ಹೆಂಡತಿ, ಮನೆ, ದೇಹ ಎಲ್ಲವೂ ಒಂದು ದಿನ ನಾಶ ಹೊಂದುವವು ಎಂಬುದು ನೆನಪಿರಲಿ. ಆದ್ದರಿಂದ ಇವುಗಳಿಂದ ಆದಷ್ಟು ನಿನ್ನ ಮನಸ್ಸನ್ನು ದೂರವಿರಿಸು. ನಿನ್ನ ಆತ್ಮೋದ್ಧಾರಕ್ಕಾಗಿ ಸದ್ಗುರುವನ್ನು ಆಶ್ರಯಿಸು. ಅವರಿಂದ ಆತ್ಮಸ್ವರೂಪ ಜ್ಞಾನವನ್ನು ಪಡೆದು ಉಮಾಮಹೇಶ್ವರನನ್ನು ಭಜಿಸು, ಭವಬಂಧನವನ್ನು ತಪ್ಪಿಸಿಕೊ.

ಈ ರೀತಿ ಅತ್ಯಂತ ಹೃದಯಾವರ್ಜಕವಾದ ಶಬ್ದಗಳಿಂದ ಎಂಥವರ ಮನಸ್ಸಿಗೂ 'ಇದು ನಿಜ' ಎನ್ನುವಂತೆ ಬಣ್ಣಿಸಿ ಕಾಂತಾ ಸಂಹಿತೆಯಿಂದ ನಮ್ಮನ್ನು ತಿದ್ದಿ ಮುದ್ದಾಗಿ ಮಾರ್ಪಡಿಸುವ ಕಾರ್ಯವನ್ನು ಆಚಾರ್ಯ ಶಂಕರರು ಮಾಡಿದ್ದನ್ನು ಹೆಜ್ಜೆಹೆಜ್ಜೆಗೂ ಗಮನಿಸಬಹುದು.

## ಕೊನೆಯಲ್ಲಿ ಫಲಶ್ರುತಿ

ಸಾಮಾನ್ಯವಾಗಿ ಕೊನೆಯಲ್ಲಿ ಫಲಶ್ರುತಿ ಬರುವುದು ಶಂಕರರ ಸ್ತೋತ್ರಗಳ ಇನ್ನೊಂದು ವೈಶಿಷ್ಟ್ಯ.

ಉದಾ :–

"ಮಹಾಗಣೇಶ ಪಂಚರತ್ನಮಾದರೇಣ ಯೋನ್ವಹಂ
ಪ್ರಜಲ್ಪತಿ ಪ್ರಭಾತಕೇ ಹೃದಿ ಸ್ಮರನ್ಗಣೇಶ್ವರಂ ।
ಆರೋಗತಾಮದೋಷತಾಂ ಸುಸಾಹಿತೀಂ ಸುಪುತ್ರತಾಂ
ಸಮೀಹಿತಾಯುರಷ್ಟಭೂತಿಮಭ್ಯುಪೈತಿ ಸೋಽ ಚಿರಾತ್ ॥"[೨೭]

ಅಂದರೆ, ಪ್ರತಿದಿನವೂ, ಪ್ರಾತಃ ಕಾಲದಲ್ಲಿ ಗಣೇಶನನ್ನು ಸ್ಮರಿಸುತ್ತ 'ಮಹಾಗಣೇಶ ಪಂಚರತ್ನ ಸ್ತೋತ್ರ' ಹೇಳುವವರಿಗೆ ಆರೋಗ್ಯ, ಸದ್ಗುಣ, ಪಾಂಡಿತ್ಯ, ಸತ್‌ಸಂತಾನ, ಪೂರ್ಣಾಯುಷ್ಯ ಅಷ್ಟೈಶ್ವರ್ಯಗಳು ಲಭಿಸುತ್ತದೆ.

"ಯಃ ಶ್ಲೋಕಪಂಚಕಮಿದ್ದಂ ಲಲಿತಾಂಬಿಕಾಯಾಃ
ಸೌಭಾಗ್ಯದಂ ಸುಲಲಿತಂ ಪಠತಿ ಪ್ರಭಾತೇ ।
ತಸ್ಮೈದದಾತಿ ಲಲಿತಾ ಝಟಿತಿ ಪ್ರಸನ್ನಾ
ವಿದ್ಯಾಂ ಶ್ರಿಯಂ ವಿಮಲಸೌಖ್ಯಮನಂತಕೀರ್ತಿಂ ॥"[೨೮]

---

೨೬. ಶಿವಾಪರಾಧಕ್ಷಮಾಪಣ ಸ್ತೋತ್ರ ಪದ್ಯ-೧೩.

೨೭. ಮಹಾಗಣೇಶಪಂಚರತ್ನ ಪದ್ಯ-೬.

೨೮. ಲಲಿತಾಪಂಚಕ ಪದ್ಯ-೬.

ಅಂದರೆ, 'ನಿತ್ಯ ಮುಂಜಾನೆ ಈ ಸುಲಲಿತವಾದ 'ಲಲಿತಾಪಂಚಕ'ವನ್ನು ಹೇಳುವ ಭಕ್ತರಿಗೆ ಲಲಿತಾ ದೇವಿಯು ಪ್ರಸನ್ನಳಾಗಿ ವಿದ್ಯೆ, ಐಶ್ವರ್ಯ, ಸೌಖ್ಯ ಹಾಗೂ ಅನಂತ ಕೀರ್ತಿಯನ್ನು ಅನುಗ್ರಹಿಸುತ್ತಾಳೆ.

ಅದೇ ರೀತಿ "ಲಕ್ಷ್ಮೀನೃಸಿಂಹ ಕರುಣಾರಸ ಸ್ತೋತ್ರದ ಕೊನೆಯ ಪದ್ಯ, 'ಶ್ರೀರಾಮ ಭುಜಂಗಸ್ತೋತ್ರದ ಕೊನೆಯ ಪದ್ಯ 'ಉಪದೇಶ ಪಂಚಕ'ದ ಕೊನೆಯ ಪದ್ಯ 'ದಕ್ಷಿಣಾಮೂರ್ತಿ ಸ್ತೋತ್ರ'ದ ೧೧ನೆಯ ಪದ್ಯ ಮುಂತಾದೆಡೆಯಲ್ಲೂ, ಕೊನೆಯಲ್ಲಿ ಫಲಶ್ರುತಿ ಬಂದಿರುವುದನ್ನು ಕಾಣಬಹುದು.

## ಶಿವ ಶಕ್ತಿ ಮಹಿಮೆ

ಶ್ರೀ ಶಂಕರರ ಸ್ತೋತ್ರ ಕಾವ್ಯಗಳಲ್ಲಿ ಶಿವಶಕ್ತಿಗಳ ಮಹಿಮೆಗೆ ವಿಶೇಷ ಪ್ರಾಶಸ್ತ್ಯವಿರುವುದನ್ನು ಕಾಣಬಹುದು. ಮುಖ್ಯವಾಗಿ ಅವರು ರಚಿಸಿದ 'ಶಿವಾನಂದಲಹರೀ', 'ಸೌಂದರ್ಯಲಹರೀ' ಈ ಎರಡೂ ಬೃಹತ್ ಸ್ತೋತ್ರಗಳು ಶಿವ ಶಕ್ತಿಗಳನ್ನು ಕುರಿತದ್ದಾಗಿವೆ. ಶಿವಾನಂದಲಹರಿಯಲ್ಲಿ ಶಿವಪಾರಮ್ಯ ವರ್ಣಿತವಾಗಿದ್ದರೆ, ಸೌಂದರ್ಯಲಹರಿಯಲ್ಲಿ ಶಕ್ತಿ ಪಾರಮ್ಯವನ್ನು ಕಾಣಬಹುದು.

ಸೌಂದರ್ಯಲಹರಿಯ ಮೊದಲ ೪೧ ಶ್ಲೋಕಗಳಲ್ಲಿ ಕಾವ್ಯರಸದೊಂದಿಗೆ ತಂತ್ರಶಾಸ್ತ್ರದ ಪ್ರಮೇಯಗಳೂ ವರ್ಣಿತವಾಗಿವೆ. ೪೨ ರಿಂದ ೧೦೦ ಶ್ಲೋಕಗಳವರೆಗೆ ಶ್ರೀದೇವಿಯ ಅಂಗೋಪಾಂಗ ಸೌಷ್ಠವವು ಮುಡಿಯಿಂದ ಅಡಿಯವರೆಗೆ ವರ್ಣಿತವಾಗಿದೆ. ಪ್ರತಿ ಶ್ಲೋಕದಲ್ಲೂ ಮಂತ್ರ ಶಾಸ್ತ್ರದ ರಹಸ್ಯವು ಅಡಕವಾಗಿದ್ದು, ವಿಶೇಷವಾಗಿ ಶ್ರೀಚಕ್ರ ವರ್ಣನೆ, ಶ್ರೀ ವಿದ್ಯಾರಹಸ್ಯಗಳು ಕಾವ್ಯಬಂಧದಲ್ಲಿ ಸುಂದರವಾಗಿ ಮೂಡಿ ಬಂದಿದೆ.

> "ಶಿವಃ ಶಕ್ತ್ಯಾಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ
> ನಚೇದೇವಂ ದೇವೋ ನ ಖಲು ಕುಶಲಃ ಸ್ಪಂದಿತುಮಪಿ ।
> ಅತಸ್ತ್ವಾಮಾರಾಧ್ಯಾಂ ಹರಿಹರವಿರಿಂಚಾದಿಭಿ ರಪಿ
> ಪ್ರಣಂತುಂ ಸ್ತೋತುಂ ವಾ ಕಥಮಕೃತಪುಣ್ಯಃ ಪ್ರಭವತಿ ॥"[೨೯]

ಅಂದರೆ, 'ಶಿವನು ಶಕ್ತಿಯಿಂದೊಡಗೂಡಿದ್ದರೆ ಮಾತ್ರ ವಿಶ್ವವನ್ನು ಸೃಷ್ಟಿಸಬಲ್ಲ. ಶಕ್ತಿ ಸಹಿತನಾಗಿರದಿದ್ದರೆ ಆಕಾಶದಂತೆ ನಿರಾಕಾರನಾದ ಅವನಿಗೆ ಅಲ್ಲಾಡುವುದೂ ಸಾಧ್ಯವಿಲ್ಲ. ತ್ರಿಮೂರ್ತಿಗಳಿಂದಲೂ ಇಂದ್ರಾದಿ ದೇವತೆಗಳಿಂದಲೂ ಆರಾಧಿಸಲ್ಪಡುವ ತಾಯಿಯನ್ನು ಸೇವೆಗೈಯ್ಯುವುದಕ್ಕೂ, ಸ್ತುತಿಸುವುದಕ್ಕೂ, ಜನ್ಮ ಜನ್ಮಾಂತರಗಳ ಪುಣ್ಯ ಬೇಕು." "ಭಜಂತಿ ತ್ವಾಂ ಧನ್ಯಾ : ಕತಿಚನ ಚಿದಾನಂದ ಲಹರೀಂ"[೩೦] ಚಿದಾನಂದ ಪ್ರವಾಹರೂಪಳಾದ ದೇವಿಯನ್ನು ಧ್ಯಾನಿಸುವವರೇ ಧನ್ಯರು.

---

೨೯. ಸೌಂದರ್ಯ ಲಹರಿ ೧.

೩೦. ಸೌಂದರ್ಯ ಲಹರಿ ೮.

ಆಚಾರ್ಯರ ಕಾಲದಲ್ಲಿ ಶಾಕ್ತ ಸಂಪ್ರದಾಯವು ಪ್ರಚಲಿತವಾದದ್ದು ಮಾತ್ರವಲ್ಲದೆ, ವಾಮಾಚಾರದ ಅಧೋಮಾರ್ಗದ ಕಡೆ ಹೊರಳಿತ್ತು. ಆಚಾರ್ಯರು ತಮ್ಮ ವಿಶಿಷ್ಟ ಪ್ರಭಾವದಿಂದ ಈ ಶಾಕ್ತ ಸಂಪ್ರದಾಯವನ್ನು ಪರಿಶುದ್ಧ ಸಮಯಾಚಾರದತ್ತ ತಿರುಗಿಸಿ ಲೋಕೋಪಕಾರ ಮಾಡಿದ್ದಾರೆ. ಸೌಂದರ್ಯಲಹರಿ ಅವರ ಈ ಉಜ್ವಲ ಸಾಧನೆಯ ಕಾವ್ಯ ಪ್ರತಿಮೆಯಾಗಿದೆ.

ಇಲ್ಲಿಯ "ಕ್ವಣತ್ ಕಾಂಚೀಧಾಮಾ" ಎಂಬ ೭ನೆಯ ಪದ್ಯದಲ್ಲಿ ದೇವಿಯ ಸಾಕಾರ ಮೂರ್ತಿಯ ವರ್ಣನೆ ಅತ್ಯಂತ ಹೃದಯಂಗಮವಾಗಿ ಮೂಡಿ ಬಂದಿದೆ. "ವಹಂತೀ ಸಿಂಧೂರಂ" ಎಂಬ ೪೪ನೆಯ ಪದ್ಯದಲ್ಲಿ ಉತ್ಪ್ರೇಕ್ಷಾ ರೂಪಕಗಳ ಅಂಗಾಂಗಿಭಾವ ಸಂಕರಾಲಂಕಾರ ಸುಂದರವಾಗಿ ಮೂಡಿಬಂದಿದ್ದು ಗಮನಾರ್ಹ. ಅದರಂತೆ "ಅರಾರ್ಯೈ : ಸ್ವಾಭಾವ್ಯಾತ್....." ಎಂಬ ೪೫ನೆಯ ಪದ್ಯದಲ್ಲಿ ಉಪಮಾ ರೂಪಕಾದಿ ಅಲಂಕಾರವಿನ್ಯಾಸ ತುಂಬಾ ಚೆನ್ನಾಗಿ ಮೂಡಿ ಬಂದಿದೆ.

ಭಂಗಿಭಣಿತಿ ವೈಚಿತ್ರ್ಯದಿಂದ ಸೂಚ್ಯವಾಗಿ ಸಾಮಾನ್ಯರಿಗೂ ಅರ್ಥವಾಗುವಂತೆ ಅದ್ವೈತ ತತ್ವವನ್ನು ಕ್ರಾಂತದರ್ಶಿಗಳು ಹೇಗೆ ಬೋಧಿಸಬಲ್ಲರು ಎಂಬುದಕ್ಕೆ ಶಂಕರರ ಈ ಪದ್ಯ ಸಾಕ್ಷಿ.

"ಪ್ರದೀಪಜ್ವಾಲಾಬಿರ್ದಿವಸಕರನೀರಾಜನವಿಧಿಃ
ಸುಧಾಸೂತೇಶ್ಚಂದ್ರೋಪಲಜಲಲವೈರರ್ಘ್ಯರಚನಾ ।
ಸ್ವಕೀಯೈರಂಭೋಭಿಃ ಸಲಿಲನಿಧಿಸಾಹಿತ್ಯಕರಣಂ
ತ್ವದೀಯಾಭಿರ್ವಾಗ್ಭಿಸ್ತವ ಜನನಿ ವಾಚಾಂ ಸ್ತುತಿರಿಯಮ್"[೩೧]

ಅಂದರೆ, "ಹೇ ಜಗಜ್ಜನನೀ; ಪ್ರಕಾಶಮಯನಾದ ಸೂರ್ಯನಿಗೆ ಅವನದೇ ಆದ ದ್ವೀಪಜ್ವಾಲೆಗಳಿಂದ ಆರತಿ ಮಾಡುವಂತೆ, ಅಮೃತವನ್ನು ಸುರಿಸುವ ಚಂದ್ರನಿಗೆ ಅವನದೇ ಆದ ಚಂದ್ರಕಾಂತ ಶಿಲೆಯಿಂದ ಜಿನುಗಿದ ನೀರಿನಿಂದ ಅರ್ಘ್ಯ ನೀಡುವಂತೆ, ಸಮುದ್ರಕ್ಕೆ ಅದರದೇ ಆದ ಜಲದಿಂದ ತರ್ಪಣಗೈಯುವಂತೆ, ನಿನ್ನದೇ ಆದ ಶಬ್ದಾರ್ಥಗಳಿಂದ ನಿನ್ನನ್ನು ಸ್ತೋತ್ರ ಮಾಡುತ್ತಿದ್ದೇನೆ.

ಇಲ್ಲಿ 'ಅದ್ವಿತೀಯ ಬ್ರಹ್ಮವಸ್ತುವಿಗಿಂತ ಭಿನ್ನವಾದ ಮತ್ತೊಂದು ಇಲ್ಲ' ಎಂಬ ಅದ್ವೈತ ತತ್ವಪ್ರತಿಪಾದನೆಯನ್ನು ಕಡುಬಿನಲ್ಲಿ ಹೂರಣದಂತೆ ಹುದುಗಿಸಿರುವುದನ್ನು ಕಾಣಬಹುದು. ಅಲ್ಲದೆ, ಪರಿಶುದ್ಧ ಭಕ್ತನಿಗೆ ಅತ್ಯಂತ ಸಹಜವಾದ ಸಂಪೂರ್ಣ ಶರಣಾಗತಿಯನ್ನು ಇಲ್ಲಿ ಕಾಣಬಹುದು. ಎಂದರೆ ಏಕಕಾಲದಲ್ಲಿ ಆಚಾರ್ಯರು ಶ್ರೇಷ್ಠ ಜ್ಞಾನಿಗಳೂ, ಭಕ್ತರೂ ಆಗಿದ್ದರು. ಪ್ರಾಯಶಃ ಗೀತಾಚಾರ್ಯನು 'ಜ್ಞಾನೀತು ಆತ್ಮೈವ ಮೇ ಮತಂ' ಎಂದದ್ದು ಇಂಥವರನ್ನು ಕುರಿತೇ ಇರಬೇಕು.

---

೩೧. ಸೌಂದರ್ಯ ಲಹರಿ ೧೦೦.

ಶಂಕರರ ಸ್ತೋತ್ರಗಳನ್ನು ಓದುತ್ತಾ ಓದುತ್ತಾ ಹೋದಾಗ ಅವರೊಬ್ಬ ಶ್ರೇಷ್ಠ ವಿಶ್ವಕುಟುಂಬಿಗಳಾಗಿದ್ದರು ಎಂಬುದರ ಅರಿವಾಗುತ್ತದೆ. 'ಮಾಯಾಪಂಚಕದ' ಈ ಪದ್ಯ ಅದನ್ನು ಸ್ಪಷ್ಟಪಡಿಸುತ್ತದೆ.

"ಅಪಗತಗುಣವರ್ಣಜಾತಿಭೇದೇ
ಸುಖಚಿತಿ ವಿಪ್ರವಿಡಾದ್ಯಹಂಕೃತಿಂ ಚ ।
ಸ್ಫುಟಯತಿ ಸುತದಾರಗೇಹಮೋಹಂ
ತ್ವಘಟಿತಘಟನಾಪಟೀಯಸೀ ಮಾಯಾ ॥"[೩೨]

ಅಂದರೆ, 'ಸಗುಣ, ನಿರ್ಗುಣ, ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರ, ತಿರ್ಯಕ, ಮನುಷ್ಯ, ದೇವಾದಿ, ಗುಣ, ವರ್ಣ, ಜಾತಿಗಳ ಯಾವ ಭೇದವೂ ಇಲ್ಲದ ಸದಾನಂದ ಬ್ರಹ್ಮನಲ್ಲಿ, ಇವನು ಬ್ರಾಹ್ಮಣ, ಇವನು ಕ್ಷತ್ರಿಯ ಮುಂತಾದ ಜಾತ್ಯಾಭಿಮಾನವನ್ನೂ, ಮಡದಿಮಕ್ಕಳು, ಮನೆಮಾರುಗಳೆಂಬ ಮೋಹವನ್ನು ಬೇರೂರಿಸುವ ಮಾಯೆಯು ಅಘಟಿತ ಘಟನಾ ಸಮರ್ಥಳೇ ಸರಿ."

ಮಾಯಾ ಪ್ರಪಂಚದಲ್ಲಿ ಮುಳುಗಿದ ನಾವು ಜಾತಿ ಮತಗಳೆಂಬ ಭೇದಭಾವದಲ್ಲಿ ಮುಳುಗಿದ್ದೇವೆ. ಆತ್ಮಜ್ಞಾನಿಯಾದವನಿಗೆ ಜಾತಿಪಂಥಗಳ ಬಂಧನವಿಲ್ಲ. ಅವನು ಆ ಮಟ್ಟವನ್ನು ಮೀರಿ ಮೇಲೆ ನಿಂತಿರುತ್ತಾನೆ. 'ಮನೀಷಾಪಂಚಕ'ದಲ್ಲಿ ಆಚಾರ್ಯರು ಸ್ಪಷ್ಟಪಡಿಸಿರುವಂತೆ, "ಚಾಂಡಾಲೋಸ್ತು ನತುದ್ವಿಜೋಸ್ತು ಗುರುರಿತ್ಯೇಷಾ ಮನೀಷಾ ಮಮ" ಅಂದರೆ, ಚಾಂಡಾಲನಾಗಿರಲಿ, ಬ್ರಾಹ್ಮಣನೇ ಆಗಿರಲಿ ಆತ್ಮಜ್ಞಾನಿಯಾಗಿದ್ದರೆ ಅವನೇ ನನ್ನ ಗುರುವೆಂದು ಭಾವಿಸುವೆನು ಎನ್ನುತ್ತಾರೆ. ಎಂತಹ ಉದಾತ್ತ ಭಾವನೆ; ಎಂತಹ ಉದಾತ್ತ ಕಲ್ಪನೆ; ಇದನ್ನೆಲ್ಲಾ ಓದಿದಾಗ ಅವರೊಬ್ಬ ಗುಣಗ್ರಾಹಿಗಳಾದ ಉದಾರಚರಿತರಾದ ವಿಶ್ವಕುಟುಂಬಿಗಳಾಗಿದ್ದರು ಎಂಬುದರ ಅರಿವಾಗುತ್ತದೆ. ಅವರು ಜಾತಿ ಮತ, ಲಿಂಗ ವಯಸ್ಸು ಇತ್ಯಾದಿ ಎಲ್ಲ ಬಗೆಯ ಸಂಕುಚಿತ ಭಾವನೆಗಳಿಂದಲೂ ಮುಕ್ತರಾದ ವಿಶಾಲ ಮನೋಭಾವವುಳ್ಳವರಾಗಿದ್ದರು ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ.

ಆಚಾರ್ಯರ ಶೈಲಿ ಪ್ರಸಾದ ಗುಣ ಭೂಯಿಷ್ಠವೂ ಹೌದು. "ಅವಿದ್ವದಂಗನಾ ಬಾಲ ಪ್ರತೀತಾರ್ಥಂ ಪ್ರಸಾದವತ್" ಎಂಬ ಭಾಮಹನ ಮಾತಿನಂತೆ ಒಂದು ಪದ್ಯ ಓದಿದಾಗ ವಿದ್ವಾಂಸರಿಂದ ಹಿಡಿದು ಹೆಂಗಸರು, ಮಕ್ಕಳವರೆಗೆ ಎಲ್ಲರಿಗೂ ಅರ್ಥವಾಗುವಂತಿದ್ದರೆ ಅದು ಪ್ರಸಾದಗುಣ. ಆಚಾರ್ಯರ ಒಂದೇ ಒಂದು ಚಿಕ್ಕ ಪದ್ಯ ಸಿಕ್ಕಿತೆಂದರೆ ಚತುರಶಿಲ್ಪಿ ಸುಂದರ ಮೂರ್ತಿಯನ್ನು ಕಡೆದು ನಿಲ್ಲಿಸಿಬಿಡುತ್ತಾನೆ. ಉದಾಹರಣೆಗಾಗಿ 'ಲಕ್ಷ್ಮೀನೃಸಿಂಹಕರುಣಾರಸ ಸ್ತೋತ್ರ'ದ ಈ ಪದ್ಯವನ್ನು ನೋಡಬಹುದು.

---

೩೨. ಮಾಯಾಪಂಚಕ ಪದ್ಯ-೪.

"ಏಕೇನ ಚಕ್ರಮಪರೇಣ ಕರೇಣ ಶಂಖ–
ಮನ್ಯೇನ ಸಿಂಧುತನಯಾಮವಲಂಬ್ಯ ತಿಷ್ಠನ್ ।
ವಾಮೇತರೇಣ ವರದಾಭಯಪದ್ಮಚಿಹ್ನಂ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥"[೩೩]

ಅಂದರೆ, ಒಂದು ಕೈಯಲ್ಲಿ ಚಕ್ರ, ಮತ್ತೊಂದು ಕೈಯಲ್ಲಿ ಶಂಕವನ್ನು ಧರಿಸಿ, ಇನ್ನೊಂದು ಕೈಯಿಂದ ಲಕ್ಷ್ಮೀದೇವಿಯನ್ನು ಆಲಿಂಗಿಸಿ, ಬಲಗೈಯಲ್ಲಿ ವರದ ಅಭಯಪ್ರದವಾದ ಪದ್ಮಚಿಹ್ನೆಯನ್ನು ಹೊಂದಿದ, ಲಕ್ಷ್ಮೀನೃಸಿಂಹ ಸ್ವಾಮಿಯೇ ನನ್ನನ್ನು ಕೈಹಿಡಿದು ಮುನ್ನಡೆಸು.

ಅವರ ಹೆಚ್ಚಿನ ಪದ್ಯಗಳಿಗೆ ಟೀಕೆ ಭಾಷ್ಯ ಏನೂ ಬೇಕಾಗಿಲ್ಲ. ಅಷ್ಟು ಸರಳ, ಸುಲಭ, ಸುಂದರ ಹಾಗೂ ಪ್ರಸಾದಗುಣಭೂಯಿಷ್ಠ.

ಶಿವಪಂಚಾಕ್ಷರಸ್ತೋತ್ರದ ಈ ಪದ್ಯ–

"ನಾಗೇಂದ್ರಹಾರಾಯ ತ್ರಿಲೋಚನಾಯ
ಭಸ್ಮಾಂಗರಾಗಾಯ ಮಹೇಶ್ವರಾಯ ।
ನಿತ್ಯಾಯ ಶುದ್ಧಾಯ ದಿಂಗಬರಾಯ
ತಸ್ಮೈ ನಕಾರಾಯ ನಮಃ ಶಿವಾಯ ॥"[೩೪]

ಹಾಗೇ, 'ಲಿಂಗಾಷ್ಟಕ'ದ ಈ ಪದ್ಯವನ್ನು ಗಮನಿಸಿ.

"ಕುಂಕುಮಚಂದನಲೇಪಿತಲಿಂಗಂ
ಪಂಕಜಹಾರಸುಶೋಭಿತಲಿಂಗಂ ।
ಸಂಚಿತಪಾಪವಿನಾಶಕಲಿಂಗಂ
ತತ್ಪ್ರಣಮಾಮಿ ಸದಾಶಿವಲಿಂಗಂ ॥"[೩೫]

ಈ ಪದ್ಯಕ್ಕೆ ವ್ಯಾಖ್ಯಾನ ಏಕೆ ಬೇಕು ? ಶ್ರೀ ಶಂಕರರ ಕೆಲವು ಪದ್ಯಗಳಲ್ಲಿ ಸಹಜನಡೆಯನ್ನು ಗುರುತಿಸಬಹುದು. ಮಾಧುರ್ಯ ಹಾಗೂ ಪ್ರಸಾದ ಗುಣಗಳೇ ಅವರ ಸ್ತೋತ್ರಗಳ ಜೀವಾಳ. 'ಆಹ್ಲಾದಕತ್ವಂ ಮಾಧುರ್ಯಂ' ಮನಸ್ಸನ್ನು ಕರಗಿಸುವ ಆಹ್ಲಾದಕತ್ವ ಗುಣವೇ ಮಾಧುರ್ಯ. 'ಮಧುರಂ ರಸವದ್ವಾಚಿ' ವಸ್ತು ನ್ಯಪಿ ರಸಸ್ಥಿತಿಃ ।

"ಯೇನಮಾದ್ಯಂತಿ ಧೀಮಂತೋ ಮಧುನೇವ ಮಧುವ್ರತಾಃ"[೩೬] ಎಂಬಂತೆ, ಶಬ್ದಾರ್ಥಗಳಲ್ಲಿ ಜೇನಿನಂಥ ಸವಿ ತುಂಬಿರುವುದೇ ಮಧುರ. ಮಧುಪಾನದಿಂದ

೩೩. ಲಕ್ಷ್ಮೀನೃಸಿಂಹಕರುಣಾರಸ ಪದ್ಯ-೧೪.
೩೪. ಶಿವ ಪಂಚಾಕ್ಷರ ಸ್ತೋತ್ರ, ಪದ್ಯ-೧.
೩೫. ಲಿಂಗಾಷ್ಟಕಂ ಪದ್ಯ-೫.
೩೬. ದಂಡಿಯ ಕಾವ್ಯಾದರ್ಶ, ೧–೫೨.

ದುಂಬಿಗಳು ಮೈ ಮರೆತಂತೆ ಕಾವ್ಯ ಮಾಧುರ್ಯದಿಂದ ಸಹೃದಯರು ಆನಂದತುಂದಿಲರಾಗುತ್ತಾರೆ. ಲಲಿತಪದಗಳಿಂದ ಕೂಡಿದ, ಅರ್ಥಗೌರವ ಭೂಯಿಷ್ಠವಾದ, ರಸಿಕರ ಹೃದ್ಯಯವನ್ನು ಸೂರೆಗೊಳ್ಳಬಲ್ಲ, ಅವರ ಸೌಂದರ್ಯ ಲಹರಿ, ಶಿವಾನಂದಲಹರಿ, ಭಜಗೋವಿಂದಂ ಮುಂತಾದವುಗಳ ಕವಿತಾಮಾಧುರ್ಯವನ್ನು ಆಸ್ವಾದಿಸುತ್ತ ಹೋದಾಗ, ಕಾವ್ಯರಚನೆಯಲ್ಲಿ ಅವರಿಗೆ ಅವರೇ ಸಾಟಿ; ಅವರು ಅನನ್ವಯಾಲಂಕಾರ ಎಂಬುದು ವೇದ್ಯವಾಗುತ್ತದೆ. ರಸದೃಷ್ಟಿಯಿಂದ ನೋಡ ಹೊರಟಾಗ ಅವರ ಸ್ತೋತ್ರಕಾವ್ಯಗಳಲ್ಲಿ ಭಕ್ತಿ, ಶಾಂತ, ವಾತ್ಸಲ್ಯ ರಸಗಳೇ ಪ್ರಧಾನವಾಗಿವೆ ಎನ್ನಬಹುದು.

ಹೀಗೆ ಶಂಕರರು ಪ್ರತಿಭಾಸಂಪನ್ನ ಕವಿಗಳಾಗಿ ಜನಕೋಟಿಯ ಆಚಾರ್ಯಪುರುಷರಾಗಿ, ಯತಿವರೇಣ್ಯರಾಗಿ, ಅದ್ವೈತಮತಸ್ಥಾಪನಾಚಾರ್ಯರಾಗಿ, ಸಮಾಜಸುಧಾರಕರಾಗಿ, ನಮ್ಮ ಮುಂದೆ ನಿಲ್ಲುತ್ತಾರೆ. ಸಾಮಾನ್ಯ ಜನರು ಒಣ ವೇದಾಂತವೆನ್ನುವ ತತ್ವಗಳನ್ನು ಹೃದಯಂಗಮವಾಗಿ ಆಬಾಲವೃದ್ಧರೂ ಓದಿ ಆನಂದಿಸುವಂತೆ ಕಾವ್ಯಮಯವಾಗಿ ರಚಿಸಿ ಜನಮನಸೂರೆಗೊಂಡ ಭಾವಯಿತ್ರೀ, ಕಾರಯಿತ್ರೀ ಪ್ರತಿಭಾ ಸಂಪನ್ನ ಕವಿವರೇಣ್ಯರಾಗಿ ಅವರು ನಮ್ಮ ಕಣ್ಮುಂದೆ ನಿಲ್ಲುತ್ತಾರೆ. ಅಲಂಕಾರ ಶಾಸ್ತ್ರಮೂರ್ಧನ್ಯನಾದ ಕುಂಟಕನು ತನ್ನ ವಕ್ರೋಕ್ತಿ ಜೀವಿತದಲ್ಲಿ ಹೇಳುವಂತೆ –

"ಧರ್ಮಾದಿ ಸಾಧನೋಪಾಯಃ ಸುಕುಮಾರ ಕ್ರಮೋದಿತಃ ।
ಕಾವ್ಯಬಂಧೋಽಭಿಜಾತಾನಾಂ ಹೃದಯಾಹ್ಲಾದಕಾರಕಃ ॥

ಅಂದರೆ, ಸಾಮಾನ್ಯ ಜನರಿಗೆ ಗುಡಜಹ್ವಿಕಾನ್ಯಾಯದಿಂದ ಆಹ್ಲಾದಕರವಾಗಿ ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವರ್ಗ ಸಾಧನೆಯನ್ನು ಸಾಧಿಸಲು ಕಾವ್ಯ ಉತ್ತಮವಾದ ಮಾರ್ಗ. ಇದನ್ನರಿತೇ ಶ್ರೀ ಶಂಕರ ಭಗವತ್ಪಾದರು ಆಕಾಶ ಗೋಪುರದಲ್ಲಿ ಕುಳಿತು ವೇದಾಂತ ಉಪದೇಶ ಮಾಡದೇ ಸಾಮಾನ್ಯರ ಸ್ತರದಲ್ಲಿ ನಿಂತು, ಅವರ ಹೃದಯವನ್ನು ಸೂರೆಗೊಳ್ಳಬಲ್ಲ ಸ್ತೋತ್ರ ಕಾವ್ಯ ರಚಿಸಿ, ಜನಮನಗೆದ್ದು, ತಾವು ಲೋಕ ಶಂಕರರೆಂಬುದನ್ನು ಸಾರ್ಥಕಪಡಿಸಿದ್ದಾರೆ.

* * *

# ಅದ್ವೈತ ದರ್ಶನದ ಮಹಾಚೇತನ ಆದಿಶಂಕರರು

ಡಾ॥ ಎ. ಕೆ. ಶಾಸ್ತ್ರಿ

ಭಾರತ ಸನಾತನ ಧರ್ಮಕ್ಕೆ ಹೆಸರುವಾಸಿಯಾದ ದೇಶವೆನಿಸಿದ್ದರೂ ಸನಾತನ ಧರ್ಮಕ್ಕೆ ಕಾಲಕಾಲಕ್ಕೆ ಗ್ಲಾನಿಯುಂಟಾಗಿ, ಧರ್ಮದ ಪುನಃಸ್ಥಾಪನೆಗಾಗಿ ಆಗಾಗ ಮಹಾತ್ಮರು ಜನಿಸಿದ್ದಂತೂ ಐತಿಹಾಸಿಕ ಸತ್ಯ. ರಾಮಾಯಣ ಕಾಲದಲ್ಲಿ ಶ್ರೀ ರಾಮಚಂದ್ರ, ಮಹಾಭಾರತ ಕಾಲದಲ್ಲಿ ಶ್ರೀಕೃಷ್ಣ, ಕ್ರಿ. ಶ. ಪೂ. ೬ನೇ ಶತಮಾನದಲ್ಲಿ ಮಹಾವೀರ ಮತ್ತು ಗೌತಮ ಬುದ್ಧ, ಕ್ರಿ. ಶ. ೮ನೇ ಶತಮಾನದಲ್ಲಿ ಶ್ರೀ ಆದಿಶಂಕರಾಚಾರ್ಯ, ೧೧ನೇ ಶತಮಾನದಲ್ಲಿ ಶ್ರೀ ರಾಮಾನುಜಾಚಾರ್ಯ, ೧೨ನೇ ಶತಮಾನದಲ್ಲಿ ಶ್ರೀ ಬಸವೇಶ್ವರ, ೧೩ನೇ ಶತಮಾನದಲ್ಲಿ ಶ್ರೀ ಮಧ್ವಾಚಾರ್ಯ, ನಂತರದಲ್ಲಿ ಭಕ್ತಿಪಂಥದವರಾದ ರಮಾನಂದ, ಕಬೀರ, ವಲ್ಲಭಾಚಾರ್ಯ, ಚೈತನ್ಯ, ಗುರುನಾನಕ, ಮೀರಾಬಾಯಿ, ತುಳಸೀದಾಸ, ಸೂರದಾಸ, ಜ್ಞಾನೇಶ್ವರ, ರಾಮದೇವ, ನಾಮದೇವ, ಏಕನಾಥ, ತುಕಾರಾಮ, ರಾಮದಾಸ, ವಿದ್ಯಾಪತಿ, ಹೀಗೆ ಸಾಗುತ್ತದೆ ಮಹಾತ್ಮರ ಯಾದಿ. ಸ್ವಾತಂತ್ರ್ಯಪೂರ್ವದಲ್ಲಿ ರಮಣ ಮಹರ್ಷಿ, ಅರವಿಂದ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಮಹಾತ್ಮಾ ಗಾಂಧಿ ಮುಂತಾಗಿ. ಅತ್ಯಂತ ಪ್ರಾಚೀನ ವೇದೋಪನಿಷತ್ತುಗಳ ಕಾಲದ ಋಷಿಮುನಿಗಳ ಸಂಖ್ಯೆಯೂ ಸಾಕಷ್ಟಿದೆ. ಅಂದರೆ, ಭಾರತದ ಚರಿತ್ರೆಯಲ್ಲಿ ಸನಾತನ ಧರ್ಮ ಸಾಕಷ್ಟು ಸಲ ಅವನತಿಯಾಗಿದ್ದಂತೂ ಸತ್ಯವೆಂದಂತಾಯಿತು. ಇದಕ್ಕೆ ಅನೇಕ ಆಂತರಿಕ ಕಾರಣಗಳಿದ್ದರೂ, ಈ ದೇಶ ಕಾಲಕಾಲಕ್ಕೆ ವಿದೇಶೀಯರ ಆಕ್ರಮಣಕ್ಕೆ ಬಲಿಯಾಗಿ ಗೊಂದಲಮಯ ವಾತಾವರಣ ಉಂಟಾಗಿದ್ದಂತೂ ನಿಜ. ಕ್ರಿ. ಶ. ೮ನೇ ಶತಮಾನದ ಪೂರ್ವದಲ್ಲಿ ಅವೈದಿಕ ಮತಗಳು ತಲೆ ಎತ್ತಿ, ಸನಾತನ ಧರ್ಮಕ್ಕೆ ಆಪತ್ತು ಬಂದೊದಗಿದಾಗ, ವಿಭೂತಿಪುರುಷರೆನಿಸಿದ ಶ್ರೀ ಆದಿ ಶಂಕರಾಚಾರ್ಯರ ಆವಿರ್ಭಾವವಾಯಿತು.

ಆದಿಶಂಕರರ ಕಾಲ, ಜೀವನ ಚರಿತ್ರೆಗೆ ಸಂಬಂಧಿಸಿದ ಅನೇಕ ಘಟನೆಗಳು, ತಿರೋಧಾನ, ಅವರಿಂದ ಮಠಗಳ ಸ್ಥಾಪನೆ, ಸಾಹಿತ್ಯಕ ಕೃತಿಗಳು, ಹೀಗೆ ಅನೇಕ ವಿಷಯಗಳಿಗೆ ಸಂಬಂಧಿಸಿ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿದ್ದರೂ, ಅವರ ಸಾಧನೆ ಅದ್ವಿತೀಯ ಮತ್ತು ಅವರೊಬ್ಬ ಯುಗಪುರುಷರಾಗಿದ್ದರೆಂಬುದನ್ನು ಸಕಲ ವಿದ್ವಾಂಸರೂ ಒಪ್ಪಿದ್ದಾರೆ. ಸಮಕಾಲೀನ ಗ್ರಂಥಗಳ ಅಭಾವದಿಂದಾಗಿ ಆಚಾರ್ಯರ ಜೀವನ ವೃತ್ತಾಂತವನ್ನು ಪೂರ್ಣವಾಗಿ ಅರಿಯುವದು ಕಠಿಣವಾಗಿದೆ. ನಂತರದಲ್ಲಿ ರಚಿತವಾದ ಶಂಕರ ದಿಗ್ವಿಜಯಗಳಲ್ಲಿ ಏಕರೂಪತೆ ಇಲ್ಲದಿರುವದೇ ಇದಕ್ಕೆ ಮುಖ್ಯ ಕಾರಣ. ಮಾಧವಾಚಾರ್ಯರಿಂದ ರಚಿತವಾದ ದಿಗ್ವಿಜಯದಲ್ಲಿ ಶೃಂಗೇರಿ ಮಠದ ಪರಂಪರೆ ಪ್ರಧಾನವೆನಿಸಿದರೆ, ಕಂಚಿ ಕಾಮಕೋಟಿ ಪೀಠದ ಪರಂಪರೆಗೆ ಆನಂದಗಿರಿ ವಿರಚಿತ ದಿಗ್ವಿಜಯ ಒತ್ತು ಕೊಡುತ್ತದೆ. ಚಿದ್ವಿಲಾಸ ಯತಿ, ವ್ಯಾಸಗಿರಿ, ಶಂಕರ ದೇಶಿಕೇಂದ್ರ, ಆನಂದತೀರ್ಥ, ಸರ್ವಜ್ಞ, ಚಿತ್ಸುಖಿ, ಲಕ್ಷ್ಮಣಾಚಾರ್ಯ, ವಿದ್ಯಾರಣ್ಯ ಮೊದಲಾದ ವಿದ್ವಾಂಸರಿಂದ ರಚಿತವಾದ ಸುಮಾರು ೩೦ಕ್ಕೂ ಹೆಚ್ಚು ಶಂಕರ ದಿಗ್ವಿಜಯಗಳು ಬೆಳಕಿಗೆ ಬಂದಿದ್ದು, ಅವೆಲ್ಲವುಗಳ ಕೂಲಂಕಷ ಅಧ್ಯಯನದಿಂದಾಗಿ, ಆಚಾರ್ಯರ ಜೀವನಚರಿತ್ರೆ ಮತ್ತು ಅವರ ಸಾಧನೆಗಳು ಬೆಳಕಿಗೆ ಬಂದಂತಾಗಿವೆ.

ಆದಿಶಂಕರರ ಪೂರ್ವದಲ್ಲಿ ಭಾರತದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ವಿಷಮ ಪರಿಸ್ಥಿತಿ ತಲೆದೋರಿತ್ತು. ವೇದ, ಉಪನಿಷತ್, ಮಹಾಕಾವ್ಯ, ಪುರಾಣ ಮತ್ತು ಸೂತ್ರಗಳ ಮೇಲೆ ಆಧಾರಿತ ಸನಾತನ ಧರ್ಮವನ್ನು, ಆಗ ಪ್ರಚಲಿತವಿದ್ದ ನಾಸ್ತಿಕವಾದ, ಅಜ್ಞೇಯತಾವಾದ ಮತ್ತು ಶೂನ್ಯವಾದಗಳು ಪ್ರತಿಭಟಿಸಿದವು. ತಂತ್ರಪೂಜೆ ವ್ಯಾಪಕವಾಗಿ ಪಸರಿಸಿತ್ತು. ಶೈವ, ಶಾಕ್ತ, ವೈಷ್ಣವ, ಗಾಣಪತ್ಯ ಮುಂತಾದ ತಾಮಸ ತಾಂತ್ರಿಕರ ಪ್ರಭಾವದಿಂದಾಗಿ ಭಾರತೀಯ ಸನಾತನ ಧರ್ಮಕ್ಕೆ ಬಲವಾದ ಏಟು ಬಿದ್ದಂತಾಯಿತು. ಶಿವ, ದೇವಿ, ವಿಷ್ಣು, ಸೂರ್ಯ, ಗಣಪತಿ ಮತ್ತು ಕುಮಾರ ಪೂಜಕರಾದ ಭಿನ್ನಮತೀಯರನ್ನು ಒಂದುಗೂಡಿಸಿದ್ದಕ್ಕಾಗಿ ಶಂಕರರಿಗೆ ಷಣ್ಮತಸ್ಥಾಪನಾಚಾರ್ಯ ಎಂಬ ಬಿರುದು ಅನ್ವರ್ಥವಾಯಿತು. ಸನಾತನ ವೈದಿಕ ಧರ್ಮವನ್ನು ಪುನರುದ್ಧಾರ ಮಾಡಿದ ಶ್ರೇಯಸ್ಸು ಆದಿಶಂಕರರಿಗೆ ಸಲ್ಲುತ್ತದೆ.

ಆದಿಶಂಕರರ ಕಾಲ ಕುರಿತು ವಿದ್ವಾಂಸರಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಆರ್. ಜಿ. ಭಂಡಾರಕರ ಅವರು ಕ್ರಿ. ಶ. ನಾಲ್ಕನೇ ಶತಮಾನ, ದಿವಂಗತ ನ್ಯಾಯಾಧೀಶ ತೇಲಂಗ ಅವರು ಆರನೇ ಶತಮಾನ, ರೈಸ್ ಅವರು ಎಂಟನೇ ಶತಮಾನ ಮತ್ತು ಜೆ. ಎಫ್. ಫ್ಲೀಟ್, ಡಿ. ಆರ್. ಭಂಡಾರಕರ, ಮ್ಯಾಕ್ಸಮುಲರ್, ಎ. ಎ. ಮ್ಯಾಕ್‌ಡೊನಾಲ್ಡ್ ಮೊದಲಾದ ವಿದ್ವಾಂಸರು ಆದಿಶಂಕರರ ಕಾಲವನ್ನು ಕ್ರಿ. ಶ. ೭೮೮-೮೨೦ ಎಂದು ನಿರ್ಧರಿಸಿದ್ದಾರೆ. ಕ್ರಿ. ಶ. ೭೮೮-೮೨೦ ಆದಿಶಂಕರರ ಕಾಲ ಎಂಬ ವಾದವೇ ಬಹಳಷ್ಟು ವಿದ್ವಾಂಸರಿಂದ ಮನ್ನಣೆ ಪಡೆದಿದೆ. ಈ ವಾದವನ್ನು ಸಾಕಷ್ಟು ಪ್ರಸಿದ್ಧಗೊಳಿಸಿದ ಕೀರ್ತಿ ಕೆ. ಬಿ. ಪಾಠಕರಿಗೆ ಸಲ್ಲುತ್ತದೆ.

ಸುಮಾರು ೧೨೦೦ ವರ್ಷಗಳ ಹಿಂದೆ, ಕೇರಳದ ಮಧ್ಯಭಾಗದ ಕಾಲಟಿ ಎಂಬ ಹಳ್ಳಿಯಲ್ಲಿ, ಶಿವಗುರು ಮತ್ತು ಆರ್ಯಾಂಬಾ ಎಂಬ ನಂಬೂದ್ರಿ ಬ್ರಾಹ್ಮಣ ದಂಪತಿಗಳಿಗೆ ಶಂಕರರು ಏಕಮೇವ ಪುತ್ರರಾಗಿ ಜನಿಸಿದರು. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡ ಶಂಕರರನ್ನು ತಾಯಿ ಪೋಷಿಸಿದಳು. ಬಾಲ್ಯದಲ್ಲಿಯೇ ಶಂಕರರು ವೇದಶಾಸ್ತ್ರ ಅಧ್ಯಯನ ಮಾಡಿದರು. ವಾರ್ಧಕ್ಯದಿಂದ ಬಳಲುತ್ತಿದ್ದ ತಾಯಿಯ ಅನುಕೂಲಕ್ಕಾಗಿ ಪೂರ್ಣಾ ನದಿಯ ಪಾತ್ರವನ್ನೇ ಬದಲಿಸಿ ಕಾಲಟಿಯ ಪಕ್ಕದಲ್ಲಿಯೇ ಹರಿಯುವಂತೆ ಮಾಡಿ ಮಾತೃಭಕ್ತಿಯನ್ನು ತೋರಿಸಿದ ಘಟನೆ, ಸಾಮಾನ್ಯವಾಗಿ ನಂಬಲಸಾಧ್ಯವೆನಿಸಿದರೂ, ಮಹಾತ್ಮರಿಗೆ ಏನೆಲ್ಲ ಸಾಧ್ಯ ಎಂಬುದನ್ನು ತಿಳಿಯಪಡಿಸುತ್ತದೆ. ಅದೇ ರೀತಿ, ಮೊಸಳೆಯೊಂದು ಶಂಕರರನ್ನು ಹಿಡಿದಾಗ, ಸನ್ಯಾಸ ಸ್ವೀಕಾರ ಮಾಡಿ ಮೋಕ್ಷಕ್ಕೆ ಅಧಿಕಾರಿಯಾಗಲು ತಾಯಿ ತನಗೆ ಅಪ್ಪಣೆ ಕೊಟ್ಟರೆ ಮಾತ್ರ ಮೊಸಳೆ ತನ್ನನ್ನು ಬಿಡುವದಾಗಿ ಹೇಳಿದ್ದು ಮತ್ತು ಅದೇ ರೀತಿ ಘಟನೆ ನಡೆದಿದ್ದೂ ಕೂಡ ಅದ್ಭುತವೇ ಸರಿ !

ಶುಕ ಮಹರ್ಷಿಗಳ ಶಿಷ್ಯರಾದ, ಗೌಡಪಾದರಿಂದ ಅದ್ವೈತ ವೇದಾಂತದ ಉಪದೇಶ ಪಡೆದ, ನರ್ಮದಾ ತೀರದಲ್ಲಿಯ ಗೋವಿಂದ ಭಗವತ್ಪಾದರಿಂದ ಶಂಕರರು ಅದ್ವೈತ ವೇದಾಂತ ಸಿದ್ಧಾಂತವನ್ನು ಅರಿತುಕೊಂಡರು. ಈ ರೀತಿಯಾಗಿ, ಬ್ರಹ್ಮಜ್ಞಾನಿಯಾದ ಗೋವಿಂದ ಭಗವತ್ಪಾದರು ಶಂಕರರಿಗೆ ಗುರುಗಳಾದರು. ಸಮಾಧಿಸ್ಥರಾದ ತಮ್ಮ ಗುರುಗಳನ್ನು ನರ್ಮದೆಯ ರಭಸದ ಪ್ರವಾಹದಿಂದ ರಕ್ಷಿಸಿದ ಘಟನೆಯೊಂದು ಶಂಕರರ ಗುರು ಭಕ್ತಿಯನ್ನು ಎತ್ತಿ ತೋರಿಸುತ್ತದೆ. ತಮ್ಮ ಹನ್ನೆರಡನೇ ವಯಸ್ಸಿನಲ್ಲಿಯೇ ಶಂಕರರು ಕಾಶಿಗೆ ತೆರಳಿ, ವಿಶ್ವನಾಥನ ಮತ್ತು ಅನ್ನಪೂರ್ಣೆಯ ದರ್ಶನ ಪಡೆದರು. ಶಂಕರರಿಗೆ ಒಬ್ಬ ಚಾಂಡಾಲನಲ್ಲಿಯೂ ಈಶ್ವರ ದರ್ಶನವಾಗಿದ್ದು ಕಾಶಿಯಲ್ಲೇ. ನಂತರ, ಶಂಕರರು ಬದರಿನಾಥಕ್ಕೆ ಪ್ರಯಾಣ ಮಾಡಿ, ವ್ಯಾಸತೀರ್ಥ ಬದರಿಕಾಶ್ರಮದ ಸಮೀಪದಲ್ಲಿ ತಂಗಿ, ಬ್ರಹ್ಮಸೂತ್ರ, ಭಗವದ್ಗೀತೆ ಮತ್ತು ಉಪನಿಷತ್ತುಗಳ ಮೇಲೆ ಭಾಷ್ಯ ರಚಿಸಿ, ವೇದಗಳ ರಹಸ್ಯವನ್ನು ತಿಳಿಸಿಕೊಟ್ಟು, ತಮ್ಮ ಹದಿನಾರನೇ ವಯಸ್ಸಿನಲ್ಲೇ ಮಹತ್ ಸಾಧನೆಗೈದರು.

ಅದ್ವೈತ ತತ್ವ ಪ್ರಚಾರಕರೂ, ಕರ್ಮಕಾಂಡ ಮತ್ತು ಜ್ಞಾನಕಾಂಡಗಳ ಪ್ರತಿಪಾದಕರೂ ಆದ ಕುಮಾರಿಲ ಭಟ್ಟರನ್ನು ಶಂಕರರು ಪ್ರಯಾಗದ ತ್ರಿವೇಣೀ ಸಂಗಮದ ದಡದಲ್ಲಿ ಸಂದರ್ಶಿಸಿದರು. ಯಜ್ಞಯಾಗಾದಿಗಳನ್ನು ಖಂಡಿಸುತ್ತಿದ್ದ ಜೈನ ಮತ್ತು ಬೌದ್ಧ ಮತಧರ್ಮಗಳು ಕ್ಷೀಣವಾಗುವಂತೆ ಮಾಡಿ, ವೈದಿಕ ಧರ್ಮವು, ಕ್ರಿ. ಶ. ನಾಲ್ಕನೇ ಶತಮಾನದಲ್ಲಿ ಗುಪ್ತರ ಕಾಲದಲ್ಲಿದ್ದಂತೆ, ಪುನಃ ಉಚ್ಛ್ರಾಯ ಸ್ಥಿತಿಗೆ ತರಲು ಕುಮಾರಿಲ ಮತ್ತು ಶಂಕರರು ಪ್ರಮುಖರಾದರು. ಕುಮಾರಿಲರಿಗಿದ್ದ ವಿವಿಧ ದರ್ಶನಗಳ ಪಾಂಡಿತ್ಯ ಅಗಾಧವಾದುದು.

ಕುಮಾರಿಲರ ಆದೇಶದ ಮೇರೆಗೆ, ಶಂಕರರು, ಮಾಹಿಷ್ಮತೀ ನಗರ (ಮಧ್ಯಭಾರತದ ಇಂದೂರು ಜಿಲ್ಲೆಯಲ್ಲಿ ನರ್ಮದಾ ತೀರದಲ್ಲಿ ಈಗಿರುವ ಮಾಂಧಾತಾ) ನಿವಾಸಿಗಳಾದ ಮಂಡನ ಮಿಶ್ರರನ್ನು ಸಂಧಿಸಿ, ಶಾಸ್ತ್ರಾರ್ಥದಲ್ಲಿ ಮಂಡನರನ್ನು ಪರಾಭವಗೊಳಿಸಿದರು. ಮಂಡನರ ಧರ್ಮಪತ್ನಿ, ಭಾರತೀದೇವಿ (ಶಾರದಾ) ಶಾಸ್ತ್ರಾರ್ಥಕ್ಕೆ ಆಹ್ವಾನಿಸಿ, ಕಾಮಶಾಸ್ತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಲಾಗಿ, ಆಧ್ಯಾತ್ಮಿಕ ಜ್ಞಾನ ಮತ್ತು ಯೋಗದ ವ್ಯಾವಹಾರಿಕ ಪ್ರಯೋಗದಲ್ಲಿ ನಿಷ್ಣಾತರಾದ ಶಂಕರರು ಅಮರುಕ ರಾಜನ ಮೃತ ಶರೀರ ಪ್ರವೇಶಿಸಿ, ಕಾಮಶಾಸ್ತ್ರವನ್ನು ಅಭ್ಯಾಸ ಮಾಡಿ, ಯಥೋಚಿತವಾದ ಉತ್ತರ ನೀಡಿದರು. ಶಂಕರ ದಿಗ್ವಿಜಯಗಳಲ್ಲಿ ಉಲ್ಲೇಖಿಸಲಾದ ಶಂಕರರ ಪರಕಾಯ ಪ್ರವೇಶ ಪ್ರಸಂಗವನ್ನು ಇತಿಹಾಸಕಾರರು ಸಹಜವಾಗಿ ಒಪ್ಪಿಕೊಳ್ಳುವದಿಲ್ಲ. ಆದರೂ ಆಧ್ಯಾತ್ಮ ಮತ್ತು ಯೋಗಶಾಸ್ತ್ರಗಳಲ್ಲಿ ಉತ್ತುಂಗಕ್ಕೇರಿದ ಮಹಾತ್ಮರಿಗೆ ಯಾವುದು ತಾನೇ ಸಾಧ್ಯ.

ನಂತರ ಶಂಕರರು ದಕ್ಷಿಣದ ಯಾತ್ರೆ ಕೈಗೊಂಡು, ಕಾಪಾಲಿಕರನ್ನು ಉಚ್ಚಾಟನೆ ಮಾಡಿ, ಗೋಕರ್ಣ, ಕೊಲ್ಲೂರು. ಶೃಂಗೇರಿ ಸಂದರ್ಶಿಸಿ, ಶೃಂಗೇರಿಯಲ್ಲಿ ಶಾರದಾಂಬೆಯ ಪ್ರತಿಷ್ಠೆ ಮಾಡಿ, ಮಠ ಸ್ಥಾಪಿಸಿದರು. ಆಗಲೇ ಮಂಡನ ಮಿಶ್ರ (ಸುರೇಶ್ವರ) ಹಸ್ತಾಮಲಕ, ತೋಟಕ ಮತ್ತು ಪದ್ಮಪಾದರು ಶಂಕರರ ಶಿಷ್ಯರಾಗಿದ್ದರು. ಶಂಕರರು ಕಾಲಟಿಗೆ ಬಂದನಂತರ ಅವರ ತಾಯಿ ಮೃತಳಾದಳು. ಸನ್ಯಾಸಧರ್ಮಕ್ಕೆ ವಿರೋಧವೆನಿಸಿದರೂ ಮಾತೆಯ ದಹನಸಂಸ್ಕಾರ ಮಾಡಿ ಮಾನವೀಯ ಧರ್ಮವನ್ನು ಎತ್ತಿಹಿಡಿದರು.

ಆಚಾರ್ಯರ ಕೀರ್ತಿ ಆಗಲೇ ಭಾರತದಲ್ಲೆಲ್ಲ ಪಸರಿಸಿ ಶಿಷ್ಯ ಸಮುದಾಯ ಸಾಕಷ್ಟು ಬೆಳೆದಿತ್ತು. ಶಂಕರರು ತಮ್ಮ ದಿಗ್ವಿಜಯ ಯಾತ್ರೆಯ ಸಂದರ್ಭದಲ್ಲಿ ಅನಂತಶಯನ, ಅಯೋಧ್ಯಾ, ಅಹೋಬಲ, ಉಜ್ಜೈನಿ, ಕರ್ನಾಟಕ, ಕಾಂಚಿ, ಕಾಮರೂಪ, ಕಾಶಿ, ಕೇದಾರ, ಗಯಾ, ಗೋಕರ್ಣ, ಚಿದಂಬರ. ಜಗನ್ನಾಥ, ದ್ವಾರಕಾ, ಪಂಢರಪುರ, ಪ್ರಯಾಗ, ಬದರಿ, ರಾಮೇಶ್ವರ, ಶ್ರೀಪರ್ವತ, ಸುಬ್ರಹ್ಮಣ್ಯ ಮತ್ತು ಇನ್ನೂ ಅನೇಕ ಸ್ಥಳಗಳಲ್ಲಿ ಸಂಚರಿಸಿ, ಅವೈದಿಕ ಮತಗಳನ್ನು ಶಾಸ್ತ್ರೀಯವಾಗಿ ಖಂಡಿಸಿ, ಅದ್ವೈತ ತತ್ತ್ವಗಳನ್ನು ಬಿತ್ತರಿಸಿದರು.

ಶಂಕರರು ಇಷ್ಟೆಲ್ಲ ಸಾಧನೆಗಳನ್ನು ಮಾಡಿದ್ದು ತಮ್ಮ ಅಲ್ಪಾವಧಿ, ಅಂದರೆ ಕೇವಲ ೩೨ ವರ್ಷಗಳ ಜೀವಿತಾವಧಿಯಲ್ಲಿ. ಸರ್ವಜ್ಞಪೀಠಾರೋಹಣವನ್ನು ಶಂಕರರು ಕಾಶ್ಮೀರದಲ್ಲಿ ಮಾಡಿದರು ಎಂಬ ಪ್ರಬಲವಾದ ವಾದ ಒಂದಿದ್ದರೆ, ಕಾಂಚಿಯಲ್ಲಿ ಎಂಬ ವಾದವೂ ಇದೆ. ಅದೇ ರೀತಿ, ಆಚಾರ್ಯರ ತಿರೋಧಾನಕ್ಕೆ ಸಂಬಂಧಿಸಿ ಭಿನ್ನಾಭಿಪ್ರಾಯಗಳಿವೆ. ಮಾಧವಕೃತ ಶೃಂಗೇರಿ ಪೀಠಾನುಸಾರವಾದ ಗ್ರಂಥದಲ್ಲಿ, ಆಚಾರ್ಯರು ತಮ್ಮ ಶರೀರವನ್ನು ಕೈಲಾಸ ಪರ್ವತದಲ್ಲಿ ತ್ಯಜಿಸಿದರೆಂದೂ,

ಕಾಂಚೀಮಠ ಸಂಪ್ರದಾಯದಂತೆ ಕಾಂಚಿಯಲ್ಲಿ ಎಂದೂ ಹೇಳಲಾಗುತ್ತದೆ. ಆಚಾರ್ಯರ ನಿರ್ಯಾಣ ಕೇರಳದಲ್ಲಾಯಿತೆಂಬ ಅಭಿಪ್ರಾಯವೂ ಒಂದಿದೆ.

ಒಟ್ಟಿನಲ್ಲಿ ಆದಿಶಂಕರರು ಈ ದೇಶದ ಚರಿತ್ರೆಗೆ ಹೊಸ ತಿರುವು ನೀಡಿದ ಒಬ್ಬ ಮಹಾನ್ ವ್ಯಕ್ತಿ. ಶಂಕರರು ರಚಿಸಿದ ಭಾಷ್ಯಗಳು, ಸ್ತೋತ್ರಗಳು ಮತ್ತು ಪ್ರಕರಣ ಗ್ರಂಥಗಳು ಅವರ ಅಪಾರ ಪಾಂಡಿತ್ಯಕ್ಕೆ ನಿದರ್ಶನಗಳಾಗಿವೆ. ಪ್ರೌಢ ಕೃತಿಗಳೆನಿಸಿದ ಭಾಷ್ಯಗಳಲ್ಲಿ ಮಾಧುರ್ಯ, ಕೋಮಲತೆ ಮತ್ತು ಪ್ರಸನ್ನ ಶೈಲಿ ವ್ಯಕ್ತವಾಗಿವೆ. ಶಂಕರರು ಅದ್ವೈತವಾದಿಗಳಾಗಿದ್ದರೂ, ಸಗುಣಬ್ರಹ್ಮ ಉಪಾಸನೆಯು ನಿರ್ಗುಣ ಬ್ರಹ್ಮ ಉಪಲಬ್ಧಿಗೆ ಪ್ರಧಾನ ಸಾಧನವೆಂದು ನಂಬಿದ್ದರಿಂದ, ಅವರು ಶಿವ, ವಿಷ್ಣು, ಗಣೇಶ, ಶಕ್ತಿ ಮುಂತಾದ ದೇವತೆಗಳನ್ನು ಕುರಿತು ರಸಭಾವ ಅಲಂಕಾರಗಳಿಂದ ಸಂಪನ್ನವಾದ, ಸುಂದರವಾದ ಸ್ತೋತ್ರಗಳನ್ನು ರಚಿಸಿದ್ದಾರೆ. ವೇದಾಂತ ತತ್ತ್ವಗಳ ಪ್ರತಿಪಾದನೆಯನ್ನು ಪ್ರಕರಣ ಗ್ರಂಥಗಳಲ್ಲಿ ಮಾಡಿದ್ದಾರೆ. ಅವರ ವ್ಯಕ್ತಿತ್ವ, ಕಾವ್ಯಪ್ರತಿಭೆ, ಪಾಂಡಿತ್ಯ, ಉದಾತ್ತ ಧ್ಯೇಯ, ಶಿಷ್ಯಪ್ರೇಮ ಮತ್ತು ಮಾತೃಭಕ್ತಿ ಅಸಾಧಾರಣವಾಗಿದ್ದವು. ಅವೈದಿಕ ಮತಗಳನ್ನು ಶಾಸ್ತ್ರೀಯವಾಗಿ ಖಂಡಿಸಿ, ವೈದಿಕ ಧರ್ಮವನ್ನು ಪುನರುದ್ಧರಿಸಿದರು. ದೇಶದಲ್ಲೆಲ್ಲ ಸಂಚರಿಸಿ, ಅದ್ವೈತ ತತ್ತ್ವಗಳನ್ನು ಪ್ರಚಾರ ಮಾಡಿ, ರಾಷ್ಟ್ರದ ವಿವಿಧೆಡೆ ಪ್ರತ್ಯಕ್ಷವಾಗಿ ಹಾಗೂ ಶಿಷ್ಯರ ಮೂಲಕ ಪರೋಕ್ಷವಾಗಿ ಮಠಗಳನ್ನು ಸ್ಥಾಪಿಸಿ, ದೇಶದಲ್ಲಿ ಐಕ್ಯತೆ ಮೂಡಿಸಿದರು. "ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋಬ್ರಹ್ಮೈವನಾಪರಃ" (ಬ್ರಹ್ಮವೊಂದೇ ಸತ್ಯ; ಜಗತ್ತು ಮಿಥ್ಯಾರೂಪವಾದದ್ದು; ಜೀವನು ಬ್ರಹ್ಮನೆ; ಜೀವ ಬ್ರಹ್ಮನಿಂದ ಬೇರೆ ಅಲ್ಲ), ಎಂಬ ಅದ್ವೈತ ಸಿದ್ಧಾಂತವನ್ನು ಆದಿಶಂಕರರು ತತ್ವಶಃ ಪಾಲಿಸಿ, ಅದನ್ನು ಪ್ರಸಾರ ಮಾಡಿದರು. ಜ್ಞಾನ, ಭಕ್ತಿ, ಯೋಗ ಮತ್ತು ಕರ್ಮಮಾರ್ಗಗಳ ಅನುಸರಣೆಯಿಂದ ಅದ್ವೈತದ ಅರಿವು ಸಾಧ್ಯವೆಂಬುದನ್ನು ಮನಗಾಣಿಸಿಕೊಟ್ಟರು. ಅಂತ್ಯದಲ್ಲಿ, ಜ್ಞಾನಮಾರ್ಗವೇ ಸರ್ವಶ್ರೇಷ್ಠವೆಂಬುದನ್ನೂ ತೋರಿಸಿದವರು ಆದಿಶಂಕರಾಚಾರ್ಯರು.

❋ ❋ ❋

# ಸನಾತನ ಧರ್ಮದ ಪುನರುಜ್ಜೀವನದಲ್ಲಿ ಶ್ರೀ ಶಂಕರರ ಪಾತ್ರ

ವಿದ್ವಾನ್ ಡಿ. ಎಸ್. ಭಟ್ಟ

'ಏಕಂ ಸತ್ ವಿಪ್ರಾಃ ಬಹುಧಾ ವದಂತಿ' ವಿಶ್ವದಲ್ಲಿರುವದೆಲ್ಲ ಒಂದೇ ಸತ್ಯ. ಅದೇ ನಿತ್ಯ. ಅದೇ ಪ್ರತಿಕ್ಷಣವೂ ನಿತ್ಯನೂತನ. ಅದೇ ಸನಾತನ. ತ್ರಿಕಾಲಾಬಾಧಿತ ಸತ್ಯವೂ ಅದೇ. ಆ ಒಂದು ಸತ್‌ದಿಂದಲೇ ವಿಶ್ವ ಸೃಷ್ಟಿ. ಈಗ ನಮಗೆ ಕಾಣುವ ಚರಾಚರ ಪದಾರ್ಥಗಳು ಯಾವುದಿದೆಯೋ ಅದೆಲ್ಲವೂ ಆ ಸತ್‌ನ ಆಭಾಸ ಮಾತ್ರ. "ತಮೇವ ಭಾತಿ ಅನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ" ಹೀಗೆ ಇಡೀ ಬ್ರಹ್ಮಾಂಡವು ಒಂದೇ ಒಂದು ಸತ್ ಪದಾರ್ಥದಿಂದ ಆವರಿಸಿದೆ. "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" ಸೃಷ್ಟವಾದ ಪ್ರಪಂಚದಲ್ಲೆಲ್ಲ ಈ ಸತ್‌ನ ಅಸ್ತಿತ್ವವಿದೆ. "ಇಂದ್ರಂ, ಮಿತ್ರಂ, ವರುಣಂ, ಅಗ್ನಿಮಾಹುಃ .......... ಅಗ್ನಿಂ, ಯಮಂ, ಮಾತರಿಶ್ವಾನಮಾಹುಃ." ಈ ಮಾತು ಋಗ್ವೇದದಲ್ಲಿ ಉಕ್ತವಾಗಿದ್ದು ಒಂದೇ ಸತ್ ಅನೇಕರೂಪದಲ್ಲಿ ತೋರುತ್ತದೆ ಎಂಬುದನ್ನು ದೃಢೀಕರಿಸುತ್ತದೆ. ಹಾಗೆಯೆ "ಇಂದ್ರೋ ವೃಷಭಿಃ ಸತಾಮಸಿ......... ಸಚಸೇ ಪುರಂದ್ಯಾ" ಈ ಋಗ್ವೇದದ ಉಕ್ತಿಯೂ ಕೂಡ ಸತ್ ನ್ನು ಬಿಟ್ಟರೆ ಇಲ್ಲಿ ಏನೂ ಸತ್ಯವಾದದ್ದಿಲ್ಲ ಎಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಸತ್‌ನಿಂದ ಹೊರತಾದ ಯಾವ ಅಸ್ತಿತ್ವವೂ ಈ ವಿಶ್ವದಲ್ಲಿ ಇಲ್ಲ ಎನ್ನುವುದು ಶ್ರೀ ಶಂಕರಾಚಾರ್ಯರ ಸಿದ್ಧಾಂತ. ವಿಶ್ವದ ಒಳಗೂ ಹೊರಗೂ ಆವರಿಸುವ ಈ ಸತ್ ನ್ನೇ ಸನಾತನ ಧರ್ಮ ಎಂದು ಹೆಸರಿಸಿದ್ದಾರೆ.

ಆಯಾಯಾ ಪದಾರ್ಥಗಳು ತಮ್ಮ ಸ್ವಸ್ವರೂಪವನ್ನು ಪ್ರಕಟಗೊಳಿಸುವ ಸಹಜಶಕ್ತಿಯನ್ನು ಸನಾತನ ಧರ್ಮ ಎಂದು ಕರೆಯುತ್ತಾರೆ. ಪದಾರ್ಥಗಳ ಸ್ವಸ್ವಗುಣವನ್ನು ಅಥವಾ ಧರ್ಮವನ್ನು ಅಭಿವ್ಯಕ್ತಿಗೊಳಿಸುವ ಶಕ್ತಿಯು ಸನಾತನ ಧರ್ಮ. ಈ ಧರ್ಮವು ಒಮ್ಮೆ ಪದಾರ್ಥಗಳಿಂದ ಲುಪ್ತವಾದಾಗ ಅಥವಾ ಸ್ವಸ್ವರೂಪವನ್ನು ಕಳೆದುಕೊಂಡಾಗ ಯಾವುದೇ ವಸ್ತುಗಳು ಅಥವಾ ವ್ಯಕ್ತಿಗಳು ಸ್ವಸ್ಥಿತಿಯಲ್ಲಿ ಇರಲಾರರು.

ಉದಾ:- ತಣ್ಣಗಿರುವುದು ನೀರಿನ ಧರ್ಮ, ಸುಡುವದು ಬೆಂಕಿಯ ಧರ್ಮ, ವಾಸನೆ ಹೂವಿನ ಧರ್ಮ, ನಿರ್ಮಲತೆ ನೀರಿನ ಧರ್ಮ. ಈ ಧರ್ಮಗಳು ಆಯಾಯಾ ವಸ್ತುಗಳನ್ನು ಅದೇ ರೂಪದಲ್ಲಿ ರಕ್ಷಿಸುತ್ತವೆ. ಒಮ್ಮೆ ಇವು ಲುಪ್ತವಾಯಿತೆಂದಾದರೆ ಯಾವುದೇ ವಸ್ತುಗಳು ಯಾ ಪದಾರ್ಥಗಳು ಸ್ವಸ್ಥಿತಿಯಲ್ಲಿ ಇರಲಾರವು. ತನ್ನ ಸ್ವರೂಪವನ್ನು ರಕ್ಷಣೆ ಮಾಡುವುದರ ಮೂಲಕ ಪದಾರ್ಥಗಳನ್ನು ರಕ್ಷಿಸುವ ಕಾರಣ (ಧರಿಸುವ ಕಾರಣ) ಇದಕ್ಕೆ ಧರ್ಮ ಎಂದು ಕರೆದರು. ಇದೇ ಸನಾತನ ಧರ್ಮ. ಆದ್ದರಿಂದಲೇ ಧರ್ಮದ ಸ್ವರೂಪ ದರ್ಶನವನ್ನು ಪರಿಚಯಿಸುತ್ತಾ ಆಪ್ತರು ಹೇಳುವ ಮಾತೊಂದಿದೆ. "ಧರ್ಮೋಹಿ ವೀರ್ಯಂ ಧ್ರಿಯತೆ ಹಿ ಧರ್ಮೋಧ್ಧೃತೊ ಧಾರಯತೇಹಿ ರೂಪಂ' ಧರ್ಮವು ಒಂದು ಶಕ್ತಿ. ತನ್ನ ಸ್ವರೂಪದ ಲಾಭ ಮತ್ತು ಅದರ ರಕ್ಷಣೆ ಮಾಡುವದರಿಂದ ಇದಕ್ಕೆ ಧರ್ಮವೆಂದು ಕರೆಯುವರು. ವಸ್ತುಗಳಿಂದ ಧರಿಸಲ್ಪಟ್ಟ ಧರ್ಮವು ವಸ್ತುಗಳ ಹಾಗೂ ಪದಾರ್ಥಗಳ ರಕ್ಷಣೆ ಮಾಡುತ್ತದೆ. ಅದರಿಂದ ವಿಶ್ವದ ರಕ್ಷಣೆ. ಹಾಗಾಗಿ ಈ ಮಾತು "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ." ಈ ಧರ್ಮವನ್ನು ಯಾರು ರಕ್ಷಣೆ ಮಾಡುವರೋ ಅದು ಅವನನ್ನು ರಕ್ಷಿಸುತ್ತದೆ. 'ಧರ್ಮೋ ರಕ್ಷತಿ ರಕ್ಷಿತಃ" ಅನುಭಾವಿಗಳ ಈ ಮಾತು ಅತ್ಯಂತ ವೈಜ್ಞಾನಿಕವಾಗಿದೆ. ಬ್ರಹ್ಮಾಂಡದಲ್ಲಿರುವ ಶಕ್ತಿಗಳು ಪದಾರ್ಥ ಹಾಗೂ ವಸ್ತುಗಳೊಡನೆ ಅಭೇದವಾಗಿರುವದರಿಂದ ಇದು ನಿತ್ಯ ಸತ್ಯವಾಗಿದೆ.

ಆ ಕಾರಣ ಇದನ್ನು ಸನಾತನ ಎಂದು ಹೆಸರಿಸಲಾಗಿದೆ. ಒಮ್ಮೆ ಈ ಧರ್ಮ (ಶಕ್ತಿ) ಸ್ವಸ್ವರೂಪವನ್ನು ಪ್ರಕಟಗೊಳಿಸುವಲ್ಲಿ ವ್ಯತ್ಯಾಸಗೊಂಡರೆ ಯಾ ತಿರೋಹಿತವಾದರೆ ಆಯಾಯಾ ಪದಾರ್ಥವು ಸ್ವಸ್ವರೂಪದಲ್ಲಿ ಇರಲಾರದು. ಈ ಮಾತಿಗೆ "ಧರ್ಮ ಏವ ಹತೋಹಂತಿ" ವೃಕ್ಷದಲ್ಲಿ ವೃಕ್ಷ "ತ್ವ" ಇಲ್ಲದಿದ್ದರೆ ಹಾಗೆಯೆ ವಿಶ್ವದ ಚೇತನಾ ಚೇತನಗಳಲ್ಲಿ ಈ "ತ್ವ" ವು ಇಲ್ಲದೇ ಹೋದರೆ (ತನ್ನ ಸನಾತನ ಧರ್ಮವನ್ನು ಕಳೆದುಕೊಂಡರೆ) ವಸ್ತುವಿನ ಅಸ್ತಿತ್ವವು ಇರಲಾರದು. ಸನಾತನ ಧರ್ಮವೆಂದರೇನು ?

ವ್ಯಾಕರಣದ ದೃಷ್ಟಿಯಿಂದ ಸನಾತನ ಧರ್ಮದ ಸಮಾಸ ಮಾಡಿದಾಗ "ಸನಾತನಸ್ಯ ಧರ್ಮ ಇತಿ = ಸನಾತನ ಧರ್ಮಃ" ಇಲ್ಲಿರುವ ಷಷ್ಠೀ ವಿಭಕ್ತಿಯು ಪರಸ್ಪರ ಸ್ಥಾಪ್ಯ ಸ್ಥಾಪಕ ಸಂಬಂಧವನ್ನು ಜೋಡಿಸುತ್ತದೆ. ಯಾವ ರೀತಿ ಈಸಾಯಿ, ಬುದ್ಧ, ಜೈನ, ಮೊಹಮ್ಮದ ಈ ಎಲ್ಲ ವ್ಯಕ್ತಿಗಳ ಮುಂದೆ ಆ ಧರ್ಮವನ್ನು ಜೋಡಿಸಿದಾಗ ಈಸಾಯಿ ಧರ್ಮ, ಮುಹಮ್ಮದೀಯ ಧರ್ಮ, ಬುದ್ಧ ಧರ್ಮ, ಜೈನ ಧರ್ಮ ಎಂದು ತಿಳಿಯಲ್ಪಡುತ್ತದೆಯೋ ಅದೇ ರೀತಿಯಾಗಿ ಸನಾತನ ಧರ್ಮವು ಸನಾತನ ಅರ್ಥಾತ್ ನಿತ್ಯ ಸತ್ಯನಾದ ಪರಮಾತ್ಮನಿಂದ ಸ್ಥಾಪಿಸಲ್ಪಟ್ಟದ್ದೇ ಹೊರತು ಉಳಿದ ಧರ್ಮದಂತೆ (ಉದಾ :- ಜೈನ ಧರ್ಮ, ಬುದ್ಧ ಧರ್ಮದ ಹಾಗೆ) ವ್ಯಕ್ತಿಯಿಂದ ಸ್ಥಾಪಿಸಿದ್ದಲ್ಲ. ಸನಾತನ ಧರ್ಮವನ್ನು ಬಿಟ್ಟು ಉಳಿದೆಲ್ಲ ಧರ್ಮಗಳು ದೇಶಕಾಲಕ್ಕೆ ಸಂಬಂಧಪಟ್ಟು ಅಶಾಶ್ವತವಾದವುಗಳು. 'ಯಜ್ಜನ್ಯಂ ತದನಿತ್ಯಂ' ಅವು ವ್ಯಕ್ತಿಯಿಂದ ಹುಟ್ಟಿದವುಗಳಾದುದರಿಂದ ಸತ್ಯವೂ ನಿತ್ಯವೂ

ಆದದ್ದಲ್ಲ. ಆದರೆ ಸನಾತನ ಧರ್ಮವಾದರೋ ಆದಿಯೂ ಅನಂತವೂ ಆಗಿದ್ದು ಸೃಷ್ಟಿಯ ಪ್ರಾರಂಭದಿಂದ ಹಿಡಿದು ಪ್ರಳಯಕಾಲದ ವರೆಗೂ ಪ್ರಪಂಚದಲ್ಲಿ ವ್ಯಾಪಿಸಿರುತ್ತದೆ. ಈಶ್ವರನಿಂದ ಪ್ರಕಾಶಿಸಲ್ಪಟ್ಟಿದೆ ಎಂದು ಇದು ಕೇವಲ ಸನಾತನವಲ್ಲ, ಇದು ಸ್ವಯಂ ಸನಾತನವೇ (ನಿತ್ಯ ಸತ್ಯವೇ). ಸೃಷ್ಟಿಯ ಆದಿಯಿಂದ ಹಿಡಿದು ಪ್ರಳಯಕಾಲದಲ್ಲಿಯೂ ಬೀಜರೂಪದಲ್ಲಿ ಗುಪ್ತವಾಗಿದ್ದು ಮತ್ತೆ ಸೃಷ್ಟಿಯ ಕಾಲದಲ್ಲಿ ವಿಶ್ವದ ರಕ್ಷಣೆಗೋಸ್ಕರ ಪ್ರಕಟಗೊಳ್ಳುತ್ತದೆ. ಆಗ ಈ ಅರ್ಥದಲ್ಲಿ 'ಸನಾತನಶ್ಚಾಸೌ ಧರ್ಮಶ್ಚ = ಸನಾತನ ಧರ್ಮಃ' ಈ ಕರ್ಮಧಾರಯ ಸಮಾಸದಲ್ಲಿ ಮತ್ತೊಂದು ವಿಶೇಷವಾದ ಅರ್ಥವನ್ನು ಗ್ರಹಿಸಬಹುದು. 'ಸದಾಭವಃ = ಸನಾತನಃ, ಸನಾತನಂ ಕರೋತಿ ಇತಿ ಸನಾತನಯತಿ, ಸನಾತನಯತೀತಿ ಸನಾತನಃ. ಸನಾತನಶ್ಚಾಸೌ ಧರ್ಮಃ = ಸನಾತನ ಧರ್ಮಃ' ಅಂದರೆ ಈ ಸನಾತನ ಧರ್ಮವು ಪರಮಾತ್ಮನ ಮೂಲಕ ಸ್ಥಾಪಿಸಲ್ಪಟ್ಟದ್ದೆಂದು ಅಥವಾ ಸ್ವಯಂ ಶಾಶ್ವತವಾದದ್ದೆಂದು ಇದು ಶ್ರೇಷ್ಠವಾಗಿದೆ. ಈ ಧರ್ಮದಲ್ಲಿ ವಿಶ್ವಾಸವಿಟ್ಟು ನಡೆಯುವವರೆಲ್ಲ ಸನಾತನಿಗಳೇ ಆಗುತ್ತಾರೆ. ಹೀಗೆ ಸನಾತನ ಧರ್ಮಕ್ಕೆ ಮೂರು ರೀತಿಯಾಗಿ ಅರ್ಥೈಸಬಹುದು. ೧. ಸನಾತನಸ್ಯ ಧರ್ಮಃ ೨. ಸನಾತಶ್ಚಾಸೌ ಧರ್ಮಃ ೩. ಸನಾತನತೀತಿ ಸನಾತನಃ, ಸನಾತನಶ್ಚಾಸೌ ಧರ್ಮಃ ಇತಿ ಸನಾತನ ಧರ್ಮಃ.

ಇಷ್ಟಲ್ಲದೆ. ಇದಕ್ಕೆ ನಾಲ್ಕನೆಯದಾದ ಅರ್ಥವೂ ಇದೆ. 'ಸನಾತನಂ ಪರಮಾತ್ಮ ಸ್ವರೂಪಂ ಪ್ರಾಪಯತಿ ಇತಿ = ಸನಾತನ ಧರ್ಮಃ.' ಈ ಧರ್ಮಮಾರ್ಗದಲ್ಲಿ ನಡೆಯುವವನು ತನ್ನ ನಿತ್ಯ ಬುದ್ಧ ಮುಕ್ತ ಸಚ್ಚಿದಾನಂದ ಸ್ವರೂಪದ ಸಾಕ್ಷಾತ್ಕಾರವನ್ನು ಪಡೆದು ಪರಮಾತ್ಮನೊಂದಿಗೆ ಒಂದಾಗುವನು. ಹೀಗೆಂದಾಗ ಉಳಿದೆಲ್ಲ ಧರ್ಮಗಳೂ ಸುಳ್ಳೆಂದಾಗಲೀ ಅಥವಾ ವ್ಯರ್ಥವೆಂದಾಗಲೀ ಅಲ್ಲ. ಎಲ್ಲ ಧರ್ಮಗಳೂ ಯಾವುದಾದರೂ ಒಂದು ರೂಪದಲ್ಲಿ ಮನುಷ್ಯನನ್ನು ಲಕ್ಷದೆಡೆಗೆ ಕೊಂಡೊಯ್ಯುತ್ತವೆ. ಆದರೆ ಯಾವುದೇ ಒಬ್ಬ ವ್ಯಕ್ತಿಯಿಂದ ಸ್ಥಾಪಿತವಾದ ಕಾರಣ ಇದು ನಷ್ಟವಾಗಲೂ ಬಹುದು. ಆದ್ದರಿಂದ ಸನಾತನ ಧರ್ಮವೊಂದೇ ಅತ್ಯಂತ ಶ್ರೇಷ್ಠತಮವಾದದ್ದು. ಅದೆಷ್ಟೋ ದೇಶಗಳು, ಉದಾ :- ಗ್ರೀಸ್, ರೋಮ್, ಸಿರಿಯಾ, ಬೆಬೀಲಿನಿ, ಹಿನಿಶಿಯಾ ಇಂತಹ ಅನೇಕ ಸಾಮ್ರಾಜ್ಯಗಳು ಇಡಿ ಜಗತ್ತನ್ನೆ ಜನಬಲ, ಧನಬಲ, ಸೈನ್ಯಬಲದಿಂದ ಅಲಗಾಡಿಸಿದ್ದರೂ ಕೂಡಾ ಇಂದು ಹೇಳಹೆಸರಿಲ್ಲದಂತಾಗಿವೆ. ಆದರೆ ಭಾರತವು ಅದೆಷ್ಟೋ ಸಾಮ್ರಾಜ್ಯಶಾಹಿಗಳ ಆಕ್ರಮಣದಿಂದ ತುಳಿಯಲ್ಪಟ್ಟರೂ ಸನಾತನ ಧರ್ಮದ ಆಚರಣೆಯಿಂದೊಂದರಿಂದಲೇ ಇಂದು ಅದರ ಅಸ್ತಿತ್ವ ಉಳಿದುಕೊಂಡಿದೆ. ಈ ಸನಾತನ ಧರ್ಮವು ವಿಶ್ವರಕ್ಷಣೆಯಲ್ಲಿ ಎಷ್ಟು ಸಹಕಾರಿ ಎಂಬುದು ಕೆಳಗಿನ ಶ್ಲೋಕದಿಂದ ವ್ಯಕ್ತವಾಗುವದು. ಈ ಧರ್ಮದ ನಿಯಪಾಲನೆ ವಿಶ್ವರಕ್ಷಣೆಯಲ್ಲಿ ಸಹಕಾರಿ ಆಗುವ ಬಗ್ಗೆ ಅವರ ಹೇಳಿಕೆ ಹೀಗಿದೆ.

ಈ ಸನಾತನ ಧರ್ಮಕ್ಕೆ ಹದಿಮೂರು ಪತ್ನಿಗಳು (ಶಕ್ತಿಗಳು). ೧. ಶ್ರದ್ಧಾ, ೨. ಮೈತ್ರಿ. ೩. ದಯಾ, ೪. ಶಾಂತಿಃ, ೫. ತುಷ್ಟಿಃ, ೬. ಪುಷ್ಟಿಃ, ೭. ಕ್ರಿಯಾ, ೮. ಉನ್ನತಿಃ, ೯. ಬುದ್ಧಿಃ, ೧೦. ಮೇಧಾ, ೧೧. ತಿತಿಕ್ಷಾ, ೧೨. ಹ್ರೀಃ, ೧೩. ಮೂರ್ತಿಃ.

ಶ್ರದ್ಧೆ (ಶಕ್ತಿ) ಎಂಬ ಪತ್ನಿಯಿಂದ ವಿಶ್ವದಲ್ಲಿ ಮಂಗಲವು ಸಂಚಾರವಾಗುತ್ತದೆ. ಮೈತ್ರಿ (ಶಕ್ತಿ) ಎಂಬ ಪತ್ನಿಯಿಂದ ಪ್ರಸನ್ನತೆಯೂ. ದಯಾ (ಶಕ್ತಿ) ಎಂಬ ಪತ್ನಿಯಿಂದ ಆಧ್ಯಾತ್ಮವೂ, ಶಾಂತಿ (ಶಕ್ತಿ) ಎಂಬ ಪತ್ನಿಯಿಂದ ಆಧಿದೈವತವೂ, ಇದರಿಂದಾಗಿ ನಿರ್ಭಯತೆಯೂ, ತುಷ್ಟಿ (ಶಕ್ತಿ) ಎಂ ಪತ್ನಿಯಿಂದ ಸಂತೋಷವೂ, ಪುಷ್ಟಿ (ಶಕ್ತಿ) ಎಂಬ ಪತ್ನಿಯಿಂದ ವಿಶ್ವದಲ್ಲಿ ಆನಂದವೂ, ಕ್ರಿಯಾ (ಶಕ್ತಿ) ಎಂಬ ಪತ್ನಿಯಿಂದ ಉದ್ಯೋಗವೂ, ಆಲಸ್ಯದ ನಿವಾರಣೆಯೂ. ಉನ್ನತಿ (ಶಕ್ತಿ) ಎಂಬ ಪತ್ನಿಯಿಂದ ಉತ್ಸಾಹವೂ, ಬುದ್ಧಿ (ಶಕ್ತಿ) ಎಂಬ ಪತ್ನಿಯಿಂದ ಸುಖವೂ, ಮೇಧಾ (ಶಕ್ತಿ) ಎಂಬ ಪತ್ನಿಯಿಂದ ಸ್ಮರಣೆಯೂ, ತಿತಿಕ್ಷಾ (ಶಕ್ತಿ) ಎಂಬ ಪತ್ನಿಯಿಂದ ಕ್ಷೇಮವೂ, ಹ್ರೀಃ (ಶಕ್ತಿ) ಎಂಬ ಪತ್ನಿಯಿಂದ ವಿನಯವೂ, ಮೂರ್ತಿಃ (ಶಕ್ತಿ) ಎಂಬ ಪತ್ನಿಯಿಂದ ವಿಶ್ವದಲ್ಲಿ ಎಲ್ಲೆಡೆಯಲ್ಲಿಯೂ ಈ ಸದ್ಗುಣಗಳು ಓಂಡಾವಚ್ಛೇದೇನ ಮನುಷ್ಯನಲ್ಲಿ ಪ್ರಾದುರ್ಭಾವಗೊಂಡು ಬ್ರಹ್ಮಾಂಡದಲ್ಲೆಲ್ಲ ವ್ಯಾಪಿಸಿ ಈ ನರವೇ ನಾರಾಯಣನಾಗಿ ಪರಿವರ್ತಿತನಾಗುವನು.

ಧರ್ಮವು ಎಷ್ಟೇ ಸತ್ಯವೂ ನಿತ್ಯವೂ ಆಗಿದ್ದರೂ ಕೂಡ ತನ್ನ ಸ್ವಪ್ರಕಾಶದಿಂದ ಸೂರ್ಯನಂತೆ ಜಗಕೆಲ್ಲ ಬೆಳಕನ್ನು ನೀಡುತ್ತಿದ್ದರೂ ಕೂಡ ಒಮ್ಮೊಮ್ಮೆ ಪ್ರಕಾಶಕ್ಕೆ ಮೋಡವು ಆವರಿಸಿದಂತೆ ಈ ಸನಾತನ ಧರ್ಮದ ಸೂರ್ಯನಿಗೂ ಕೂಡಾ ಅಜ್ಞಾನವೆಂಬ ಕತ್ತಲೆಯೂ ಆವರಿಸುವದಿದೆ. ಇದನ್ನು ಧರ್ಮಗ್ಲಾನಿ ಎಂದು ಕರೆದರು. ಅಂಥ ಗ್ಲಾನಿ ಉಂಟಾದಾಗ ಆ ಗ್ಲಾನಿಯನ್ನು ತೊಡೆದುಹಾಕಲು ಪರಮಾತ್ಮನೇ ಭಾರತದಲ್ಲಿ ಅವತರಿಸುವನು. ಸನಾತನ ಧರ್ಮವು ಈ ಅಂಧಃಕಾರದಲ್ಲಿ ನೆಲೆನಿಂತಾಗ ಭಗವಾನ್ ಶಂಕರನು ಭರತ ಖಂಡದಲ್ಲಿ ಶ್ರೀ ಶಂಕರಭಗವತ್ಪಾದರಾಗಿ ಅವತರಿಸಿ ಸನಾತನ ಧರ್ಮವನ್ನು ಪುನರುಜ್ಜೀವನಗೊಳಿಸಿದರು. ಯಾವ ಧರ್ಮವೂ ನಿರಂತರವಾಗಿ ಪ್ರವಾಹ ರೂಪದಲ್ಲಿ ಹರಿಯುವದಿಲ್ಲ. ಅದರ ಪ್ರವಾಹವನ್ನು ತಡೆಯತಕ್ಕ ಅನೇಕ ಪ್ರತಿಬಂಧಕಗಳೂ ತಡೆಯೊಡ್ಡುತ್ತಲೇ ಇರುತ್ತವೆ. ಸನಾತನ ಧರ್ಮದಂತಹ ಸತ್ವಶಾಲಿಯಾದ ಧರ್ಮ ಮಾತ್ರ ಇಂತಹ ಅಡೆತಡೆಗಳಿಗೆ ತಲೆ ಒಡ್ಡದೇ ಸದಾ ಪ್ರಬಲ ಶಕ್ತಿಯಾಗಿಯೇ ವಿರಾಜಮಾನವಾಗಿರುತ್ತದೆ. ತನ್ನ ನಿತ್ಯಸತ್ಯವಾದ, ಸತ್ವಯುತವಾದ ಪ್ರಭಾವದಿಂದ ಈ ಸನಾತನ ಧರ್ಮವು (ವೈದಿಕ ಧರ್ಮ) ಜೈನ ಮತ್ತು ಬೌದ್ಧ ಧರ್ಮದ ನಿರಂತರವಾದ, ಪ್ರಬಲವಾದ ದಾಳಿಯನ್ನು ಎದಿರಿಸುತ್ತಲೇ ಇಂದೂ ಕೂಡಾ ತನ್ನ ನಿತ್ಯಸತ್ಯವನ್ನು ಸ್ಥಾಪಿಸಿಕೊಂಡಿದೆ. ಬೌದ್ಧ ಧರ್ಮವನ್ನು ಸ್ಥಾಪಿಸಿದ ಬುದ್ಧನು ತನ್ನ ಆಚಾರ ಪ್ರಧಾನವಾದ ಧರ್ಮದ ಉಪದೇಶವನ್ನು ಉಪನಿಷತ್ ಆಧಾರದ ಮೇಲೆ ನಿಲ್ಲುವಂತೆ ಮಾಡಿದರೂ ವೇದಗಳ ಪ್ರಾಮಾಣ್ಯವನ್ನು ಒಪ್ಪದೇ ಆತ್ಮವಾದವನ್ನು ತಿರಸ್ಕರಿಸಿದನು. ನಾಲ್ಕನೇ ಶತಮಾನದಿಂದೀಚೆಕೆ ಮೌರ್ಯರ ಕಾಲದಲ್ಲಿ ಬೌದ್ಧ ಧರ್ಮಕ್ಕೆ ರಾಜಾಶ್ರಯ ದೊರೆತದ್ದರಿಂದ ಆ ಧರ್ಮದ ಪ್ರಭಾವ ದಿನದಿಂದ ದಿನಕ್ಕೆ ಪ್ರವರ್ಧಿಸುತ್ತಾ ಅಶೋಕನ ಕಾಲದಲ್ಲಿ ಬೌದ್ಧ ಧರ್ಮದ ಪ್ರಚಾರ

ಗರಿಗೆದರಿ ಪ್ರಪಂಚದಾದ್ಯಂತ ಪಸರಿಸಿತು. ಅವನ ನಂತರ ಬೌದ್ಧ ಧರ್ಮಕ್ಕೆ ಸನಾತನ ಧರ್ಮದ ಪ್ರಭಾವ ಬಲವಾದ ಆಘಾತವನ್ನುಂಟುಮಾಡಿತಾದರೂ ಪರಸ್ಪರ ಧರ್ಮ ಧರ್ಮದ ಬಗ್ಗೆ ಕ್ರಿಯೆ ಪ್ರತಿಕ್ರಿಯೆಯಿಂದಾಗಿ ಸನಾತನ ಧರ್ಮ ಅಸ್ಪಷ್ಟ ಸ್ಥಿತಿಯಲ್ಲಿಯೇ ಇರುವಂತಾಯಿತು. ಏಳನೇ ಶತಮಾನದಲ್ಲಿ ಕನಿಷ್ಕನು ಬೌದ್ಧ ಧರ್ಮದ ಪಕ್ಷಪಾತಿಯೂ ಆ ಧರ್ಮದ ಉದಾರ ಪ್ರಚಾರಕನೂ ಆಗಿದ್ದರಿಂದ ತನ್ನ ಆಳ್ವಿಕೆಯಲ್ಲಿ ನಾಲ್ಕು ಸಮ್ಮೇಲನಗಳನ್ನು ನಡೆಸಿ, ನಾಲ್ಕನೇ ಸಮ್ಮೇಲನದಲ್ಲಿ ಆಚಾರ್ಯ ಪಾರ್ಶ್ವನನ್ನು ಅಧ್ಯಕ್ಷನನ್ನಾಗಿ ಮಾಡಿ ಚೀನ, ಜಪಾನ ದೇಶಗಳಿಗೆ ಭಿಕ್ಷುಗಳನ್ನು ಕಳುಹಿಸಿ ಈ ಧರ್ಮವನ್ನು ಪ್ರಚುರವಾಗಿ ಪ್ರಚಾರಪಡಿಸಿದನು. ಪುನಃ ಗುಪ್ತರ ಕಾಲದಲ್ಲಿ ಈ ಸನಾತನ ಧರ್ಮವು ಮತ್ತೆ ಜಾಗ್ರತವಾದರೂ ಬೌದ್ಧ ಧರ್ಮ ಪ್ರಚಾರಕರಲ್ಲಿ ಬೌದ್ಧ ಧರ್ಮವನ್ನು ವ್ಯಾಪಕವಾಗಿ ಪ್ರಚಾರಪಡಿಸಬೇಕೆಂಬ ಮಹತ್ವಾಕಾಂಕ್ಷೆ ಜಾಗ್ರತವಾಗಿಯೇ ಇತ್ತು. ಆದ್ದರಿಂದ ಈ ಧರ್ಮದ ಪ್ರಚಾರಕರ ಮುಂದೆ ಯಾವ ಮಹತ್ತರವಾದ ಪರ್ವತವಾಗಲೀ ಅಥವಾ ವಿಶಾಲವಾದ ಸಮುದ್ರವೇ ಆಗಲೀ ತಡೆಯುಂಟುಮಾಡಲಾಗದಷ್ಟು ಪ್ರಬಲ ಶಕ್ತಿಯಾಗಿಯೇ ನೆಲೆ ನಿಂತಿತು.

ಮಾಧವಾಚಾರ್ಯರು ತಮ್ಮ 'ಶಂಕರ ದಿಗ್ವಿಜಯ' ಗ್ರಂಥದಲ್ಲಿ ಬೌದ್ಧರು ಹೇಗೆ ನಿಸ್ಸಂಕೋಚವಾಗಿ ತಮ್ಮ ಧರ್ಮದ ಪ್ರಭಾವವನ್ನೂ ಪ್ರಭುತ್ವವನ್ನೂ ಸ್ಥಾಪಿಸಿ, ತಮ್ಮ ಮತದತ್ತ ಸೆಳೆದುಕೊಳ್ಳುತ್ತಿದ್ದರೆಂಬುದು ಈ ಕೆಳಗಿನ ಶ್ಲೋಕದಲ್ಲಿ ವ್ಯಕ್ತಪಡಿಸಿದ್ದಾರೆ.

'ಸಶಿಶ್ಯ ಸಂಘಾಃ ಪ್ರವಿಶಂತಿ ರಾಜ್ಞಾಂ ಗೇಹಂ ತದಾ ಸ್ವವಶೇ ವಿಧಾತುಂ ರಾಜಾಮದೀಯೋಃ ಗಂಟಾಘೋಷವಾಗಿ ಹೇಳುತ್ತಿದ್ದರು.

ಗುಪ್ತಯುಗ ಭಾರತದ ಧರ್ಮ ಮತ್ತು ತತ್ವಜ್ಞಾನದ ಇತಿಹಾಸದಲ್ಲಿ ಅತ್ಯಂತ ಮಹತ್ವದ್ದು. ಈ ಯುಗವನ್ನು ಸಂಘರ್ಷ ಯುಗವೆಂದೇ ಹೇಳಬಹುದು. ಈ ಕಾಲದಲ್ಲಿ ಬೌದ್ಧ ಧರ್ಮಕ್ಕೆ ಸಂಬಂಧಪಟ್ಟಂತೆ ನಾಗಾರ್ಜುನ, ದಿಙ್ನಾಗ, ಧರ್ಮಕೀರ್ತಿ, ಇವರುಗಳಿಂದ ಬೌದ್ಧ ನ್ಯಾಯ ಶಾಸ್ತ್ರಗಳು ಹೊರಬಂದು ಬ್ರಾಹ್ಮಣರ ನೈಯಾಯಿಕ ಸಿದ್ಧಾಂತಗಳನ್ನು ಉತ್ಕೃಷ್ಟವಾದ ತರ್ಕಬಲದಿಂದ ಖಂಡಿಸಿದರು. ವಾತ್ಸಾಯನ, ಉದ್ಯೋತಕರ, ಇವರೇ ಮೊದಲಾದ ನೈಯಾಯಿಕರು ಬೌದ್ಧ ಸಿದ್ಧಾಂತಗಳನ್ನು ಅತ್ಯಂತ ಸಂಯುಕ್ತಿಕವಾಗಿಯೂ, ಕೌಶಲ್ಯದಿಂದಲೂ ಖಂಡಿಸಿದರೂ ಕೂಡಾ ಸನಾತನ ಧರ್ಮದ ರಕ್ಷಣೆಯಲ್ಲಿ ಇವರಾರ ಪ್ರಯತ್ನವೂ ನಡೆಯದೇ ಹೋಯಿತು. ಬೌದ್ಧ ಮತಾವಲಂಬಿಗಳೂ ಕೂಡ ಈ ಸಂದರ್ಭವನ್ನು ಉಪಯೋಗಿಸಿಕೊಂಡು ಹೆಚ್ಚು ಹೆಚ್ಚಾಗಿ ಸನಾತನ ಧರ್ಮದ ಅವಹೇಳನವನ್ನು ಮಾಡಿದರು. ಆದರೆ, ಇವರನ್ನೆಲ್ಲ ಎದುರಿಸಿ ನಿತ್ಯಸತ್ಯವಾದ ಸನಾತನ ಧರ್ಮವನ್ನು ಪೋಷಿಸುವ ಹಾಗೂ ಪ್ರಚುರಪಡಿಸುವ ಕಾಲ ಅತ್ಯಂತ ಸನ್ನಿಹಿತವೂ ಆವಶ್ಯಕವೂ

ಆಗಿತ್ತು. ಈ ಕಾಲದಲ್ಲಿ ಕುಮಾರಿಲರು ಹಾಗೂ ಆಚಾರ್ಯ ಶಂಕರರು ಕರ್ಮ ಕಾಂಡ ಹಾಗೂ ಜ್ಞಾನ ಕಾಂಡದ ಬಗ್ಗೆ ತಮ್ಮ ಆಗಾಧ ಪಾಂಡಿತ್ಯದಿಂದಲೂ, ಹಾಗೂ ಆಳವಾದ ಅನುಭವದಿಂದಲೂ ಈ ಸನಾತನ ಧರ್ಮದ ನಿತ್ಯ ಸತ್ಯವನ್ನು ಮತ್ತು ಅದರ ರೂಪಸ್ವರೂಪಗಳನ್ನು ಭಾರತೀಯರ ಎದುರಿಗೆ ತೆರೆದಿಟ್ಟರು. ವೇದ ಮತ್ತು ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟ ಸನಾತನ ವಿಷಯವನ್ನು ತಮ್ಮ ಪ್ರಬಲವಾದ ಯುಕ್ತಿಗಳ ಸಹಾಯದಿಂದ ಸಿದ್ಧಮಾಡಿ ತೋರಿಸುವುದರ ಜೊತೆಗೆ ಜನರನ್ನು ಈ ಮಾರ್ಗದತ್ತ ಆಹ್ವಾನಿಸಿದರು. ಈ ರೀತಿಯಾಗಿ ಗುಪ್ತರ ಕಾಲದಲ್ಲಿ ವ್ಯಾಪಕವಾಗಿ ಜಾಗ್ರತಗೊಂಡ ಸನಾತನ ಧರ್ಮವು ಕುಮಾರಿಲ ಹಾಗೂ ಶ್ರೀ ಶಂಕರರ ಕಾಲದಲ್ಲಿ ಸರ್ವತ್ರ ಅಭಿವ್ಯಕ್ತಿಗೊಂಡಿತು. ಈ ಸಂದರ್ಭದ ವಿಶೇಷವೆಂದರೆ ವೈದಿಕ ಹಾಗೂ ಬೌದ್ಧ ಮತಗಳ ಸಂಘರ್ಷ ಶಕ್ತಿಗಳ ಸಂಘರ್ಷವಾಗಿರದೇ ಪರಸ್ಪರ ಯುಕ್ತಿಗಳ ಸಂಘರ್ಷವಾಗಿತ್ತು. ಹಾಗೂ ಲೇಖನಿಗಳ ಮೂಲಕ ವಾದ ವಿವಾದವು ನಡೆಯುತ್ತಿತ್ತು. ಯಾರೊಬ್ಬರೂ ಯಾವ ರಾಜರನ್ನೂ ಉತ್ತೇಜನಗೊಳಿಸದೇ ವಿರುದ್ಧಮತಾವಲಂಬಿಗಳನ್ನು ಹಿಂಸೆಪಡಿಸುವಂತಹ ಅನುಚಿತವಾದ ಕಾರ್ಯವನ್ನು ಎಸಗಲಿಲ್ಲ. ಕುಮಾರಿಲರ ಹಾಗೂ ಶ್ರೀ ಶಂಕರರ ಅನವರತ ಹಾಗೂ ಅಪರಿಮಿತ ಪರಿಶ್ರಮದಿಂದ ವೈದಿಕಮಾರ್ಗದ ಪುನಃ ಪ್ರತಿಷ್ಠಾಪನೆ ನಡೆದು ಬೌದ್ಧರು ಭಾರತದಿಂದ ಕಾಲ್ತೆಗೆಯುವಂತೆ ಆಯಿತು. ಹಾಗೂ ಇದೇ ಸಂದರ್ಭದಲ್ಲಿ ಬೌದ್ಧರು ಜಪಾನ, ಟಿಬೇಟ್, ಚೀನಾ ಈ ಮೊದಲಾದ ದೇಶಗಳಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡರು.

ಶಂಕರಾಚಾರ್ಯರ ಕಾಲದಲ್ಲಿ ಜೈನ ಹಾಗೂ ಬುದ್ಧ ಧರ್ಮಗಳಷ್ಟೇ ಪ್ರತಿಸ್ಪರ್ಧಿಗಳಾಗಿರದೇ ಪಂಚರಾತ್ರ, ಪಾಶುಪತ, ಕಾಪಾಲಿಕ ಹಾಗೂ ಗಾಣಪತ್ಯ ಮತ ಇವೇ ಮೊದಲಾದ ಅವೈದಿಕ ಮತಗಳು ಭಾರತದಲ್ಲೆಲ್ಲ ಪಸರಿಸಿದ್ದವು. ಪಂಚ "ಮ" ಕಾರಗಳ ಉಪಾಸಕರೂ ಆಗಿದ್ದರು. (ಪಂಚ 'ಮ' ಕಾರಗಳು– ಮದ್ಯ, ಮೀನ, ಮಾಂಸ, ಮುದ್ರಾ, ಮೈಥುನ) ಈ ಐದು ಪದಾರ್ಥಗಳ ಉಪಯೋಗವನ್ನು ಪೂಜಾದಿಗಳಲ್ಲಿ ಮಾಡುವದೇ ಇವರ ಪದ್ಧತಿಯಾಗಿತ್ತು. ಶಂಕರಾಚಾರ್ಯರು ಯುಕ್ತಿ ಹಾಗೂ ಶಾಸ್ತ್ರಗಳ ಮೂಲಕ ಈ ಅವೈದಿಕ ಮತಗಳನ್ನು ಖಂಡಿಸಿದರು ಮತ್ತು ಔಪನಿಷತ್ ತತ್ವವನ್ನು ಭಾರತೀಯರಲ್ಲಿ ಪ್ರಕಾಶಗೊಳ್ಳುವಂತೆ ಮಾಡುವದು ಆ ಕಾಲದ ಅತ್ಯಾವಶ್ಯಕವಾದ ವಸ್ತುಸ್ಥಿತಿಯಾಗಿತ್ತು. ಆರು ಹಾಗೂ ಏಳನೇ ಶತಮಾನದಲ್ಲಿ ಭಾರತದ ತುಂಬೆಲ್ಲ ಭಿನ್ನ ಭಿನ್ನವಾದ ಪಂಥಗಳು, ವಾದಗಳು, ಒಂದೆಡೆ ಶೂನ್ಯವಾದ, ಇನ್ನೊಂದೆಡೆ ಅನೇಕಾಂತವಾದ, ಮೂರನೆಯದಾಗಿ ಪಂಚ 'ಮ' ಕಾರಗಳಿಂದ ಕೂಡಿದ ತಾಂತ್ರಿಕ ಉಪಾಸನೆ ಇವುಗಳಿಂದಾಗಿ ಸನಾತನ ಧರ್ಮವು ಮೂಲೆಗುಂಪಾಗಿತ್ತು. ಇಂತಹ ಧರ್ಮಗ್ಲಾನಿಯ ಸಮಯದಲ್ಲಿ ಭಾರತವು ಸನಾತನ ಧರ್ಮದ ಉದ್ಧಾರಕ್ಕಾಗಿ ಅವತಾರ ಪುರುಷನೊಬ್ಬನನ್ನು ಚಾತಕ ಪಕ್ಷಿಯಂತೆ ನಿರೀಕ್ಷಿಸುತ್ತಿತ್ತು. ಸಮಸ್ತ ಭಾರತೀಯರ ಈ ನಿರೀಕ್ಷಣೆಯೇ ಶ್ರೀ ಶಂಕರರ

ಅವತಾರಕ್ಕೆ ಕಾರಣವಾಯಿತು. ಕಾಲಟಿಯ ವೃಷಭ ಪರ್ವತದಲ್ಲಿರುವ ಚಂದ್ರಮೌಳೀಶ್ವರನ ದಿವ್ಯ ಸಾನಿಧ್ಯದಲ್ಲಿ ಶಂಕರಾಚಾರ್ಯರಂತಹ ಸರ್ವಜ್ಞನನ್ನು ವೈಶಾಖ ಶುದ್ಧ ಪಂಚಮಿಯಂದು ತಮ್ಮ ಮಗನನ್ನಾಗಿ ಪಡೆದರು. ಭಗವಂತನಾದ ಶಂಕರನೇ ಶಂಕರ ಎಂಬ ಹೆಸರಿನಿಂದ ಸನಾತನ ಧರ್ಮವನ್ನು ಪುನರುಜ್ಜೀವನಗೊಳಿಸಲು ಅವತರಿಸಿದ. ಶ್ರೀ ಶಂಕರರು ತಮ್ಮ ಎಂಟನೆಯ ವರ್ಷದಲ್ಲಿನೇ ತಾಯಿಯ ಅಪ್ಪಣೆಯನ್ನು ಪಡೆದು ಸನ್ಯಾಸವನ್ನು ಸ್ವೀಕರಿಸಿದರು, ಮತ್ತು ಬದರಿಯಲ್ಲಿರುವ ಗೋವಿಂದ ಭಗವತ್ಪಾದರ ದಿವ್ಯ ಸಾನಿಧ್ಯದಲ್ಲಿ ಅಧ್ಯಯನ ನಡೆಸಿ ಅದ್ವೈತ ವೇದಾಂತದಲ್ಲಿ ಪ್ರಕಾಂಡ ಪಾಂಡಿತ್ಯವನ್ನು ಪಡೆದರು. ಉಪನಿಷತ್ತು ಬ್ರಹ್ಮಸೂತ್ರಗಳಿಗೆ ಅದ್ವೈತಪರವಾದ ಅರ್ಥವನ್ನು ಗೋವಿಂದ ಭಗವತ್ಪಾದರಿಂದ ತಿಳಿದು, ಮುಂದೆ ಈ ಮತವನ್ನೇ ಸಂಸ್ಥಾಪಿಸಿದರು.

ಗೋವಿಂದ ಭಗವತ್ಪಾದರು ಗೌಡಪಾದಾಚಾರ್ಯರ ಶಿಷ್ಯರಾಗಿದ್ದರು. ಶ್ರೀ ಶಂಕರರು ಗೋವಿಂದ ಭಗವತ್ಪಾದರ ಆದೇಶದಂತೆ ಕಾಶಿಯಲ್ಲಿ ನೆಲೆಸಿ ಶಿಷ್ಯರಿಗೆ ಪಾಠ ಮಾಡುತ್ತಿರುವಾಗ ಒಂದು ಘಟನೆ ಘಟಿಸಿತು. ಚಾಂಡಾಲನೊಬ್ಬ ಅವರೊಡನೆ ಮಾತುಕತೆ ನಡೆಸಿದಾಗ ಅವನನ್ನು ಕುರಿತು ಚೈತನ್ಯವೇ ಆತ್ಮಸ್ವರೂಪವೆಂದು ತಿಳಿಯುವ ವ್ಯಕ್ತಿ ಚಾಂಡಾಲನಾಗಲಿ, ವಿದ್ವಾಂಸನಾಗಲಿ ಅವನು ತನ್ನ ಗುರು. "ಚಾಂಡಾಲೋಸ್ತು ಸತು ದ್ವಿಜೋಸ್ತು ಗುರುರಿತಿ ಎಷಾ ಮನಿಷಾಮಮ." ಅಲ್ಲಿಂದ ಶಂಕರರು ಬದರಿಕಾಶ್ರಮಕ್ಕೆ ಬಂದು ವ್ಯಾಸಮುನಿಗಳ ಆಶ್ರಮದಲ್ಲಿ ವಾಸಿಸತೊಡಗಿದರು. ಈ ಆಶ್ರಮದ ವಾತಾವರಣವು ಅತ್ಯಂತ ನಿರ್ಮಲವೂ, ಮನೋಹರವೂ, ಪ್ರಕೃತಿದೇವಿಯ ತವರೂ ಆಗಿತ್ತು. ಈ ಹಿಮಾಲಯದ ಮನೋಹರವಾದ ವಾತಾವರಣದಲ್ಲಿ ವ್ಯಾಸರು ಮಹಾಭಾರತವನ್ನೂ ಬ್ರಹ್ಮಸೂತ್ರವನ್ನೂ ಬರೆದಿದ್ದರು. ಆಚಾರ್ಯರು ಶಿಷ್ಯರೊಂದಿಗೆ ಇಲ್ಲಿ ವಾಸ ಮಾಡುತ್ತ ಬ್ರಹ್ಮಸೂತ್ರ ಉಪನಿಷತ್ತು ಹಾಗೂ ಭಗವದ್ಗೀತಾ ಇವುಗಳ ಮೇಲೆ ಭಾಷ್ಯವನ್ನು ರಚಿಸಿದರು. ಈ ಆಶ್ರಮದ ವಾಯುಮಂಡಲ ಆಚಾರ್ಯರನ್ನು ಆಧ್ಯಾತ್ಮಿಕ ಸಾಧನೆಯಲ್ಲಿ ಗೌರೀಶಂಕರ ಪರ್ವತದ ಎತ್ತರದಷ್ಟು ಉನ್ನತ ಸ್ಥಿತಿಗೆ ಕೊಂಡೊಯ್ಯಿತು. ಇಲ್ಲಿ ಆಚಾರ್ಯರು ನಾಲ್ಕು ವರ್ಷ ವಾಸಮಾಡಿದರು. ಅದೊಂದು ದಿನ ಶ್ಯಾಮಲ ವರ್ಣದ ಬ್ರಾಹ್ಮಣನು ಆಚಾರ್ಯರ ಸಮೀಪಕ್ಕೆ ಬಂದು ವ್ಯಾಸ ಸೂತ್ರದ ಮೂರನೇ ಅಧ್ಯಾಯದ ಪ್ರಥಮ ಪಾದದ ಪ್ರಥಮ ಸೂತ್ರವನ್ನು ಕುರಿತು ಪ್ರಶ್ನೆ ಕೇಳಲು 'ತದನಂತರ ಪ್ರತಿಪತ್ತೌರಂಹತಿ ಸಂಪರಿಷ್ವಕ್ತಃ ಪ್ರಶ್ನ ನಿರೂಪಣಾಭ್ಯಾಂ.' ಆಚಾರ್ಯರು ಈ ಸೂತ್ರಕ್ಕೆ ಅರ್ಥೈಸುತ್ತಾ ಶರೀರದ ಉತ್ಪಾದಕಗಳಾದ ಪಂಚಮಹಾಭೂತಗಳು ಸೂಕ್ಷ್ಮ ಅವಯವಗಳಿಂದ ಆವೃತವಾಗಿ ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಹೋಗುತ್ತದೆ. ಈ ಉತ್ತರದಿಂದ ತೃಪ್ತನಾದ ಬ್ರಾಹ್ಮಣನು ಏಳು ದಿನಗಳ ವರೆಗೂ ಇದೇ ರೀತಿ ಅನೇಕ ಸಂದೇಹಗಳನ್ನು ಮುಂದಿಟ್ಟರೂ ಶ್ರೀ ಶಂಕರರು ಸಮರ್ಪಕವಾಗಿ ಉತ್ತರಿಸಿದ್ದನ್ನು ಕಂಡು ಸ್ವಯಂ

ವೇದವ್ಯಾಸರಾದ, ಶ್ಯಾಮಲ ವರ್ಣನಾದ ಬ್ರಾಹ್ಮಣನು ತನ್ನ ನಿಜ ಸ್ವರೂಪವನ್ನು ಧರಿಸಿ ಆಚಾರ್ಯರಿಗೆ ಮತ್ತೆ ಹದಿನಾರು ವರ್ಷದ ಆಯುಷ್ಯಗಳನ್ನು ವರವಾಗಿ ನೀಡಿ, ಶಂಕರರ ಮೃತ್ಯುಯೋಗವನ್ನು ನಿವಾರಿಸಿ, ಆ ಸಮಯದಲ್ಲಿ ಅತ್ಯಂತ ಪ್ರಸಿದ್ಧರಾದ ಕುಮಾರಿಲ ಭಟ್ಟರನ್ನು ತಮ್ಮ ಅನುಯಾಯಿಗಳನ್ನಾಗಿ ಮಾಡಿಕೊಳ್ಳುವಂತೆ ಸಲಹೆ ನೀಡಿ, ಅಂತರ್ಧಾನರಾದರು.

## ಸನಾತನ ಧರ್ಮದ ಪ್ರಚಾರ

ವ್ಯಾಸರ ಸಲಹೆಮೇರೆಗೆ ತ್ರಿವೇಣಿ ಸಂಗಮದಲ್ಲಿ ಕುಮಾರಿಲ ಭಟ್ಟರನ್ನು ಸಂದರ್ಶಿಸಿದಾಗ ಕುಮಾರಿಲರು ತಮ್ಮ ಅನಿವಾರ್ಯತೆಯನ್ನು ತಿಳಿಸಿ ಶಿಷ್ಯನಾದ ಮಂಡನ ಮಿಶ್ರನನ್ನು ಕಾಣುವಂತೆ ಸಲಹೆ ನೀಡಿದರು. ಕುಮಾರಿಲರು ಈಗಾಗಲೇ ಭರತ ಖಂಡದಲ್ಲೆಲ್ಲ ವೇದಮತವನ್ನು ಸ್ಥಾಪನೆ ಮಾಡಿ ವೇದೋಕ್ತವಾದ ಕರ್ಮಕಾಂಡವನ್ನು ಪ್ರಚುರವಾಗಿ ಪ್ರಕಾಶಗೊಳಿಸಿದ್ದರು. ಇದರಿಂದಾಗಿ ಸನಾತನ ಧರ್ಮದ ಪುನಃ ಪ್ರತಿಷ್ಠಾಪನೆಯಲ್ಲಿ ಆಚಾರ್ಯರ ಮಾರ್ಗ ಸುಗಮವಾಗಿತ್ತು. ಇದನ್ನೇ ಮುಂದುವರಿಸಿ ಶ್ರೀ ಶಂಕರರು ಸನಾತನ ಧರ್ಮದ ಸ್ವಸ್ವರೂಪದ ಅರಿವನ್ನು ಜನರಲ್ಲಿ ಮನಂಬುಗುವಂತೆ ಮಾಡಿದರು. ಕುಮಾರಿಲರ ಸಲಹೆಯಂತೆ ಆಚಾರ್ಯರು ಮಂಡನಮಿಶ್ರರನ್ನು ಕಂಡು, ವಾದದಲ್ಲಿ ಅವರ ಪತ್ನಿಯಾದ ಭಾರತಿ ದೇವಿಯವರನ್ನು ತಮ್ಮ ಶಿಷ್ಯಗಣಗಳಲ್ಲಿ ಒಬ್ಬರನ್ನಾಗಿ ಮಾಡಿಕೊಂಡರು. ಹೀಗೆ ಭಾರತದ ಉತ್ತರ ಹಾಗೂ ದಕ್ಷಿಣದಲ್ಲಿ ಸಂಚರಿಸಿ, ದಿಗ್ವಿಜಯ ಯಾತ್ರೆಯನ್ನು ಕೈಗೊಂಡು, ನಾಲ್ಕೂ ದಿಕ್ಕುಗಳಲ್ಲಿ ಸನಾತನ ಧರ್ಮದ ಪ್ರಚಾರಕ್ಕಾಗಿ ನಾಲ್ಕು ಮಠಗಳನ್ನು ಸ್ಥಾಪಿಸಿದರು. ಪೂರ್ವ ದಿಕ್ಕಿನಲ್ಲಿರುವ ಗೋವರ್ಧನ ಮಠಕ್ಕೆ ಪದ್ಮಪಾದರು, ದಕ್ಷಿಣದಲ್ಲಿರುವ ಶೃಂಗೇರಿಮಠಕ್ಕೆ ಸುರೇಶ್ವರಾಚಾರ್ಯರು. ಪಶ್ಚಿಮದಲ್ಲಿರುವ ಶಾರದಾ ಮಠಕ್ಕೆ ಹಸ್ತಾಮಲಕರೂ, ಉತ್ತರದ ಜ್ಯೋತಿರ್ಮಠಕ್ಕೆ ತ್ರೋಟಕಾಚಾರ್ಯರನ್ನು ನಿಯಮಿಸಿ, ಸನಾತನ ಧರ್ಮದ ಪ್ರಚಾರ ಮಾಡುವಂತೆ ಆದೇಶವಿತ್ತರು. ಇದು ಅಲ್ಲದೆ ಕಾಮಕೋಟಿ ಮಠ (ಕಾಂಚೀ ಮಠ) ಸ್ಥಾಪನೆ ಮಾಡಿದ್ದಲ್ಲದೆ, ಆಯಾಯಾ ಪ್ರದೇಶಗಳಿಗೆ ಅನುಗುಣವಾಗಿ ಚಿಕ್ಕ ಚಿಕ್ಕ ಮಠಗಳನ್ನು ಸ್ಥಾಪಿಸಿ ಪ್ರಧಾನ ಮಠಕ್ಕೆ ಅಧೀನವಾಗಿರುವಂತೆಯೂ ಸನಾತನ ಧರ್ಮವನ್ನು ಪ್ರಚಾರಮಾಡುವಂತೆಯೂ ಆದೇಶಿಸಿದರು. ಹೀಗೆ ಶ್ರೀ ಶಂಕರಾಚಾರ್ಯರು ಅವಿರತ ಪರಿಶ್ರಮದಿಂದ ಸನಾತನ ಧರ್ಮವನ್ನು ಬೆಳೆಸಲು ಮತ್ತು ಪೋಷಿಸಲು ಒಂದು ಯೋಜನೆ ಮಾಡಿ ಭರತ ಖಂಡದಲ್ಲೆಲ್ಲ ಸನಾತನ ಧರ್ಮವು ಗರಿಗೆದರಿ ಆಗಸದಲ್ಲಿ ವಿರಾಜಿಸುವಂತೆ ಮಾಡಿದರು.

## ಅದ್ವೈತ ಮತ ಮತ್ತು ಸನಾತನ ಧರ್ಮ

ಇವೆರಡೂ ಒಂದೇ ಅರ್ಥವುಳ್ಳ ಶಬ್ದವು. "ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋಬ್ರಹ್ಮೈವ ನಾಪರಃ" ಈ ಬ್ರಹ್ಮವೇ 'ಸತ್.' ಆ 'ಸತ್' ಬ್ರಹ್ಮ. ಉಳಿದೆಲ್ಲ

ಪ್ರಪಂಚವು ಮಿಥ್ಯಾರೂಪವಾದದ್ದು. ಜೀವನು ಬ್ರಹ್ಮನಿಂದ ಬೇರೆಯಲ್ಲ. ಅದ್ವೈತ ವೇದಾಂತದ ಸಿದ್ಧಾಂತದ ಪ್ರಕಾರ ಜಗತ್ತಿನ ಸಮಸ್ತ ವ್ಯವಹಾರಗಳು ಅನುಭವದ ಆಧಾರದ ಮೇಲೆ ಪ್ರವಹಿಸುತ್ತದೆ. ಈ ಅನುಭವದ ಆಧಾರದ ಮೇಲೆ ಆತ್ಮನ ಸತ್ಯತ್ವ (ಆತ್ಮನ ಸತ್ತಾ) ಸ್ವತಃ ಸಿದ್ಧವಾಗುತ್ತದೆ. ಏಕೆಂದರೆ ಜ್ಞಾತಾರೂಪದಿಂದ ಆತ್ಮನ ಉಪಲಬ್ಧಿಯ ಅಭಾವದಲ್ಲಿ ವಿಷಯದ ಜ್ಞಾನ ಸಂಭಾವಿತವಾಗುವದಿಲ್ಲ. 'ಆತ್ಮಾತು ಪ್ರಮಾಣಾದಿ ವ್ಯವಹಾರಾಶ್ರಯತ್ವಾತ್ ಪ್ರಾಗೇವ ಪ್ರಮಾಣಾದಿ ವ್ಯವಹಾರಾತ್ ಸಿಧ್ಯತಿ ನಚ ಈದೃಶಸ್ಯ ನಿರಾಕರಣಂ ಸಂಭವತಿ, ಆಗಂತುಕಂ ಹಿ ವಸ್ತು ನಿರಾಕ್ರಿಯತೆ ನ ಸ್ವರೂಪಂ ನ ಹಿ ಅಗ್ನೇಃ ಔಷ್ಣ್ಯಂ ಅಗ್ನಿನಾ ನಿರಾಕ್ರಿಯತೆ.' ಶಂಕರಾಚಾರ್ಯರು ಈ ವಿಷಯದಲ್ಲಿ ಹೀಗೆ ಹೇಳುತ್ತಾರೆ. ಪ್ರಮಾಣ ಮುಂತಾದ ಸಕಲ ವ್ಯವಹಾರಗಳಿಗೆ ಆತ್ಮನೇ ಆಶ್ರಯ. ಈ ವ್ಯವಹಾರಗಳ ಪೂರ್ವದಲ್ಲಿಯೇ ಆತ್ಮನು ಸಿದ್ಧನಾಗಿರುತ್ತಾನೆ. ಆತ್ಮನನ್ನು ನಿರಾಕರಿಸುವದು ಸಾಧ್ಯವಿಲ್ಲ. ಆಗಂತುಕ ವಸ್ತುವನ್ನು ನಿರಾಕರಿಸಬಹುದೇ ಹೊರತು, ಸ್ವಾಭಾವಿಕವಾದುದನ್ನಲ್ಲ. ಉಷ್ಣತೆಯನ್ನು ಅಗ್ನಿಯು ನಿರಾಕರಿಸಲು ಸಾಧ್ಯವಿಲ್ಲ. ಪರಿವರ್ತನೆಯು ಜ್ಞಾತವ್ಯದಲ್ಲುಂಟಾಗಬಹುದೇ ಹೊರತು ಜ್ಞಾತನಲ್ಲಲ್ಲ. ಈಗ ನಾನು ತಿಳಿಯುತ್ತೇನೆ. ಹಿಂದಿನ ವಸ್ತುಗಳನ್ನು ತಿಳಿದೆ. ಈ ವಿಧವಾದ ಅನುಭವ ಪರಂಪರೆಯಲ್ಲಿ ಜ್ಞಾತವ್ಯದ ಬದಲಾವಣೆ ಇದೆಯೇ ಹೊರತು, ಜ್ಞಾತೃವಿನ ಸ್ವರೂಪವು ಪರಿವರ್ತನೆ ಹೊಂದುವದಿಲ್ಲ. ಇದರಿಂದಾಗಿ ಆತ್ಮನ ಸತ್ತಾ ಸ್ವಯಂ ಸಿದ್ಧವಾಗುತ್ತದೆ. ಆತ್ಮನು ಜ್ಞಾನರೂಪನೂ ಹೌದು, ಜ್ಞಾತಾಪರನೂ ಹೌದು. ಇವೆರಡೂ ಬೇರೆ ವಸ್ತುಗಳಲ್ಲ. ಜ್ಞೇಯ ಪದಾರ್ಥದ ಆವಿರ್ಭಾವವಾದಮೇಲೆ ಜ್ಞಾನವೇ ಜ್ಞಾತಾರೂಪದಿಂದ ಪ್ರಕಟವಾಗುತ್ತದೆ. ಜ್ಞೇಯವಿಲ್ಲದಿರುವಾಗ 'ಜ್ಞಾತಾ' ಕಲ್ಪನೆಯೂ ಉಂಟಾಗುವದಿಲ್ಲ. ಜ್ಞೇಯ ರೂಪದಿಂದ ಜಗತ್ತು ಉಪಸ್ಥಿತವಾದಾಗ ಆತ್ಮನ ಜ್ಞಾತಾರೂಪವು ಉದಯವಾಗುತ್ತದೆ. ಆದರೆ ಅದರ ಅಭಾವವಿರುವಾಗ ಆತ್ಮನು ಜ್ಞಾನ ರೂಪದಿಂದ ಸರ್ವದಾ ಇರುತ್ತಾನೆ. ಒಂದೇ ಜ್ಞಾನವು ಕರ್ತಾ ಹಾಗೂ ಕರ್ಮ, ಇವುಗಳ ಸಂಬಂಧವನ್ನು ಹೊಂದಿದಾಗ ಬೇರೆ ಬೇರೆಯಾಗಿ ಪ್ರತೀತವಾಗುತ್ತದೆ. ಆದರೆ ಅದು ಒಂದೇ ಅಭಿನ್ನವಾದ ಪದಾರ್ಥವಾಗಿರುತ್ತದೆ. ಆತ್ಮನು ಆತ್ಮನನ್ನು ತಿಳಿಯುತ್ತಾನೆ– ಈ ವಾಕ್ಯದಲ್ಲಿ ಕರ್ತಾ ರೂಪನಾದ ಆತ್ಮ ಹಾಗೂ ಕರ್ಮರೂಪಿಯಾದ ಆತ್ಮನೂ ಒಂದೇ ವಸ್ತು. ನಿತ್ಯನಾದ ಆತ್ಮನು ಜ್ಞಾನಸ್ವರೂಪನಾಗುವುದರಲ್ಲಿ ಯಾವ ವಿರೋಧವೂ ಇಲ್ಲ.

ಏಕೆಂದರೆ ಜ್ಞಾನವೂ ಸಹ ನಿತ್ಯ ಅನಿತ್ಯ ಭೇದದಿಂದ ಎರಡು ಬಗೆಯಾಗಿರುತ್ತದೆ. ಅನಿತ್ಯ ಜ್ಞಾನವು ಅಂತಃಕರಣಾವಚ್ಛಿನ್ನವಾದ ವೃತ್ತಿ ಮಾತ್ರವಾಗಿರುತ್ತದೆ. ಇದು ವಿಷಯ ಸಾನಿಧ್ಯವಾದಾಗ ಉತ್ಪನ್ನವಾಗುತ್ತದೆ. ವಸ್ತುವಿನ ಅಭಾವದಲ್ಲಿ ಇದು ತಿಳಿಯುತ್ತೇನೆ. ನಮ್ಮ ಅಂತಃಕರಣವು ಪೆನ್ನಿನೊಡನೆ ಸಂಬಂಧ ಹೊಂದಿರುವಾಗ ಅದು ಪೆನ್ನಿನ ರೂಪವನ್ನು ಧರಿಸುತ್ತದೆ. ಇದನ್ನು 'ವೃತ್ತಿ' ಎನ್ನುತ್ತಾರೆ. ಪೆನ್ನು

ಇರುವವರೆಗೂ ವೃತ್ತಿಜನ್ಯ ಜ್ಞಾನವಿರುತ್ತದೆ. ಇದಕ್ಕೆ ಭಿನ್ನವಾದುದು ನಿತ್ಯ ಜ್ಞಾನ. ಇದೇ ವಾಸ್ತವವಾದ ಜ್ಞಾನ. ಇದಕ್ಕೆ ಆತ್ಮಜ್ಞಾನವೆನ್ನುತ್ತಾರೆ. ಇದೇ ಸನಾತನ ಜ್ಞಾನ. ಹೀಗೆ ಶಂಕರಾಚಾರ್ಯರ ಹೇಳಿಕೆಯಂತೆ ಜಗತ್ತಿನಲ್ಲಿ ಉತ್ಪನ್ನವಾದ ಎಲ್ಲ ಪದಾರ್ಥಗಳು ಸತ್ ಮೂಲಕವಾಗಿ ಇರುವದು ಮಾತ್ರವಲ್ಲದೇ, ಸ್ಥಿತಿ ಕಾಲದಲ್ಲಿಯೂ ಸಹ ಅವು ಸತ್ ಬ್ರಹ್ಮದ ಅಧಿಷ್ಠಾನವನ್ನೇ ಆಶ್ರಯಿಸಿರುತ್ತದೆ. ಪ್ರಪಂಚದ ಎಲ್ಲ ಪದಾರ್ಥಗಳು ಉತ್ಪತ್ತಿ, ಸ್ಥಿತಿ ಹಾಗೂ ಲಯದ ಸ್ಥಿತಿಗಳಲ್ಲಿ ಸರ್ವದಾ ಚೈತನ್ಯದಿಂದ ಅವ್ಯತಿರಿಕ್ತವಾಗಿರುತ್ತವೆ. ಚೈತನ್ಯವು ಬ್ರಹ್ಮದ ಸ್ವರೂಪ. ಆದುದರಿಂದ ತನ್ನ ಜೀವನದ ಸಮಸ್ತ ಅವಸ್ಥೆಗಳಲ್ಲಿಯೂ ಪದಾರ್ಥವು ಈ 'ಸತ್ತಾ' (ಬ್ರಹ್ಮ) ದೊಡನೆ ಅಭಿನ್ನ ರೂಪದಲ್ಲಿ ಇರುತ್ತದೆ. ಇದರ ಅರಿವೇ ಸನಾತನ ಧರ್ಮದ ತಿರುಳು. ಈ ಸತ್‌ನ ಅರಿವಾದಾಗ ಪ್ರಪಂಚವನ್ನೆಲ್ಲವನ್ನೂ ಅರಿಯಬಹುದು. ಯಾಕೆಂದರೆ ಈ ಸತ್ತಿನೊಳಗೆ ಪ್ರಪಂಚ ಆವರಿಸಿದೆ. ಅಲ್ಲದೆ ಎಲ್ಲ ಕಾಲ ದೇಶಗಳೂ ಈ ಸತ್ ನೊಳಗೇ ಅಡಕಗೊಂಡಿವೆ. ಆದ್ದರಿಂದ ಜ್ಞಾನಿಗಳು 'ಒಂದನ್ನು ತಿಳಿದರೆ ಎಲ್ಲವೂ ತಿಳಿಯುತ್ತದೆ.' ಈ ಒಂದೇ ಸತ್ ಬಹಳ ರೀತಿಯಲ್ಲಿ ರೂಪಗೊಂಡಿದೆ ಎಂದು ವಿದ್ವಾಂಸರು ಹೇಳುತ್ತಾರೆ. ಈ ರೀತಿಯಾಗಿ ಆಚಾರ್ಯರು ಈ ಸತ್‌ನ ವಿರಾಟ್ ಸ್ವರೂಪದ ಅರಿವನ್ನು ಮಾಡಿಕೊಡಲು ಹಾಗೂ ಸನಾತನ ಧರ್ಮವನ್ನು ಪುನರುಜ್ಜೀವನಗೊಳಿಸಲು ತಮ್ಮ ಅನುಭವವನ್ನೂ ಪರಿಶ್ರಮವನ್ನೂ ಪ್ರಪಂಚಕ್ಕೆ ಸಮರ್ಪಿಸುತ್ತಾ ತಮ್ಮ ದಿವ್ಯತೆ, ಭವ್ಯತೆಯನ್ನು ಮೆರೆಸಿದರು.

***

# ಬೌದ್ಧ ವಿಪರೀತವಾದಿಗಳು ಮತ್ತು ಶಂಕರರು



ಡಾ. ಎ. ಡಿ. ಹೆಗಡೆ

"We ask and ask, thou smilest and art still, out-topping knowledge." (ನಾವು ಎಷ್ಟು ಪ್ರಶ್ನಿಸಿದರೂ ನಮ್ಮ ಜ್ಞಾನದ ಪರಿಧಿಯನ್ನು ಮೀರುತ್ತ ನೀನು ಮುಗುಳ್ನಗುತ್ತೀಯೆ.) ಆಂಗ್ಲ ವಿಮರ್ಶಕರು ಶೇಕ್ಸ್‌ಪಿಯರ್ ಬಗ್ಗೆ ಆಡಿದ ಈ ಮಾತು. ತನ್ನ ಕಾಲದ ಎಲ್ಲ ಸಂಚಿತ ಜ್ಞಾನವನ್ನೂ ಅತಿಕ್ರಮಿಸುತ್ತ ಅದ್ವೈತ ಸಿದ್ಧಾಂತವನ್ನು ತಮ್ಮ ಪ್ರಸನ್ನ-ಗಂಭೀರ ಭಾಷ್ಯಗಳಲ್ಲಿ ಹರಳುಗಟ್ಟಿಸಿದ ಶ್ರೀ ಶಂಕರಾಚಾರ್ಯರಿಗೆ ನೂರಕ್ಕೆ ನೂರರಷ್ಟು ಅನ್ವಯಿಸುತ್ತದೆ. ಅನ್ಯ ಮತಗಳ ದಾಳಿಗೆ ತುತ್ತಾಗಿ ಸನಾತನ ಧರ್ಮ ಕಣ್ಮರೆಯಾಯಿತು ಎನ್ನುವಾಗಲೇ ಅದು ಫೀನಿಕ್ಸ್ ಪಕ್ಷಿಯಂತೆ ಮತ್ತೆ ಎದ್ದು ನಿಂತಿದ್ದು ಶ್ರೀ ಶಂಕರರ ಅದ್ಭುತ ಮೇಧಾಶಕ್ತಿಯಿಂದ.

ಶ್ರೀ ಶಂಕರರ ಆವಿರ್ಭಾವಕ್ಕೆ ಮೊದಲು ಭಾರತದಲ್ಲಿ ಜೈನ, ಬೌದ್ಧ, ಚಾರ್ವಾಕ ಮೊದಲಾದ ಅವೈದಿಕ ಧರ್ಮಗಳು ವಿಜೃಂಭಿಸುತ್ತಿದ್ದವು. ಉಪನಿಷತ್ತುಗಳು ವೈದಿಕ ಜ್ಞಾನದಿಂದ ಕವಲೊಡೆದ ದಾರಿಯನ್ನಾಗಲಿ, ಅಥವಾ ಪ್ರತಿಭಟನೆಯನ್ನಾಗಲಿ ಪ್ರತಿನಿಧಿಸುವುದಿಲ್ಲ. ಅವು ವೇದಗಳ ಸಹಜವಾದ ಬೆಳವಣಿಗೆಯನ್ನು ಪ್ರತಿನಿಧಿಸುತ್ತವೆ. ಕ್ರಿ. ಪೂ. ಏಳು ಮತ್ತು ಆರನೆಯ ಶತಮಾನಗಳಲ್ಲಿ ತಲೆದೋರಿದ ಜೈನ ಮತ್ತು ಬೌದ್ಧ ಧರ್ಮಗಳು ವೇದ ಉಪನಿಷತ್ತುಗಳಲ್ಲಿ ಕಂಡುಬರುವ ಭಾರತೀಯ ಧಾರ್ಮಿಕ ಮತ್ತು ತಾತ್ವಿಕ ಚಿಂತನ-ಪರಂಪರೆ ಕವಲೊಡೆಯುವುದನ್ನು ತೋರಿಸುತ್ತದೆ. ಈ ಎರಡೂ ಧರ್ಮಗಳ ಮೂಲಪುರುಷರು ಕ್ಷತ್ರಿಯ ವಂಶಜರು. ವೇದ ಮತ್ತು ವರ್ಣಾಶ್ರಮ ಧರ್ಮದ ಪಾವಿತ್ರ್ಯವನ್ನು ನಿರಾಕರಿಸಿದವರು. ಜೈನಧರ್ಮ ಭಾರತಕ್ಕೆ ಸೀಮಿತವಾದರೂ ಬೌದ್ಧ ಧರ್ಮ ಭಾರತೀಯರಿಗೆ ಮಾತ್ರವಲ್ಲದೆ, ಇಂಡೋಗ್ರೀಕರು, ಇಂಡೋಸಿಥಿಯನರು ಮುಂತಾದ ವಿದೇಶಿಯರಿಗೆ ಕೂಡ ತನ್ನ ಹೆಬ್ಬಾಗಿಲುಗಳನ್ನು ತೆರೆಯಿತು. ಸಿಲೋನ್, ಬರ್ಮಾ, ಥೈಲೆಂಡ್, ಕಾಂಬೋಡಿಯ, ಚೀನಾ, ಟಿಬೇಟ್, ಕೋರಿಯಾ, ಜಪಾನ್, ಮಂಗೋಲಿಯ ಮುಂತಾದ ದೇಶಗಳಲ್ಲಿಯೂ ಬೌದ್ಧಧರ್ಮ ವ್ಯಾಪಿಸಿತು. ಸಿಲೋನ್,

ಬರ್ಮಾ, ಥೈಲೆಂಡ್ ಮತ್ತು ಕಾಂಬೋಡಿಯಗಳಲ್ಲಿ ಅದು ತನ್ನ ಮೂಲರೂಪವನ್ನು ಉಳಿಸಿಕೊಂಡರೂ ಬೇರೆಡೆ ಹಲವು ಮಾರ್ಪಾಡುಗಳನ್ನು ಕಂಡಿತು. ಬುದ್ಧನ ನಿರ್ವಾಣದ ನಂತರ ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಶಿಶುನಾಗವಂಶದ ಆಳ್ವಿಕೆಯಲ್ಲಿ (ಕ್ರಿ. ಪೂ. ೪೧೪ ರಿಂದ ೩೯೬) ಬೌದ್ಧ ಸಂಘವು ಅನೇಕ ಕವಲಾಗಿ ಒಡೆಯಿತು. ಅವುಗಳಲ್ಲಿ ಕೆಲವು "ಥೇರವಾದ"ಕ್ಕೆ ಸೇರಿದುವು. ಮತ್ತೆ ಕೆಲವು ಅಸಂಪ್ರದಾಯ ಪಂಥವಾದ "ಮಹಾ ಸಾಂಘಿಕ"ಕ್ಕೆ ಸೇರಿದುವು. ಮಹಾಸಾಂಘಿಕದ ಕೇಂದ್ರಗಳು ಆಂಧ್ರಪ್ರದೇಶದಲ್ಲಿದ್ದುದರಿಂದ ಅವುಗಳನ್ನು ಅಂಧಕರು (ಆಂಧ್ರಕರು) ಎಂದು ಕರೆಯಲಾಯಿತು. ಅವು ಸಿದ್ಧಾಂತಗಳಲ್ಲೂ ಮತ್ತು ಶಿಸ್ತಿನ ನಿಯಮಗಳಲ್ಲೂ ಬದಲಾವಣೆಗಳನ್ನು ಮಾಡಿ ಕೆಲವು ಶತಮಾನಗಳ ನಂತರ ಬಂದ "ಮಹಾಯಾನ"ಕ್ಕೆ ದಾರಿಮಾಡಿಕೊಟ್ಟವು. ಥೇರವಾದ ಮಧ್ಯಭಾರತ, ಭರುತ್ ಮತ್ತು ಸಾಂಚಿಗಳಲ್ಲಿ ತನ್ನ ನೆಲೆಗಳನ್ನು ಕಂಡುಕೊಂಡು ತರುವಾಯ ದಕ್ಷಿಣಕ್ಕೆ ಹಬ್ಬಿ ಕಟ್ಟಕಡೆಗೆ ಸಿಂಹಳವನ್ನು ತಲುಪಿತು. ಅದರ ಉಪಪಂಥಗಳು ಭಾರತದಾದ್ಯಂತ ಚದುರಿದವು. ಥೇರವಾದ ಪಾಳಿಯನ್ನೂ ಅದರ ಉಪಪಂಥಗಳು ಮಿಶ್ರ ಮತ್ತು ಶುದ್ಧ ಸಂಸ್ಕೃತಗಳನ್ನೂ ತಮ್ಮ ಬರಹಕ್ಕೆ ಬಳಸಿಕೊಂಡವು.

ಬೌದ್ಧ ಭಿಕ್ಷುಗಳ ಗುಂಪುಗುಳಿತನವನ್ನು ತಡೆಯಲು ಅಶೋಕ ಚಕ್ರವರ್ತಿ ಎಷ್ಟು ಪ್ರಯತ್ನಿಸಿದರೂ ಅದು ಫಲಿಸಲಿಲ್ಲ. ಉಪಪಂಥಗಳ ಸಂಖ್ಯೆ ಕಡಿಮೆಯಾಗಲಿಲ್ಲ. ಶುಂಗ ದೊರೆಗಳ ಆಳ್ವಿಕೆಯಲ್ಲಿ ಬೌದ್ಧ ಮತದ ಪ್ರಗತಿ ಭಾಗಶಃ ಕುಂಠಿತವಾಗಿತ್ತು. ಆದರೆ ಭಾರುತ್ ಮತ್ತು ಸಾಂಚೀ ಸ್ತೂಪಗಳ ದಾನಶಾಸನಗಳು ಆ ಧರ್ಮಕ್ಕೆ ಇನ್ನೂ ಹಲವು ಭಕ್ತರಿದ್ದರು ಎಂಬುದನ್ನು ತೋರಿಸುತ್ತವೆ. ಶುಂಗರ ಆಳ್ವಿಕೆಯಲ್ಲಿ ಮೌರ್ಯಸಾಮ್ರಾಜ್ಯ ನುಚ್ಚುನೂರಾಯಿತು. ಆಗ ದಕ್ಷಿಣಾಪಥದಲ್ಲಿ ಶಾತವಾಹನರು ತಮ್ಮ ಸಾರ್ವಭೌಮತ್ವ ಸ್ಥಾಪಿಸಿದರು. ಆಂಧ್ರಪ್ರದೇಶದಲ್ಲಿ ಅಸಾಂಪ್ರದಾಯಿಕ ಮಹಾಸಾಂಘಿಕರು ಮತ್ತು ಅವರ ಉಪಪಂಥಗಳು ತಮ್ಮ ನೆಲೆಯನ್ನು ಮಾಡಿಕೊಂಡರು. ಆದರೆ ಶಾತವಾಹನ ದೊರೆಗಳ ಪೋಷಣೆ ಅವುಗಳಿಗೆ ಮಾತ್ರವಲ್ಲದೆ, ಸಾಂಪ್ರದಾಯಿಕ ಥೇರವಾದಿಗಳಿಗೂ ಅವರ ಉಪಪಂಥಗಳಿಗೂ ಲಭಿಸಿತು. ಉತ್ತರದಲ್ಲಿ ಮಥುರಾ ಮತ್ತು ಗಾಂಧಾರದ ಸುತ್ತಮುತ್ತ ಸಾಂಪ್ರದಾಯಿಕರ ಮುಖ್ಯ ಶಾಖೆಯೊಂದು ಸರ್ವಾರ್ಥಿವಾದಿಗಳು ಎಂದು ಪ್ರಖ್ಯಾತವಾಗಿ ಪ್ರಭಾವಶಾಲಿಯಾಯಿತು. ಇಂಡೋಗ್ರೀಕರು, ಇಂಡೋಸಿಥಿಯನರು, ಅವರಲ್ಲೂ ಮುಖ್ಯವಾಗಿ ದೊರೆ ಮೀನಾಂಡರ್ ಮತ್ತು ಚಕ್ರವರ್ತಿ ಕನಿಷ್ಕ– ಮುಂತಾದವರು ಆ ಪಂಥವನ್ನು ವಿಶೇಷವಾಗಿ ಪ್ರೋತ್ಸಾಹಿಸಿದರು. ಕನಿಷ್ಕನ ಆಶ್ರಯದಲ್ಲಿ ಸರ್ವಾರ್ಥಿವಾದಿಗಳು ಪ್ರಬಲರಾಗಿ ಬೆಳೆದು ಥೇರವಾದಿಗಳನ್ನೂ ಮೂಲೆಗುಂಪು ಮಾಡಿದರು.

ಕ್ರಿ. ಶ. ಒಂದು ಮತ್ತು ಎರಡನೆಯ ಶತಮಾನಗಳಲ್ಲಿ ಬೌದ್ಧ ಧರ್ಮವು ವಿಹಾರಗಳಿಗೆ ಮಾತ್ರ ಸೀಮಿತವಾಗದೆ, ಜನಸಮೂಹಕ್ಕೆ ಒಯ್ಯಲ್ಪಟ್ಟಿತು. ಜಾಗತಿಕ ಮತ್ತು ಅವದಾನ ಸಾಹಿತ್ಯ ಅದರ ಜನಪ್ರಿಯತೆಗೆ ಕಾರಣವಾಯಿತು. ಅದರ ನೈತಿಕ ಉಪದೇಶಗಳು ಗೃಹಸ್ಥರಿಗೆ ಪ್ರಿಯವಾದವು. ಅವರ ಮುಂದೆ ಬೋಧಿಸತ್ವಾದರ್ಶವನ್ನು ಇಡಲಾಯಿತು.

ಅವರು ಸ್ತೂಪ, ವಿಹಾರ – ಮುಂತಾದವುಗಳನ್ನು ನಿರ್ಮಿಸಿ ತಮ್ಮ ಶ್ರದ್ಧಾಭಕ್ತಿಗಳನ್ನು ವ್ಯಕ್ತಪಡಿಸಿದರು. ಈ ವಿಹಾರಗಳಲ್ಲಿ ಸಾವಿರಾರು ಜನ ಭಿಕ್ಷು-ಭಿಕ್ಷುಣಿಯರು ಇದ್ದು ಅವರ ಅಧ್ಯಯನ ಮತ್ತು ಆಧ್ಯಾತ್ಮಿಕ ಪ್ರಗತಿಗೆ ಅವಕಾಶ ಕಲ್ಪಿಸಲಾಯಿತು. ಕೆಲವು ವಿಹಾರಗಳಂತೂ ಭಾರತೀಯರು ಮತ್ತು ವಿದೇಶೀಯರಿಂದ ತುಂಬಿತುಳುಕುತ್ತಿದ್ದು ವಿದ್ಯಾಪೀಠಗಳಂತಿದ್ದವು. ಇವು ನಾಗಾರ್ಜುನ, ಅಸಂಗ, ವಸುಬಂಧು, ದಿಙ್ನಾಗ ಮುಂತಾದವರ ಅನೇಕ ಬ್ರಾಹ್ಮಣ ಕುಟುಂಬಗಳನ್ನು ಆಕರ್ಷಿಸಿದವು. ಇವರು ಬೌದ್ಧಧರ್ಮದ ಧ್ವಜಸ್ತಂಭವನ್ನು ದೀರ್ಘಕಾಲ ಎತ್ತಿಹಿಡಿದರು. ಗುಪ್ತಯುಗದಲ್ಲಿ (ಕ್ರಿ. ಶ. ३२೦ ರಿಂದ ೬೫೦) ಯುದ್ಧಗುಪ್ತ ಮತ್ತು ಬಾಲಾದಿತ್ಯರನ್ನು ಬಿಟ್ಟರೆ ಬೌದ್ಧ ಧರ್ಮಕ್ಕೆ ನೇರವಾದ ರಾಜಾಶ್ರಯ ಸಿಗಲಿಲ್ಲ. ಆದರೆ ಈ ಯುಗದಲ್ಲಿ ಮಹಾಯಾನ ಪಂಥ ಪೂರ್ಣವಾಗಿ ಬೆಳೆದು ಮಾಧ್ಯಮಿಕ ಮತ್ತು ಯೋಗಾಚಾರ ಎಂಬ ಎರಡೂ ಶಾಖೆಗಳು ಸಮೃದ್ಧಿ ಹೊಂದಿದವು. ಫಾಹಿಯಾನ್ (ಕ್ರಿ. ಶ. ३೯೯-೪೧೪) ಮತ್ತು ಹ್ಯೂಯೆನ್‌ತ್ಸಾಂಗ್ (ಕ್ರಿ. ಶ. ೬೨೯ – ೬೪೫) ಇವರ ಬರಹಗಳಿಂದ ಎರಡು ಅಂಶಗಳನ್ನು ಗುರುತಿಸಬಹುದು. ಫಾಹಿಯಾನ್ ಕಂಡದ್ದು ಬೌದ್ಧಧರ್ಮದ ಅಭಿವೃದ್ಧಿಯನ್ನಾದರೆ ಹ್ಯೂಯೆನ್‌ತ್ಸಾಂಗ್ ಕಂಡದ್ದು ವಿಹಾರಗಳ ತ್ಯಾಗ ಮತ್ತು ಬೌದ್ಧೇತರ ದೇವಾಲಯಗಳ ಹೆಚ್ಚಳದಿಂದ ಕಂಡುಬಂದ ಬೌದ್ಧಧರ್ಮದ ಅವನತಿಯನ್ನು. ಆರನೆಯ ಶತಮಾನದ ತರುವಾಯ ಬೌದ್ಧಧರ್ಮ ತನ್ನ ನೆಲದಲ್ಲಿ ತನ್ನ ಪ್ರಭಾವವನ್ನು ಕಳೆದುಕೊಂಡು ಹೊರನಾಡುಗಳಲ್ಲಿ ಅಸದಳವಾದ ಪ್ರಭಾವವನ್ನು ಬೀರತೊಡಗಿತ್ತು. ಹರ್ಷವರ್ಧನನ ಆಶ್ರಯ ದೊರೆತರೂ ಬೌದ್ಧಧರ್ಮ ತನ್ನ ಸತ್ವವನ್ನು ಕಳೆದುಕೊಂಡು ಹೆಚ್ಚು ಪ್ರತಿಭಾಶಾಲಿಗಳನ್ನು ಆಕರ್ಷಿಸಲು ಅಸಮರ್ಥವಾಯಿತು.

ಕ್ರಿ. ಶ. ಎಂಟನೆಯ ಶತಮಾನದ ಹೊತ್ತಿಗೆ ಕಂಬಲಿ, ಇಂದ್ರಭೂತಿ, ಪದ್ಮವಜ್ರ ಮತ್ತು ಲಲಿತವಜ್ರ – ಮುಂತಾದವರು ತಂತ್ರಯಾನ ಅಥವಾ ವಜ್ರಯಾನವನ್ನು ಬಳಕೆಗೆ ತಂದರು. ಇದು ಮೋಕ್ಷಸಾಧನೆಗೆ ಬೇರೆಯದೇ ಸಾಧನಾಮಾರ್ಗವನ್ನು ವಿಧಿಸಿತು. ಕ್ರಿಯಾ. ಚರ್ಯಾ, ಮುದ್ರಾ. ಮಂಡಲ, ಮಂತ್ರ, ಶೀಲ. ವ್ರತ, ಶೌಚಾಚಾರ. ನಿಯಮ, ಹೋಮ. ಜಪ, ಧ್ಯಾನ ಮತ್ತು ಹಠಯೋಗ– ಹೀಗೆ ಅಲ್ಲಿ ವಿಧಿಸಿರುವ ಕರ್ತವ್ಯ ಮಾಲಿಕೆ ರಹಸ್ಯಮಯವಾದುದು. ಸಾಧಕನಿಗೆ ಹೆಜ್ಜೆ ಹೆಜ್ಜೆಗೂ ಗುರುವಿನ ಅಗತ್ಯವಿದೆ. ಈ ರಹಸ್ಯ ಸಂಪ್ರದಾಯ ಭಾರತದ ವಾಯುವ್ಯ ಭಾಗದಲ್ಲಿ ಚೆನ್ನಾಗಿ ಪಸರಿಸಿ. ಬಂಗಾಳ, ಓರಿಸಾಗಳಲ್ಲಿ ಪಾಲವಂಶದವರಿಂದ, ಮುಖ್ಯವಾಗಿ ದೇವಪಾಲ (ಕ್ರಿ. ಶ. ೮೧೦ ರಿಂದ ೮೫೦) ನಿಂದ ಪೋಷಿಸಲ್ಪಟ್ಟಿತು. ಆದರೆ ಸತ್ಯಸಾಧಕರಿಗಿಂತ ಹೆಚ್ಚಾಗಿ ಕಪಟಿಗಳು ಈ ರಹಸ್ಯಸಂಪ್ರದಾಯವನ್ನು ಜನಸಾಮಾನ್ಯರ ಕಣ್ಣಮುಂದೆಯೇ ಅಶುದ್ಧಗೊಳಿಸಿದರು. ಪರಿಣಾಮವಾಗಿ ಬೌದ್ಧಮತ ಒಂದು ಧರ್ಮವಾಗಿ ಭಾರತೀಯರ ದೃಷ್ಟಿಯಲ್ಲಿ ಕೀಳಾಗಿ ಕಂಡಿತು.[೧]

---

೧. ಯುಗಯಾತ್ರೀ ಭಾರತೀಯ ಸಂಸ್ಕೃತಿ. ಸಂಪುಟ-೧. (ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ. ಮೈಸೂರು ೧೯೭೦) ಪುಟ x / vi, x / vii, x / viii.

## ಬೌದ್ಧ ಧರ್ಮ ಮತ್ತು ಅದ್ವೈತ ವೇದಾಂತ

ಮಹಾಯಾನ ಪಂಥಕ್ಕೂ ಶಂಕರರ ಪಂಥಕ್ಕೂ ಇರುವ ಸಂಬಂಧ ಮತ್ತು ಹೋಲಿಕೆಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಶಂಕರರ ಮಾಯಾಸಿದ್ಧಾಂತ ಮಾಧ್ಯಮಿಕರ ಸಿದ್ಧಾಂತದೊಂದಿಗೆ ಒಪ್ಪಿಗೆಯನ್ನೂ ಸಂಬಂಧವನ್ನೂ ತೋರಿಸುತ್ತದೆ. ಶಂಕರಾಚಾರ್ಯರು ಬೌದ್ಧ ತತ್ವಗಳನ್ನೇ ಬೇರೆ ರೀತಿಯಲ್ಲಿ ಉಪನಿಷತ್ ಮಂತ್ರಗಳನ್ನು ವಿರೂಪಗೊಳಿಸಿ ಮರೆಮಾಡಿ ಹೇಳಿದರು ಎಂಬ ಆಪಾದನೆಗೆ ಶ್ರೀಹರ್ಷನು ಚುರುಕಾಗಿ ಉತ್ತರಿಸಿ ಅದು ಧಾರಾಳವಾಗಿ ಹೇಳಿದ ಒಂದು ಸುಳ್ಳು ಅಥವಾ ಒಂದು ಶ್ರೇಷ್ಠ ಸಿದ್ಧಾಂತದ ತಪ್ಪು ತಿಳುವಳಿಕೆ ಎಂದು ಹೇಳುತ್ತಾನೆ. ಇಲ್ಲಿ ಶ್ರೀಹರ್ಷ ಮತ್ತಿತರರ ಹೇಳಿಕೆ ನ್ಯಾಯಯುತವಾಗಿದೆ. ಸತ್ವಪೂರ್ಣವಾಗಿದೆ.

ಶಾಂಕರ ವೇದಾಂತಕ್ಕೂ ಮಹಾಯಾನ ತತ್ವಕ್ಕೂ ಮೌಲಿಕ ವ್ಯತ್ಯಾಸವಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಭೌತಿಕ ಅನೇಕತೆಯನ್ನು ಪರಿಶೀಲಿಸಿದರೆ ಎರಡಕ್ಕೂ ಹೋಲಿಕೆಯಿದೆ. ಈ ಅನೇಕತೆಯ ಮಿಥ್ಯೆಯನ್ನು ಉಪನಿಷತ್ತುಗಳು ನಿಸ್ಸಂದಿಗ್ಧವಾದ ಮಾತುಗಳಲ್ಲಿ ಸಮರ್ಥಿಸುವುದಿಲ್ಲ. ಶಂಕರರು ಈ ಜಗತ್ತನ್ನು ಮಾಯೆಯ ಸೃಷ್ಟಿ ಎಂದು ಬಣ್ಣಿಸಿದರು. ಮಾಯೆ ಎನ್ನುವುದು ಸತ್ಯ ಎಂದೋ ಮಿಥ್ಯೆ ಎಂದೋ ವಿವರಕ್ಕೆ ಎಟುಕದ ತತ್ವ. ವ್ಯಕ್ತಿ ಮತ್ತು ವಸ್ತುಗಳ ಅನೇಕತೆಯ ಮಿಥ್ಯೆಯನ್ನು ತೋರಿಸಿದ ತಾರ್ಕಿಕ ಉಪಕರಣಗಳು ಮಾಧ್ಯಮಿಕರ ಬಳಿ ಇದ್ದವು. ಶಂಕರರು ಚರ್ಚೆಯ ಈ ಉಪಕರಣಗಳನ್ನು ಬಳಸಿಕೊಂಡರು. ತರುವಾಯ ಬಂದ ಅದ್ವೈತಿಗಳು ಈ ತರ್ಕವನ್ನು ಅದರ ಪರಿಪೂರ್ಣತೆಯ ಶಿಖರಕ್ಕೊಯ್ದರು. ಅವರು ವಸ್ತುಸತ್ತಾವಾದಿಗಳ ಮೂಢನಂಬಿಕೆಗಳಲ್ಲಿ ಮತ್ತು ಅಭಿಪ್ರಾಯಗಳಲ್ಲಿ ಹೊಂದಿಕೆಯಾಗದ ವಿಚಾರಗಳನ್ನೂ ವೈರುಧ್ಯವನ್ನೂ ಅನ್ವಯಿಸಿ ತೋರಿಸಿದರು. ವೇದಾಂತ ಚರ್ಚೆಯಲ್ಲಿ ಕಂಡುಬಂದ ಮುಂದಿನ ಬೆಳವಣಿಗೆಗಳು ತತ್ವ ಮತ್ತು ಔಚಿತ್ಯದ ದೃಷ್ಟಿಯಿಂದ ಮಾಧ್ಯಮಿಕ ವಾದಗಳನ್ನು ಹಿಂದಕ್ಕೆ ತಳ್ಳಿ ಬಹುದೂರ ಸಾಗಿವೆ. ಇದು ವಸ್ತುಸತ್ತಾವಾದಿಗಳು ಕೊಟ್ಟ ಸೂತ್ರಗಳು ಮತ್ತು ತರ್ಕವೆಂಬ ಉಪಕರಣದಲ್ಲಿ ವೇದಾಂತಿಗಳು ಕೈಗೊಂಡ ಪರಿಷ್ಕರಣಗಳ ಸಹಜ ಪರಿಣಾಮ.

ಶಂಕರರು ತಮ್ಮ ಅದ್ವೈತ ತತ್ವಕ್ಕಾಗಿ ವಸುಬಂಧು ಅಥವಾ ಅಶ್ವಘೋಷರಿಗೆ ಋಣಿ ಎಂದರೆ ತಪ್ಪಾಗುತ್ತದೆ. ಬೌದ್ಧ ವಿದ್ವಾಂಸರು ತಮ್ಮ ಸ್ಫೂರ್ತಿಯನ್ನು ಉಪನಿಷತ್ತುಗಳಿಂದ ಪಡೆದರು. ಬುದ್ಧನ ಸಿದ್ಧಾಂತಗಳನ್ನು ಅದ್ವೈತಪರವಾಗಿ ವ್ಯಾಖ್ಯಾನಿಸುವಾಗ ಶಂಕರರು ಸ್ಫೂರ್ತಿಯನ್ನು ಉಪನಿಷತ್ತುಗಳಿಂದ ನೇರವಾಗಿ ಪಡೆದರು. ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲು ನೇತಿತರ್ಕವನ್ನು ರೂಪಿಸಿದರು. ಈ ನೇತಿವಿಚಾರದಲ್ಲಿ ಮಾಧ್ಯಮಿಕ ಚರ್ಚೆಗಳನ್ನು ಬಳಸಿಕೊಂಡು ತಮ್ಮ ತಾರ್ಕಿಕ ನಿಲುವನ್ನು ಸಮರ್ಥಿಸಿಕೊಂಡರು. ಇದನ್ನೇ ಮೊದಲು ಮಾಂಡೂಕ್ಯಕಾರಿಕಾದಲ್ಲಿ ಗೌಡಪಾದರೂ ಮಾಡಿದ್ದರು. ಶಂಕರರು ಈ ಮಹಾಮತಿಯ ಹೆಜ್ಜೆಯನ್ನನುಸರಿಸಿ

ಮುಂದುವರಿದರು. ಶಂಕರರ ಗುರುಗಳಾದ ಗೋವಿಂದಪಾದರು ಗೌಡಪಾದರ ಶಿಷ್ಯರಾಗಿದ್ದರೆಂದು ಸಂಪ್ರದಾಯ ತಿಳಿಸುತ್ತದೆ.[೨]

ಇತಿಹಾಸಕಾರರ ಸೃಷ್ಟಿಯಲ್ಲಿ "ಗೌಡಪಾದರ ಮನೋಭಾವ ಹೊಂದಾಣಿಕೆಯದು; ಅನುಕಂಪೆಯದು; ಸ್ನೇಹಪರವಾದದ್ದು. ಅವರು ವೇದಾಂತಿಗೂ ಬೌದ್ಧನಿಗೂ ಮರುಮೈತ್ರಿಯನ್ನು ಸೂಚಿಸಿದರು. ವಿವರದಲ್ಲೂ ಮೂಲಭೂತವಾದ ನಿಲುವಿನಲ್ಲೂ ಇಬ್ಬರಿಗೂ ವ್ಯತ್ಯಾಸವಿಲ್ಲವೆಂದೂ ಜಗಳಕ್ಕೆ ಕಾರಣವೇ ಇಲ್ಲವೆಂದೂ ಅವರು ತೋರಿಸಿಕೊಟ್ಟರು. ಆದರೆ ಬೌದ್ಧರನ್ನು ಒಲಿಸುವ ಪ್ರಯತ್ನದಲ್ಲಿ ಅವರು ಅಸಮರ್ಥರಾದರು ಎಂಬುದು ಸ್ಪಷ್ಟವಾಗಿಯೇ ಇದೆ. ಬೌದ್ಧರ ಬಗೆಗೆ ಶಂಕರಾಚಾರ್ಯರ ಹಗೆಯ ಮನೋಭಾವವು ಬಹುಶಃ ಗೌಡಪಾದರ ಈ ಸೋಲಿನಿಂದಲೂ ಬೌದ್ಧ ಸಂಸ್ಥೆಯ ಅಸ್ನೇಹಮನೋಭಾವದಿಂದಲೂ ಪ್ರಭಾವಿತವಾಗಿರಬೇಕು. ಬೌದ್ಧರು ವೈದಿಕ ಸಂಪ್ರದಾಯವನ್ನು ಕುರಿತು ಬಲವಾದ ವೈರವುಳ್ಳವರಾಗಿದ್ದರೆಂದೂ ರಾಜಿಯಾಗುವ ಸಂಭವ ಎಳ್ಳಷ್ಟೂ ಇಲ್ಲವೆಂದೂ ಅವರು ಅರ್ಥಮಾಡಿಕೊಂಡರು. ಬೌದ್ಧರು ಜಗಳಗಂಟ ಸ್ವಭಾವದವರು. ಆದ್ದರಿಂದ ಶಂಕರಾಚಾರ್ಯರೂ ಆಹ್ವಾನವನ್ನು ಅಂಗೀಕರಿಸಿ, ವೈದಿಕ ಸಂಪ್ರದಾಯವನ್ನು ಕುರಿತು ಬೌದ್ಧರು ಹೊಂದಿದ್ದ ವೈರಕ್ಕೆದುರಾಗಿ ಅವಿರತವಾದ ಯುದ್ಧವನ್ನೇ ಹೂಡಿದರು. ಮುಂದಿನ ಸಂಪ್ರದಾಯವನ್ನು ನಾವು ನಂಬುವುದಾದರೆ ಶಂಕರಾಚಾರ್ಯರು ಜಯಗಳಿಸಿದರು. ವೈದಿಕ ಶಾಸ್ತ್ರಗ್ರಂಥಗಳಲ್ಲಿ ಜನರ ಶ್ರದ್ಧೆಯನ್ನು ಮತ್ತೆ ಸ್ಥಾಪಿಸಿದರು ಎಂದು ಒಪ್ಪಬೇಕಾಗುತ್ತದೆ."[೩]

## ಶಂಕರರು ಮತ್ತು ಬೌದ್ಧ ದರ್ಶನ

ಬ್ರಹ್ಮಸೂತ್ರಭಾಷ್ಯದ ಎರಡನೆಯ ಅಧ್ಯಾಯದ ಎರಡನೆಯ ಪಾದದ ಹದಿನೆಂಟನೆಯ ಸೂತ್ರದಿಂದ ಆರಂಭಿಸಿ ಮೂವತ್ತೆರಡನೆಯ ಸೂತ್ರದ ತನಕ ಶ್ರೀಶಂಕರರು ಬೌದ್ಧ ದರ್ಶನವನ್ನು ಪ್ರತ್ಯಾಖ್ಯಾನ ಮಾಡಿ ಸ್ವಸಿದ್ಧಾಂತವನ್ನು ಮಂಡಿಸಿದ್ದಾರೆ. ಪ್ರಾಚೀನ ವೈಶೇಷಿಕರು ಒಂದೊಮ್ಮೆ ಪ್ರತ್ಯಕ್ಷ ಮತ್ತು ಅನುಮಾನ– ಎರಡೇ ಪ್ರಮಾಣ ಗಳನ್ನಂಗೀಕರಿಸಿದ್ದರಿಂದ, ಅರ್ಧಬೌದ್ಧ(ಅರ್ಧವೈನಾಶಿಕ)ರೆಂದು ಕರೆಸಿಕೊಂಡರು. ಅರ್ಧವೈನಾಶಿಕರನ್ನು ಖಂಡಿಸುತ್ತ ಸರ್ವವೈನಾಶಿಕರತ್ತ ಗುರಿಯಿಟ್ಟ ಶಂಕರರು– "ವೈನಾಶಿಕತ್ವಸಾಮ್ಯಾತ್ ಸರ್ವವೈನಾಶಿಕರಾದ್ಧಾಂತೋ ನಿತರಾಮುಪೇಕ್ಷಿತವ್ಯ ಇತಿ" ಎನ್ನುತ್ತ ಬೌದ್ಧ ದರ್ಶನವನ್ನು 'ಸರ್ವವೈನಾಶಿಕ ರಾದ್ಧಾಂತ'ವೆಂದು ಹೆಸರಿಸುತ್ತಾರೆ. ಅದು ಬುದ್ಧಿಭೇದದಿಂದ ಅಥವಾ ಶಿಷ್ಯಭೇದದಿಂದ ಬಹುಪ್ರಕಾರವಾಗಿತ್ತೆಂದೂ ಅದರಲ್ಲಿ ಮೂರು ಮುಖ್ಯವಾದವುಗಳು ಪ್ರಚಲಿತವಾಗಿದ್ದವೆಂದೂ ತಿಳಿದುಬರುತ್ತದೆ. "ಸ ಚ

---

೨. ಅದೇ– ಪುಟ ೪೪೪.

೩. ಅದೇ– ಪುಟ ೪೪೪-೪೪೫.

ಬಹುಪ್ರಕಾರಃ ಪ್ರತಿಪತ್ತಿಭೇದಾದ್ವಿನೇಯಭೇದಾದ್ವಾ. ತತ್ರೈತೇ ತಯೋ ವಾದಿನೋ ಭವಂತಿ– ಕೇಚಿತ್ ಸರ್ವಾಸ್ತಿತ್ವವಾದಿನಃ, ಕೇಚಿತ್ ವಿಜ್ಞಾನಾಸ್ತಿತ್ವಮಾತ್ರ ವಾದಿನಃ, ಅನ್ಯೇ ಪುನಃ ಸರ್ವಶೂನ್ಯತ್ವವಾದಿನ ಇತಿ." ಹದಿನೆಂಟನೆಯ ಸೂತ್ರದಿಂದ ಇಪ್ಪತ್ತೇಳನೆಯ ಸೂತ್ರದ ವರೆಗೆ ಸರ್ವಾಸ್ತಿತ್ವವಾದಿಗಳನ್ನು ಖಂಡಿಸುತ್ತಾರೆ. ಬಾಹ್ಯಾಂತರವಸ್ತುಗಳನ್ನೂ, ಭೂತಭೌತಿಕಗಳನ್ನೂ, ಚಿತ್ತ ಮತ್ತು ಚಿತ್ತಕ್ಕೆ ಸಂಬಂಧಿಸಿದ್ದನ್ನೂ ಒಪ್ಪಿಕೊಳ್ಳುವವರೇ ಸರ್ವಾಸ್ತಿತ್ವವಾದಿಗಳು. ಅಥವಾ ಸರ್ವವಸ್ತುಗಳ ಅಸ್ತಿತ್ವವನ್ನು ಒಪ್ಪಿಕೊಳ್ಳುವವರನ್ನು ಸರ್ವಾಸ್ತಿವಾದಿಗಳೆಂದೂ, ಜ್ಞಾನದ ಅಸ್ತಿತ್ವವನ್ನು ಮಾತ್ರ ಒಪ್ಪಿಕೊಳ್ಳುವವರನ್ನು ವಿಜ್ಞಾನವಾದಿಗಳೆಂದೂ, ಸರ್ವವೂ ಶೂನ್ಯವು ಎನ್ನುವವರನ್ನು ಶೂನ್ಯವಾದಿಗಳೆಂದೂ ಸರಳೀಕರಿಸಬಹುದು. ಶೂನ್ಯವಾದಿಗಳಿಗೆ ಮಾಧ್ಯಮಿಕರೆಂದು ಹೆಸರು; ವಿಜ್ಞಾನವಾದಿಗಳಿಗೆ ಯೋಗಾಚಾರರೆಂದು ಹೆಸರು. ಬಾಹ್ಯಾರ್ಥ ಪ್ರತ್ಯಕ್ಷವಾದದ ಸಮರ್ಥಕರಾದ ವೈಭಾಷಿಕರೂ, ಬಾಹ್ಯಾರ್ಥಾನುಮೇಯವಾದದ ಸಮರ್ಥಕರಾದ ಸೌತ್ರಾಂತಿಕರೂ ಒಟ್ಟುಸೇರಿ ಸರ್ವಾಸ್ತಿವಾದಿಗಳೆನಿಸುತ್ತಾರೆ.

## ಸರ್ವಾಸ್ತಿವಾದಿಗಳು ಮತ್ತು ಶಂಕರರು

"ಸಬ್ಬಂ ಅತ್ಥಿ" (ಎಲ್ಲವೂ ಇದೆ) ಎನ್ನುವ ಸರ್ವಾಸ್ತಿವಾದ ಥೇರವಾದೀ ಪಂಥಕ್ಕೆ ಹತ್ತಿರವಾದದ್ದು. ಇವರಿಗೆ ಈ ಬಹಿಃಪ್ರಪಂಚವೂ ಅದರ ಧರ್ಮಗಳೂ ನಿಜವಾದ ಅಸ್ತಿತ್ವವನ್ನು ಪಡೆದಿರುವಂಥವು. ಎಲ್ಲವೂ ಈ ಹಿಂದೆಯೂ ಇತ್ತು, ಇಂದೂ ಇದೆ, ಮುಂದೆಯೂ ಇರುತ್ತದೆ ಎಂಬ ನಂಬಿಕೆ ಅವರದು. ವಸುಬಂಧು ಸರ್ವಾಸ್ತಿವಾದದ ಸಮರ್ಥಕ. ಮುಂದೆ ವೈಭಾಷಿಕರು ಸರ್ವಾಸ್ತಿವಾದವನ್ನು ಮುಂದುವರಿಸಿದರು. ಯವಕಾಮಿಸೋಗೆನ್ ಎಂಬಾತ ಇದನ್ನು ಸರ್ವಾಸ್ತಿವಾದಿಗಳ ಶಾಖೆಯೆಂದೇ ಹೇಳುತ್ತಾನೆ. ವಸುಬಂಧು ಒಬ್ಬ ವೈಭಾಷಿಕ. ಮೂಲ ಅಭಿಧರ್ಮ ಗ್ರಂಥಗಳ ವ್ಯಾಖ್ಯಾನವಾದ "ವಿಭಾಷಾ" ಎಂಬುದರಿಂದ "ವೈಭಾಷಿಕ" ಪದ ಹುಟ್ಟಿದೆ. ಈತನ ವ್ಯಾಖ್ಯಾನಕಾರನಾದ ಯಶೋಮಿತ್ರ ಸೌತ್ರಾಂತಿಕ. ಸೌತ್ರಾಂತಿಕಮತದ ಆದ್ಯಾಚಾರ್ಯ ಕುಮಾರಲಬ್ಧ. ಆತ ನಾಗಾರ್ಜುನನ ಸಮಕಾಲೀನನಾಗಿದ್ದ. ಬುದ್ಧನ ಉಪದೇಶಗಳನ್ನು ಅಭಿಧಮ್ಮದಲ್ಲಿ ಕಾಣದೇ, ಪಿಟಿಕಸುತ್ತದ ಸೂತ್ರಗಳಲ್ಲಿ ಕಂಡವರೇ ಸೌತ್ರಾಂತಿಕರೆನಿಸಿಕೊಂಡರು.

ಶಂಕರರ ದೃಷ್ಟಿಯಲ್ಲಿ ಸರ್ವಾಸ್ತಿವಾದಿಗಳ ಪ್ರಕಾರ ಭೂತವೆಂದರೆ ಪೃಥ್ವೀ, ಧಾತು ಮೊದಲಾದವು. ಭೌತಿಕವೆಂದರೆ ರೂಪಾದಿಗಳು ಮತ್ತು ಚಕ್ಷುಸ್ಸೇ ಮೊದಲಾದ ಇಂದ್ರಿಯಗಳು, ಕಠಿಣ, ಸ್ನಿಗ್ಧ, ಉಷ್ಣ, ಚಲನಸ್ವಭಾವದ ಪೃಥಿವ್ಯಾದಿ ಪರಮಾಣುಗಳು ಸೇರಿಕೊಂಡು ಪೃಥ್ವಿವ್ಯಾದಿಗಳಾಗುತ್ತವೆ. ರೂಪ, ವಿಜ್ಞಾನ, ವೇದನಾ, ಸಂಜ್ಞಾ, ಸಂಸ್ಕಾರ– ಎಂಬ ಹೆಸರಿನ ಪಂಚಸ್ಕಂಧಗಳು ಸರ್ವವ್ಯವಹಾರಕ್ಕೂ ಆಸ್ಪದವಾಗಿವೆ. ಅಣಿಹೇತುಕವಾದ ಭೂತಭೌತಿಕ ಸಮುದಾಯವಾಗಲಿ, ಸ್ಕಂಧಹೇತುಕವಾದ ಪಂಚಸ್ಕಂಧಿಯಾಗಲಿ ಸಮುದಾಯಭಾವವನ್ನೇ ಹೊಂದುವುದಿಲ್ಲ. ಸಮುದಾಯಿಗಳು

ಅಚೇತನವಾಗಿರುವುದರಿಂದ, ಚಿತ್ತಾಭಿಜ್ವಲನವು ಸಮುದಾಯ ಸಿದ್ಧಿಗೆ ಅಧೀನವಾಗಿರುವುದರಿಂದ, ಪುನಃ ಭಿನ್ನವೂ ಚೇತನವೂ ಆದ ಭೋಕ್ತೃವಾಗಲಿ, ಸ್ಥಿರನಾದ ಪ್ರಶಾಸಿತೃವಾಗಲಿ ಅವುಗಳನ್ನು ಸೇರಿಸುವನೆಂದು ವೈನಾಶಿಕರು ಒಪ್ಪಿಕೊಳ್ಳದಿರುವುದರಿಂದ ಯಾವುದನ್ನೂ ಅಪೇಕ್ಷಿಸದೆ ಪ್ರವೃತ್ತಿಯುಂಟಾದರೆ ಅಂಥ ಪ್ರವೃತ್ತಿಯು ನಿಲ್ಲುವುದಿಲ್ಲ. ಜ್ಞಾನಕ್ಕಿಂತ ಅನ್ಯವೂ ಅಲ್ಲದ ಅನನ್ಯವೂ ಅಲ್ಲದ ಆಶಯವು ಸಮುದಾಯಕ್ಕೆ ಕಾರಣವಲ್ಲ. ಆಶಯವು ಕ್ಷಣಿಕವೂ ನಿರ್ವ್ಯಾಪಾರವೂ ಆಗಿರುವುದರಿಂದ ಅದಕ್ಕೆ ಪ್ರವೃತ್ತಿಯುಂಟಾಗುವುದಿಲ್ಲ. ಆದ್ದರಿಂದ ಸಮುದಾಯ(ಸಂಘಾತ)ವು ಹೊಂದುವುದಿಲ್ಲ. ಸಮುದಾಯವೂ ಹೊಂದದಿದ್ದರೆ ಅದನ್ನಾಶ್ರಯಿಸಿದ ಲೋಕಯಾತ್ರೆಯೂ ಲುಪ್ತವಾಗುತ್ತದೆ.

"ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್" (೨-೨-೧೯) – ಎಂಬ ಬ್ರಹ್ಮಸೂತ್ರವನ್ನು ವ್ಯಾಖ್ಯಾನ ಮಾಡುತ್ತ ಶಂಕರರು ಹೀಗೆ ಹೇಳುತ್ತಾರೆ– ಭೋಕ್ತೃವೂ ಅಥವಾ ಪ್ರಶಾಸಿತೃವೂ ಆದ ಸ್ಥಿರನಾದ ಚೇತನನು ಇಲ್ಲದಿದ್ದರೂ ಅವಿದ್ಯೆ, ಸಂಸ್ಕಾರ, ವಿಜ್ಞಾನ, ನಾಮ, ರೂಪ, ಷಡಾಯತನ, ಸ್ಪರ್ಶ, ವೇದನೆ, ತೃಷ್ಣೆ, ಉಪಾದಾನ, ಭವ, ಜಾತಿ, ಜರಾ, ಮರಣ, ಶೋಕ, ಪರಿವೇದನೆ, ದುಃಖ, ದೌರ್ಮನಸ್ಯ– ಇವುಗಳು ಒಂದಕ್ಕೊಂದು ಕಾರಣವಾಗಿರುವುದರಿಂದ ಲೋಕಯಾತ್ರೆ ನಡೆಯಬಹುದು ಎಂದು ಬೌದ್ಧರು ಹೇಳಿದರೆ ಅದು ಸರಿಯಲ್ಲ. ಅವು ಉತ್ಪತ್ತಿಗೆ ಮಾತ್ರ ನಿಮಿತ್ತವೇ ಹೊರತು ಸಂಘಾತಕ್ಕಲ್ಲ. ಅವಿದ್ಯಾದಿಗಳು ಸಂಘಾತವನ್ನು ಅಪೇಕ್ಷಿಸದೆ ಸ್ವರೂಪವನ್ನು ಹೊಂದುವುದಿಲ್ಲವಾದುದರಿಂದ ಸಂಘಾತವನ್ನು ಅಪೇಕ್ಷಿಸುತ್ತವೆ ಎಂಬುದು ಬೌದ್ಧರ ಅಭಿಪ್ರಾಯವಾದರೆ ಆಗ ಸಂಘಾತಕ್ಕೆ ನಿಮಿತ್ತವನ್ನು ಹೇಳಬೇಕಾಗುತ್ತದೆ. ಆ ನಿಮಿತ್ತವು ನಿತ್ಯವಾದ ಅಣೆಗಳನ್ನೂ ಅದೃಷ್ಟಕ್ಕೆ ಆಶ್ರಯವಾಗಿರುವ ಭೋಕ್ತೃಗಳನ್ನು ಒಪ್ಪಿದ್ದರೂ ಸಂಭವಿಸುವುದಿಲ್ಲ. ಇನ್ನು ಅಣೆಗಳು ಕ್ಷಣಿಕವೂ ಭೋಕ್ತೃರಹಿತವೂ ಆಗಿರುವವೆಂದು ಒಪ್ಪಿದಲ್ಲಿ ಆ ನಿಮಿತ್ತವು ಉಂಟಾಗುವುದಿಲ್ಲವೆಂದು ಹೇಳುವುದೇನಿದೆ ? ಅವಿದ್ಯಾದಿಗಳೇ ಸಂಘಾತಕ್ಕೆ ನಿಮಿತ್ತವೆಂಬುದು ಬೌದ್ಧನ ಅಭಿಪ್ರಾಯವಾದರೆ ಅದನ್ನೇ ಆಶ್ರಯಿಸಿ ಸ್ವರೂಪವನ್ನು ಪಡೆದುಕೊಳ್ಳುವ ಅವಿದ್ಯಾದಿಗಳು ಅದಕ್ಕೇ ಹೇಗೆ ತಾನೆ ನಿಮಿತ್ತವಾದಾವು ? ಅಥವಾ ಸಂಘಾತಗಳೇ ಅನಾದಿಯಾದ ಸಂಸಾರದಲ್ಲಿ ಸಂತತವಾಗಿರುತ್ತವೆ, ಅವನ್ನಾಶ್ರಯಿಸಿ ಅವಿದ್ಯಾದಿಗಳು ಇರುತ್ತವೆ ಎಂಬುದು ಬೌದ್ಧನ ಅಭಿಪ್ರಾಯವಾದರೆ ಆಗ ಒಂದು ಸಂಘಾತದಿಂದ ಮತ್ತೊಂದು ಸಂಘಾತವು ಹುಟ್ಟುವಾಗ ಅಂಥ ಸಂಘಾತವೇ ಹುಟ್ಟುವುದೋ ಅಥವಾ ಯಾವ ನಿಯಮವೂ ಇಲ್ಲದೆ ಸದೃಶವಾಗಿಯೋ ವಿಸದೃಶವಾಗಿಯೋ ಹುಟ್ಟುವುದೋ ? ನಿಯಮವನ್ನು ಒಪ್ಪಿದರೆ ಮನುಷ್ಯದೇಹಕ್ಕೆ ಮನುಷ್ಯತಿರ್ಯಗಾದಿ ಯೋನಿಗಳು ಪ್ರಾಪ್ತವಾಗುವುದಿಲ್ಲ. ಅನಿಯಮವನ್ನು ಒಪ್ಪಿದರೆ ಒಂದು ಕ್ಷಣದಲ್ಲಿ ಆನೆಯಾಗಿ ಮತ್ತೊಂದು ಕ್ಷಣದಲ್ಲಿ ದೇವತೆಯೋ ಮನುಷ್ಯನೋ

ಆಗಿಬಿಡಬಹುದು. ಇವೆರಡೂ ಬೌದ್ಧಮತಕ್ಕೆ ವಿರುದ್ಧವಾಗಿವೆ. ಬೌದ್ಧಮತದಲ್ಲಿ ಸ್ಥಿರನಾದ ಭೋಕ್ತೃವಿಲ್ಲದಿರುವುದರಿಂದ ಭೋಗವು ಭೋಗಕ್ಕಾಗಿಯೇ ಹೊರತು ಬಯಸಿದವನಿಗಲ್ಲ. ಮೋಕ್ಷವು ಮೋಕ್ಷಾರ್ಥವೇ ಆಗಿರುವುದರಿಂದ ಮತ್ತೊಬ್ಬ ಮುಮುಕ್ಷು ಇರಬೇಕಾದದ್ದಿಲ್ಲ. ಮತ್ತೊಬ್ಬನು ಭೋಗಮೋಕ್ಷಗಳೆರಡನ್ನೂ ಬಯಸಿದರೆ ಅವನು ಆಯಾಕಾಲಗಳಲ್ಲಿ ಇರಬೇಕಾಗುವುದು. ಇದು ಕ್ಷಣಿಕತ್ವವನ್ನು ಒಪ್ಪಿಕೊಂಡಿರುವ ಬೌದ್ಧಮತಕ್ಕೆ ವಿರುದ್ಧವಾಗಿದೆ. ಆದ್ದರಿಂದ ಅವಿದ್ಯಾದಿಗಳು ಪರಸ್ಪರ ಉತ್ಪತ್ತಿಗೆ ನಿಮಿತ್ತವಾಗಬಹುದೇ ಹೊರತು, ಅಷ್ಟರಿಂದ ಸಂಘಾತವು ಸಿದ್ಧಿಸುವುದಿಲ್ಲ. ಏಕೆಂದರೆ ಬೌದ್ಧಮತದಲ್ಲಿ ಸ್ಥಿರನಾದ ಭೋಕ್ತೃವಿಲ್ಲ.

ಶ್ರೀ ಶಂಕರರು "ಉತ್ತರೋತ್ಪಾದೇ ಚ ಪೂರ್ವನಿರೋಧಾತ್" (೨-೨-೨೦) ಎಂಬ ಬ್ರಹ್ಮಸೂತ್ರವನ್ನು ಎಳೆಎಳೆಯಾಗಿ ಬಿಡಿಸುತ್ತ ಕ್ಷಣಭಂಗವಾದಿಯನ್ನು ಖಂಡಿಸುತ್ತಾರೆ. ಉತ್ತರಕ್ಷಣವು ಹುಟ್ಟುವಾಗ ಪೂರ್ವಕ್ಷಣವು ನಾಶವಾಗುತ್ತದೆ ಎಂಬುದು ಕ್ಷಣಭಂಗವಾದಿಯ ಮತ. ಹೀಗೆಂದು ಒಪ್ಪಿದರೆ ಪೂರ್ವೋತ್ತರ ಕ್ಷಣಗಳಿಗೆ ಹೇತುಫಲಭಾವವನ್ನು ಸಾಧಿಸಲಿಕ್ಕಾಗುವುದಿಲ್ಲ. ಏಕೆಂದರೆ ನಾಶವಾಗುತ್ತಿರುವ ಅಥವಾ ನಾಶವಾದ ಪೂರ್ವಕ್ಷಣವು ಅಭಾವಗ್ರಸ್ತವಾಗಿರುವುದರಿಂದ ಅದು ಉತ್ತರಕ್ಷಣಕ್ಕೆ ಹೇತುವಾಗಲಾರದು. ಹೀಗಲ್ಲದೇ ಭಾವಭೂತವಾಗಿ ಸಿದ್ಧಾವಸ್ಥೆಯಲ್ಲಿರುವ ಪೂರ್ವಕ್ಷಣವೇ ಉತ್ತರಕ್ಷಣಕ್ಕೆ ಹೇತು ಎಂದು ಬೌದ್ಧನ ಅಭಿಪ್ರಾಯವಾದರೂ ಹೇತುಫಲಭಾವವು ಉಪಪನ್ನವಾಗುವುದಿಲ್ಲ. ಏಕೆಂದರೆ ಭಾವಭೂತವಾದ ಪದಾರ್ಥಕ್ಕೆ ಮತ್ತೆ ವ್ಯಾಪಾರವಿರುವುದೆಂದು ಕಲ್ಪಿಸಿದರೆ ಅದಕ್ಕೆ ಮತ್ತೊಂದು ಕ್ಷಣದ ಸಂಬಂಧವನ್ನು ಕಲ್ಪಿಸಿದಂತೆ ಆಗುತ್ತದೆ. ಭಾವವೇ (ಇರವೇ) ಅದರ ವ್ಯಾಪಾರವೆಂದು ಹೇಳಿದರೂ ಹೇತುಫಲಭಾವವು ಹೊಂದುವುದಿಲ್ಲ. ಏಕೆಂದರೆ ಹೇತುಸ್ವಭಾವದ ಸಂಬಂಧವಿಲ್ಲದೆ ಫಲವು ಹುಟ್ಟುವ ಸಂಭವವಿಲ್ಲ. ಆ ಸ್ವಭಾವದ ಸಂಬಂಧವನ್ನು ಒಪ್ಪುವುದಾದರೆ ಹೇತುಸ್ವಭಾವವು ಫಲಕಾಲದಲ್ಲಿಯೂ ಇರುವದೆಂದಾಗುವುದರಿಂದ ಕ್ಷಣಭಂಗವಾದವನ್ನು ಬಿಡಬೇಕಾಗುತ್ತದೆ. ಸ್ವಭಾವದ ಉಪರಾಗವಿಲ್ಲದೇ ಹೇತು ಫಲಭಾವವನ್ನು ಒಪ್ಪಿಕೊಂಡರೆ ಎಲ್ಲೆಲ್ಲಿಯೂ ಆ ಹೇತುಫಲಭಾವವು ಬಂದೊದಗುವುದರಿಂದ ಅತಿಪ್ರಸಂಗವಾಗುವುದು. (ಹೇತುವು ಫಲಕಾಲದಲ್ಲಿರುತ್ತದೆ ಎಂದರೆ ಕ್ಷಣಿಕವಾದಕ್ಕೆ ವಿರೋಧವಾಗುವುದು; ಇರುವದಿಲ್ಲವೆಂದರೆ ಹೇತುಫಲಭಾವಕ್ಕೆ ನಿಯಮವೇ ಇಲ್ಲವಾಗುವುದು. ಮಡಕೆಯೂ ಮಣ್ಣಿಗೆ ಕಾರಣವಾಗಬಹುದು, ಹತ್ತಿಯೂ ಮಡಕೆಗೆ ಕಾರಣವೆಂದಾಗಬಹುದು ಎಂದು ಹೀಗೆಲ್ಲ ಅತಿಪ್ರಸಕ್ತಿಯುಂಟಾಗುವುದು.) ಬೌದ್ಧರು ಹೇಳುವ ಉತ್ಪಾದ-ನಿರೋಧಗಳು ವಸ್ತುವಿನ ಸ್ವರೂಪವೊ ಅಥವಾ ಬೇರೆ ಅವಸ್ಥೆಯೊ ಅಥವಾ ಬೇರೆ ವಸ್ತುವೊ ? ಉತ್ಪಾದ ನಿರೋಧಗಳು ವಸ್ತುವಿನ ಸ್ವರೂಪವೇ ಆದರೆ ಆಗ ವಸ್ತುಶಬ್ದವೂ ಉತ್ಪಾತನಿರೋಧ ಶಬ್ದಗಳೂ ಪರ್ಯಾಯವೆಂದೇ ಆಗುವುದು. ಹಾಗಲ್ಲದೆ ಅವುಗಳಲ್ಲಿ ಯಾವುದೋ ಒಂದು ವಿಶೇಷವು ಇರುತ್ತದೆಯೆಂದೂ ಉತ್ಪಾದ-

ನಿರೋಧ ಎಂಬ ಶಬ್ದಗಳಿಂದ ನಡುವೆ ಇರುವ ವಸ್ತುವಿನ ಆದಿ-ಅಂತ ಎಂಬ ಅವಸ್ಥೆಗಳನ್ನು ಹೇಳುತ್ತೇವೆ ಎಂದು ತಿಳಿಯುವುದಾದರೆ, ವಸ್ತುವು ಆದಿ, ಅಂತ, ಮಧ್ಯ ಎಂಬ ಮೂರು ಕ್ಷಣಗಳಿಗೆ ಸಂಬಂಧಪಟ್ಟಿದೆಯೆಂದಂತಾಗಿ ವಸ್ತುವಿನ ಕ್ಷಣಿಕತ್ವವು ಹೋಗುತ್ತದೆ. ಇನ್ನು ಉತ್ಪಾದ-ನಿರೋಧಗಳು ಕುದುರೆ ಕೋಣಗಳಂತೆ ವಸ್ತುವಿಗಿಂತ ಅತ್ಯಂತವಾಗಿ ಬೇರೆಯೇ ಎಂದರೆ ಆಗ ಉತ್ಪಾದನಿರೋಧಗಳಿಂದ ಅಸಂಸ್ಪೃಷ್ಟವಾದ ವಸ್ತುವು ಶಾಶ್ವತವಾಗಬೇಕಾಗುತ್ತದೆ. ವಸ್ತುವಿನ ಉತ್ಪಾದ-ನಿರೋಧಗಳು ದರ್ಶನ-ಅದರ್ಶನ ಇವೇ ಆಗಿವೆ ಎಂದರೆ ಅವು ದೃಷ್ಟವಿನ ಧರ್ಮವೇ ಹೊರತು ವಸ್ತುವಿನ ಧರ್ಮಗಳಲ್ಲವಾದ್ದರಿಂದ ಆಗಲೂ ವಸ್ತುವು ಶಾಶ್ವತವೇ ಆಗಬೇಕಾಗುವುದು. ಆದ್ದರಿಂದ ಬೌದ್ಧರು ವಿಪರೀತವಾದಿಗಳು ಎಂದಂತಾಯಿತು.

**"ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ"** (೨-೨-೨೧) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ಕ್ಷಣಭಂಗವಾದಿಗಳ ವಾದ ಹೇಗೆ ಅವರ ಪ್ರತಿಜ್ಞೆಗೇ ವಿರೋಧವಾಗುವುದು ಎಂದು ವಿವರಿಸುತ್ತಾರೆ. ಹೇತುವಿಲ್ಲದಿರುವಾಗ ಕಾರ್ಯವು ಉತ್ಪನ್ನವಾದರೆ ಪ್ರತಿಜ್ಞೆಗೆ ವಿರೋಧವಾಗುವುದು. ಹಾಗಿಲ್ಲದಿದ್ದರೆ ಯೌಗಪದ್ಯವು ಒಂದೊದಗುವದು. ನಾಲ್ಕು ವಿಧವಾದ ಹೇತುಗಳನ್ನು ಪಡೆದು ಚಿತ್ತಚೈತ್ತಗಳು ಉತ್ಪನ್ನವಾಗುವವು ಎಂಬ ಪ್ರತಿಜ್ಞೆಯ ಹಾನಿಯಾಗುವುದು. (ನೀಲವಾಗಿ ತೋರುವ ಚಿತ್ತಕ್ಕೆ ನೀಲವೆಂಬ ಆಲಂಬನಪ್ರತ್ಯಯದಿಂದ ನೀಲಾಕಾರವುಂಟಾಗುತ್ತದೆ; ಹಿಂದಿನ ವಿಜ್ಞಾನವೆಂಬ ಸಮನಂತರ ಪ್ರತ್ಯಯದಿಂದ ಬೋಧರೂಪವುಂಟಾಗುತ್ತದೆ; ಚಕ್ಷುಸ್ಸೆಂಬ ಅಧಿಪತಿ ಪ್ರತ್ಯಯದಿಂದ ರೂಪವನ್ನೇ ಗ್ರಹಿಸುವದೆಂಬ ನಿಯಮವುಂಟಾಗುತ್ತದೆ; ಬೆಳಕೆಂಬ ಸಹಕಾರಿಪ್ರತ್ಯಯದಿಂದ ಅದು ಸ್ಪಷ್ಟಾರ್ಥವುಳ್ಳದ್ದಾಗಿರುತ್ತದೆ, ಹೀಗೆ ಸುಖವೇ ಮುಂತಾದ ಚೈತ್ತಗಳು ಚಿತ್ತದ ಹೇತುಗಳಿಂದಲೇ ಆಗಿರುವುದರಿಂದ ಅವಕ್ಕೂ ಈ ನಾಲ್ಕೇ ಪ್ರತ್ಯಯ(ಕಾರಣ)ಗಳು. ಈ ಪ್ರತೀತ್ಯಸಮುತ್ಪಾದದ ಪ್ರತಿಜ್ಞೆಯನ್ನು ಬಿಡಬೇಕಾಗುವದೆಂದು ಭಾಮತೀಕಾರರ ವಿವರಣೆ.) ಯಾವ ಹೇತುವೂ ಇಲ್ಲದೆ ಕಾರ್ಯದ ಉತ್ಪತ್ತಿಯಾಗುವುದಾದರೆ ಉತ್ಪತ್ತಿಗೆ ಯಾವ ಪ್ರತಿಬಂಧವೂ ಇಲ್ಲದಿರುವುದರಿಂದ ಎಲ್ಲವೂ ಎಲ್ಲೆಲ್ಲಿಯೂ ಉತ್ಪನ್ನವಾಗಬಹುದು. ಪೂರ್ವಕ್ಷಣವು ಉತ್ತರಕ್ಷಣದ ಉತ್ಪತ್ತಿಯ ವರೆಗೂ ಇರುವುದೆಂದು ಹೇಳಿದರೆ ಆಗ ಹೇತುವೂ ಫಲವೂ ಒಟ್ಟಿಗೆ ಇರಬೇಕಾಗುವುದು. ಇದು ಪ್ರತಿಜ್ಞೆಗೆ ವಿರೋಧ. ಸಂಸ್ಕಾರಗಳೆಲ್ಲ ಕ್ಷಣಿಕ ಎಂಬ (ಬೌದ್ಧರ) ಪ್ರತಿಜ್ಞೆಗೆ ವಿರೋಧವಾಗುವುದು.

**"ಪ್ರತಿಸಂಖ್ಯಾ ಅಪ್ರತಿಸಂಖ್ಯಾ ನಿರೋಧಾಪ್ರಾಪ್ತಿರವಿಚ್ಛೇದಾತ್"** (೨-೨-೨೨) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ಬೌದ್ಧರು ಕಲ್ಪಿಸಿರುವ ನಿರೋಧದ್ವಯವು ಉಪಪನ್ನವಾಗುವುದಿಲ್ಲವೆಂದು ಪ್ರತಿಪಾದಿಸುತ್ತಾರೆ. ಬುದ್ಧಿಬೋಧ್ಯವಾದದ್ದು ತ್ರಯಕ್ಕಿಂತ ಭಿನ್ನವೆಂದೂ ಉತ್ಪಾದ್ಯವೆಂದೂ ಕ್ಷಣಿಕವೆಂದೂ ಬೌದ್ಧರು ಕಲ್ಪಿಸಿಕೊಂಡಿರುತ್ತಾರೆ. ಪ್ರತಿಸಂಖ್ಯಾ ಅಪ್ರತಿಸಂಖ್ಯಾ ನಿರೋಧಗಳು, ಆಕಾಶ– ಇವು

ತ್ರಯುವೆನಿಸಿದೆ. ಈ ಮೂರು ಅವಸ್ತು. ಅಭಾವಮಾತ್ರ ಮತ್ತು ನಿರುಪಾಖ್ಯ. ಬುದ್ಧಿಪೂರ್ವಕವಾಗಿ ಮಾಡುವ ವಸ್ತುನಾಶವು ಪ್ರತಿಸಂಖ್ಯಾ ನಿರೋಧ. ಕ್ಷಣಿಕವಾಗಿರುವುದರಿಂದ ವಸ್ತುಗಳು ತಾವೇ ನಾಶವಾಗುವುದು ಅಪ್ರತಿಸಂಖ್ಯಾನಿರೋಧ. ಆವರಣಾಭಾವವೇ ಆಕಾಶ. ವಿಚ್ಛೇದವಿಲ್ಲದಿರುವುದರಿಂದ ಪ್ರತಿಸಂಖ್ಯಾ–ಅಪ್ರತಿಸಂಖ್ಯಾ ನಿರೋಧಗಳು ಸಂಭವಿಸುವುದಿಲ್ಲ. ಇವುಗಳು ಸಂತಾನ ವಿಷಯಕವಾದವುಗಳು ಎಂಬುದು ಸಂಭವಿಸುವುದಿಲ್ಲ. ಏಕೆಂದರೆ ಎಲ್ಲ ಸಂತಾನಗಳಲ್ಲಿಯೂ ಸಂತಾನಿಗಳು ವಿಚ್ಛೇದವಿಲ್ಲದೆ ಹೇತುಫಲಭಾವದಿಂದ ಇರುವುದರಿಂದ ಸಂತಾನವಿಚ್ಛೇದವು ಸಂಭವಿಸುವುದಿಲ್ಲ. ಇವು ಭಾವ ವಿಷಯಕವಾದವುಗಳು ಎಂಬುದೂ ಸಂಭವಿಸುವುದಿಲ್ಲ. ಹೇಗೆಂದರೆ ಭಾವ(ವಸ್ತು)ಗಳಿಗೆ ನಿರನ್ವಯವೂ ನಿರುಪಾಖ್ಯವೂ ಆದ ನಾಶವು ಸಂಭವಿಸುವುದೇ ಇಲ್ಲ. ಏಕೆಂದರೆ ಎಲ್ಲಾ ಅವಸ್ಥೆಗಳಲ್ಲಿಯೂ ಪ್ರತ್ಯಭಿಜ್ಞಾನದ ಬಲದಿಂದ ಅನ್ವಯಿಯು ವಿಚ್ಛೇದವಾಗುವುದಿಲ್ಲವೆಂದು ಕಂಡುಬಂದಿರುತ್ತದೆ. ಕಾದ ಕಾವಲಿಯ ಮೇಲೆ ಹಾಕಿದ ನೀರು ನಿರನ್ವಯವಾಗಿ ನಾಶವಾಗುವುದಿಲ್ಲ. ಅದು ಆವಿಯಾಗಿ ರೂಪಾಂತರವನ್ನು ಹೊಂದುತ್ತದೆ ಎಂದು ಅನುಮಾನಿಸಬಹುದಾಗಿದೆ. ಮಣ್ಣಿನ ಮುದ್ದೆ, ಗಡಿಗೆ– ಮುಂತಾದ ಕಾರ್ಯಗಳಲ್ಲೆಲ್ಲ ಮಣ್ಣು ಅನುಗತವಾಗಿರುವುದು ಕಂಡುಬಂದಿದೆ. –ಯಾವ ಅವಸ್ಥೆಯಲ್ಲಿಯೂ ಮಣ್ಣು ನಾಶವಾಗುವದಿಲ್ಲ– ಎಂಬ ಅನುಭವಕ್ಕೆ ನಿರನ್ವಯನಾಶವಾದವು ವಿರುದ್ಧವಾಗಿರುತ್ತದೆ. ಆದ್ದರಿಂದ ಬೌದ್ಧರು ಕಲ್ಪಿಸಿರುವ ನಿರೋಧದ್ವಯವು ಉಪಪನ್ನವಾಗುವುದಿಲ್ಲ.

**"ಉಭಯಥಾ ಚ ದೋಷಾತ್"** (೨-೨-೨೩) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ಎರಡು ಬಗೆಯಿಂದಲೂ ದೋಷವಿರುವುದರಿಂದ ಈ ದರ್ಶನ ಅಸಮಂಜಸವಾಗಿದೆಯೆಂದು ಬಣ್ಣಿಸುತ್ತಾರೆ. ಪ್ರತಿಸಂಖ್ಯಾನಿರೋಧದೊಳಗೆ ಸೇರಿರುವುದೆಂದು ಬೌದ್ಧರು ಕಲ್ಪಿಸಿಕೊಂಡಿರುವ ಈ ಅವಿದ್ಯಾದಿಗಳ ನಾಶವು ಪರಿಕರದಿಂದೊಡಗೂಡಿದ ಸಮ್ಯಗ್ ಜ್ಞಾನದಿಂದ ಆಗುವುದೋ, ತಾನೆ ಆಗುವುದೋ ? ಮೊದಲನೆಯ ವಿಕಲ್ಪದಲ್ಲಿ ಯಾವ ಹೇತುವೂ ಇಲ್ಲವೆ ವಿನಾಶವಾಗುವುದು ಎಂಬುದನ್ನು ಬಿಟ್ಟಂತಾಗುವುದು. ಮುಂದಿನ ವಿಕಲ್ಪದಲ್ಲಿ ಮಾರ್ಗವನ್ನು ಉಪದೇಶಮಾಡಿರುವುದು ವ್ಯರ್ಥವಾಗುವದು. ಹೀಗೆ ಉಭಯಥಾ ದೋಷ ಪ್ರಸಕ್ತವಾಗುವುದರಿಂದ ಈ ದರ್ಶನವು ಅಸಮಂಜಸ.

**"ಆಕಾಶೇ ಚಾವಿಶೇಷಾತ್"** (೨-೨-೨೪) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ಆಕಾಶದಲ್ಲಿಯೂ ವಿಶೇಷವಿಲ್ಲದ್ದರಿಂದ ಅದು ನಿರುಪಾಖ್ಯವಲ್ಲ ಎಂದು ಪ್ರತಿಪಾದಿಸುತ್ತಾರೆ. ಆಕಾಶವು ವಸ್ತುವೆಂಬುದು "ಆತ್ಮನಃ ಆಕಾಶಃ ಸಂಭೂತಃ" ಮುಂತಾದ ಶ್ರುತಿಗಳಿಂದ ತಿಳಿದುಬರುತ್ತದೆ. ವೇದ ಪ್ರಾಮಾಣ್ಯದಲ್ಲಿ

ವಿರುದ್ಧಮತಿಯುಳ್ಳವರು ಗಂಧಾದಿಗುಣಗಳಿಂದ ಪೃಥಿವ್ಯಾದಿಗಳನ್ನು ಅನುಮಾನಿಸುವಂತೆ ಶಬ್ದಗುಣದಿಂದ ಆಕಾಶವನ್ನು ಅನುಮಾನಿಸಬಹುದಾಗಿದೆ. ಆಕಾಶವು ಆವರಣದ ಅಭಾವವೆಂದು ಹೇಳಿದರೆ ಒಂದು ಪಕ್ಷಿಯು ಹಾರುತ್ತಿದ್ದಾಗ ಆವರಣವು ಇರುವುದರಿಂದ ಮತ್ತೊಂದು ಪಕ್ಷಿಯು ಹಾರುವುದಕ್ಕೆ ಅವಕಾಶವಿಲ್ಲದೆ ಹೋಗುವುದು. ಏಕೆಂದರೆ ಯಾವುದು ಆವರಣಾಭಾವಕ್ಕೆ ವಿಶೇಷಣವಾಗಿದೆಯೋ ಆ ವಸ್ತುಭೂತವಾದದ್ದೇ ಆಕಾಶವಾಗುವುದೇ ಹೊರತು ಆವರಣಾಭಾವ ಮಾತ್ರವಲ್ಲ. ಬೌದ್ಧದರ್ಶನದ ಒಂದು ಸಂವಾದದಲ್ಲಿ ಬರುವ "ವಾಯು ಯಾವುದನ್ನು ಆಶ್ರಯಿಸಿರುತ್ತದೆ ?" ಎಂಬ ಪ್ರಶ್ನೆಗೆ "ವಾಯುವು ಆಕಾಶವನ್ನಾಶ್ರಯಿಸಿರುತ್ತದೆ" ಎಂಬ ಉತ್ತರವಿದೆ. ಆಕಾಶವು ಅವಸ್ತುವೆಂದಾದರೆ ಅದು ಸಮಂಜಸವಾಗಲಾರದು. ಆದ್ದರಿಂದ ಆಕಾಶವು ಅವಸ್ತು ಎಂಬುದು ಸರಿಯಲ್ಲ. ನಿರೋಧದ್ವಯಂ, ಆಕಾಶ– ಈ ಮೂರೂ ನಿರುಪಾಖ್ಯ ಅವಸ್ತು, ನಿತ್ಯ– ಎಂಬುದು ಪರಸ್ಪರ ವಿರುದ್ಧವಾಗಿದೆ. ಅವಸ್ತುವಾದುದಕ್ಕೆ ನಿತ್ಯತ್ವವಾಗಲಿ, ಅನಿತ್ಯತ್ವವಾಗಲಿ ಸಂಭವಿಸುವುದಿಲ್ಲ. ಏಕೆಂದರೆ ಧರ್ಮಧರ್ಮಿ ವ್ಯವಹಾರವು ವಸ್ತುವನ್ನಾಶ್ರಯಿಸಿದೆ. ಧರ್ಮಧರ್ಮಿಭಾವವು ಇಲ್ಲಿಯೂ ಇದೆ ಎಂದರೆ ಆಕಾಶವು ಘಟಾದಿಗಳಂತೆ ವಸ್ತುವಾದೀತೇ ಹೊರತು ನಿರುಪಾಖ್ಯವಾಗಲಾರದು.

"ಅನುಸ್ಮೃತೇಶ್ಚ" (೨-೨-೨೫) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ಅನುಸ್ಮೃತಿಯಿಂದಲೂ ವೈನಾಶಿಕ ಮತವು ಸರಿಯಲ್ಲವೆಂದು ವಾದಿಸುತ್ತಾರೆ. ವೈನಾಶಿಕನು ಪ್ರತಿಯೊಂದು ವಸ್ತುವೂ ಕ್ಷಣಿಕವೆಂದು ಒಪ್ಪಿರುವುದರಿಂದ ವಸ್ತುವನ್ನು ಅರಿಯುವವನೂ ಕ್ಷಣಿಕವೆಂದು ಒಪ್ಪಬೇಕಾಗುವದು. ಏಕೆಂದರೆ ಅನುಸ್ಮೃತಿಯಿರುವುದರಿಂದ ಅದು ಸಂಭವಿಸುವುದಿಲ್ಲ. ಅನುಭವವನ್ನು, ಅರಿವನ್ನು ಅನುಸರಿಸಿ ಉಂಟಾಗುವ ಸ್ಮರಣೆಯೇ ಅನುಸ್ಮೃತಿ. ಅನುಸ್ಮೃತಿ ಮತ್ತು ಅರಿವಿಗೆ ಸಮಾನ ಕರ್ತೃವಿದ್ದರೆ ಅದು ಹೊಂದುತ್ತದೆ. ಏಕೆಂದರೆ ಒಬ್ಬನ ಅರಿವಿಗೆ ವಿಷಯವಾದದ್ದು ಮತ್ತೊಬ್ಬನಿಗೆ ಸ್ಮೃತಿಯಾಗಿದ್ದು ಕಂಡುಬಂದಿಲ್ಲ. "ನಾನು ಅದನ್ನು ಕಂಡೆ, ಇದನ್ನು ನೋಡುತ್ತಿದ್ದೇನೆ" ಎಂಬ ಪ್ರತ್ಯಯವು ಪೂರ್ವೋತ್ತರ ದರ್ಶಿಯು ಒಬ್ಬನೇ ಅಲ್ಲದಿದ್ದರೆ ಹೇಗೆ ತಾನೇ ಆದೀತು ? ಇದಲ್ಲದೆ ನೋಡುವವನೂ ಸ್ಮರಿಸುವವನೂ ಒಬ್ಬನೇ ಆಗಿದ್ದರೆ ಮಾತ್ರ ಪ್ರತ್ಯಭಿಜ್ಞಾಪ್ರತ್ಯಯವು ಪ್ರತ್ಯಕ್ಷವಾಗುವುದೆಂದು ಪ್ರತಿಯೊಬ್ಬನಿಗೂ ತಿಳಿದೇ ಇದೆ. ಅವೆರಡಕ್ಕೂ ಬೇರೆಬೇರೆಯ ಕರ್ತೃಗಳಿದ್ದರೆ ಆಗ "ನನಗೆ ಸ್ಮರಣೆಯಾಗುತ್ತಿದೆ. ಮತ್ತೊಬ್ಬನು ಕಂಡನು" ಎಂದು ಪ್ರತ್ಯಯವಾಗಬೇಕಿತ್ತು. ಆದರೆ ಹೀಗೆ ಯಾರಿಗೂ ತೋರುವುದಿಲ್ಲ. ಹೀಗೆ ತೋರಿದರೆ ದರ್ಶನಸ್ಮರಣಗಳಿಗೆ ಬೇರೆಬೇರೆಯ ಕರ್ತೃವೆಂದೇ, "ನನಗೆ ಸ್ಮರಣೆಯಾಗುತ್ತಿದೆ, ಅವನು ಅದನ್ನು ಕಂಡನು" ಎಂದೇ ಪ್ರತಿಯೊಬ್ಬನೂ ಅರಿಯುತ್ತಾನೆ. ಆದರೆ ಇಲ್ಲಿ "ನಾನು ಅದನ್ನು ಕಂಡೆನು" ಎಂಬ ದರ್ಶನ-ಸ್ಮರಣೆಗಳಿಗೆ ತಾನೊಬ್ಬನೇ ಕರ್ತೃವೆಂದು ವೈನಾಶಿಕನೂ ನಿಶ್ಚಯಿಸುತ್ತಾನೆ. "ಬೆಂಕಿಯು ಬಿಸಿಯಲ್ಲ, ಅಥವಾ ಬೆಳಗುವುದಿಲ್ಲ" ಎಂಬಂತೆ "ನಾನಲ್ಲ" ಎಂದು ತನಗೆ ಉಂಟಾದ ಜ್ಞಾನವನ್ನು

ಅವನೂ ಇಲ್ಲವೆನ್ನುವುದಿಲ್ಲ. ಒಬ್ಬನೇ ಕರ್ತೃವಿಗೆ ದರ್ಶನ-ಸ್ಮರಣ ಎಂಬ ಎರಡು ಕ್ಷಣಗಳು ಸಂಬಂಧಿಸಿರುವುದರಿಂದ ವೈನಾಶಿಕನು ಕ್ಷಣಿಕವಾದವನ್ನು ತೊರೆಯಬೇಕಾಗುತ್ತದೆ.

ಸಾದೃಶ್ಯದಿಂದ ಅನುಸ್ಮೃತಿಯಾಗುವುದೆಂದು ಆತ ವಾದಿಸಿದರೆ ತಪ್ಪಾಗುತ್ತದೆ. ಸಾದೃಶ್ಯವು "ಅದಕ್ಕೆ ಇದು ಸದೃಶವಾಗಿದೆ" ಎಂದು ಎರಡರ ಅಧೀನವಾಗಿರುವುದರಿಂದ ಕ್ಷಣಭಂಗವಾದಿಯ ಮತದಲ್ಲಿ, ಸದೃಶವಾಗಿರುವ ಎರಡು ವಸ್ತುಗಳನ್ನು ಅರಿಯುವವನೊಬ್ಬ ಇಲ್ಲದ್ದರಿಂದರೂ, ಸಾದೃಶ್ಯನಿಮಿತ್ತವುಳ್ಳದ್ದು ಪ್ರತಿಸಂಧಾನ ಎಂಬುದು ಮಿಥ್ಯಾಪ್ರಲಾಪವೇ ಆದೀತು. ಪೂರ್ವೋತ್ತರಕ್ಷಣಗಳ ಸಾದೃಶ್ಯವನ್ನು ಗ್ರಹಿಸುವವನು ಒಬ್ಬನೇ ಎಂದಾದರೆ ಒಬ್ಬನೇ ಎರಡು ಕ್ಷಣಗಳ ವರೆಗೆ ಇರುತ್ತಾನೆ ಎಂಬುದನ್ನು ಒಪ್ಪಿಕೊಳ್ಳಬೇಕಾಗಿ ಕ್ಷಣಿಕತ್ವಪ್ರತಿಜ್ಞೆಗೆ ಭಂಗಬರುತ್ತದೆ. "ಅದಕ್ಕೆ ಇದು ಸದೃಶವು" ಎಂಬುದು ಬೇರೊಂದು ಪ್ರತ್ಯಯವೇ ಹೊರತೂ (ಪೂರ್ವೋತ್ತರ) ಕ್ಷಣದ್ವಯವನ್ನು ಗ್ರಹಿಸಿದ ನಿಮಿತ್ತದಿಂದ ಆದದ್ದಲ್ಲವಲ್ಲ – ಎಂದು ಆತ ಹೇಳಿದರೆ, "ಅದಕ್ಕೆ" "ಇದು" ಎಂದು ಬೇರೆ ಬೇರೆ ಪದಾರ್ಥಗಳ ಉಪಾದಾನವೇ ಅದಕ್ಕೆ ಪರಿಹಾರವಾಗಿದೆ. ಸಾದೃಶ್ಯವಿಷಯವು ಬೇರೊಂದು ಪ್ರತ್ಯಯವೇ ಆಗಿದ್ದರೆ "ಅದಕ್ಕೆ ಇದು ಸದೃಶವು" ಎಂಬ ವಾಕ್ಯಪ್ರಯೋಗ ಅನರ್ಥಕವಾಗುತ್ತಿತ್ತು. "ಸಾದೃಶ್ಯವು" ಎಂದೇ ಪ್ರಯೋಗ ಪ್ರಾಪ್ತವಾಗುತ್ತಿತ್ತು. ಯಾವಾಗ ಲೋಕಪ್ರಸಿದ್ಧವಾದ ಪದಾರ್ಥವನ್ನು ಪರೀಕ್ಷಕರು ಸ್ವೀಕರಿಸುವುದಿಲ್ಲವೋ, ಆಗ ಸ್ವಪಕ್ಷಸಿದ್ಧಿಯಾಗಲಿ ಪರಪಕ್ಷದೋಷವಾಗಲಿ ಎರಡನ್ನೂ ಹೇಳಿದರೆ ಅವೆರಡೂ ಪರೀಕ್ಷಕರ ಮತ್ತು ತನ್ನ ಯಥಾರ್ಥತ್ವದಿಂದ ಬುದ್ಧಿಸಂತಾನಾರೂಢವಾಗುವುದಿಲ್ಲ. ಈ ವಿಷಯವು ಹೀಗೆಯೇ ಎಂದು ಯಾವುದು ನಿಶ್ಚಿತವಾಗಿರುತ್ತದೆಯೋ ಅದನ್ನೇ ಹೇಳಬೇಕು. ಅದಕ್ಕಿಂತ ಬೇರೆಯಾದದ್ದನ್ನು ಹೇಳಿದರೆ ತಾನು ಬಹುಪ್ರಲಾಪಿ ಎಂಬುದನ್ನು ಮಾತ್ರ ತೋರಿಸುವುದು. ಈ ಸಂವ್ಯವಹಾರವು ಸಾದೃಶ್ಯದಿಂದ ಎಂಬುದು ಯುಕ್ತವೂ ಅಲ್ಲ. ಏಕೆಂದರೆ ಅದೇ ಇದೆಂದು ತಿಳಿಯಬರುತ್ತಿದೆ, ಅದಕ್ಕೆ ಸದೃಶವೆಂದೇನೂ ತಿಳಿಯಬರುವದಿಲ್ಲ. (ವಾದಗ್ರಸ್ತವಾದದ್ದನ್ನೇ ನಿಶ್ಚಿತವಾದಂತೆ ಹೇಳಬಾರದು. ನಿಶ್ಚಿತವಾಗಿರುವುದನ್ನು ವಾದಗ್ರಸ್ತವಾಗಿ ಮಾಡುವುದು ಸರಿಯಲ್ಲ.) ಬಾಹ್ಯ ವಸ್ತುವಿನಲ್ಲಿ ಅದೇ ಇದೋ ? ಅಥವಾ ಅದಕ್ಕೆ ಸದೃಶವಾದುದೋ ಎಂಬ ಸಂದೇಹವು ಬರಬಹುದು. ಆದರೆ ಅರಿಯುವಾತನ ವಿಷಯದಲ್ಲಿ ಅವನೇ ನಾನೋ ? ಅವನಿಗೆ ಸದೃಶನೋ ? ಎಂಬ ಸಂದೇಹವೂ ಬರುವದಿಲ್ಲ. ಏಕೆಂದರೆ ಹಿಂದಿನ ದಿನ ಯಾವ ನಾನು ನೋಡಿದ್ದೆನೋ ಆ ನಾನೇ ಈಗ ಸ್ಮರಿಸಿಕೊಳ್ಳುತ್ತಿದ್ದೇನೆ– ಎಂದು ನಿಶ್ಚಿತವಾದ ತದ್ಭಾವದ ಅರಿವಾಗುತ್ತದೆ. ಆದ್ದರಿಂದ ವೈನಾಶಿಕಮತವು ಉಪಪನ್ನವಾಗುವುದಿಲ್ಲ.

**"ನಾಸತೋಽದೃಷ್ಟತ್ವಾತ್"** (೨-೨-೨೬) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ಅಸತ್ತಿನಿಂದ ಕಾರ್ಯವುಂಟಾಗುವುದಿಲ್ಲ; ಏಕೆಂದರೆ ಅದು ಕಂಡುಬಂದಿಲ್ಲವೆಂದು ವಿವರಿಸುತ್ತಾರೆ. ಸ್ಥಿರವಾದ ಅನುಯಾಯಿಕಾರಣವನ್ನು ಒಪ್ಪದವರ ಮತದಲ್ಲಿ

ಅಭಾವದಿಂದ ಭಾವವು ಉತ್ಪನ್ನವಾಗುತ್ತದೆ ಎಂದಾಗುವದು. ಕಾರಣವನ್ನು ನಾಶಮಾಡದೆ ಕಾರ್ಯವು ಹುಟ್ಟುವುದಿಲ್ಲವಾದ್ದರಿಂದ – ಎನ್ನುತ್ತ ಅಭಾವದಿಂದ ಭಾವೋತ್ಪತ್ತಿಯನ್ನೂ. ವೈನಾಶಿಕರು ಹೇಳುತ್ತಾರೆ. ವಿನಷ್ಟವಾದ ಬೀಜದಿಂದ ಮೊಳಕೆ ಹುಟ್ಟುತ್ತದೆ; ವಿನಷ್ಟವಾದ ಹಾಲಿನಿಂದ ಮೊಸರೂ, ವಿನಷ್ಟವಾದ ಮಣ್ಣಿನ ಮುದ್ದೆಯಿಂದ ಮಡಕೆಯೂ ಉಂಟಾಗುತ್ತದೆ. ಕೂಟಸ್ಥವಾದ ಕಾರಣದಿಂದ ಕಾರ್ಯೋತ್ಪತ್ತಿಯಾಗುವುದಾದರೆ ಕೂಟಸ್ಥ (ವಿನಾಶಶೂನ್ಯ)ವಾಗಿರುವದೆಂಬುದು ಎಲ್ಲಕ್ಕೂ ಸಮಾನವಾಗಿರುವುದರಿಂದ ಎಲ್ಲವೂ ಎಲ್ಲದರಿಂದ ಉತ್ಪನ್ನವಾಗಬಹುದು. ಆದ್ದರಿಂದ ಅಭಾವಗ್ರಸ್ತವಾದ ಬೀಜಾದಿಗಳಿಂದಲೇ ಅಂಕುರಾದಿಗಳು ಉತ್ಪನ್ನವಾಗುವುದರಿಂದ ಅಭಾವದಿಂದ ಭಾವೋತ್ಪತ್ತಿಯೆಂದು ಅವರು ಅಭಿಪ್ರಾಯಪಡುತ್ತಾರೆ. ಇದಕ್ಕೆ "ನಾಸತೋಽ ದೃಷ್ಟತ್ವಾತ್" ಎಂಬ ಸೂತ್ರವೇ ಉತ್ತರ ಕೊಡುತ್ತದೆ. ಅಭಾವದಿಂದ ಭಾವವು ಹುಟ್ಟುವುದಿಲ್ಲ. ಅಭಾವದಿಂದ ಭಾವವು ಹುಟ್ಟುವುದಾದರೆ ಅಭಾವತ್ವವು ಎಲ್ಲದಕ್ಕೂ ಸಮಾನವಾಗಿರುವುದರಿಂದ ಕಾರಣವಿಶೇಷ(ಇಂಥದ್ದೊಂದು ಕಾರಣ)ವೆಂದು ಒಪ್ಪುವುದು ವ್ಯರ್ಥವಾಗುವದು. ಹೇಗೆಂದರೆ ಬೀಜಾದಿಗಳು ನಾಶವಾದ ಮೇಲೆ ಆಗುವ ಅಭಾವಕ್ಕೂ ಮೊಲದ ಕೊಂಬು ಮುಂತಾದವುಗಳಿಗೂ ನಿಃಸ್ವಭಾವತ್ವವು ಸಮಾನವಾಗಿರುವುದರಿಂದ ಅವುಗಳ ಅಭಾವದಲ್ಲಿ ಯಾವ ವಿಶೇಷವೂ ಇರುವದಿಲ್ಲ. ಹಾಗೆ ವಿಶೇಷವಿದ್ದಿದ್ದರೆ ಬೀಜದಿಂದ ಮೊಳಕೆಯುಂಟಾಗುತ್ತದೆ. ಹಾಲಿನಿಂದ ಮೊಸರು – ಎಂಬೀ ಜಾತಿಯ ಕಾರಣವಿಶೇಷವನ್ನು ಒಪ್ಪುವುದು ಸಾರ್ಥಕವಾಗುತ್ತಿತ್ತು. ನಿರ್ವಿಶೇಷವಾದ ಅಭಾವವು ಕಾರಣವೆಂದು ಒಪ್ಪಿದರೆ ಮೊಲದ ಕೊಂಬು – ಮುಂತಾದವುಗಳಿಂದ ಮೊಳಕೆ – ಮುಂತಾದವು ಉಂಟಾಗಬಹುದಾಗಿದೆ. ಆದರೆ ಹಾಗೆ ಆವದ್ದು ಕಂಡುಬಂದಿಲ್ಲ. ಹಾಗಲ್ಲದೆ ನೈದಿಲೆ – ಮುಂತಾದವುಗಳಲ್ಲಿ ಕಪ್ಪು ಮುಂತಾದವುಗಳಂತೆ ಅಭಾವದಲ್ಲೂ ವಿಶೇಷವಿದೆ ಎನ್ನುವದಾದರೆ, ಆಗ ವಿಶೇಷವಿರುವುದರಿಂದಲೇ ನೈದಿಲೆ – ಮುಂತಾದವುಗಳಂತೆ ಅಭಾವವೂ ಭಾವವೆಂದಾಗುವದು. ಅಭಾವವು ಯಾವುದಕ್ಕೂ ಉತ್ಪತ್ತಿ ಹೇತುವಲ್ಲ. ಅದು ಮೊಲದ ಕೊಂಬು ಮುಂತಾದವುಗಳಂತೆ ಅಭಾವವಾಗಿದೆ ಎಂಬುದೇ ಇದಕ್ಕೆ ಹೇತುವಾಗಿದೆ. ಅಭಾವದಿಂದ ಭಾವೋತ್ಪತ್ತಿ ಎಂದಾದರೆ ಎಲ್ಲ ಕಾರ್ಯವೂ ಅಭಾವಾನ್ವಿತವಾಗಿಯೇ ಇರಬೇಕಾಗುವುದು. ಆದರೆ ಹಾಗೆ ಕಂಡುಬರುವುದಿಲ್ಲ. ಯಾಕೆಂದರೆ ಪ್ರತಿಯೊಂದು ವಸ್ತುವೂ ತನ್ನ ತನ್ನ ರೂಪದಿಂದ ಭಾವರೂಪವಾಗಿಯೇ ಕಾಣುತ್ತದೆ. ಮಣ್ಣಿನಿಂದ ಅನ್ವಿತವಾದ ಶ್ರಾವೆಯೇ ಮುಂತಾದವು ನೂಲು – ಮುಂತಾದವುಗಳ ವಿಕಾರಗಳೆಂದು ಯಾರೂ ಒಪ್ಪುವುದಿಲ್ಲ. ಮಣ್ಣಿನಿಂದ ಅನ್ವಿತವಾದ ವಸ್ತುಗಳನ್ನೆಲ್ಲ ಮಣ್ಣಿನ ವಿಕಾರಗಳೆಂದೇ ಜನರು ತಿಳಿಯುತ್ತಾರೆ.

ಸ್ವರೂಪವು ನಾಶವಾದ ಹೊರತು ಯಾವದೊಂದು ಕೂಟಸ್ಥ ವಸ್ತುವೂ ಕಾರಣವಾಗಲಾರದ್ದರಿಂದ ಅಭಾವದಿಂದ ಭಾವೋತ್ಪತ್ತಿಯಾಗ ಬಲ್ಲುದೆಂಬ ಹೇಳಿಕೆ

ದುರುಕ್ತವಾದದ್ದು. ಏಕೆಂದರೆ ಸ್ಥಿರ ಸ್ವಭಾವವುಳ್ಳ ಚಿನ್ನ– ಮುಂತಾದವು (ಅದೇ ಇದೆಂದು) ಪ್ರತ್ಯಭಿಜ್ಞೆಯಾಗುವ ಸರಿಗೆ– ಮುಂತಾದ ಕಾರ್ಯಗಳಿಗೆ ಕಾರಣವಾಗುವುದು ಕಂಡುಬರುತ್ತದೆ. ಇನ್ನು ಸ್ವರೂಪವು ನಾಶವಾಗುವುದೆಂದು ಕಂಡುಬರುವ ಬೀಜಾದಿಗಳಲ್ಲಿಯೂ (ಆ ನಾಶವಾಗುವ) ಪೂರ್ವಾವಸ್ಥೆಯು ಉತ್ತರಾವಸ್ಥೆಗೆ ಕಾರಣವೆಂದು ಒಪ್ಪಲಿಕ್ಕಾಗುವುದಿಲ್ಲ. ನಾಶವಾಗದೇ ಇರುವ ಅನುಯಾಯಿಗಳಾದ ಬೀಜಾದಿಗಳ ಅವಯವಗಳೇ ಅಂಕುರಾದಿಗಳಿಗೆ ಕಾರಣವಾಗಿವೆ ಎಂಬುದಕ್ಕೆ ಒಪ್ಪಿಗೆ ಇದೆ. ಆದ್ದರಿಂದ ಅಸತ್ತಾಗಿರುವ ಶಶವಿಷಾಣಾದಿಗಳಿಂದ ಸದ್ವಸ್ತು ಹುಟ್ಟುವದು. ಕಂಡಿಲ್ಲವಾದ್ದರಿಂದ, ಸದ್ರೂಪವಾಗಿರುವ ಸುವರ್ಣಾದಿಗಳಿಂದ ಸದ್ವಸ್ತುವಿನ ಉತ್ಪತ್ತಿ ಕಂಡಿರುವುದರಿಂದಲೂ, ಅಭಾವದಿಂದ ಭಾವೋತ್ಪತ್ತಿ– ಎಂಬೀ ಮತ ಅನುಪಪನ್ನವಾದದ್ದು. ಇದಲ್ಲದೆ ನಾಲ್ಕು ಬಗೆಯ ಹೇತುಗಳಿಂದ ಚಿತ್ತಚೈತ್ತಗಳು ಉಂಟಾಗುತ್ತವೆ. ಪರಮಾಣಿಗಳಿಂದ ಭೌತಭೌತಿಕರೂಪವಾದ ಸಮುದಾಯವುಂಟಾಗುತ್ತದೆ ಎಂದು ಒಪ್ಪಿ, ಅಭಾವದಿಂದ ಭಾವೋತ್ಪತ್ತಿಯೆಂದು ಕಲ್ಪಿಸಿ. ತಾವು ಒಪ್ಪಿದ್ದನ್ನೇ ನಿರಾಕರಿಸುವ ವೈನಾಶಿಕರು ಎಲ್ಲ ಜನರನ್ನೂ ತಳಮಳಗೊಳಿಸುತ್ತಿದ್ದಾರೆಂದು ಶ್ರೀ ಶಂಕರರು ವಾದಿಸುತ್ತಾರೆ.

"ಉದಾಸೀನಾನಾಮಪಿ ಚೈವಂ ಸಿದ್ಧಿಃ" (೨-೨-೨೭) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ಹೀಗಾದರೆ ಉದಾಸೀನರಿಗೂ ಕಾರ್ಯಸಿದ್ಧಿಯಾಗಬೇಕಾದೀತೆಂದು ಹೇಳುತ್ತಾರೆ. "ಅಭಾವದಿಂದ ಭಾವೋತ್ಪತ್ತಿ" ಎಂದಾದರೆ ಉದಾಸೀನರಾಗಿ ಕೆಲಸ ಮಾಡದ, ಬಯಸದ ಜನರಿಗೂ ಅಭೀಷ್ಟಸಿದ್ಧಿಯಾಗಬೇಕು. ಏಕೆಂದರೆ ಅಭಾವವು ಸುಲಭವಾಗಿ ದೊರಕುತ್ತದೆ. ರೈತ ಗದ್ದೆಯ ಕೆಲಸದಲ್ಲಿ ತೊಡಗದಿದ್ದರೂ ಪೈರು ಬೆಳೆಯಬೇಕಾಗುವುದು. ಕುಂಬಾರನು ಮಣ್ಣನ್ನು ಹದಗೊಳಿಸಲು ಯತ್ನಿಸದಿದ್ದರೂ ಪಾತ್ರೆಯುಂಟಾಗಬೇಕು. ನೇಕಾರ ನೂಲುಗಳನ್ನು ನೇಯದಿದ್ದರೂ ಬಟ್ಟೆ ದೊರಕಬೇಕು. ಹೀಗಾದರೆ ಸ್ವರ್ಗಮೋಕ್ಷಗಳಿಗಾಗಿ ಯಾವನೊಬ್ಬನೂ ಪ್ರಯತ್ನಿಸದೆ ಹೋದಾನು. ಆದರೆ ಇದು ಯುಕ್ತವಲ್ಲ. ಯಾರೂ ಇದನ್ನು ಒಪ್ಪಲಾರರು. ಆದ್ದರಿಂದ "ಅಭಾವದಿಂದ ಭಾವೋತ್ಪತ್ತಿ" ಎಂಬುದು ಅನುಪಪನ್ನವೆಂದು ಶ್ರೀ ಶಂಕರರು ಬಣ್ಣಿಸುತ್ತಾರೆ.

ಹೀಗೆ ಬಾಹ್ಯಾರ್ಥವಾದವನ್ನಾಶ್ರಯಿಸಿ ಸಮುದಾಯದ ಅಪ್ರಾಪ್ತಿ ಮುಂತಾದ ದೋಷಗಳನ್ನು ಹೇಳಿದಾಗ, ವಿಜ್ಞಾನವಾದಿಯಾದ ಬೌದ್ಧ ಈಗ ಎದುರುಬೀಳುತ್ತಾನೆ. ಕೆಲವು ಶಿಷ್ಯರಿಗೆ ಬಾಹ್ಯವಸ್ತುವಿನಲ್ಲಿ ಅಭಿನಿವೇಶವಿರುವುದನ್ನು ಕಂಡು ಅದನ್ನನುಸರಿಸಿ ಈ ಬಾಹ್ಯಾರ್ಥಪ್ರಕ್ರಿಯೆ ವಿರಚಿತವಾಗಿದೆಯಂತೆ. ಇದು ಬುದ್ಧನ ಅಭಿಪ್ರಾಯವಲ್ಲ. ಅವನಿಗೆ ವಿಜ್ಞಾನೈಕಸ್ಕಂಧವಾದವೇ ಅಭಿಪ್ರೇತವಾದದ್ದು. ಆ ವಿಜ್ಞಾನವಾದದಲ್ಲಿ ಬುದ್ಧ್ಯಾರೂಢವಾದ ರೂಪದಿಂದ ಎಲ್ಲ ಪ್ರಮಾಣಪ್ರಮೇಯ ಫಲವ್ಯವಹಾರವು ಒಳಗೇ ಉಪಪನ್ನವಾಗುತ್ತದೆ. ಏಕೆಂದರೆ ಬಾಹ್ಯಾರ್ಥವಿದ್ದರೂ ಬುದ್ಧ್ಯಾರೂಢವಾಗದಿದ್ದರೆ

ಪ್ರಮಾಣಾದಿ ವ್ಯವಹಾರಗಳು ಬರುವದಿಲ್ಲ. ಈ ವ್ಯವಹಾರವೆಲ್ಲವೂ ಒಳಗಿರುವುದೇ, ವಿಜ್ಞಾನಕ್ಕಿಂತ ಬೇರೆಯಾಗಿರುವ ಬಾಹ್ಯಾರ್ಥವಿಲ್ಲ ಎಂಬ ಪ್ರಶ್ನೆಗೆ 'ಅದು ಸಂಭವಿಸುವುದಿಲ್ಲವೆಂದು ವಾದಿಯು ಹೇಳುತ್ತಾನೆ. ಈ ಒಪ್ಪುವ ಬಾಹ್ಯಾರ್ಥವೆಂಬುದು ಪರಮಾಣುಗಳೂ ಅಥವಾ ಅವುಗಳ ಸಮೂಹವಾದ ಕಂಬ– ಮುಂತಾದವುಗಳಾದರೂ ಇರಬೇಕು. ಏಕೆಂದರೆ ಪರಮಾಣುಗಳನ್ನು ತಿಳಿಸುವ ಜ್ಞಾನವೆಂಬುದೇ ಹೊಂದುವುದಿಲ್ಲ. ಆ ಪರಮಾಣುಗಳ ಸಮೂಹವಾದ ಸ್ತಂಭಾದಿಗಳೇ ಇಲ್ಲ. ಏಕೆಂದರೆ ಆ ಸ್ತಂಭಾದಿಗಳು ಪರಮಾಣುಗಳಿಂದ ಬೇರೆಯೆಂದಾಗಲಿ, ಬೇರೆಯಲ್ಲವೆಂದಾಗಲಿ ಗೊತ್ತುಪಡಿಸಲಿಕ್ಕಾಗುವದಿಲ್ಲ. ಹೀಗೆ ಜಾತಿ ಮುಂತಾದವುಗಳನ್ನು ಅಲ್ಲಗಳೆಯಬಹುದು. ಇದಲ್ಲದೆ ಅನುಭವಮಾತ್ರವಾಗಿ ಸಾಧಾರಣರೂಪವಾಗಿರುವ ಜ್ಞಾನವು ಉಂಟಾಗುವಾಗ, ಸಂಭಜ್ಞಾನ, ಕುಡ್ಯ (ಗೋಡೆಯ) ಜ್ಞಾನ, ಘಟಜ್ಞಾನ, ಪಟಜ್ಞಾನ– ಎಂದು ಪ್ರತಿ ವಿಷಯದಲ್ಲಿಯೂ ಪಕ್ಷಪಾತವುಂಟಾಗುವುದಿಲ್ಲ. ಇದು ಜ್ಞಾನಗತ ವಿಶೇಷದ ಹೊರತಾಗಿ ಹೊಂದುವುದಿಲ್ಲವಾದುದರಿಂದ ಅವಶ್ಯವಾಗಿ ಜ್ಞಾನದ ವಿಷಯಸಾರೂಪ್ಯವನ್ನು ಒಪ್ಪಬೇಕು. ಆದರೆ ಅದನ್ನು ಒಪ್ಪಿದರೆ ಜ್ಞಾನದಲ್ಲಿಯೇ ವಿಷಯಾಕಾರವು ಅಡಕವಾಗಿರುವುದರಿಂದ ಬಾಹ್ಯಾರ್ಥವು ಇದೆಯೆಂಬ ಕಲ್ಪನೆ ವ್ಯರ್ಥ. ಇದಲ್ಲದೇ ಸಹೋಪಲಂಭನಿಯಮದಿಂದ (ವಿಷಯ ಮತ್ತು ಜ್ಞಾನ– ಇವೆರಡೂ ಜೊತೆಯಲ್ಲಿಯೇ ಅರಿವಿಗೆ ಬರುವದೆಂಬ ನಿಯಮದಿಂದ) ವಿಷಯ-ಜ್ಞಾನಗಳು ಅಭಿನ್ನವೆಂದೇ ಆಗುತ್ತದೆ. ಹೇಗೆಂದರೆ ಇವೆರಡರಲ್ಲಿ ಒಂದು ತಿಳಿಯದೆ ಮತ್ತೊಂದು ತಿಳಿಯುವುದಿಲ್ಲ. ಪ್ರತಿಬಂಧಕವಾದ ಕಾರಣವಿಲ್ಲದಿರುವುದರಿಂದ ಸ್ವಭಾವವು ಬೇರೆಬೇರೆಯಾಗಿದ್ದರೆ ಇದು ಯುಕ್ತವಾಗುವುದಿಲ್ಲ. ಆದ್ದರಿಂದ ಹೊರಗಿನ ಅರ್ಥವಿಲ್ಲ. ಇದನ್ನು ಸ್ವಪ್ನಾದಿಗಳಂತೆಯೂ ಅರಿಯಬೇಕು. ಹೇಗೆಂದರೆ ಸ್ವಪ್ನ, ಮಾಯೆ, ಮರೀಚ್ಯುದಕ, ಗಂಧರ್ವನಗರ– ಮುಂತಾದ ಪ್ರತ್ಯಯಗಳು ಹೇಗೆ ಬಾಹ್ಯಾರ್ಥವಿಲ್ಲದೆಯೇ ಗ್ರಾಹ್ಯಗ್ರಾಹಕಾಕಾರವಾಗಿ ಇರುತ್ತವೆಯೋ ಹಾಗೆಯೇ ಎಚ್ಚರದಲ್ಲಿ ಗೋಚರಿಸುವ ಸ್ತಂಭಾದಿಪ್ರತ್ಯಯಗಳು ಇರಬೇಕೆಂದು ತಿಳಿದುಬರುತ್ತದೆ. ಏಕೆಂದರೆ ಇವೂ ಪ್ರತ್ಯಯಗಳು ಎಂಬುದು ಸಮಾನವಾಗಿರುತ್ತದೆ. ಬಾಹ್ಯಾರ್ಥವಿಲ್ಲದಿದ್ದರೆ ಪ್ರತ್ಯಯ ವೈಚಿತ್ರ್ಯವು ಹೇಗೆ ಉಪಪನ್ನವಾಗುತ್ತದೆ ಎಂಬ ಪ್ರಶ್ನೆಗೆ ಬೌದ್ಧನು "ಇದು ವಾಸನಾವೈಚಿತ್ರ್ಯದಿಂದ" ಎನ್ನುತ್ತಾನೆ. ಹೇಗೆಂದರೆ ಅನಾದಿಯಾದ ಸಂಸಾರದಲ್ಲಿ ಬೀಜಾಂಕುರಗಳಂತೆ ವಿಜ್ಞಾನಗಳೂ ವಾಸನೆಗಳೂ ಅನ್ಯೋನ್ಯ ನಿತ್ಯ-ನೈಮಿತ್ತಿಕ ಭಾವದಿಂದಿರುವುದರಿಂದ ಪ್ರತ್ಯಯ ವೈಚಿತ್ರ್ಯವುಂಟಾಗುವದು ವಿರುದ್ಧವಲ್ಲ. ಅಲ್ಲದೇ, ಅನ್ವಯವ್ಯತಿರೇಕಗಳಿಂದ ಜ್ಞಾನವೈಚಿತ್ರ್ಯವು ವಾಸನಾನಿಮಿತ್ತವುಳ್ಳದ್ದೇ ಆಗಿದೆ ಎಂದು ತಿಳಿದುಬರುತ್ತದೆ. ಏಕೆಂದರೆ ಸ್ವಪ್ನಾದಿಗಳಲ್ಲಿ ಬಾಹ್ಯಾರ್ಥವಿಲ್ಲದಿದ್ದರೂ ಜ್ಞಾನವೈಚಿತ್ರ್ಯವುಂಟಾಗುವದೆಂದು ನಾವಿಬ್ಬರೂ ಒಪ್ಪುತ್ತೇವೆ. ಆದರೆ ವಾಸನೆಯಿಲ್ಲದೇ,

ಬಾಹ್ಯಾರ್ಥದ ನಿಮಿತ್ತದಿಂದಲೇ ಜ್ಞಾನವೈಚಿತ್ರ್ಯವಾಗುವದೆಂದು ನಾನು ಒಪ್ಪುವದಿಲ್ಲ. ಆದ್ದರಿಂದ ಬಾಹ್ಯಾರ್ಥವಿಲ್ಲ ಎಂಬ ವಿಜ್ಞಾನವಾದಿಯ ಹೇಳಿಕೆ ಪೂರ್ವಪಕ್ಷವಾಗಿ ಬಂದೊದಗಲು "ನಾಭಾವ ಉಪಲಬ್ಧೇಃ" (೨-೨-೨೮) ಎಂಬ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ವಿಜ್ಞಾನವಾದವನ್ನು ಖಂಡಿಸಲು ಅಭಾವಾಧಿಕರಣವನ್ನು ಪ್ರಾರಂಭಿಸುತ್ತಾರೆ. ಕಾಣಬರುವುದರಿಂದ ಬಾಹ್ಯಾರ್ಥದ ಅಭಾವವನ್ನು ನಿಶ್ಚಯಿಸಲು ಬರುವದಿಲ್ಲ. ಪ್ರತಿಯೊಂದು ಪ್ರತ್ಯಯದಲ್ಲಿಯೂ ಕಂಬಿ, ಗೋಡೆ, ಮಡಕೆ, ಬಟ್ಟೆ– ಎಂದು ಬಾಹ್ಯಾರ್ಥ ಕಾಣುತ್ತದೆ. ಹೀಗೆ ಕಾಣುತ್ತಿರುವುದನ್ನೇ ಇಲ್ಲ ಎನ್ನುವುದು ಸರಿಯಲ್ಲ. ಜನರು ಗೋಡೆಯನ್ನೊ ಕಂಬವನ್ನೊ ನೋಡುತ್ತಿರುವಾಗ ಉಪಲಬ್ಧಿ(ಅರಿವಿ)ಗೆ ವಿಷಯವೆಂದೇ ಗೋಡೆ-ಕಂಬವನ್ನು ಕಾಣುತ್ತಾರೆಯೇ ಹೊರತು, ಉಪಲಬ್ಧಿಯೇ ಗೋಡೆಯು–ಕಂಬವು ಎಂದು ಕಾಣಿಸುತ್ತಿಲ್ಲ. ಬಾಹ್ಯಾರ್ಥವನ್ನು ಅಲ್ಲಗಳೆಯುವವರೂ (ವಿಜ್ಞಾನವಾದಿಗಳೂ) ಒಳಗಿರುವ ಜ್ಞೇಯರೂಪವು ಹೊರಗಿರುವಂತೆ ಕಾಣಿಸುತ್ತದೆ ಎಂದು ಹೇಳುತ್ತಾರೆ. 'ಬಹಿರ್ವತ್' (ಹೊರಗಿನಂತೆ) ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ. ವಿಷ್ಣುಮಿತ್ರನು ಬಂಜೆಯ ಮಗನಂತೆ ತೋರುತ್ತಾನೆ ಎಂದು ಯಾವನೂ ಹೇಳುವುದಿಲ್ಲ. ಆದ್ದರಿಂದ ಅನುಭವಕ್ಕನುಸಾರವಾಗಿ ತತ್ತ್ವವನ್ನೊಪ್ಪುವವರು ಹೊರಗೇ ತೋರುತ್ತದೆ ಎಂದು ಒಪ್ಪುವುದು ಯುಕ್ತವೋ ಹೊರತು ಹೊರಗಿರುವಂತೆ ತೋರುತ್ತದೆ ಎಂದು ಹೇಳುವುದು ಯುಕ್ತವಲ್ಲ. "ಬಾಹ್ಯಾರ್ಥವು ಅಸಂಭವವಾದುದರಿಂದ ಹೊರಗಿರುವಂತೆ ಕಾಣಿಸುತ್ತದೆ" ಎಂಬ (ವಿಜ್ಞಾನವಾದಿಯ) ನಿರ್ಣಯವೂ ಸರಿಯಲ್ಲ. ಏಕೆಂದರೆ ಪ್ರಮಾಣದ ಪ್ರವೃತ್ತಿ, ಅಪ್ರವೃತ್ತಿ– ಇವುಗಳ ಮೂಲಕವೇ ಸಂಭವ-ಅಸಂಭವ– ಇವುಗಳನ್ನು ನಿರ್ಧರಿಸಬೇಕೇ ಹೊರತು ಸಂಭವಾಸಂಭವಗಳಿಂದ ಪ್ರಮಾಣದ ಪ್ರವೃತ್ತಿ ಅಪ್ರವೃತ್ತಿಗಳನ್ನು ನಿರ್ಧರಿಸತಕ್ಕದ್ದಲ್ಲ.

ಜ್ಞಾನದ ವಿಷಯಸಾರೂಪ್ಯದಿಂದ ವಿಷಯನಾಶವಾಗುವುದಿಲ್ಲ. ಏಕೆಂದರೆ ವಿಷಯವಿಲ್ಲದಿದ್ದರೆ ವಿಷಯಸಾರೂಪ್ಯವೆಂಬುದೇ ಹೊಂದುವುದಿಲ್ಲ. ವಿಷಯವು ಹೊರಗೆ ಕಾಣಿಸುವುದರಿಂದಲೂ ಹೀಗೆಂದು ತಿಳಿಯಬೇಕು. ಆದ್ದರಿಂದ ಪ್ರತ್ಯಯ-ವಿಷಯಗಳು ಜೊತೆಯಲ್ಲಿ ಕಾಣಬರುವವೆಂಬ ನಿಯಮವೂ ಉಪಾಯೋಪೇಯಭಾವವೆಂಬ ಕಾರಣದಿಂದಾದದ್ದೇ ಹೊರತು ಅಭೇದವೆಂದ ಕಾರಣದಿಂದ ಆದದ್ದಲ್ಲವೆಂದು ಒಪ್ಪಬೇಕು. ಇದಲ್ಲದೆ ಘಟಜ್ಞಾನ-ಪಟಜ್ಞಾನ ಎಂಬಲ್ಲಿ ವಿಶೇಷಣವಾದ ಘಟ-ಪಟಗಳಿಗೆ ಭೇದವೇ ಹೊರತು ವಿಶೇಷ್ಯವಾದ ಜ್ಞಾನಕ್ಕಿಲ್ಲ. ಬಿಳಿಯ ಎತ್ತು, ಕರಿಯ ಎತ್ತು ಎಂಬಲ್ಲಿ ಬಿಳುಪು-ಕಪ್ಪು ಇವುಗಳಿಗೆ ಭೇದವೇ ಹೊರತು ಗೋತ್ವದಲ್ಲಿ ಭೇದವಿಲ್ಲದ ಹಾಗೆ. ಆದ್ದರಿಂದ ಅರ್ಥ (ವಸ್ತು)-ಜ್ಞಾನಗಳಿಗೆ ಭೇದವಿದೆ. ಹೀಗೆ ಹಾಲಿನ ವಾಸನೆ, ಹಾಲಿನ ಸವಿ ಎಂಬಲ್ಲಿ ವಿಶೇಷ್ಯಗಳಾಗಿರುವ ವಾಸನೆ ಸವಿಗಳಿಗೆ ಭೇದವಿರುವದೇ ಹೊರತು ವಿಶೇಷಣವಾದ ಹಾಲಿಗಿಲ್ಲವೋ ಹಾಗೆ, ಘಟದರ್ಶನ-ಘಟಸ್ಮರಣ ಎಂಬಲ್ಲಿ ವಿಶೇಷ್ಯಗಳಾಗಿರುವ ದರ್ಶನಸ್ಮರಣಗಳಿಗೆ ಭೇದವಿರುವದೇ

ಹೊರತು ವಿಶೇಷಣವಾದ ಘಟಕ್ಕಿಲ್ಲ. ಇದಲ್ಲದೆ ಪೂರ್ವೋತ್ತರ ಕಾಲದಲ್ಲಿರುವ ಎರಡು ವಿಜ್ಞಾನಗಳೂ ತಮ್ಮನ್ನು ತಾವು ಅರಿಯುವುದರಲ್ಲಿಯೇ ಉಪಕ್ಷೀಣವಾಗುವುದರಿಂದ ಪರಸ್ಪರ ಗ್ರಾಹ್ಯಗ್ರಾಹಕಭಾವವು ಹೊಂದುವುದಿಲ್ಲ. ಇದರಿಂದ ವಿಜ್ಞಾನಗಳು ಬೇರೆ ಬೇರೆ ಎಂಬ ಪ್ರತಿಜ್ಞೆ. ಅವಕ್ಕೆ ಕ್ಷಣಿಕತ್ವಾದಿಧರ್ಮಗಳಿವೆ– ಎಂಬ ಪ್ರತಿಜ್ಞೆ. ಸ್ವಲಕ್ಷಣಸಾಮಾನ್ಯ ಲಕ್ಷಣ, ವಾಸ್ಯವಾಸಕತ್ವ, ಅವಿದ್ಯೋಪಪ್ಲವ, ಸದಸದ್ಧರ್ಮ ಬಂಧಮೋಕ್ಷಾದಿ (ಬೌದ್ಧದರ್ಶನದ) ಪ್ರತಿಜ್ಞೆಗಳನ್ನು ತ್ಯಜಿಸಬೇಕಾಗುವುದು.

ವಿಜ್ಞಾನವಾದಿಯ ಪ್ರಕಾರ ವಿಜ್ಞಾನವು ಪ್ರದೀಪದಂತೆ ಪ್ರಕಾಶಾತ್ಮಕವಾಗಿರುವುದರಿಂದ ತಾನೇ ಅನುಭವಕ್ಕೆ ಬರುತ್ತದೆ. ಆದರೆ ಬಾಹ್ಯಾರ್ಥವು ಹಾಗೆ ಅನುಭವಕ್ಕೆ ಬರುವದಿಲ್ಲ. ಸಿದ್ಧಾಂತಿಯ ಪ್ರಕಾರ ಅರ್ಥಕ್ಕಿಂತ ವ್ಯತಿರಿಕ್ತವಲ್ಲದ ವಿಜ್ಞಾನವು ತಾನೇ ಅನುಭೂತವಾಗುತ್ತದೆ ಎಂಬುದು ಸರಿಯಲ್ಲ. ಏಕೆಂದರೆ ತನ್ನಲ್ಲಿ ತನ್ನ ಕ್ರಿಯೆಯು ವ್ಯಾಪಿಸುವದೆಂಬುದು ವಿರುದ್ಧವಾಗಿರುವುದರಿಂದಲೇ ಹೀಗೆಂದು ನಿಶ್ಚಯವಾಗುತ್ತದೆ. ವಿಜ್ಞಾನವು ಪ್ರದೀಪದಂತೆ ಮತ್ತೊಂದು ಪ್ರಕಾಶವನ್ನು ಬಯಸದೆ ತಾನೆ ಬೆಳಗುತ್ತದೆ ಎಂದು ಹೇಳಿದರೆ, ವಿಜ್ಞಾನವು ಪ್ರಮಾಣಗಮ್ಯವಲ್ಲ, ಅದನ್ನು ಅರಿಯುವವನೂ ಇಲ್ಲ ಎಂದು ಹೇಳಿದಂತಾಗುವುದು. ಇದು ಕಲ್ಲಿನ ಬಂಡೆಯೊಳಗೆ ಸಾವಿರದೀಪಗಳು ಬೆಳಗುತ್ತಿರುವವು ಎಂದಂತಾಗುವುದು. ಚಕ್ಷುಸ್ಸೆಂಬ ಕರಣವುಳ್ಳ ಮತ್ತೊಬ್ಬ ಜ್ಞಾತೃವಿಗೆ ಪ್ರದೀಪವು ತೋರುವುದು ಕಂಡುಬಂದಿರುತ್ತದೆ. ಆದ್ದರಿಂದ ವಿಜ್ಞಾನವೂ ಅವಭಾಸ್ಯವಾಗಿರುವದೆಂಬುದು (ಅಜ್ಞಾನವಾದಿಗೂ ಅದ್ವೈತಿಗೂ) ಸಮಾನವಾಗಿರುವುದರಿಂದ ಅದನ್ನು ಅರಿಯುವವನು ಮತ್ತೊಬ್ಬನಿದ್ದರೇ ಪ್ರದೀಪದಂತೆ ಅದು ಬೆಳಗುತ್ತದೆ ಎಂದು ನಿಶ್ಚಯಿಸಬೇಕು.

"ಜ್ಞಾತೃವಾದ ಸಾಕ್ಷಿಯು ಸ್ವಯಂ ಸಿದ್ಧನಾಗಿರುತ್ತಾನೆ ಎಂದು ಹೇಳಿರುವುದರಿಂದ ವಿಜ್ಞಾನವು ತಾನೇ ಬೆಳಗುತ್ತದೆ– ಎಂಬೀ ನನ್ನ ಪಕ್ಷವನ್ನೇ ಬೇರೇ ವಾಚೋಯುಕ್ತಿಯಿಂದ ನೀನು ಆಶ್ರಯಿಸಿದಂತಾಯಿತಲ್ಲ" ಎಂದು ವಿಜ್ಞಾನವಾದಿಯು ಹೇಳಲು, ಅದನ್ನೊಪ್ಪದ ಸಿದ್ಧಾಂತಿಯು "ವಿಜ್ಞಾನಕ್ಕೆ ಹುಟ್ಟು-ಸಾವು-ಅನೇಕತ್ವ – ಮುಂತಾದ ವಿಶೇಷಗಳಿವೆಯೆಂದು ನೀನೇ ಒಪ್ಪಿದ್ದೀಯೆ. ಆದ್ದರಿಂದ ಪ್ರದೀಪದಂತೆ ವಿಜ್ಞಾನವೂ ಅದಕ್ಕಿಂತ ಭಿನ್ನನಾದ ಮತ್ತೊಬ್ಬನಿಂದ ಅರಿಯಲ್ಪಡುತ್ತದೆ– ಎಂದು ನಮ್ಮಿಂದ ಸಾಧಿಸಲ್ಪಟ್ಟಿದೆ" ಎಂದು ಹೇಳುತ್ತಾನೆ.

"ಸ್ವಪ್ನಾದಿಪ್ರತ್ಯಯಗಳಂತೆ ಎಚ್ಚರದಲ್ಲಿ ಕಾಣಬರುವ ಸ್ತಂಭಾದಿ ಪ್ರತ್ಯಯಗಳೂ ಕೂಡ ಬಾಹ್ಯಾರ್ಥಗಳಿಲ್ಲದೆಯೇ ಇರಬಹುದು. ಏಕೆಂದರೆ ಎರಡೂ ಪ್ರತ್ಯಯಗಳಾಗಿರುತ್ತವೆ"– ಎಂದು ಹೇಳುವ ವಿಜ್ಞಾನವಾದಿಗೆ ಉತ್ತರ ಹೇಳಲು "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" (೨-೨-೨೯) ಎಂಬ ಸೂತ್ರಭಾಷ್ಯವನ್ನು ಶ್ರೀ ಶಂಕರರು ರಚಿಸುತ್ತಾರೆ. ವೈಧರ್ಮ್ಯವಿರುವುದರಿಂದ ಜಾಗ್ರದವಸ್ಥೆಯ ಪ್ರತ್ಯಯಗಳು

ಸ್ವಪ್ನಾದಿಗಳಂತಲ್ಲ. ವೈಧರ್ಮ್ಯವೆಂದರೆ ಬಾಧಾಬಾಧಗಳು. ಸ್ವಪ್ನದಲ್ಲಿ ಕಂಡ ವಸ್ತು ಎಚ್ಚರವಾದಾಗ ಬಾಧಿತವಾಗುತ್ತದೆ. ಮಾಯೆ-ಮುಂತಾದವುಗಳಲ್ಲಿಯೂ ಕಂಡುಬರುವ ವಸ್ತುಗಳು ಬಾಧಿತವಾಗುತ್ತವೆ. ಆದರೆ ಎಚ್ಚರದಲ್ಲಿ ಕಂಡ (ಕಂಬ-ಮುಂತಾದ) ವಸ್ತು ಯಾವ ಅವಸ್ಥೆಯಲ್ಲಿಯೂ ಬಾಧಿತವಾಗುವದಿಲ್ಲ. ಇದಲ್ಲದೆ ಕನಸು ಕಂಡದ್ದು ಸ್ಮೃತಿಯಾದರೆ ಎಚ್ಚರದಲ್ಲಿ ಕಂಡದ್ದು ಅನುಭವವಾಗಿರುತ್ತದೆ. ಪ್ರಾಜ್ಞರಾದವರು ತಮ್ಮ ಅನುಭವವನ್ನೇ ಅಲ್ಲಗಳೆಯುವುದು ಯುಕ್ತವಲ್ಲ. ಇದಲ್ಲದೆ ವಿಜ್ಞಾನವಾದಿಯು ತನ್ನ ಅನುಭವಕ್ಕೆ ವಿರೋಧವು ಬರುವುದರಿಂದ ಜಾಗರಿತ ಪ್ರತ್ಯಯಗಳಿಗೆ ಸ್ವತಃ ನಿರಾಲಂಬನತ್ವವನ್ನು ಹೇಳಲಾರದೆ ಸ್ವಪ್ನಪ್ರತ್ಯಯಗಳ ಸಾದೃಶ್ಯದಿಂದ ಹಾಗೆ ಹೇಳಲು ಹೊರಟಿರುತ್ತಾನೆ. ಯಾವುದು ಯಾವುದರ ಸ್ವತಃ ಧರ್ಮವಾಗಿರಲಾರದೊ ಅದು ಮತ್ತೊಂದರ ಸಾಧರ್ಮ್ಯದಿಂದ ಅದರ ಧರ್ಮವಾಗಲಾರದು. ಬೆಂಕಿ ಬಿಸಿ ಎಂದು ಅನುಭವಕ್ಕೆ ಬರುತ್ತಿರುವಾಗ ನೀರಿನ ಸಾದೃಶ್ಯದಿಂದ ಅದು ತಣ್ಣಗಿದೆ ಎಂದಾಗಲಾರದು. ಹೀಗೆ ಸ್ವಪ್ನಜಾಗರಿತಗಳ ವೈಧರ್ಮ್ಯವನ್ನು ಸಿದ್ಧಾಂತಿ ತೋರಿಸಿಕೊಟ್ಟಿದ್ದಾನೆ.

''ಬಾಹ್ಯ ವಸ್ತುಗಳಿಲ್ಲದಿದ್ದರೂ ವಾಸನಾ ವೈಚಿತ್ರ್ಯದಿಂದ ಜ್ಞಾನವೈಚಿತ್ರ್ಯವು ಉಪಪನ್ನವಾಗುತ್ತದೆ'' ಎಂಬ ಅಜ್ಞಾನವಾದಿಯ ಮತವನ್ನು ಅಲ್ಲಗಳೆಯಲು, ''ನ ಭಾವೋಽನುಪಲಬ್ಧೇಃ'' (೨-೨-೩೦) ಎಂದು ಸೂತ್ರಭಾಷ್ಯಕ್ಕೆ ಶ್ರೀ ಶಂಕರರು ಮೊದಲಾಗುತ್ತಾರೆ. ವಾಸನೆಗಳ ಇರವು ಇಲ್ಲ; ಏಕೆಂದರೆ ಬಾಹ್ಯಾರ್ಥವು ಕಾಣಿಸುವುದಿಲ್ಲ ಎಂದು ಸೂತ್ರಾರ್ಥ. ಅರ್ಥೋಪಲಬ್ಧಿಯ ನಿಮಿತ್ತದಿಂದಲೇ ಒಂದೊಂದು ಅರ್ಥಕ್ಕೂ ಬೇರೆಬೇರೆಯ ರೂಪದ ವಾಸನೆಗಳು ಉಂಟಾಗುತ್ತವೆ. ಬಾಹ್ಯವಸ್ತುಗಳ ಉಪಲಬ್ಧಿಯಿಲ್ಲದಿದ್ದರೆ ವಿಚಿತ್ರವಾದ ವಾಸನೆಗಳು ಯಾವ ನಿಮಿತ್ತದಿಂದ ಆಗಬೇಕು. ವಾಸನೆಗಳು ಅನಾದಿಯಾಗಿರುತ್ತವೆ ಎಂದರೂ– ಅಂಧಪರಂಪರಾನ್ಯಾಯದಿಂದ ಆಧಾರರಹಿತವಾದ, ವ್ಯವಹಾರವನ್ನು ಲೋಪಗೊಳಿಸುವ ಅನವಸ್ಥೆ ಆದೀತೇ ಹೊರತೂ ಅವನ ಅಭಿಪ್ರಾಯ ಸಿದ್ಧಿಸಲಾರದು. ವಾಸನಾನಿಮಿತ್ತದಿಂದಲೇ ಈ ಜ್ಞಾನಜಾತವುಂಟಾಗುತ್ತದೆ, ಅರ್ಥನಿಮಿತ್ತವಾಗಿ ಉಂಟಾಗುವುದಿಲ್ಲ – ಎಂಬ ಅನ್ವಯವ್ಯತಿರೇಕವೂ ಹೀಗೆ ತಿರಸ್ಕೃತವಾದಂತಾಯಿತು. ಅರ್ಥದ ಅರಿವಿಲ್ಲದೆ ವಾಸನೆಯೇ ಉಂಟಾಗುವುದಿಲ್ಲ. ಇದಲ್ಲದೆ ವಾಸನೆಗಳಿಲ್ಲದೆಯೇ ಅರ್ಥೋಪಲಬ್ಧಿಯು ನಮಗೆ ಒಪ್ಪಿತವಾಗಿರುವುದರಿಂದಲೂ, ಅರ್ಥೋಪಲಬ್ಧಿಯಿಲ್ಲದೆ ವಾಸನೋತ್ಪತ್ತಿಯು ಒಪ್ಪಿತವಾಗಿಲ್ಲದಿರುವುದರಿಂದಲೂ ಅನ್ವಯವ್ಯತಿರೇಕಗಳೂ ಅರ್ಥಗಳಿವೆ ಎಂಬುದನ್ನೇ ಸ್ಥಾಪಿಸುತ್ತವೆ. ವಾಸನೆಗಳೆಂದರೆ ಸಂಸ್ಕಾರ ವಿಶೇಷಗಳು. ಸಂಸ್ಕಾರಗಳು ಆಶ್ರಯವಿಲ್ಲದೆ ಆಗುವುದಿಲ್ಲ. ಏಕೆಂದರೆ ಹೀಗೆ ಲೋಕದಲ್ಲಿ ಕಂಡಿರುತ್ತದೆ. ಆದರೆ ಅಜ್ಞಾನವಾದಿಯ ಮತದಲ್ಲಿ ವಾಸನೆಗಳಿಗೆ ಆಶ್ರಯವು ಯಾವುದೂ ಇಲ್ಲ. ಏಕೆಂದರೆ ಅದು ಪ್ರಮಾಣದಿಂದ ಕಂಡುಬಂದಿಲ್ಲ.

ವಿಜ್ಞಾನವಾದದ ಇತರ ದೋಷಗಳನ್ನು ಶ್ರೀ ಶಂಕರರು "ಕ್ಷಣಿಕತ್ವಾಚ್ಚ" (೨-೨-೩೧) ಎಂಬ ಸೂತ್ರಭಾಷ್ಯದಲ್ಲಿ ವಿವರಿಸುತ್ತಾರೆ. ವಾಸನಾಶ್ರಯವೆಂದು ಪರಿಕಲ್ಪಿತವಾದ ಆಲಯವಿಜ್ಞಾನವು, ಕ್ಷಣಿಕವೆಂದು ಒಪ್ಪಿರುವುದರಿಂದ ಮತ್ತು ಅನವಸ್ಥಿತರೂಪವೂ ಆಗಿರುವುದರಿಂದ, ಪ್ರವೃತ್ತಿ ವಿಜ್ಞಾನದಂತೆ ವಾಸನೆಗಳಿಗೆ ಆಶ್ರಯವಾಗಲಾರದು. ಕಾಲತ್ರಯಕ್ಕೆ ಸಂಬಂಧಿಸಿದ ಒಂದು ಅನ್ವಯಿ ಇಲ್ಲದಿದ್ದರೆ, ಅಥವಾ ಸರ್ವಾರ್ಥದರ್ಶಿಯಾದ ಕೂಟಸ್ಥನಿಲ್ಲದಿದ್ದರೆ, ದೇಶಕಾಲನಿಮಿತ್ತಾಪೇಕ್ಷವಾದ ವಾಸನೆಗಳನ್ನುಂಟುಮಾಡುವ ಸ್ಮೃತಿ-ಪ್ರತಿಸಂಧಾನ ಮುಂತಾದ ವ್ಯವಹಾರವು ಸಂಭವಿಸಲಾರದು. ಆಲಯವಿಜ್ಞಾನದ ಸ್ಥಿರ ಸ್ವರೂಪತ್ವವನ್ನು ಒಪ್ಪಿದರೆ ಸಿದ್ಧಾಂತ ಹಾನಿ ಆಗುವುದು. ಮತ್ತು ವಿಜ್ಞಾನವಾದದಲ್ಲಿಯೂ ಕ್ಷಣಿಕತ್ವವನ್ನೊಪ್ಪಿರುವುದು ಸಮಾನವಾಗಿರುವುದರಿಂದ ಬಾಹ್ಯಾರ್ಥವಾದದಲ್ಲಿ "ಉತ್ತರೋತ್ಪಾದೇ ಚ ಪೂರ್ವನಿರೋಧಾತ್" ಎಂದು ಮುಂತಾಗಿ ಕ್ಷಣಿಕತ್ವನಿಮಿತ್ತದಿಂದ ಆಗುವ ಯಾವ ದೋಷಗಳನ್ನು ಹೇಳಲಾಗಿತ್ತೋ, ಅವು ಇಲ್ಲಿಯೂ ಕಾಣುತ್ತವೆ.

ಶ್ರೀ ಶಂಕರರು ಬಾಹ್ಯಾರ್ಥವಾದಿಪಕ್ಷ, ವಿಜ್ಞಾನವಾದಿಪಕ್ಷ– ಎಂಬೀ ಎರಡು ವೈನಾಶಿಕಪಕ್ಷಗಳನ್ನು ನಿರಾಕರಿಸಿದ್ದಾರೆ. ಅವರ ಪ್ರಕಾರ ಎಲ್ಲ ಪ್ರಮಾಣಗಳಿಗೂ ವಿರುದ್ಧವಾದ ಶೂನ್ಯವಾದಿಯ ಪಕ್ಷವನ್ನು ಖಂಡಿಸಲು ಆದರವನ್ನು ತೋರಿಸಬೇಕಾಗಿಲ್ಲ. ಏಕೆಂದರೆ ಈ ಸರ್ವಪ್ರಮಾಣಸಿದ್ಧವಾದ ಲೋಕವ್ಯವಹಾರವನ್ನು ಮತ್ತೊಂದು ತತ್ತ್ವವನ್ನು ಆಶ್ರಯಿಸದ ಹೊರತು ಅಲ್ಲಗಳೆಯಲಿಕ್ಕಾಗುವುದಿಲ್ಲ. ಏಕೆಂದರೆ ಅಪವಾದವಿಲ್ಲದಿದ್ದರೆ ಸಾಮಾನ್ಯವು ಸಿದ್ಧವಾಗಿಯೇ ಇರುತ್ತದೆ.

ಪ್ರಮಾಣಪ್ರಮೇಯವ್ಯವಹಾರವು ಸಾರ್ವತ್ರಿಕವಾಗಿದೆ. ಇದು ಭ್ರಾಂತಿ ಎಂದು ತೊರೆಯುವ ಮುನ್ನ ಇದಕ್ಕೆ ಬಾಧಕವಾದ ತತ್ತ್ವಜ್ಞಾನವನ್ನು ತೋರಿಸಿಕೊಡಬೇಕು. ಶೂನ್ಯವಾದದಲ್ಲಿ ಅಂಥ ತತ್ತ್ವಜ್ಞಾನಕ್ಕೆ ಅವಕಾಶವೇ ಇಲ್ಲ. ವೇದಾಂತವಲ್ಲಾದರೆ ಪ್ರಮಾಣಪ್ರಮೇಯ ವ್ಯವಹಾರವು ಅಧ್ಯಾಸನಿಮಿತ್ತವೆಂದೂ ಅದ್ವಿತೀಯಾತ್ಮತತ್ತ್ವವೇ ಪರಮಾರ್ಥತತ್ತ್ವವೆಂದೂ ತೋರಿಸಿಕೊಡುವುದರಿಂದ ಈ ದೋಷವಿಲ್ಲ.

ಕಟ್ಟಕಡೆಗೆ ಶ್ರೀ ಶಂಕರರು "ಸರ್ವಥಾನುಪಪತ್ತೇಶ್ಚ" (೨-೨-೩೨) ಎಂಬ ಸೂತ್ರಭಾಷ್ಯದಲ್ಲಿ ಸರ್ವಪ್ರಕಾರದಿಂದಲೂ ಅನುಪಪನ್ನವಾಗಿರುವುದರಿಂದ ಈ ವೈನಾಶಿಕ ಮತವು ಸರಿಯಲ್ಲವೆಂದು ಘೋಷಿಸುತ್ತಾರೆ. ಅವರ ಪ್ರಕಾರ ಹೆಚ್ಚು ಹೇಳಿದ್ದರಿಂದೇನು ? ಈ ವೈನಾಶಿಕ ಸಮಯವನ್ನು ಯುಕ್ತಿಯಿಂದ ಸಮರ್ಥಿಸಬಹುದೋ ಇಲ್ಲವೋ– ಎಂಬುದನ್ನು ಎಷ್ಟು ಬಗೆಯಿಂದ ಪರೀಕ್ಷಿಸಿದರೂ ಅದು ಮರಳುಭೂಮಿಯ ಬಾವಿಯ ಹಾಗೆ ಕುಸಿಯುತ್ತಲೇ ಹೋಗುತ್ತದೆ. ಇದರಲ್ಲಿ ಯಾವ ಉಪಪತ್ತಿಯನ್ನೂ ಕಾಣೆವು. ಆದ್ದರಿಂದ ವೈನಾಶಿಕ ತಂತ್ರವ್ಯವಹಾರವು ಅನುಪಪನ್ನವಾದದ್ದು. ಇದಲ್ಲದೆ ಬಾಹ್ಯಾರ್ಥ, ವಿಜ್ಞಾನ, ಶೂನ್ಯ– ಎಂಬ ಒಂದಕ್ಕೊಂದು ವಿರುದ್ಧವಾದ ಮೂರು ವಾದಗಳನ್ನು

ಉಪಪೇಶಿಸಿರುವ ಸಂಗತನು ತಾನು ಅಸಂಬದ್ಧ ಪ್ರಲಾಪಿ ಎಂಬುದನ್ನೂ ಅಥವಾ ವಿರುದ್ಧಾರ್ಥಪ್ರತಿಪತ್ತಿಯಿಂದ ಈ ಜನರು ವಿಮೂಢರಾಗಲಿ ಎಂದು ಜನರಲ್ಲಿ ತನ್ನ ದ್ವೇಷವನ್ನೂ ಸ್ಪಷ್ಟೀಕರಿಸಿದಂತಾಯಿತು. ಶ್ರೇಯಸ್ಕಾಮರಾದವರು ಈ ಸಂಗತಸಮಯವನ್ನು ಸರ್ವಥಾ ಅನಾದರಿಸತಕ್ಕದ್ದು – ಎಂದು ಅಭಿಪ್ರಾಯ.

ಹೀಗೆ ಶ್ರೀ ಶಂಕರರು ಬೌದ್ಧವಿಪರೀತವಾದಿಗಳನ್ನು ಖಂಡಿಸಿದ್ದು, ಸ್ವ ಸಿದ್ಧಾಂತವನ್ನು ಸ್ಥಾಪಿಸಿದ್ದು ಅದ್ವೈತವೇದಾಂತದ ಚರಿತ್ರೆಯಲ್ಲಿ ಮಹತ್ತ್ವದ ಘಟನೆಯಾಗಿದೆ. ಆದರೆ ಭಾರತೀಯ ದರ್ಶನದ ಮುಂದಿನ ಬೆಳವಣಿಗೆಯಲ್ಲಿ ಶ್ರೀ ಶಂಕರರು ಮತ್ತು ಬೌದ್ಧರನ್ನು ಹೋಲಿಸಿ ಆಕ್ಷೇಪಿಸಿದ್ದು ಕಂಡುಬರುತ್ತದೆ. ಪದ್ಮಪುರಾಣದಲ್ಲಿ ಮಾಯಾವಾದವನ್ನು ಅಸಚ್ಛಾಸ್ತ್ರವೆಂದು ಹೇಳಿ 'ಪ್ರಚ್ಛನ್ನಬೌದ್ಧ' ಎಂಬ ಪದಪನ್ನು ಬಳಸಲಾಗಿದೆ.[೪] ಶ್ರೀ ಭಾಷ್ಯಕಾರರಾದ ರಾಮಾನುಜರು ಶಂಕರರನ್ನು "ವೇದವಾದಚ್ಛದ್ಮ ಪ್ರಚ್ಛನ್ನಬೌದ್ಧ" ಎಂದು ಕರೆದಿದ್ದಾರೆ.[೫] ಭಾಸ್ಕರಾಚಾರ್ಯರೂ ಕೂಡ ಶಾಂಕರ ವೇದಾಂತದ ಮೇಲೆ ಬೌದ್ಧದರ್ಶನದ ಪೂರ್ಣ ಪ್ರಭಾವವನ್ನು ಪ್ರದರ್ಶಿಸುತ್ತ, ಶಂಕರರ ಮಾಯಾವಾದವನ್ನು ಮಹಾಯಾನ ಬೌದ್ಧದರ್ಶನದಿಂದ ಗೃಹೀತವೆಂದು ಹೇಳುತ್ತಾರೆ.[೬] ಯೋಗವಾಸಿಷ್ಠದಲ್ಲಿ ಶೂನ್ಯವಾದಿಗಳ ಶೂನ್ಯವನ್ನೂ, ಬ್ರಹ್ಮವಾದಿಗಳ ಬ್ರಹ್ಮವನ್ನೂ, ವಿಜ್ಞಾನವಾದಿಗಳ ವಿಜ್ಞಾನವನ್ನೂ ಸಮಾನವೆಂದು ಬಣ್ಣಿಸಲಾಗಿದೆ.[೭] ನ್ಯಾಯಕುಸುಮಾಂಜಲಿಯ ಕರ್ತೃವಾದ ಉದಯನಾಚಾರ್ಯರೂ ಮಾಯಾವಾದಿಗಳ ಬ್ರಹ್ಮ ಮತ್ತು ಶೂನ್ಯವಾದಿಗಳ ಶೂನ್ಯದಲ್ಲಿ ಸ್ವರೂಪತಃ ಭೇದವಿಲ್ಲ ಎಂದು ಹೇಳುತ್ತಾರೆ.[೮] ಆನಂದತೀರ್ಥರೂ ಇದೇ ಪರಂಪರೆಯಲ್ಲಿ ಮುಂದುವರಿದು "ಶೂನ್ಯವಾದಿಗಳ ಶೂನ್ಯವೇ ಮಾಯಾವಾದಿಗಳ ಬ್ರಹ್ಮ. ಅದರಲ್ಲಿ ಲಕ್ಷಣ-ಭೇದವಿಲ್ಲ" ಎನ್ನುತ್ತಾರೆ.[೯] "ಮಾಯಾವಾದಿವೇದಾಂತ್ಯಪಿ ನಾಸ್ತಿಕ ಏವ ಪರ್ಯವಸಾನೇ ಸಂಪದ್ಯತೆ" ಎಂದು ಭೀಮಾಚಾರ್ಯರು 'ನ್ಯಾಯಕೋಶ'ದಲ್ಲಿ ಬೌದ್ಧರ ಸಾಲಿನಲ್ಲಿ ಶ್ರೀ ಶಂಕರರಿಗೆ ಸ್ಥಾನ ನೀಡುವಂತೆ ಕಾಣಿಸುತ್ತದೆ.[೧೦] 'ಶಾಸ್ತ್ರದೀಪಿಕಾ'ದಲ್ಲಿ "ತಸ್ಮಾದ್ವರಮಸ್ಮಾನ್ ಮಾಯಾವಾದಾನ್ಮಾಹಾಯಾನಿಕವಾದಃ" ಎಂದು ಹೇಳಿ ಮಾಯಾವಾದಕ್ಕಿಂತ

---

೪. ರಾಮಮೂರ್ತಿ ಶರ್ಮಾ- ಅದ್ವೈತ್ ವೇದಾಂತ್– (ನ್ಯಾಶನಲ್ ಪಬ್ಲಿಶಿಂಗ್ ಹೌಸ್, ದಿಲ್ಲಿ ೧೯೭೨) ಪುಟ ೩೩೬.

೫. ಅದೇ ಪುಟ ೩೩೭ ಮತ್ತು ಶ್ರೀಭಾಷ್ಯ ೨-೨-೨೭.

೬. ಅದೇ ಮತ್ತು ಭಾಸ್ಕರಭಾಷ್ಯ ೧-೪-೪೫.

೭. ಅದೇ ಮತ್ತು ಯೋಗವಾಸಿಷ್ಠ ೫-೮೭-೧೮.

೮. ಬೌದ್ಧದರ್ಶನ್ ತಥಾ ಅನ್ಯ ಭಾರತೀಯ ದರ್ಶನ್– ದ್ವಿತೀಯ ಭಾಗ್– ಭರತ್‌ಸಿಂಹ ಉಪಾಧ್ಯಾಯ (ಬಂಗಾಲ್ ಹಿಂದೀ ಮಂಡಲ್– ಕಲ್ಕತ್ತಾ, ಪ್ರಥಮ ಸಂಸ್ಕರಣ) ಪುಟ ೧೦೨೮.
"ಯನ್ಮಾಯಾವಾದಿನೋ ಬ್ರಹ್ಮ ಯಚ್ಛೂನ್ಯಂ ಶೂನ್ಯವಾದಿನಃ ।
ನಹಿ ಸ್ವರೂಪಭೇದೋಽಸ್ತಿ ಸ್ವತಃ ಸಿದ್ಧತ್ವತಸ್ತಯೋಃ ॥" ಉದಯನ.

೯. ಅದೇ ಪುಟ ೧೦೨೮.

೧೦. ಅದೇ

ಮಹಾಯಾನಿಕವಾದವನ್ನು ಲೇಸೆಂದು ಹೇಳಲಾಗಿದೆ.[೧೧] "ಪ್ರಕರಣಪಂಚಿಕಾ"ದಲ್ಲಿ ಶಾಲಿಕಾನಾಥನು "ತಸ್ಮಾದೇಷೋಽಪಿ ಮಹಾಯಾನಿಕಪಕ್ಷಪ್ರವೇಶೋ ಬ್ರಹ್ಮವಾದಿನಾಂ ಮೋಹ ಏವ" ಎಂದು ಹೇಳಿ ಮಹಾಯಾನಿಕರ ಪಕ್ಷದಲ್ಲಿ ಪ್ರವೇಶಿಸಿದ್ದು ಬ್ರಹ್ಮವಾದಿಗಳ ಮೋಹವೇ ಸರಿ ಎಂದು ನುಡಿಯುತ್ತಾನೆ.[೧೨] ಪದ್ಮಪಾದಾಚಾರ್ಯರು ತಮ್ಮ "ಪಂಚದೀಪಿಕಾ"ದಲ್ಲಿ "ಅಂಶಃ ಸ ಏವ ಮಹಾಯಾನಿಕ ಪಕ್ಷಃ ಸಮರ್ಥಿತಃ" ಎಂದು ಹೇಳಿ ಶಾಂಕರ ದರ್ಶನದಲ್ಲಿ ಅಂಶತಃ ಮಾಹಾಯಾನಿಕ ಪಕ್ಷದ ಸಮರ್ಥನೆಯೂ ಇದೆ ಎನ್ನುತ್ತಾರೆ.[೧೩] ಡಾ. ಸುರೇಂದ್ರನಾಥ ದಾಸಗುಪ್ತರು ಶಂಕರಾಚಾರ್ಯರ 'ಬ್ರಹ್ಮ'ವನ್ನು ನಾಗಾರ್ಜುನನ 'ಶೂನ್ಯ'ಕ್ಕೆ ತೀರ ಹತ್ತಿರವಾದದ್ದೆಂದು ಹೇಳುತ್ತಾರೆ. "His Brahmam was very much like the Sunya of Nagarjuna." ಇದಲ್ಲದೆ ವಿಜ್ಞಾನಭಿಕ್ಷು – ಮುಂತಾದ ಪ್ರಚ್ಛನ್ನ ಬೌದ್ಧವಾದಿಗಳನ್ನು ಅನುಸರಿಸುತ್ತಿರುವ ಶಂಕರಾಚಾರ್ಯರನ್ನು ಪ್ರಚ್ಛನ್ನ ಬೌದ್ಧರೆಂದು ಕರೆಯುತ್ತಾರೆ. ಮತ್ತು ಅವರ ದರ್ಶನವನ್ನು ಉಪನಿಷತ್ ಪ್ರತಿಪಾದಿತ ಆತ್ಮವಾದದ ಸಂಗಡ ಬೌದ್ಧ ವಿಜ್ಞಾನವಾದ ಮತ್ತು ಶೂನ್ಯವಾದದ ಮಿಶ್ರಣವೆಂದೂ ಹೇಳುತ್ತಾರೆ.[೧೪] ಡಾ. ಬಿ. ಎಂ. ಬರುವಾ ಮಾಧ್ಯಮಿಕ ದರ್ಶನದ ಅಭಾವದಲ್ಲಿ ಶಾಂಕರ ದರ್ಶನದ ಸತ್ತೆಯು ಅಸಂಭವವೆನ್ನುತ್ತಾರೆ.[೧೫] ಅಂದರೆ ಮಾಧ್ಯಮಿಕ ದರ್ಶನ ಹುಟ್ಟದಿದ್ದರೆ ಶಾಂಕರ ದರ್ಶನದ ಇರವೇ ಅಸಂಭವವಾಗಿರುತ್ತಿತ್ತು ಎಂದು ಅವರ ಅಭಿಪ್ರಾಯ. ರಾಹುಲ ಸಾಂಕೃತ್ಯಾಯನರು ಶಾಂಕರ ಮಾಯಾವಾದವನ್ನು ನಾಗಾರ್ಜುನನ ಶೂನ್ಯವಾದದ ನಾಮಾಂತರವೆನ್ನುತ್ತಾರೆ.[೧೬] ಭರತ್‌ಸಿಂಹ್ ಉಪಾಧ್ಯಾಯರು "ಬ್ರಹ್ಮವನ್ನು ಶೂನ್ಯದೆಡೆಗೆ ಕೊಂಡೊಯ್ದುದ್ದರಿಂದ, ಆತ್ಮಕ್ಕೆ ಶಾಶ್ವತ ವಿಜ್ಞಾನದ ರೂಪವನ್ನು ನೀಡಿದ್ದರಿಂದ ಶಂಕರರು ಪ್ರಚ್ಛನ್ನ ಅಥವಾ ಪ್ರಕಟ ಬೌದ್ಧರಾಗಿದ್ದರು." ಎನ್ನುತ್ತಾರೆ. ಇನ್ನೂ ಮುಂದುವರಿಯುತ್ತ ಅವರು "ತಥತೆ ಮತ್ತು ವಿಜ್ಞಪ್ತಿಮಾತ್ರತೆಯನ್ನು ಬ್ರಹ್ಮತ್ವದೆಡೆಗೆ ಒಯ್ದುದ್ದಕ್ಕಾಗಿ ಅಶ್ವಘೋಷ, ಅಸಂಗ ಮತ್ತು ವಸುಬಂಧು– ಇವರು ಪ್ರಚ್ಛನ್ನ ಅಥವಾ ಪ್ರಕಟ ಬ್ರಹ್ಮವಾದಿಗಳಾಗಿದ್ದರು" ಎಂದೂ ಹೇಳುತ್ತಾರೆ.[೧೭]

ಭಾರತೀಯ ದರ್ಶನದ ವಿಕಾಸ ಕ್ರಮವನ್ನು ಗಮನಿಸುತ್ತ, ಮೇಲ್ಕಂಡ ಎಲ್ಲ ಆಕ್ಷೇಪಗಳನ್ನು ನಿರಾಕರಿಸಲು ಶಕ್ಯವಾಗುತ್ತದೆ. ಈ ಕೆಳಕಂಡ ಅಂಶಗಳು ಆದ್ದರಿಂದ ಮಹತ್ವದ್ದಾಗಿವೆ.

---

೧೧. ಅದೇ ಪುಟ ೧೦೨೯.
೧೨. ಅದೇ
೧೩. ಅದೇ ಮತ್ತು ಚಿತುಸ್ಸೂತ್ರೀ– ಶಂಕರಭಾಷ್ಯದ ಅದ್ವಿತೀಯ ಟೀಕಾ.
೧೪. Dr. S. N. Dasagupta : Indian Philosophy, Vol. I, Page 493.
೧೫. A. K. Ray Choudhari : The Doctrine of Maya, Page 186.
೧೬. ದರ್ಶನ್ ದಿಗ್ದರ್ಶನ್– ಪುಟ ೮೨೦, (ಕಿತಾಬ್ ಮಹಲ್ ೧೯೪೭, ದ್ವಿತೀಯ ಸಂಸ್ಕರಣ).
೧೭. ಬೌದ್ಧ ದರ್ಶನ್ ತಥಾ ಅನ್ಯ ಭಾರತೀಯ ದರ್ಶನ್– ಪುಟ ೧೦೪೫.

೧. ಶ್ರೀ ಶಂಕರರ ಹೊರತಾಗಿ ಇತರ ವೇದಾಂತಾಚಾರ್ಯರು ನೇರವಾಗಿ ಬೌದ್ಧರ ಸಂಪರ್ಕಕ್ಕೆ ಬರಲಿಲ್ಲ. ಏಕೆಂದರೆ ಅವರ ಕಾಲದಲ್ಲಿ ಬೌದ್ಧರ ಪರಂಪರೆ ಭಾರತದಲ್ಲಿ ಅತ್ಯಂತ ಕ್ಷೀಣವಾಗಿತ್ತು. ಈ ವೈಷ್ಣವಾಚಾರ್ಯರು ಶಂಕರರ ಮೇಲೆ ಆಕ್ರಮಣ ಮಾಡಿ ಬೌದ್ಧರ ಮೇಲೆ ಆಕ್ರಮಣ ಮಾಡಿದಾಗ ಆಗುವಷ್ಟು ಆನಂದವನ್ನು ಪಡೆದುಕೊಂಡರು. ಈ ಆಚಾರ್ಯರ ಭಾಷ್ಯಗಳಲ್ಲಿ ಬೌದ್ಧ ದರ್ಶನವನ್ನು ಕುರಿತ ಹೊಸ ಮಾತು ಯಾವುದೂ ದೊರಕುವುದಿಲ್ಲ. ಶಾಂಕರ ವೇದಾಂತ, ವಿಜ್ಞಾನವಾದ ಮತ್ತು ಶೂನ್ಯವಾದಗಳ ಯತ್ಕಿಂಚಿತ್ ಸಮಾನತೆ ಮತ್ತು ಅಧ್ಯಯನದ ಅನುಕರಣ ಮೂಲ ಪ್ರವೃತ್ತಿಯನ್ನು ಆಧರಿಸಿ ಅವರು ಶಂಕರರನ್ನು ಪ್ರಚ್ಛನ್ನ ಬೌದ್ಧರೆಂದು ಕರೆದು, ಬೌದ್ಧರ ಸಾಲಿನಲ್ಲಿ ಸೇರಿಸಲು ಯತ್ನಿಸಿದ್ದಾರೆ. ಭಾಸ್ಕರಾಚಾರ್ಯರ ಪ್ರಕಾರ ಮಾಯಾವಾದ ಅವರ ಸ್ವಕಲ್ಪಿತ ಸಿದ್ಧಾಂತ ಅಥವಾ ಬೌದ್ಧರಿಂದ ಎರವಲು ಪಡೆದದ್ದು, ಅದು ವೈದಿಕ ಸಿದ್ಧಾಂತವಲ್ಲ. ಈ ಮಾತು ಶಂಕರರನ್ನು ಪ್ರಚ್ಛನ್ನ ಬೌದ್ಧರೆಂದು ಕರೆದವರು ಬೌದ್ಧರಿಗಿಂತಲೂ ಹೆಚ್ಚಾಗಿ ಶಂಕರರ ವಿರೋಧಿಗಳಾಗಿದ್ದರು ಎಂಬುದನ್ನು ಸಾಬೀತುಪಡಿಸುತ್ತದೆ. ಆದ್ದರಿಂದ ಬೌದ್ಧದರ್ಶನದ ಅಸಮಂಜಸತೆಯನ್ನು ಹೆಜ್ಜೆ-ಹೆಜ್ಜೆಗೂ ತೋರಿಸಿರುವ ಶಂಕರರು ತಮ್ಮ ಬೌದ್ಧೇತರ ವಿರೋಧಿಗಳಿಂದಲೇ ಪ್ರಚ್ಛನ್ನ ಬೌದ್ಧರೆಂದು ಕರೆಸಿಕೊಂಡಿದ್ದು ಭಾರತೀಯ ದರ್ಶನದ ಅಣಕವಾಗಿದೆ.

೨. ಶ್ರೀ ಶಂಕರರು "ದಿಕ್ಕು, ದೇಶ, ಗುಣ, ಗತಿ, ಫಲಭೇದದಿಂದ ಶೂನ್ಯವಾದ ಪರಮಾರ್ಥ ಸತ್ ಅದ್ವಯಬ್ರಹ್ಮವು ಮಂದಬುದ್ಧಿಗಳಿಗೆ ಅಸತ್ತಾಗಿ ತೋರುತ್ತದೆ."[೧೮] "ನಮ್ಮೀ ಪ್ರತಿಷೇಧವು ಬ್ರಹ್ಮಾವಸಾನವುಳ್ಳದ್ದೇ ಹೊರತು ಅಭಾವದಲ್ಲಿ ಅವಸಾನ ಹೊಂದುವದಲ್ಲ."[೧೯] ಎಂದು ಹೇಳುತ್ತ ಶೂನ್ಯ ಮತ್ತು ಬ್ರಹ್ಮವನ್ನು ಬೇರ್ಪಡಿಸುತ್ತಾರೆ.

೩. ವಿವರಣಕಾರರಾದ ಪ್ರಕಾಶಾತ್ಮ ಯತಿಗಳು ಅದ್ವೈತವಾದವನ್ನು ವಿಜ್ಞಾನವಾದಕ್ಕೆ ಸಮಾನವೆಂದು ಹೇಳುವ ವಾಣಿಯನ್ನು ದುರ್ಜನರಮಣೀಯ ವಾಣಿಯೆಂದು ಕರೆಯುತ್ತಾರೆ.[೨೦]

---

೧೮. "ದಿಗ್ದೇಶಗುಣಗತಿ ಫಲಭೇದಶೂನ್ಯಂ ಹಿ ಪರಮಾರ್ಥಸತ್ ಅದ್ವಯಂ ಬ್ರಹ್ಮ ಮಂದಬುದ್ಧೀನಾಮಸದಿವ ಪ್ರತಿಭಾತಿ." – ಛಾಂದೋಗ್ಯಭಾಷ್ಯ ೮-೧-೧.

೧೯. "ಬ್ರಹ್ಮಾವಸಾನೋಽಯಂ ಪ್ರತಿಷೇಧೋ ನಾಭಾವಾವಸಾನಃ ।"
– ಬ್ರಹ್ಮಸೂತ್ರ ಶಾಂಕರಭಾಷ್ಯಂ ೩-೨-೨೨.

೨೦. ಪಂಚಪಾದಿಕಾ – ವಿವರಣ
ದುರ್ಜನರಮಣೀಯಾಂ ವಾಚಂ ಜಲ್ಪತಿ ಸುಗತವಿಜ್ಞಾನವಾದಸಮಾನೋಽಯಂ ವೇದಾಂತವಾದ ಇತಿ."

೪. ಶ್ರೀಹರ್ಷನ ಪ್ರಕಾರ ಬೌದ್ಧರು ಮತ್ತು ಬ್ರಹ್ಮವಾದಿಗಳಲ್ಲಿ ಅಂತರವಿದೆ. ಬೌದ್ಧಮತ ಎಲ್ಲವನ್ನೂ ಅನಿರ್ವಚನೀಯವೆಂದು ಬಣ್ಣಿಸಿದರೆ, ಬ್ರಹ್ಮವಾದಿಗಳು ವಿಜ್ಞಾನವ್ಯತಿರಿಕ್ತವಾದ ಈ ವಿಶ್ವವನ್ನು ಸತ್ತ್ವಾಸತ್ತ್ವಗಳಿಂದ ಅನಿರ್ವಚನೀಯವೆನ್ನುತ್ತಾರೆ.[೨೧] ಕಟ್ಟಕಡೆಯದಾಗಿ, ಶ್ರೀ ಶಂಕರರು ಬೌದ್ಧದರ್ಶನದಿಂದ ಪ್ರಭಾವಿತರಾಗಿ ಸ್ವದರ್ಶನವನ್ನು ನಿರ್ಮಿಸಿಕೊಂಡರು– ಎಂಬ ಬೌದ್ಧೇತರ ಶಂಕರ ವಿರೋಧಿಗಳ ಕೂಗು ಪಕ್ಷಪಾತದ್ದಾಗಿದೆ. ಡಾ. ರಾಧಾಕೃಷ್ಣನ್[೨೨] ಮತ್ತು ಸರ್ ಜಾನ್ ವುಡ್ರಫ್[೨೩] ಅವರು ಶ್ರೀ ಶಂಕರರನ್ನು ಪ್ರಚ್ಛನ್ನ ಬೌದ್ಧರೆಂದು ಒಪ್ಪುವದಿಲ್ಲ. ಶ್ರೀ ಶಂಕರರು ಬೌದ್ಧವಿಪರೀತವಾದಿಗಳ ರಾದ್ಧಾಂತವನ್ನು ಸಯುಕ್ತಿಕವಾಗಿ ಪ್ರತ್ಯಾಖ್ಯಾನ ಮಾಡಿದರು; ಅವರಿಂದ ಪ್ರಭಾವಿತರಾಗದೆ, ಸ್ವದರ್ಶನವನ್ನು ಕಂಡುಕೊಂಡರು. ಅವರ ದರ್ಶನ ಬೌದ್ಧರ ಪ್ರಭಾವದಿಂದ ರೂಪಿತವಾದದ್ದಲ್ಲ; ಪ್ರತ್ಯಾಖ್ಯಾನದಿಂದ ರೂಪಿತವಾದದ್ದು; ಅಲ್ಲಿಯ ತನಕ ಸಂಚಿತವಾದ ಜ್ಞಾನವನ್ನು ಅತಿಕ್ರಮಿಸಿದ್ದು – ಎಂದು ನನ್ನ ಅಭಿಪ್ರಾಯ.

* * *

## ಆಧಾರ ಗ್ರಂಥಗಳು

೧. ಬ್ರಹ್ಮಸೂತ್ರ ಶಾಂಕರಭಾಷ್ಯಂ ಆಚಾರ್ಯ ಜಗದೀಶ ಶಾಸ್ತ್ರಿಣಾ ಸಂಪಾದಿತಂ (ಮೋತೀಲಾಲ್ ಬನಾರಸೀದಾಸ್ : ದಿಲ್ಲಿ. ಫಸ್ಟ್ ಎಡಿಶನ್ ೧೯೮೦)

೨. ಬ್ರಹ್ಮಸೂತ್ರಭಾಷ್ಯ– ಸಂಪುಟ ೨. – ಶ್ರೀ ಸಚ್ಚಿದಾನಂದ ಸರಸ್ವತೀ ಸ್ವಾಮಿಗಳು. (ಮೊದಲನೆಯ ಸಂಸ್ಕರಣ. ಅಧ್ಯಾತ್ಮ ಪ್ರಕಾಶ ಕಾರ್ಯಾಲಯ. ಹೊಳೆನರಸೀಪುರ ೧೯೫೨)

೩. ಬ್ರಹ್ಮಸೂತ್ರಗಳು– ಶಾರೀರಕ ಮೀಮಾಂಸೆ– ಸ್ವಾಮಿ ಆದಿದೇವಾನಂದ. (ಮೊದಲನೆಯ ಪ್ರಕಾಶನ ೧೯೬೪. ಶ್ರೀರಾಮಕೃಷ್ಣಾಶ್ರಮ, ಮೈಸೂರು)

೪. ಸಂಸ್ಕೃತ-ಸುಕವಿ-ಸಮೀಕ್ಷಾ : ಆಚಾರ್ಯ ಬಲದೇವ್ ಉಪಾಧ್ಯಾಯ್ (ಚೌಖಂಬಾ ವಿದ್ಯಾಭವನ್. ವಾರಾಣಸೀ. ದ್ವಿತೀಯ ಸಂಸ್ಕರಣ ೧೯೭೮)

---

೨೧. "ಏವಂ ಚ ಸತಿ ಸೌಗತಬ್ರಹ್ಮವಾದಿನೋಃ ಕೋ ವಿಶೇಷ ಇತಿ ಚೇದಯಂ ವಿಶೇಷಃ ಯದಾದಿಮಃ ಸರ್ವಮೇವಾನಿರ್ವಚನೀಯಂ ವರ್ಣಯತಿ...................... ವಿಜ್ಞಾನವ್ಯತಿರಿಕ್ತಂ ಪುನರಿದಂ ವಿಶ್ವಂ ಸತ್ತ್ವಾಸತ್ತ್ವಾಭ್ಯಾಮನಿರ್ವಚನೀಯಂ ಬ್ರಹ್ಮವಾದಿನಃ ಸಂಗಿರಂತೆ."
– ಖಂಡನಖಂಡಖಾದ್ಯ : ಪ್ರಥಮ ಪರಿಚ್ಛೇದ.

೨೨. Dr. Radhakrishnan : Indian Philosophy, Vol. II, Page 432.

೨೩. Sir John Woodroffe : The world as power, Page 72. (Ganesh and Co., Madras)

# ಅದ್ವೈತ ಸಿದ್ಧಾಂತ ಹಾಗೂ ಸಾಪೇಕ್ಷತಾವಾದ



ಡಾ. ಕೆ. ವಿ. ಆಚಾರ್ಯ

ಮೂಲ ಉಪನಿಷದ್‌ಗಳು ವೇದಗಳ ಉಪಸಂಹಾರ ರೂಪದಲ್ಲಿರುವುದರಿಂದ ಅವನ್ನು ವೇದಾಂತವೆಂದು ಪರಿಗಣಿಸುತ್ತಾರೆ. ಉಪನಿಷದ್‌ಗಳ ಕೆಲಭಾಗಗಳು ಶ್ಲೋಕ ರೂಪದಲ್ಲೂ, ಇನ್ನು ಕೆಲಭಾಗಗಳು ಗದ್ಯರೂಪದಲ್ಲೂ ಇದ್ದು ಉಳಿದ ಭಾಗಗಳು ಇವುಗಳ ಸಮ್ಮಿಶ್ರಣವಾಗಿವೆ. ಅಲ್ಲಲ್ಲಿ ಆತ್ಮಜ್ಞಾನದ ಅನುಭವವಾದಾಗ ಹರ್ಷೋದ್ಗಾರಗಳು ಸ್ಫುರಿಸುವವು. ಚರಮ ಸತ್ಯದ ಬೆನ್ನಟ್ಟಿಕೊಂಡು ಬರೆಯಲಾದ ಉಪನಿಷದ್‌ಗಳ ಸರಮಾಲೆಗಳಿಗೇನೂ ಕೊರತೆ ಇಲ್ಲ. ಅಂತೆಯೇ ಉಪನಿಷದ್‌ಗಳ ಪರಿಚ್ಛೇದಗಳನ್ನು ಏಕರೂಪದಲ್ಲಿ ಸಾರುವ ಅವಶ್ಯಕತೆ ಹುಟ್ಟಿಕೊಂಡಿತು. ಪೂಜ್ಯ ಶ್ರೀ ಬಾದರಾಯಣರ ಬ್ರಹ್ಮಸೂತ್ರ ಹಾಗೂ ಭಗವಾನ್ ಶ್ರೀ ಕೃಷ್ಣನ ಭಗವದ್ಗೀತೆಗಳು ಈ ದಿಸೆಯಲ್ಲಿ ಹುಟ್ಟಿಕೊಂಡ ಮೊದಲ ಯತ್ನಗಳು.

ವಾಸ್ತವಿಕತೆ (Reality) ಒಂದೇನೆ ? ಅಥವಾ ಒಂದು ಹಾಗೂ ಹಲವೇ ? ಸಾರ್ವತ್ರಿಕವಾಗಿ ಒಂದು, ಆದರೆ ಪ್ರಾಯೋಗಿಕವಾಗಿ ಹಲವೇ ? ಇಂತಹ ಪ್ರಶ್ನೆಗಳಿಗೆ ಶ್ರೀ ಶಂಕರಾಚಾರ್ಯರು ಉತ್ತರಿಸಿದರು. "ಜಗತ್ತು ಮಿಥ್ಯ, ತಾನು ಅಂದರೆ ಬ್ರಹ್ಮ ಸತ್ಯ" ಅದ್ವೈತ ಪ್ರತಿಪಾದಕರಲ್ಲಿ ಅವರು ಪ್ರಮುಖರು. ವಿದ್ವತ್ಪೂರ್ಣ ಬೋಧಕರವರು. ವಾಸ್ತವಿಕತೆಯ ವಿಶೇಷತೆ ಇರುವುದು ಅದರ ನಿರಾವಲಂಬನೆಯಲ್ಲಿ (Absoluteness). ಸಾಪೇಕ್ಷವಾಗಿ ಯಥಾವತ್ತಾಗಿರುವ ಈ ಜಗತ್ತು ಸತ್ಯವಾಗಿದ್ದಂತೆ ಕಾಣಿಸುತ್ತದೆ. ಆದರೆ ಇದು ಎಲ್ಲಿಯವರೆಗೆ ? ಈ ಮಾಯಾ ಜಗತ್ತು ಆತ್ಮ ಸಾಕ್ಷಾತ್ಕಾರವಾಗುವವರೆಗೆ ಸತ್ಯವಾಗಿ ಕಾಣಿಸುತ್ತದೆ. ಪಾರಮಾರ್ಥಿಕತೆ ಹಾಗೂ ವ್ಯಾವಹಾರಿಕತೆ ಇವೆರಡೂ ಸಾಪೇಕ್ಷವಾಗಿ ಯಥಾವತ್ತಾಗಿರುವ ಜಗತ್ತಿನ ಎರಡು ಮುಖಗಳು. ಈ ರೀತಿ, ವಾಸ್ತವಿಕತೆಯ ನಿರಾವಲಂಬಿ ದೃಷ್ಟಿಕೋನ ಹಾಗೂ ಜಗತ್ತಿನ ಸಾಪೇಕ್ಷಯಥಾವತ್ತತೆಯನ್ನು ವಿಭಿನ್ನೀಕರಿಸಿದ್ದು ಇವರ ವಿಶೇಷತೆ.

## ವ್ಯಕ್ತಿ ಹಾಗೂ ಅಂತಿಮ ಸತ್ಯ

ಅಂತಿಮ ಸತ್ಯದ ಸಾರವಿರುವುದು ಯಾವುದರ ಮೇಲೂ ಹೊಂದಿರದ ಅದರ ನಿರಾವಲಂಬಿ ಗುಣದಲ್ಲಿ. ಕಾಲ, ಸ್ಥಳ (ಆಕಾಶ) ಹಾಗೂ ನಿಮಿತ್ತಗಳಿಂದ ಅದು ಅಬಾಧಿತ (Invariant). ಅಂತಹ ನಿರಾವಲಂಬಿ ವೈಚಾರಿಕತೆಯನ್ನು ನೆಲೆಯಿಲ್ಲದ ಹಾಗೂ ಸ್ಥಿರವಲ್ಲದ ಮಾನವ ಬುದ್ಧಿಶಕ್ತಿಯಿಂದ ಗ್ರಹಿಸಲು ಸಾಧ್ಯವೇ ? ಅಂತಲೇ, ಅಂತಿಮ ಸತ್ಯದ ಸಮಗ್ರ ಕಲ್ಪನೆ ಮಾನವಾತೀತವೆಂದು ಶಂಕರರ ಪ್ರತಿಪಾದನೆ. ಅದಕ್ಕಾಗಿ ಅಪೌರುಷೇಯ ವೇದಗಳ ಮೊರೆಹೊಕ್ಕು ಜ್ಞಾನಮಾರ್ಗದಿಂದ ಮುಕ್ತಿ ಪಡೆಯಬಹುದು. ಇದರರ್ಥ ಚರ್ಚೆಗೆ ಅವಕಾಶವಿಲ್ಲವೇ ? ಅಂತಿಮ ಸತ್ಯದ ತಿಳಿವಳಿಕೆ ಬಯಸುವವರಿಗೆ ಚರ್ಚೆಗೆ ಅವಕಾಶ ಇಲ್ಲ ಎಂತಲ್ಲ. ಅಂತೆಯೇ ಇಲ್ಲಿ ಒಂದು ಚರ್ಚೆ.

## ಭಾವಾರ್ಥ

ತನ್ನನ್ನು ತಾನರಿತುಕೊಳ್ಳುವುದೇ ಸತ್ಯ. ನಿರ್ವಿಶೇಷ, ನಿರ್ವಿಕಾರವಾದುದೇ ಬ್ರಹ್ಮನ್. ಜೀವಕ್ಕೂ ಬ್ರಹ್ಮಕ್ಕೂ ವ್ಯತ್ಯಾಸ ಸಲ್ಲದು. ನಮಗೇನಾದರೂ ಆತ್ಮಕ್ಕೆ ಪರಿಮಿತಿ ಇದೆ ಎಂದೆನಿಸಿದರೆ ಅದು ಅದರ ತಪ್ಪಲ್ಲ. ಆತ್ಮ ಉಪಾಧಿಗಳಿಂದ ಆವೃತವಾದಾಗ ಉಂಟಾದ ಅವಿದ್ಯೆಯಿಂದ ಅದು ಬಂಧನದಲ್ಲಿದ್ದಂತೆ ಭಾಸವಾಗುತ್ತದೆ. ಆವೃತ ಉಪಾಧಿಗಳಿಂದ ಹೊರ ಬನ್ನಿ. ಆಗ ಜೀವನ್ಮುಕ್ತಿಯ ಅರಿವು ಸ್ವಾಭಾವಿಕವಾಗಿ ಆಗುವುದು.
**ಕೆಲ ಉಪಾಧಿಗಳು** – ಭೌತಿಕ ದೃಷ್ಟಿಯಿಂದ.

೧. ಮೇಜಿನ ಮೇಲೆ ಇಟ್ಟಿಗೆಯೊಂದನ್ನು ತಳ್ಳಿದಾಗ ಅದರ ಗತಿ ನಿಲ್ಲುವುದು. ಕಾರಣ ಎರಡು ವಸ್ತುಗಳ ಮಧ್ಯೆ ಹುಟ್ಟಿಕೊಂಡ ಘರ್ಷಣೆಯಿಂದ. ಘರ್ಷಣೆರಹಿತ ಸನ್ನಿವೇಶದಲ್ಲಿ ಚಲಿಸುವ ವಸ್ತು ಚಲಿಸುತ್ತಲೇ ಇರಬೇಕು – ನ್ಯೂಟನ್ನನಿಗೆ ಅನಿಸಿದ್ದು.

ಚಲಿಸುವ ಇಟ್ಟಿಗೆಯ ಚಲನೆ ನಿಲ್ಲುವುದು ಮೇಜಿನ ದೃಷ್ಟಿಯಿಂದ. ಒಂದೊಮ್ಮೆ ಮೇಜು ಚಲಿಸುತ್ತಿದ್ದರೆ ? ಇಟ್ಟಿಗೆ ನಿಲ್ಲುವುದು ಮೇಜಿನ ದೃಷ್ಟಿಯಿಂದಲೇ ? ಅಥವಾ ನೆಲದ ಮೇಲೆ ನಿಂತ ಪ್ರೇಕ್ಷಕನ ದೃಷ್ಟಿಯಿಂದಲೇ ? ನಿರಾವಲಂಬ ವಿರಾಮ ಸ್ಥಿತಿ (Absolute state of rest) ಎಂಬುದಿದೆಯೇ ?

ಒಂದೇ ದಿಕ್ಕಿನಲ್ಲಿ, ಒಂದೇ ವೇಗದಲ್ಲಿ ಘರ್ಷಣೆಯಿಲ್ಲದೆ ಚಲಿಸುವ ಚೌಕಟ್ಟನ್ನು ಜಡ ಚೌಕಟ್ಟು ಎಂದು ಕರೆಯುತ್ತಾರೆ (Inertial frame of reference). ಭೌತಶಾಸ್ತ್ರದ ಅನೇಕ ನಿಯಮಗಳು ಇಂತಹ ಚೌಕಟ್ಟಿನಲ್ಲಿ ಸರಿಹೊಂದುತ್ತವೆ ಎಂದು ನಾವು ಬಲ್ಲೆವು. ಆದರೆ ಅಂತಹ ಚೌಕಟ್ಟುಗಳಲ್ಲಿ ಮಾಡಬಹುದಾದ ಯಾವುದೇ ಪ್ರಯೋಗಗಳಿಂದ ಆ ಚೌಕಟ್ಟು ಚಲಿಸುತ್ತಿದೆಯೇ ಅಥವಾ ಇಲ್ಲವೇ ಎಂದು ತಿಳಿಯಲು ಸಾಧ್ಯವಿಲ್ಲ. ಭಾರತೀಯರಿಗೆ ಭೂಮಿಯ ಚಲನೆಯ ಅರಿವಿತ್ತು. ಆದರೆ ಪಾಶ್ಚಾತ್ಯರಿಗೆ ಅರಿವಾದದ್ದು

ಕಾಪರ್ನಿಕಸ್ ತಿಳಿಯ ಹೇಳಿದ ಮೇಲೆ. ಆದರೆ ಅಂದು ಇದನ್ನು ವಿರೋಧಿಸಿದವರೇ ಹೆಚ್ಚು. ಕಾರಣ ಅವರನ್ನಾವರಿಸಿದ ಉಪಾಧಿ. ಭೂಮಿ ಚಲಿಸುವಹಾದರೆ ತಾನಾಗಿ ಬೀಳುವ ವಸ್ತು ನೇರವಾಗಿ ಕೆಳಬೀಳಲಾರದೆಂಬುದು ಅವರ ವಾದ. ಚಲಿಸುವ ಹಾಗೂ ಚಲಿಸದಿರುವ ಹಡಗಿನಲ್ಲಿರುವ ಪಟಸ್ತಂಭ(Mast)ದ ತುದಿಯಿಂದ ವಸ್ತುವನ್ನು ಬೀಳಿಸಿದಾಗ ಎರಡು ಪ್ರಯೋಗಗಳ ಫಲಿತಾಂಶ ಸರಿಸಮ ಎಂದು ಗೆಲಿಲಿಯೋ ತೋರಿಸಿದ್ದು ಚರಿತ್ರೆಯ ಭಾಗ. ಗತಿಜ್ಞಾನ ಅಥವಾ ಚಲನ ಶಾಸ್ತ್ರದ ನಿಯಮಗಳು ಎಲ್ಲಾ ಜಡ ಚೌಕಟ್ಟಿನಲ್ಲಿ ಒಂದೇ ರೀತಿ ಇರುತ್ತವೆ ಎಂದಾಯಿತು. ಅರ್ಥಾತ್ ಅಬಾಧಿತ (invariant) ವಾಗಿರುತ್ತವೆ.

೨. ವಿದ್ಯುತ್‌ಕಾಂತೀಯ ಚಲನ ಶಾಸ್ತ್ರದ ನಿಯಮಗಳು ಬೇರೆ ಬೇರೆ ಜಡ ಚೌಕಟ್ಟಿನಲ್ಲಿ ಹೇಗಿರುತ್ತವೆ ? ಎಲ್ಲ ಜಡ ಚೌಕಟ್ಟಿನಲ್ಲಿ ಒಂದೇ ರೀತಿ ಇರಬೇಕೆ ? ಅಥವ ಒಂದೊಂದು ಜಡ ಚೌಕಟ್ಟಿನಲ್ಲಿ ಅವುಗಳ ಫಲಿತಾಂಶ ಬೇರೆ ಬೇರೆ ಆಗಿರಬಹುದೇ ? ಉದಾಹರಣೆಗೆ ವಿದ್ಯುತ್‌ಕಣವೊಂದು ಚಲಿಸಿದಾಗ ಅದರ ಸುತ್ತ ಕಾಂತೀಯ ಕ್ಷೇತ್ರ (Magnetic field) ಉಂಟಾಗುವುದು ಸ್ವಾಭಾವಿಕ. ಚಲಿಸುತ್ತಿರುವ ಚೌಕಟ್ಟಿನಲ್ಲಿರುವ ವಿದ್ಯುತ್ಕಣ ಆ ಚೌಕಟ್ಟಿನಲ್ಲಿ ವಿಶ್ರಾಂತಿಯಲ್ಲಿರುವುದರಿಂದ ಅಲ್ಲಿ .ಕಾಂತೀಯ ಕ್ಷೇತ್ರ ಉಂಟಾಗದು. ಆದರೆ ನೆಲದ ಮೇಲೆ ನಿಂತು ನೋಡಿದಾಗ ಅದು ಚಲಿಸುತ್ತಿರುವುದರಿಂದ ಕಾಂತೀಯ ಕ್ಷೇತ್ರ ಆಗಲೇ ಬೇಕು. ಇದು ವಿರೋಧಾಭಾಸವಲ್ಲವೇ ? ವಿದ್ಯುತ್ ಕಾಂತೀಯ ತತ್ವಗಳು ಸರಿದೂಗಬೇಕಾದರೆ ವಿಶೇಷ ನಿರಾವಲಂಬಿ ಚೌಕಟ್ಟನ್ನು ಕಲ್ಪಿಸಿಕೊಳ್ಳಬೇಕೆಂದವರು ಅನೇಕರು. ಬೇರೆ ಬೇರೆ ಜಡ ಚೌಕಟ್ಟುಗಳಲ್ಲಿ ಚಲಿಸುವ ವಿದ್ಯುತ್ಕಣಗಳ ವೇಗವನ್ನು ಈ ನಿರಾವಲಂಬಿ ಹಾಗೂ ವಿರಾಮ ಸ್ಥಿತಿಯಲ್ಲಿನ ಚೌಕಟ್ಟಿನಿಂದ ಅಳೆಯಬೇಕೆಂದಾಯಿತು. ಈ ಉಪಾಧಿ (Upadhi) ಯಿಂದ ಹೊರಬರಲು ಹಲವು ವರ್ಷಗಳು ತಗಲಿದುವು.

೧೯ನೆಯ ಶತಮಾನದ ವಿದ್ಯುತ್ ಕಾಂತೀಯ ತತ್ವಗಳು ಕೆಲವು ಊಹೆಗಳ ಮೇಲೆ ಬೆಳೆದುವು. ಇಡಿ ಜಗತ್ತನ್ನು ಈಥರ್ (Ether) ಎಂಬ ಜೆಲಿ (Jelly) ಮಾದರಿಯ ಕಣ್ಣಿಗೆ ಕಾಣದ ಮಾಧ್ಯಮದಿಂದ ತುಂಬಿದೆ ಎಂದು ಕಲ್ಪಿಸಿಕೊಂಡು. ವಿದ್ಯುತ್ಕಣ ಈ ಮಾಧ್ಯಮದಲ್ಲಿ ಚಲಿಸುವಾಗ ಮಾಧ್ಯಮದಲ್ಲಿ ಉಂಟಾಗುವ ಪೀಡನೆಯಿಂದ ವಿದ್ಯುತ್ ಮತ್ತು ಕಾಂತೀಯ ಕ್ಷೇತ್ರಗಳು ಹುಟ್ಟಿಕೊಳ್ಳುವುವು ಎಂದು ಭ್ರಮಿಸಿದ್ದರು. ಈ ದೃಷ್ಟಿಯಿಂದ ಬಂಡಿಯಲ್ಲಿ ಚಲಿಸುತ್ತಿರುವ ವೀಕ್ಷಕನ ಅನುಭವ ಬೇರೆ ಆಗುವುದು. ಕಾರಣ ಈಥರ್ ಮಾಧ್ಯಮ ದೃಷ್ಟಿಯಿಂದ ಅವನು ವಿರಾಮ ಸ್ಥಿತಿಯಲ್ಲಿಲ್ಲದವನು. ಈ ಕಾರಣದಿಂದ ವಿದ್ಯುತ್ ಕಾಂತೀಯ ನಿಯಮಗಳು ಅಬಾಧಿತವಲ್ಲ (Invariant ಅಲ್ಲ) ಎಂದಾಯಿತು.

## ಈಥರ್ ಡ್ರಾಗ್ (Ether drag) :

ಬಂಡಿಯಲ್ಲಿರುವ ವ್ಯಕ್ತಿ ಈಥರ್ ಮಾಧ್ಯಮದಲ್ಲಿ ಚಲಿಸುತ್ತಿರುವಂತೆ ಭೂಮಿಯ ಮೇಲಿರುವ ವೀಕ್ಷಕನೂ ಚಲಿಸುತ್ತಿಲ್ಲವೇ ? ಭೂಮಿ ತನ್ನ ಕಕ್ಷೆಯ ಸುತ್ತ

ತಿರುಗುವ ಜೊತೆಗೆ ಸೂರ್ಯನ ಸುತ್ತೂ ತಿರುಗುತ್ತದೆ. ಸೂರ್ಯನು ಸೇರಿದಂತೆ ನಕ್ಷತ್ರಗಳ ಸರಮಾಲೆಗಳ ಇಡಿ ವಿಶ್ವದಲ್ಲಿ ಚಲಿಸುತ್ತಿದೆ. ಒಟ್ಟಿನಲ್ಲಿ ಸದ್ಯಕ್ಕೆ ತಿಳಿದಂತೆ ನಾವು ಪ್ರತಿ ಸೆಕೆಂಡಿಗೆ ಸುಮಾರು ೫೦ ಕಿ. ಮೀ. ನಷ್ಟು ವೇಗದಲ್ಲಿ ಚಲಿಸುತ್ತಿದ್ದೇವೆ. ಅಂದರೆ ವಿದ್ಯುತ್ ಕಣ ಭೂಮಿಯ ಮೇಲೆ ವಿಶ್ರಾಂತಿ ಸ್ಥಿತಿಯಲ್ಲಿದ್ದರೂ ಈಥರ್ ಮಾಧ್ಯಮದಲ್ಲಿ ಚಲಿಸುತ್ತಿದೆ ಎಂದಾಯಿತು. ಈ ಪ್ರಕಾರ ಬಂಡಿಯಲ್ಲಿದ್ದ ವೀಕ್ಷಕನು ತಪ್ಪಳತೆಯನ್ನು ಮಾಡಿದ್ದರೆ ಈಥರ್ ಮಾಧ್ಯಮದಲ್ಲಿ ಚಲಿಸುವ ಭೂಮಿಯಲ್ಲಿದ್ದ ವೀಕ್ಷಕನೂ ತಪ್ಪು ಮಾಡಿದ್ದಿರಬಹುದಲ್ಲವೇ ? ಈ ರೀತಿಯ ಸಮಸ್ಯೆಯಿಂದ ಪಾರಾಗಲು ಈಥರ್ Drag ನ್ನು ಕಲ್ಪಿಸಿಕೊಂಡರು. ಅಂದರೆ ಈಥರ್ ಮಾಧ್ಯಮವನ್ನು ಭೂಮಿ ತನ್ನ ಜೊತೆ ಸೆಳೆದುಕೊಂಡು ಒಯ್ಯುತ್ತಿದೆ ಎಂಬ ಊಹೆ. ಈ ಊಹೆ ಮೈಕೆಲ್‌ಸನ್ ಮತ್ತು ಮೋರ್ಲಿ ಎಂಬವನು ಮಾಡಿದ ಪ್ರಯೋಗಗಳಿಂದ ಸುಳ್ಳೆಂದು ಸಾಬೀತು ಪಟ್ಟಿತು. ಅವರ ಪ್ರಕಾರ–

i) ವೀಕ್ಷಕನ ಚಲನೆ ಅಥವ ಬೆಳಕಿನ ಉಗಮಸ್ಥಾನದ ಚಲನೆಯ ಮೇಲೆ ಬೆಳಕಿನ ವೇಗ ಹೊಂದಿಕೊಂಡಿಲ್ಲ. ಬೆಳಕಿನ ವೇಗ ಎಲ್ಲ ದಿಕ್ಕಿನಲ್ಲೂ ಒಂದೇ ಬೆಲೆ ಉಳ್ಳದ್ದಾಗಿರುತ್ತದೆ.

ii) ಈಥರ್ ಸೆಳೆದಾಟವಿಲ್ಲ (Drag). ಕಾರಣ ಈಥರ್ ಎಂಬುದೇ ಇಲ್ಲ.

iii) ಯಾವುದೇ ಜಡ ಚೌಕಟ್ಟಿನಲ್ಲಿ ವಿದ್ಯುತ್ ಕಾಂತೀಯ ಕ್ಷೇತ್ರಗಳಿಗೆ ಸಂಬಂಧಿಸಿದ ನಿಯಮಗಳನ್ನು ನಿರೂಪಿಸುವಾಗ, ಅಲ್ಲಿ ಚಲಿಸುವ ವಿದ್ಯುತ್‌ಕಣದ ವೇಗವನ್ನು ನಾವು ಯಾವ ಜಡ ಚೌಕಟ್ಟಿನಲ್ಲಿದ್ದೇವೆಯೋ ಅದಕ್ಕೆ ಸಂಬಂಧಿಸಿದಂತೆ ವಿದ್ಯುತ್ಕಣದ ವೇಗವನ್ನು ಅಳೆಯತಕ್ಕುದ್ದು.

## ಸೀಮಿತ ಸಾಪೇಕ್ಷತಾವಾದ :

(೧) ಭೌತಶಾಸ್ತ್ರದ ಪ್ರತಿ ನಿಯಮಗಳೂ ಎಲ್ಲ ಜಡ ಚೌಕಟ್ಟಿನಲ್ಲಿ ಪರಿಪಾಲನೆಯಾಗಬೇಕು (೨) ಬೆಳಕಿನ ವೇಗ ಸಾರ್ವತ್ರಿಕವಾಗಿ ಅನ್ವಯಿಸಬಹುದಾದ ನಿರ್ದಿಷ್ಟಪ್ರಮಾಣದ್ದಾಗಿರುತ್ತದೆ. ಅಂದರೆ ಯಾವುದೇ ಜಡ ಚೌಕಟ್ಟಿನಲ್ಲಿ ಬೆಳಕಿನ ವೇಗ ಒಂದೇ ಬೆಲೆಯುಳ್ಳದ್ದಾಗಿರುತ್ತದೆ. ಕಾರಣ ಇಷ್ಟೆ, ಬಂಡಿಯೊಳಗಿರುವ ವ್ಯಕ್ತಿ ಒಂದು ಸೆಕೆಂಡಿಗೆ ೫ ಮೀಟರ್ ವೇಗದಲ್ಲಿ, ಸೆಕೆಂಡಿಗೆ ೪೦ ಮೀಟರ್ ವೇಗದಲ್ಲಿ ಬಂಡಿ ಚಲಿಸುತ್ತಿರುವ ದಿಕ್ಕಿನಲ್ಲಿ ಸಾಗುತ್ತಿದ್ದರೆ, ಭೂಮಿಗೆ ಸಂಬಂಧಿಸಿದ ವೀಕ್ಷಕನ ದೃಷ್ಟಿಯಲ್ಲಿ ಅವನ ವೇಗ ಪ್ರತಿ ಸೆಕೆಂಡಿಗೆ ೪೫ ಮೀಟರ್ ಆಗುವುದು. ಆದರೆ ಬಂಡಿಯಿಂದ ಹೊರಚೆಲ್ಲಲ್ಪಡುತ್ತಿರುವ ಬೆಳಕಿನ ವೇಗ ಪ್ರತಿ ಸೆಕೆಂಡಿಗೆ (40 + c) m. / sec. ಆಗದೆ c ಯೇ ಆಗುತ್ತದೆ. ಅರ್ಥಾತ್ $c + u = c$ ಯೇ ! ಇದರ ಪರಿಣಾಮ ?

i) ಆಕಾಶ (space) ಮತ್ತು ಸಮಯ (time) ಗಳ ನಮ್ಮ ಕಲ್ಪನೆ ಬದಲಾಗಬೇಕು.

ii) ಭೌತಶಾಸ್ತ್ರದಲ್ಲಿ ವೇಗ (Velocity), ಚಲನ ಪರಿಣಾಮ (Momentum) ಹಾಗೂ ಶಕ್ತಿ (Energy) ಇವುಗಳ ಅರ್ಥ ಹಾಗೂ ವ್ಯಾಪ್ತಿಯನ್ನು ನಾವು ಪುನರ್ಪರಿಶೀಲಿಸಬೇಕಾಗುತ್ತದೆ.

iii) ಸಮಯ– ಆಕಾಶದ ರಚನೆ (space- time structure) ಯನ್ನು ಸಾಪೇಕ್ಷತಾವಾದ ಮಾರ್ಪಾಟು ಮಾಡುತ್ತದೆ. ಇಲ್ಲಿಯವರೆಗೆ ಅರ್ಥೈಸಿಕೊಂಡ ಭೌತಿಕ ನಿಯಮಗಳನ್ನು ಬದಲಾದ ಆಕಾಶ– ಸಮಯ ರಚನೆಯ ಹಿನ್ನೆಲೆಯಲ್ಲಿ ಅಭ್ಯಸಿಸಬೇಕು. ಜಾಮಿತಿ (Geometry) ಭೌತಶಾಸ್ತ್ರದ ಒಂದು ಭಾಗವಾಗಿ ಉದ್ಭವಿಸುತ್ತದೆ. ಏಕಕಾಲಿಕತೆ (Simultaneity), ಸಮಯ ವಿಸ್ತರಿಸುವಿಕೆ (time dilation), ವಸ್ತುವಿನ ಉದ್ದ ಕಡಮೆಯಾಗುವಿಕೆ (Length contraction) ಮುಂತಾದವುಗಳ ಸೀಮಿತ ಸಾಪೇಕ್ಷತಾವಾದದ ಮುಖ್ಯ ಪರಿಣಾಮಗಳು.

**೧) ಏಕಕಾಲಿಕತೆ :- (Simultaneity)**




ಬಂಡಿಯ ಮಧ್ಯಭಾಗದಲ್ಲಿ ಬೆಳಕಿನ ಮೂಲ ಇದೆ (B) A ಮತ್ತು a, B ನಿಂದ ಸಮಾನ ದೂರವಿರುವ ಗೋಡೆಗಳು.

ಚಲಿಸುವ ಬಂಡಿಯಿಂದ ವೀಕ್ಷಕನು ಗಮನಿಸುವಾಗ B ನಿಂದ ಹೊರಡುವ ಬೆಳಕು 'A' ಮತ್ತು 'a' ಯನ್ನು ಏಕ ಕಾಲದಲ್ಲಿ ಬಂದು ತಲುಪುತ್ತದೆ. ಅಂದರೆ ಈ ಎರಡು ಘಟನೆಗಳು ಏಕ ಕಾಲದಲ್ಲಿ ಜರುಗುವುವು.

ಚಲಿಸುವ ಬಂಡಿಯಲ್ಲಿ ನಡೆಯುವ ಈ ಘಟನೆಗಳನ್ನು ಭೂಮಿಯ ಮೇಲಿರುವ ಜಡ ಚೌಕಟ್ಟಿನ ಪ್ರೇಕ್ಷಕನಿಗೆ ಈ ಎರಡೂ ಘಟನೆಗಳು ಏಕಕಾಲದಲ್ಲಿ ನಡೆಯುವಂತೆ ಕಾಣದು. 'A' ಗೆ ಬೆಳಕು ಮುಂಚೆ ಬಂದು ಸೇರಿದರೆ 'a' ಗೆ ನಂತರ ತಲುಪುತ್ತದೆ.

ಅಂದರೆ ಒಂದು ಜಡ ಚೌಕಟ್ಟಿನಲ್ಲಿ ನಡೆಯುತ್ತಿರುವ ಎರಡು ಏಕಕಾಲಿಕ ಘಟನೆಗಳನ್ನು ಇನ್ನೊಂದು ಜಡ ಚೌಕಟ್ಟಿನಿಂದ ನೋಡುವಾಗ ಅವು ಒಂದೇ ವೇಳೆಯಲ್ಲಿ ನಡೆಯುತ್ತಿರುವಂತೆ ಕಾಣಿಸಲಾರವು. ಅಂದರೆ,

"Two events which occur simultaneously in one inertial frame cannot be simultaneous in another frame of reference."

**೨) ಸಮಯ ವಿಸ್ತರಣೆ :- (Time dilation)**

ಚಲಿಸುತ್ತಿರುವ ಜಡಚೌಕಟ್ಟಿನಲ್ಲಿ ಪ್ರತಿಸೆಕೆಂಡು ನಿಧಾನವಾಗಿ ಸಾಗುತ್ತದೆ ಎಂಬುದನ್ನು ಸಾಪೇಕ್ಷತಾವಾದದಲ್ಲಿ ಕಂಡುಹಿಡಿದದ್ದು ಮಾತ್ರವಲ್ಲ ಅದಕ್ಕೆ ಪ್ರಾಯೋಗಿಕವಾದ ಹಿನ್ನೆಲೆಯನ್ನು ಒದಗಿಸಲಾಗಿದೆ. ಜಡ ಚೌಕಟ್ಟಿನಲ್ಲಿ ಚಲಿಸುವ ಗಡಿಯಾರದ ವೇಗ ಹೆಚ್ಚಾದಂತೆ, ಸೆಕೆಂಡು ನಿಧಾನವಾಗುತ್ತದೆ. "Moving clocks run slow."

ನ್ಯೂಟ್ರಾನ್, ಮ್ಯೂವಾನ್ (Muon), ನ್ಯೂಟ್ರಲ್ ಪಯಾನ್ (Pion)... ಮುಂತಾದ ನೂರಾರು ಪ್ರಾಥಮಿಕ ಕಣಗಳಿವೆ (elementary particles). ಅವು ಬೆಳಕಿನ

ವೇಗಕ್ಕಿಂತ ಸ್ವಲ್ಪ ಕಡಮೆ ವೇಗದಲ್ಲಿ ಚಲಿಸಲು ಶಕ್ಯವಾದ ಕಣಗಳು. ಉದಾಹರಣೆಗೆ ಮ್ಯೂವಾನ್ ವಿಶ್ರಾಂತಿ ಸ್ಥಿತಿ (Rest) ಯಲ್ಲಿದ್ದಾಗ ಎರಡು ಮೈಕ್ರೊ ಸೆಕೆಂಡುಗಳ ಕಾಲಾವಧಿ ಇದ್ದರೆ, $\frac{೩}{೫}$ c ಯಷ್ಟು ವೇಗದಲ್ಲಿ ಅವು ಚಲಿಸುವುದರಿಂದ ಅದರ ಕಾಲಾವಧಿ ೨ $\frac{೧}{೨}$ ಮೈಕ್ರೊ ಸೆಕೆಂಡುಗಳಷ್ಟಾಗುತ್ತದೆ. ಈ ಕಾಲ ವಿಸ್ತರಣೆಯನ್ನು ಪ್ರಯೋಗಗಳಲ್ಲಿ ಗುರುತಿಸಿದ್ದಾರೆ.

**೩) ಚಲಿಸುವ ವಸ್ತುಗಳ ಉದ್ದ ಕಡಮೆಯಾಗುತ್ತದೆ (Moving objects are shortened)**

ಜಡ ಚೌಕಟ್ಟೊಂದರಲ್ಲಿ ನಡೆಯುವ ಘಟನೆಯನ್ನು ಪೂರ್ಣವಾಗಿ ವಿವರಿಸಲು (x, y, z) ಸ್ಥಾನನಿರ್ದೇಶಕಗಳಿದ್ದರೆ ಸಾಲದು. ಸಮಯ ನಿರ್ದೇಶಕ 't' ಕೂಡ ಬೇಕು. 'A' ಎಂಬ ಜಡ ಚೌಕಟ್ಟಿನಲ್ಲಿ ನಡೆದ ಘಟನೆಯ ಸ್ಥಾನ ಹಾಗೂ ಸಮಯ ನಿರ್ದೇಶಕಗಳು (x, y, z, t) ಎಂದಿರಲಿ. ಅದೇ ಘಟನೆಯ ಸ್ಥಾನ ಹಾಗೂ ಸಮಯ ನಿರ್ದೇಶಕಗಳು 'B' ಎಂಬ ಜಡ ಚೌಕಟ್ಟಿನಲ್ಲಿ $(x^1, y^1, z^1, t^1)$ ಎಂದಾಗ, ಇವುಗಳ ಮಧ್ಯೆ ಸಂಬಂಧ ಕಲ್ಪಿಸುವ ಸಮೀಕರಣಗಳು ಕೂಡಾ ಹುಟ್ಟಿಬಂದಿವೆ.

## ಶ್ರೀ ಶಂಕರರು ಪ್ರತಿಪಾದಿಸಿದ ಅಬಾಧಿತ ಸತ್ಯಕ್ಕೊಂದು ಉದಾಹರಣೆ :

ಶಂಕರರ ಪ್ರಕಾರ ಸತ್ಯದ ಸಾರಾಂಶವಿರುವುದು ಅದರ ನಿರಾವಲಂಬ ಗುಣದಲ್ಲಿ ಎಂಬುದನ್ನು ಗಮನಿಸಿದ್ದೇವೆ. (Essence of Reality is its absoluteness). ಅದು ಕಾಲ. ಆಕಾಶ ಹಾಗೂ ನಿಮಿತ್ತಗಳಿಂದ ಅಬಾಧಿತವಾದದ್ದು. ಈ ಅಬಾಧಿಕತೆಯ ಕಲ್ಪನೆಗೊಂದು ಸ್ಪಷ್ಟ ಉದಾಹರಣೆ "ಆಕಾಶ–ಸಮಯ ರಚನೆ"ಯಲ್ಲಿ ದೊರಕಿದೆ.

ಅನುಕೂಲಕ್ಕೋಸ್ಕರ, ಜಡ ಚೌಕಟ್ಟೊಂದರಲ್ಲಿ ಜರುಗಿದ 'A' ಘಟನೆಯ ಸಮಯ-ಸ್ಥಾನ ನಿರ್ದೇಶಕಗಳು $(x_A{}^0, x_A{}^1, x_A{}^2, x_A{}^3)$ ಎಂದೂ ಅದೇ ಚೌಕಟ್ಟಿನಲ್ಲಿ ಘಟಿಸಿದ 'B' ಎಂಬ ಇನ್ನೊಂದು ಘಟನೆಯ ಸಮಯ-ಸ್ಥಾನ ನಿರ್ದೇಶಕಗಳು $(x_B{}^0, x_B{}^1, x_B{}^2, x_B{}^3)$ ಆಗಿರಲಿ. ಈ ಎರಡು ಘಟನೆಗಳ ಮಧ್ಯೆ ಇರುವ ವ್ಯತ್ಯಾಸ $\Delta x^\mu = x_A{}^\mu - x_B{}^\mu$ ಆಗಿದ್ದು, ಇದನ್ನು Displacement sector ಎಂದು ಕರೆಯಬಹುದು. ಮತ್ತು ಇದನ್ನು ಅಂತಃಗುರ್ಣಿಸಿದರೆ ಸಿಗುವ ಉತ್ತರ $I = (\Delta x)_\mu . (\Delta x)^\mu$ = ಘಟನೆಗಳ ಮಧ್ಯಾಂತರ Interval ಎಂದು ಕರೆಯುವ ವಾಡಿಕೆ. ಒಂದು ಚೌಕಟ್ಟಿನಿಂದ ಇನ್ನೊಂದು ಚೌಕಟ್ಟಿಗೆ ಹೋಗುವಾಗ ಈ Interval ಅಬಾಧಿತವಾಗಿರುತ್ತದೆ ಎಂದು ತಿಳಿದು ಬಂದಿದೆ.

**ತತ್ಸಮಾನತೆ - ೧ : ದ್ರವ್ಯರಾಶಿ (m) ಮತ್ತು ಶಕ್ತಿ (Energy) ಗಳ ನಡುವೆ !**

ಸಾಕ್ಷೇಪ ಚಲನ ವಿಜ್ಞಾನದ ಕಡೆ ಇನ್ನೊಮ್ಮೆ ಗಮನ ಹರಿಸೋಣ. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಚಲಿಸದೆ ಇರುವ ಗಡಿಯಾರದಲ್ಲಿ "dt" ಎಂಬ ಸಮಯ ಗತಿಸಿದೆ ಎಂದು ಭಾವಿಸಿ. 'u' ವೇಗದಲ್ಲಿ ಚಲಿಸುವ ಗಡಿಯಾರದಲ್ಲಿ ಅದು "dτ" ಆಗುತ್ತದೆ. ಅದರ ಬೆಲೆ $d\tau = \sqrt{1-\left(\frac{u}{c}\right)^2}\, dt$ ... ಇದನ್ನು ಪ್ರಾಪರ್ ಸಮಯವೆಂದು ಕರೆಯಬಹುದು. ಇದರ ಆಧಾರದ ಮೇಲೆ ಚಲನ ಶಾಸ್ತ್ರದ ನಿಯಮಗಳನ್ನು ಪುನರ್ಪರಿಶೀಲಿಸೋಣ.

ಪ್ರಾಪರ್ ಸಮಯ $d\tau < dt$ ಆಗಿರುತ್ತದೆ. ನೆಲದಲ್ಲಿ ನಿಂತು ಚಲಿಸುವ ವಿಮಾನದ ವೇಗವನ್ನು ಅಳೆಯುವುದು ಹೇಗೆ ? ವೇಗ $= \frac{\text{ದೂರ}}{\text{ಸಮಯ}}$ ; ಯಾವ ದೂರ ? ಯಾವ ಸಮಯ ? ನೆಲದ ಮೇಲಿರುವ 'A' ಮತ್ತು 'B' ಗಳ ದೂರ $d\ell$ ಇರಲಿ. ವಿಮಾನದ ವೇಗ ಕಂಡು ಹಿಡಿಯುವಾಗ, ನೆಲದ ಮೇಲೆ ಅದು ಚಲಿಸಿದ ದೂರವನ್ನು, ವಿಮಾನದಲ್ಲಿ ಗತಿಸಿದ ಸಮಯ (ಪ್ರಾಪರ್ ಸಮಯ) ದಿಂದ ಭಾಗಿಸಿದಾಗ ಸಿಗುವ ಉತ್ತರ

$$A \bullet \leftarrow d\ell \rightarrow \bullet B$$

$\eta = \frac{d\ell}{d\tau} \rightarrow$ ಇದನ್ನು ಪ್ರಾಪರ್ ವೇಗವೆನ್ನುತ್ತಾರೆ.

ಸೀಮಿತ ಸಾಪೇಕ್ಷ ಚಲನಶಾಸ್ತ್ರದಲ್ಲಿ. ಚಲನ ಪರಿಮಾಣ (Momentum) ಮತ್ತು ಶಕ್ತಿ (Energy) ಇವುಗಳ ನಿತ್ಯತ್ವ ನಿಯಮಗಳ (Conservation laws) ಪಾಲನೆಯಾಗಬೇಕು. ಇದಾಗಬೇಕಾದರೆ ಸಾಪೇಕ್ಷ ಚಲನ ಪರಿಮಾಣ ಹಾಗೂ ಸಾಪೇಕ್ಷ ಶಕ್ತಿಯನ್ನು ಬಳಸಲೇಬೇಕು. ಸಾಪೇಕ್ಷ ಚಲನ ಪರಿಮಾಣ ; $p \cdot \frac{mu}{\sqrt{1-\frac{u^2}{c^2}}}$ ಹಾಗೂ ಸಾಪೇಕ್ಷ ಶಕ್ತಿ $E \cdot \frac{mc^2}{\sqrt{1-\frac{u^2}{c^2}}}$ ಸಾಪೇಕ್ಷ ಶಕ್ತಿಯನ್ನು $u << c$ ಆದಾಗ ಹೀಗೆ

$E = mc^2 + \frac{1}{2} mu^2 + \frac{3}{8} m \frac{u^4}{c^2} \ldots$ ಎಂದು ಬಿಡಿಸಬಹುದು.

ಮುಖ್ಯವಾಗಿ $u \rightarrow o$ ಆದಾಗ, ಶಕ್ತಿ $= mc^2 =$ ವಸ್ತುವು ವಿಶ್ರಾಂತಿಯಲ್ಲಿರುವಾಗ ಅದರ ಶಕ್ತಿ ಆಗುವುದಲ್ಲವೇ ? ಅಂದರೆ ದ್ರವ್ಯರಾಶಿ ಮತ್ತು ಶಕ್ತಿಗಳು ಒಂದಕ್ಕೊಂದು ಸಮ. ತತ್ಸಮಾನ.

ಜಡವಸ್ತು *'m'* ನಲ್ಲಿ ಇಷ್ಟು ಶಕ್ತಿಯ ಸಂಚಯವಾದಾಗ, ಜೀವರೂಪಿ ಆತ್ಮನು ಬ್ರಹ್ಮನಾಗಿರಬಾರದೇಕೆ ?

## Invariant (ಅಬಾಧಿತತೆ) ಗೂ Conservation (ನಿತ್ಯತ್ವ) ಕ್ಕೂ ಇರುವ ವ್ಯತ್ಯಾಸ :

ಒಂದು ಜಡ ಚೌಕಟ್ಟಿನಿಂದ ಇನ್ನೊಂದು ಜಡ ಚೌಕಟ್ಟಿಗೆ ಹೋಗುವಾಗ ಕೆಲವು ಭೌತಿಕ ಪರಿಮಾಣಗಳು ಅಂದರೆ Physical quantities ಬದಲಾಗಬಹುದು. ಆದರೆ ಕೆಲವು ಬದಲಾಗವು. ಬದಲಾಗದವುಗಳನ್ನು Invariant ಅಥವಾ ಅಬಾಧಿತವೆಂದು ಗ್ರಹಿಸಿದ್ದೇವೆ.

ಅಂತೆಯೇ ಜಡ ಚೌಕಟ್ಟೊಂದರಲ್ಲಿ ಮಾಡುವ ಕ್ರಿಯೆಯ ಮುಂಚೆ ಮತ್ತು ಆಮೇಲೆ ಈ ಭೌತಿಕ ಪರಿಮಾಣಗಳು (Physical quantities) ಇವುಗಳ ಬೆಲೆ ಬದಲಾಗದಿದ್ದರೆ ಅವು conserved (ನಿತ್ಯತ್ವಗುಣ) ಹೊಂದಿವೆ ಎನ್ನುತ್ತೇವೆ. ಯಾವುದು ಅಬಾಧಿತ, ಯಾವುವು ನಿತ್ಯತ್ವ ಹೊಂದಿವೆ ಎಂದು ನೋಡೋಣ.

| Physical quantity | ಒಂದು ಚೌಕಟ್ಟಿನಿಂದ ಇನ್ನೊಂದು ಚೌಕಟ್ಟಿಗೆ ಹೋಗುವಾಗ | ಒಂದು ಚೌಕಟ್ಟಿನಲ್ಲಿ ನಡೆಯುವ ಕ್ರಿಯೆಗೆ ಮುಂಚಿನ ಹಾಗೂ ನಂತರದ ಬೆಲೆ |
|---|---|---|
| ದ್ರವ್ಯರಾಶಿ (mass) | ಬದಲಾಗುವುದಿಲ್ಲ (ಆದ್ದರಿಂದ Invariant ಅಥವಾ ಅಬಾಧಿತ) | ಬೇರೆ ಬೇರೆ ಆಗಿರಬಹುದು (ಅಂದರೆ ನಿತ್ಯತ್ವ ಗುಣ ಇರುವುದಿಲ್ಲ) Not conserved |
| ಶಕ್ತಿ (Energy) | ಬದಲಾಗುವುದು (ಆದ್ದರಿಂದ ಅಬಾಧಿತವಲ್ಲ) | ಮುಂಚಿನ ಹಾಗೂ ನಂತರದ ಬೆಲೆ ಸರಿಸಮಾನವಾಗಿರುತ್ತದೆ. (ಅಂದರೆ ನಿತ್ಯತ್ವ ಗುಣವಿರುತ್ತದೆ) |
| ವಿದ್ಯುತ್ಕಣದ ಚಾರ್ಜ್ | ಬದಲಾಗದು (Invariant) | ಮುಂಚಿನಂತೆ ಇರುವುದು (Conserved) |
| : : | | |

ಶಂಕರರು ತಿಳಿಸಿದ ವ್ಯಾವಹಾರಿಕ ಸತ್ಯತೆ [ಅಂದರೆ "truth attributable to objective world"] ಯನ್ನು ಅರ್ಥಮಾಡಿಕೊಂಡು ಮೇಲಿನ ವಿಚಾರಗಳನ್ನರಿತೆವು. ಪಾರಮಾರ್ಥಿಕ ಸತ್ಯದ ಕಲ್ಪನೆ ನಮ್ಮನ್ನು ಇನ್ನೂ ಜ್ಞಾನಿಗಳನ್ನಾಗಿ ಮಾಡಬಲ್ಲುದಲ್ಲವೇ ?

ಮೇಲಿನ ಪಟ್ಟಿ (List) ಯನ್ನು ಮುಂದುವರಿಸಿ –

ಬ್ರಹ್ಮನ್ : Absolute, Invariant, unconditioned by space, time and causality. It is one without a second.

is ಬ್ರಹ್ಮನ್. (Self illuminated) ಸ್ವಯಂಪ್ರಭೆ ಉಳ್ಳದ್ದು, ಆದಿ ಅಂತ್ಯವಿಲ್ಲದುದು, ಬಂಧನವಿಲ್ಲದ್ದು.

ಜೀವ : ಜೀವವನ್ನು ಉಪಾಧಿ ಆವರಿಸಿಕೊಂಡಿದೆ. ಸಾಪೇಕ್ಷತಾ ವಾದದಲ್ಲಿ ದ್ರವ್ಯರಾಶಿ. ಶಕ್ತಿಗಳನ್ನು ಭೌತಿಕ ಉಪಾಧಿಗಳು ಆವರಿಸಿಕೊಂಡಂತೆ, ಮತ್ತು ಅದನ್ನು ಕಳಚಿಕೊಂಡು ಹೊರಬಂದಾಗಲೇ ಅವುಗಳ ತತ್ವಮತೆ ನಮಗರಿವಾದದ್ದು. ಅಂತೆಯೇ ಉಪಾಧಿಯಿಂದ ಹೊರಬರುವ ಮಾರ್ಗ ಹುಡುಕಿದಾಗಲೇ ಜೀವ ಮತ್ತು ಬ್ರಹ್ಮನ್‌ರ ತತ್ವಮತೆ ಅರಿವಾಗುವುದು.

## ಬೆಳಕಿನ ಕಣದ ಶಕ್ತಿಯ ರಹಸ್ಯ :

ಬೆಳಕು ಕಣಕಣವಾಗಿ ಹೊರಬರುತ್ತದೆ. ಕಣದ ಹೆಸರು ಫೋಟಾನ್ (Photon) ಆದರೆ ಅದರ ದ್ರವ್ಯರಾಶಿ ಶೂನ್ಯ. ಚಲನ ತತ್ವಶಾಸ್ತ್ರ ಪ್ರಕಾರ ದ್ರವ್ಯರಾಶಿ ಇಲ್ಲದ ಕಣಕ್ಕೆ ಶಕ್ತಿ ಇರಲಾರದು. ಚಲನಪರಿಣಾಮ (Momentum) ಶೂನ್ಯ, ಶಕ್ತಿಯೂ (Energy) ಶೂನ್ಯ.

ಶೂನ್ಯದ್ರವ್ಯರಾಶಿಯ ಇನ್ನೊಂದು ಕಣ ನ್ಯೂಟ್ರಿನೋ. ಸೀಮಿತ ಸಾಪೇಕ್ಷತಾವಾದದ ಇನ್ನೊಂದು ಫಲಿತಾಂಶ ಅಚ್ಚರಿಯದಾಗಿದೆ. ನ್ಯೂಟ್ರಿನೋ ಮತ್ತು ಫೋಟೊನ್ – ಇವೆರಡೂ ಬೆಳಕಿನ ವೇಗದಲ್ಲಿ ಚಲಿಸುತ್ತಿದ್ದರೆ $E = mc^2$ ಎಂಬಷ್ಟು ಶಕ್ತಿ ಹುಟ್ಟುತ್ತದೆ. ಇದು ವ್ಯಾವಹಾರಿಕ ಸತ್ಯದ ಇನ್ನೊಂದು ಉದಾಹರಣೆ. ಆತ್ಮಗ್ರಾಹೀ ಮನಸ್ಸು ? ಇದರ ಶಕ್ತಿ ? ಶಂಕರರು ನಮೂದಿಸಿದ ಪಾರಮಾರ್ಥಿಕ ಸತ್ಯ ಆತ್ಮದ ಶಕ್ತಿಯ ಕಲ್ಪನೆ ಕೊಡಲಾರದೇ ?

## ತತ್ಸಮಾನತೆ - ೨ : ಗುರುತ್ವಾಕರ್ಷಣಾಕ್ಷೇತ್ರ ಹಾಗೂ ವೇಗೋತ್ಕರ್ಷಕ್ಕೊಳಗಾದ ಚೌಕಟ್ಟು :

ಈ ವರೆಗೆ ಗಮನಿಸಿದ, ಸೀಮಿತ ಸಾಪೇಕ್ಷವಾದದ ಆಳವಾದ ಅಭ್ಯಾಸ ಮಾಡಿದಾಗ, ಚಲನಶಾಸ್ತ್ರದ ನಿಯಮಗಳು ಚಲಿಸುವ ಆದರೆ ಜಡ ಚೌಕಟ್ಟಿನಲ್ಲಿ ಸರಿಹೊಂದಬೇಕಾದರೆ ಸಮೀಕರಣದಲ್ಲಿ ಕೆಲ ಮಾರ್ಪಾಡುಗಳ ಅವಶ್ಯಕತೆ ಇದೆ ಎಂತಲೂ, ವಿದ್ಯುತ್‌ಕಾಂತೀಯ ಶಾಸ್ತ್ರದ ನಿಯಮಗಳನ್ನು ಬದಲಾಯಿಸುವ ಅವಶ್ಯಕತೆ ಇಲ್ಲವೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

೧) ಗುರುತ್ವಾಕರ್ಷಣೆ, ಭೌತಶಾಸ್ತ್ರದ ಇನ್ನೊಂದು ಪ್ರಮುಖ ಭಾಗ. ದೂರದಿಂದ ಪ್ರವಹಿಸುವ ಈ ಕ್ರಿಯೆಯನ್ನು Action at distance ಎನ್ನುತ್ತಾರೆ. ಈ ಶಕ್ತಿ ತಕ್ಷಣ ಪ್ರವಹಿಸುವುದೇ ? ಹಾಗಿದ್ದಲ್ಲಿ ಬೆಳಕಿನ ವೇಗಕ್ಕಿಂತ ಹೆಚ್ಚು ವೇಗವಾಗಿ ಚಲಿಸುವ ಕ್ರಿಯೆಯೊಂದು ಹುಟ್ಟಿ ಸಾಪೇಕ್ಷತಾ ವಾದದ ನಿಯಮ ಮುರಿದಂತಾಗುವುದಿಲ್ಲವೇ ? ಇದು ಶಕ್ಯವೇ ?

೨) ಗುರುತ್ವಾಕರ್ಷಣೆಯ ತತ್ವಕ್ಕನುಗುಣವಾದ ದ್ರವ್ಯರಾಶಿಯನ್ನು Gravitational Mass ಎನ್ನುತ್ತೇವೆ. ಜಡರೂಪಿ ದ್ರವ್ಯರಾಶಿಯನ್ನು Inertial Mass ಎನ್ನುತ್ತೇವೆ. ಇವನ್ನು ಬೇರೆ ಬೇರೆಯಾಗಿ ಕಾಣಬೇಕೇ ? ಅಥವ ಅವೆರಡೂ ಒಂದೇನೇ ? ಕ್ಲಾಸಿಕತಾ ಚಲನಶಾಸ್ತ್ರದಲ್ಲಿ ಇವೆರಡು ಒಂದಕ್ಕೊಂದು ಸಮವೆಂದು ಚಿತ್ರೀಕರಿಸಲಾಗಿದೆ. ಸದ್ಯಕ್ಕೆ ಇದು ಕಾಕತಾಳೀಯವೆನಿಸಿದರೂ ಅವೆರಡು ಪರಸ್ಪರ ಸಮನಾಗಿರಲು ಒಂದು ಬಲವಾದ ಕಾರಣವಿರಬೇಕಲ್ಲವೇ ?

೩) ಹಾಗೆ ನೋಡಿದರೆ ಜಡರೂಪಿ ದ್ರವ್ಯರಾಶಿ ತನ್ನ ಮೇಲೆ ಹೇರಬಹುದಾದ F ನ್ನು ನಿರಾಕರಿಸುವ ಯತ್ನ ಮಾಡುತ್ತದೆ. ಗುರುತ್ವಾಕರ್ಷಣೆಯ ದ್ರವ್ಯರಾಶಿ ಗುರುತ್ವಾಕರ್ಷಣೆಯಿಂದ ಶಕ್ತಿಯನ್ನುಂಟುಮಾಡುವ ಕ್ರಿಯೆಯಲ್ಲಿ ತೊಡಗುತ್ತಿದೆ.

೪) Rest Mass (ವಿಶ್ರಾಂತಿ ಸ್ಥಿತಿಯಲ್ಲಿದ್ದಾಗ ಇರುವ ದ್ರವ್ಯರಾಶಿ) ಇಲ್ಲದ ಬೆಳಕಿನ ಕಣಗಳಿಗೆ ಸಾಪೇಕ್ಷತವಾದ $E = mc^2$ ಶಕ್ತಿ ಕೊಟ್ಟಿದೆ ಎಂಬುದನ್ನು ನೋಡಿದ್ದೇನೆ. ಅಂದರೆ Photon ನ ಶಕ್ತಿಯಿಂದ $m = E/c^2$ ಎಂಬ ದ್ರವ್ಯರಾಶಿ

ಉತ್ಪತ್ತಿಯಾದಂತಾಗುವುದಿಲ್ಲವೇ ? ಕ್ಲಾಸಿಕಲ್ ಗುರುತ್ವಾಕರ್ಷಣ ತತ್ವಶಾಸ್ತ್ರದಲ್ಲಿ ಈ ಉತ್ಪತ್ತಿಯಾದ ದ್ರವ್ಯರಾಶಿಯ ಮೇಲಾಗುವ ಪರಿಣಾಮವನ್ನು ಚರ್ಚಿಸುವುದಿಲ್ಲ. ಆದರೆ ದ್ರವ್ಯರಾಶಿಯಿಲ್ಲದೆ, ದ್ರವ್ಯರಾಶಿಯು ಇರುವ ರೀತಿ ವ್ಯವಹರಿಸುವ ಬೆಳಕಿನ ಕಣಗಳ ಮೇಲೆ ಗುರುತ್ವಾಕರ್ಷಣೆಯ ಪರಿಣಾಮ ಏನೂ ಇಲ್ಲವೇ ?

ಇಷ್ಟರ ವರೆಗೆ ಕೆಲ ಭೌತಿಕ ವಸ್ತುಗಳ Invariant, ಅಬಾಧಿತ ಪ್ರಕೃತಿ, ಜಡಚೌಕಟ್ಟಿಗೆ ಸೀಮಿತವಾಗಿದ್ದುವು. ಆದರೆ ತತ್ಸಮಾನ ತತ್ವದ ಪ್ರತಿಪಾದನೆಯಾದ ಮೇಲೆ ಶಂಕರಾಚಾರ್ಯರು ಪ್ರತಿಪಾದಿಸಿದ Absoluteness ಜಡವಲ್ಲದ ಚೌಕಟ್ಟು ಅಂದರೆ ವೇಗೋತ್ಕರ್ಷವಿರುವ (accelerated frame of reference) ಚೌಕಟ್ಟುಗಳಲ್ಲಿ ಅವರು ಸೂಚಿಸಿರುವಂತೆ ಹೊಂದಿಕೊಳ್ಳುವುದನ್ನು ಕಾಣುತ್ತೇವೆ. ಗುರುತ್ವಾಕರ್ಷಣ ಶಕ್ತಿ ಒಂದೆಡೆಯಿಂದ ಇನ್ನೊಂದೆಡೆಗೆ ಬೆಳಕಿನ ವೇಗದಲ್ಲಿ ಪಸರಿಸುವುದರಿಂದ ಭೌತಿಕ ನಿಯಮಗಳನ್ನು ಪುನರ್ಪರಿಶೀಲಿಸುವ ಅವಶ್ಯಕತೆ ಬಂದೊದಗಿತು. ಇದರ ಪ್ರಕಾರ ವೇಗೋತ್ಕರ್ಷ ಇರುವ ಎಲ್ಲ ವೀಕ್ಷಕರಿಗೆ ಭೌತಶಾಸ್ತ್ರ ನಿಯಮ ಒಂದೇ ರೀತಿ ಕಾಣಬೇಕು ಎಂದು ತಿಳಿದುಬಂದಿದೆ.

ಕೆಳಗಿನ ಈ ಎರಡು ಚೌಕಟ್ಟುಗಳನ್ನು ಗಮನಿಸೋಣ.

**ತತ್ಸಮಾನತತ್ವ**



| | |
|---|---|
| ೧) ಗುರುತ್ವಾಕರ್ಷಣೆ ಇರುವ ಕ್ಷೇತ್ರದಲ್ಲಿ ಇರುವ ಜಡ ಚೌಕಟ್ಟು S. (ಅಂದರೆ Inertial Frame) | ೨) $S^1$ ಇದು ಇನ್ನೊಂದು ಚೌಕಟ್ಟು. ಆದರೆ ಜಡವಲ್ಲ. ವೇಗೋತ್ಕರ್ಷ ಇರುವ ಚೌಕಟ್ಟು Non-inertial. ಆದರೆ ಈ ಚೌಕಟ್ಟು ಇರುವೆಡೆ ಗುರುತ್ವಾಕರ್ಷಣೆ ಕ್ಷೇತ್ರ ಇಲ್ಲ. |

ತತ್ಸಮಾನ ತತ್ವದ ಪ್ರಕಾರ, ಈ ಎರಡು ಸನ್ನಿವೇಶಗಳು ಭೌತಿಕವಾಗಿ ಒಂದಕ್ಕೊಂದು ಸಮ. ಈ ಚೌಕಟ್ಟುಗಳಲ್ಲಿ ಮಾಡುವ ಸರಿಸಮಾನ ರೀತಿಯ ಪ್ರಯೋಗಗಳು ನೀಡುವ ಫಲಿತಾಂಶ ಒಂದೇನೆ.

## ಸರ್ವಮಾನ್ಯ ಸಾಪೇಕ್ಷತಾವಾದ :

ಸೀಮಿತ ಸಾಪೇಕ್ಷತಾವಾದದ ಪ್ರಕಾರ, ಜಡ ಚೌಕಟ್ಟಿನಲ್ಲಿ ಮಾಡುವ ಪ್ರಯೋಗಗಳು ಚೌಕಟ್ಟಿನ ಚಲನೆಯನ್ನು ತಿಳಿಹೇಳಲಾರದೋ, ಅದೇ ರೀತಿ, ಜಡವಲ್ಲದ ಚೌಕಟ್ಟಿನಲ್ಲಿ (non-inertial) ಮಾಡುವ ಪ್ರಯೋಗಗಳಿಂದ ಆ ಚೌಕಟ್ಟಿನ ವೇಗೋತ್ಕರ್ಷವನ್ನು ಕಂಡು ಹಿಡಿಯಲಾರೆವು. ಇದರರ್ಥ ಭೌತಿಕವಾಗಿ ನಿರಾವಲಂಬಿ "ವೇಗೋತ್ಕರ್ಷ ಹೊಂದಿದ ಚೌಕಟ್ಟು" ಇಲ್ಲ. ಮತ್ತು ನಿರಾವಲಂಬಿ ವೇಗೋತ್ಕರ್ಷ ಹೊಂದಿದ ಚೌಕಟ್ಟು ಇಲ್ಲವೆನ್ನುವುದಾದರೆ ತತ್ಸಮಾನ ತತ್ವದ ಪ್ರಕಾರ ನಿರಾವಲಂಬಿ ಗುರುತ್ವಾಕರ್ಷಣ ಕ್ಷೇತ್ರವೂ ಇಲ್ಲ ಎಂದರ್ಥ. ಇದು ವ್ಯಾವಹಾರಿಕ ಸತ್ಯ.

"ಗುರುತ್ವಾಕರ್ಷಣಾ ಕ್ಷೇತ್ರ ವೇಗೋತ್ಕರ್ಷ ಚೌಕಟ್ಟಿನ ಫಲಶ್ರುತಿ" ಎಂದು ತತ್ಸಮಾನ ತತ್ವ ಎಂದಾಗ, ಜಡ ಚೌಕಟ್ಟಿನ ಆಧಾರದ ಮೇಲೆ ನಿರ್ವಹಿಸಿದ ಸೀಮಿತ ಸಾಪೇಕ್ಷತಾವಾದವನ್ನು ಗುರುತ್ವಾಕರ್ಷಣೆ ಇದ್ದೆಡೆ ಉಪಯೋಗಿಸಲು ಸಾಧ್ಯವೇ ? ಆದ್ದರಿಂದ ಎಲ್ಲ ಸನ್ನಿವೇಶಗಳಲ್ಲೂ ಮಾನ್ಯವಾದ ಸಾಪೇಕ್ಷತಾವಾದದ ಅವಶ್ಯಕತೆ ಹುಟ್ಟಿತು.

ಆಳವಾದ ಚರ್ಚೆಗೆ ಹೋಗದೇ ಈ ಸರ್ವಸಾಮಾನ್ಯ (General theory of relativity) ಸಾಪೇಕ್ಷತಾವಾದದ ಸಾರಾಂಶವನ್ನಷ್ಟು ಹೇಳಬಹುದು. "ದೊಡ್ಡ ಗಾತ್ರದ ವಸ್ತು ತನ್ನ ಸುತ್ತಲೂ ಆಕಾಶ ಮತ್ತು ಕಾಲಕ್ಕೆ ಸಂಬಂಧಿಸಿದಂತೆ ಹೊಸ ಜಾಮಿತಿಯನ್ನು (Geometry) ಹಾಸುಹೊಗುವಂತೆ (Warping) ಮಾಡುತ್ತದೆ. ಇದರಿಂದ ಕ್ಲಾಸಿಕಲ್ ನಿಯಮದಲ್ಲಿ ಕಾಣಬರುವ ಗುರುತ್ವಾಕರ್ಷಣೆ ಉಂಟಾಗುತ್ತದೆ" ಎಂಬುದನ್ನು ಐನ್‌ಸ್ಟೈನರು ತೋರಿಸಿಕೊಟ್ಟರು.

ಸೀಮಿತ (Special) ಹಾಗೂ ಸರ್ವಸಾಮಾನ್ಯ (General) ಸಾಪೇಕ್ಷತಾವಾದಗಳ ಮನನ, ನಮ್ಮ ಪೂರ್ವಿಕರು ಪ್ರತಿಪಾದಿಸಿದ ತತ್ವಶಾಸ್ತ್ರಗಳನ್ನು ಅರ್ಥೈಸಿಕೊಳ್ಳುವ ನಮ್ಮ ಶಕ್ತಿಯನ್ನು ಹೆಚ್ಚಿಸುತ್ತದೆ. ಮುಖ್ಯವಾಗಿ ಶಂಕರಾಚಾರ್ಯರು ಪ್ರತಿಪಾದಿಸಿದ ತುಚ್ಛ, ಅನಿರ್ವಚನೀಯ ಮತ್ತು ವಾಸ್ತವ ರೀತಿಗಳ ಮಾಯೆ, ವ್ಯಾವಹಾರಿಕ ಸತ್ಯ, ನಿರ್ಗುಣ, ನಿರ್ವಿಶೇಷ ಬ್ರಹ್ಮನ ಕಲ್ಪನೆ, ಜೀವ ಹಾಗೂ ಬ್ರಹ್ಮನ ತತ್ಸಮಾನತೆಯನ್ನು ಅರ್ಥಮಾಡಿಕೊಳ್ಳಲು ವಿಶೇಷ ಜ್ಞಾನದ ಅವಶ್ಯಕತೆ ಹಾಗೂ ಸೂಚನೆ ಸಾಪೇಕ್ಷವಾದ ಅಧ್ಯಯನದಲ್ಲಿ ಕಾಣುತ್ತದೆ. ಇನ್ನೂ ಆಳವಾದ ಅಧ್ಯಯನದ ಅವಶ್ಯಕತೆ ಇದೆ.

* * *

## ಆಧಾರ ಗ್ರಂಥಗಳು


೧. The Philosophy of Shankara – chapter 12 – Cultural Heritage of India Vol III. – Published by Ramakrishna Mission 1958.

೨. ಆಧುನಿಕ ತತ್ವಶಾಸ್ತ್ರ ಸಮಸ್ಯೆಗಳು – ಹನುಮಂತರಾವ್ ಎಂ. ಎ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಗ್ರಂಥಮಾಲೆ.

೩. Introduction to Special Relativity – Robert Resnick, Wiley Eastern Pvt. Ltd.

೪. Introduction to Electrodynamics – David J. Griffith, Prentice Hall India.

# ಗಣಿತದಲ್ಲಿ ಅನಂತದ ಪರಿಕಲ್ಪನೆ



ಡಾ. ಎಸ್. ಬಾಲಚಂದ್ರರಾವ್

ಅಸ್ಮಿನ್ ವಿಕಾರಃ ಖಹರೇಣ ರಾಶಾವಪಿ ಪ್ರವಿಷ್ಟೇಷ್ವಪಿ ನಿಃಸೃತೇಷು ।
ಬಹುಷ್ವಪಿ ಸ್ಯಾಲ್ಲಯಸೃಷ್ಟಿಕಾಲೇ ಅನಂತೇ ಅಚ್ಯುತೇ ಭೂತಗಣೇಷು ಯದ್ವತ್ ॥

— ಭಾಸ್ಕರಾಚಾರ್ಯನ "ಬೀಜಗಣಿತಂ"

"ಅನಂತನೂ ಅವ್ಯಯನೂ ಆದ ಪರಮಾತ್ಮನಿಂದ ಎಲ್ಲವೂ ಸೃಷ್ಟಿ ಕಾಲದಲ್ಲಿ ಹೊರಹೊಮ್ಮುತ್ತದೆ. ಪ್ರಳಯ ಕಾಲದಲ್ಲಿ ಎಲ್ಲವೂ ಪುನಃ ಆ ಅನಂತಾತ್ಮಕನಾದ ಪರಮಾತ್ಮನನ್ನೇ ಸೇರುತ್ತದೆ. ಆದರೆ, ಇವುಗಳಿಂದ ಆತನು ಏನೊಂದು ವ್ಯತ್ಯಾಸವನ್ನು ಹೊಂದುವುದಿಲ್ಲ. ಹೀಗೆಯೇ, ಸಂಖ್ಯೆಗಳನ್ನು ಖಹರಕ್ಕೆ (ಅನಂತಕ್ಕೆ) ಕೂಡಿಸುವುದರಿಂದ ಅಥವಾ ಕಳೆಯುವುದರಿಂದ ಏನೂ ವ್ಯತ್ಯಾಸಗಳಾಗುವುದಿಲ್ಲ."

ಹನ್ನೆರಡನೇ ಶತಮಾನದಲ್ಲಿದ್ದು ಗಣಿತ ಮತ್ತು ಖಗೋಳ ಶಾಸ್ತ್ರಗಳನ್ನು ಬೆಳೆಸಿ, ಬೆಳಗಿಸಿದ ಕರ್ನಾಟಕದವನೇ ಆದ ಖ್ಯಾತಗಣಿತಜ್ಞ ಭಾಸ್ಕರಾಚಾರ್ಯನು ಅನಂತದ ಗುಣವನ್ನು ಬಹಳ ಸ್ವಾರಸ್ಯವಾಗಿ ಈ ಮೇಲಿನ ಶ್ಲೋಕದಲ್ಲಿ ಆತನದೇ ಆದ ವಿಶೇಷವಾದ ಕಾವ್ಯಶೈಲಿಯಲ್ಲಿ ಬಣ್ಣಿಸಿದ್ದಾನೆ. ಭಾಸ್ಕರನು ಅನಂತವನ್ನು "ಖಹರ" ಎಂದು ಕರೆದಿದ್ದಾನೆ. ಖಹರ ಎಂದರೆ ಶೂನ್ಯವನ್ನು ಛೇದದಲ್ಲಿ ಹೊಂದಿರುವಂತಹದು ಎಂದರ್ಥ.

**"ಅನಂತದ ವಿಜ್ಞಾನವೇ ಗಣಿತಶಾಸ್ತ್ರ"** ಎಂದು ಖ್ಯಾತ ಗಣಿತಜ್ಞ ಹರ್ಮನ್ ವೈಲ್ ಬಣ್ಣಿಸಿದ್ದಾನೆ. ಸಹಸ್ರಾರು ವರ್ಷಗಳಿಂದ ಅನಂತದ ಕಲ್ಪನೆಯು ಗಣಿತಶಾಸ್ತ್ರಜ್ಞರಿಗೆ ಮಾತ್ರವಲ್ಲದೆ ತತ್ತ್ವಜ್ಞಾನಿಗಳಿಗೂ ಮತ್ತು ನಿಸರ್ಗ ಪ್ರೇಮಿಗಳಿಗೂ ಬಹಳ ರೋಚಕವೂ ರೋಮಾಂಚಕಾರಿಯೂ ಆಗಿದೆ; ಅಂತೆಯೇ ಅಷ್ಟೇ ನಿಗೂಢವೂ ಅದ್ಭುತವೂ ಆಗಿದೆ.

ತತ್ತ್ವಶಾಸ್ತ್ರದಲ್ಲಿ, ಸರ್ವಶ್ರೇಷ್ಠವೂ ಸರ್ವನಿಯಾಮಕವೂ ಆದ ಒಂದು ತತ್ತ್ವದಲ್ಲಿ (ಅಥವಾ ದೇವರಲ್ಲಿ) ನಂಬಿಕೆಯಿರುವವರು ಅದನ್ನು ಅಕ್ಷರವೂ, ಅವ್ಯಕ್ತವೂ ಮತ್ತು

ಅನಂತವೂ ಆಗಿದೆ ಎಂದು ಉಪನಿಷತ್ತುಗಳ ಶೈಲಿಯಲ್ಲಿ ಬಣ್ಣಿಸುತ್ತಾರೆ. ಇನ್ನು ಸಾಹಿತ್ಯದಲ್ಲಿ ಆಕಾಶವನ್ನೋ ಸಮುದ್ರವನ್ನೋ ಅಥವಾ ಮುಂದೆ ಮುಂದೆ ಸಾಗಿದಂತೆ ದೂರ ದೂರ ಸರಿಯುವ ದಿಗಂತವನ್ನೋ ಕಂಡಾಗ ಅನಂತವು ಸೂಚ್ಯವಾಗಿ ಮೈದೋರುವುದು. ಹಾಗೆಯೇ. ಜೈನ ಸಿದ್ಧಾಂತದಲ್ಲಿ ಪ್ರತಿವಸ್ತುವೂ ಅನಂತಧರ್ಮಗಳನ್ನು ಹೊಂದಿದೆ (**"ಅನಂತ ಧರ್ಮಾತ್ಮಕಂ ವಸ್ತು"**) ಎಂದು ಪ್ರತಿಪಾದಿಸಲಾಗಿದೆ.

ಪ್ರಾಚೀನ ಭಾರತೀಯ ಗಣಿತಶಾಸ್ತ್ರದ ಆದ್ಯಪ್ರವರ್ತಕನಾದ ಆರ್ಯಭಟನು (ಕ್ರಿ. ಶ. ೪೭೬) ಪ್ರಸಿದ್ಧವಾಗಿರುವ ತನ್ನ ಗ್ರಂಥ 'ಆರ್ಯಭಟೀಯಂ'ನಲ್ಲಿ "ಕಾಲವು **ಅನಾದಿ** ಮತ್ತು **ಅನಂತ**" ಎಂದು ವಿವರಿಸುತ್ತ, "ಆದರೂ ವ್ಯವಹಾರಾರ್ಥವಾಗಿ ಗ್ರಹನಕ್ಷತ್ರಗಳ ಗತಿಗಳ ಸಹಾಯದಿಂದ ಪ್ರಸ್ತುತ ಸಂದರ್ಭದ ಕಾಲವನ್ನು ಅಳೆಯಲಾಗುತ್ತದೆ" (ಕಾಲೋಽಯಂ ಅನಾದ್ಯನಂತೋ ಗ್ರಹಭೈರನುಮೀಯತೇ ಕ್ಷೇತ್ರೇ) ಎಂದು ತಿಳಿಸಿದ್ದಾನೆ. ಆರ್ಯಭಟೀಯಂ ಕೃತಿಯ ವ್ಯಾಖ್ಯಾನಕಾರನಾದ ಮೊದಲನೇ ಭಾಸ್ಕರಾಚಾರ್ಯನು (ಕ್ರಿ. ಶ. ೬ ನೇ ಶತಮಾನ) "ನಾಸ್ಯಾಂತೋ ನಾಸ್ಯಾದಿಃ। ವ್ಯವಹಾರಾರ್ಥಂ ಆದಿರಂತಶ್ಚ ಪರಿಕಲ್ಪಿತಃ" ಎಂದು ಹೇಳಿದ್ದಾನೆ.

ಗಣಿತಶಾಸ್ತ್ರದ ಬೇರೆ ಬೇರೆ ವಿಭಾಗಗಳಲ್ಲಿ ಉದ್ಭವಿಸಿದ ಕೆಲವು ತೊಡಕಿನ ಸಮಸ್ಯೆಗಳಿಂದ "ಅನಂತ" ಎಂಬ ಒಂದು ಕಲ್ಪನೆಯ ಅವಶ್ಯಕತೆಯು ಉಂಟಾಯಿತು. ಉದಾಹರಣೆಗೆ. ಒಂದು ಸಂಖ್ಯೆಯನ್ನು ಸೊನ್ನೆಯಿಂದ ಭಾಗಿಸಿದರೆ (ಅದನ್ನೇ ಭಾಸ್ಕರನು "ಖಹರ" ಎಂದು ಕರೆದನು) ಏನು ಬರುತ್ತದೆ ಎಂಬುದು ಒಂದು ಬಹಳ ಹಳೆಯ ಪ್ರಶ್ನೆ. ಇದಕ್ಕೆ ಆಧುನಿಕ ಗಣಿತದಲ್ಲಿ ಉತ್ತರವೇನೆಂದರೆ, ಸೊನ್ನೆಯಿಂದ ಭಾಗಿಸುವುದೇ ನಿಷೇಧ ಎಂದು; ಆದ್ದರಿಂದ ಛೇದದಲ್ಲಿ ಶೂನ್ಯವಿರುವುದು ಒಂದು ನಿಷಿದ್ಧ ಹಾಗೂ ಅರ್ಥವಿಲ್ಲದ ಪರಿಕರ್ಮ.

ಹೀಗಿದ್ದರೂ ಕೂಡ, ಈ ಸಮಸ್ಯೆಯನ್ನು ಸ್ವಲ್ಪ ಬದಲಾವಣೆಯೊಂದಿಗೆ ಇನ್ನೊಂದು ರೀತಿಯಲ್ಲಿ ಅರ್ಥೈಸಬಹುದು. ಒಂದು ಸ್ಥಿರವಾದ ಸಂಖ್ಯೆಯನ್ನು ಅಂಶದಲ್ಲಿ ತೆಗೆದುಕೊಂಡು ಛೇದದಲ್ಲಿ ಬರಬರುತ್ತ ಕಡಿಮೆಯಾಗುವ ಅಸ್ಥಿರ (ಚರ) ಸಂಖ್ಯೆಯನ್ನು ತೆಗೆದುಕೊಳ್ಳೋಣ. ಛೇದವು ಕಡಿಮೆಯಾದಂತೆ ಸ್ಥಿರವಾದ ಅಂಶವನ್ನುಳ್ಳ ಭಿನ್ನರಾಶಿಯ ಬೆಲೆಯೂ ಸೀಮಾತೀತವಾಗಿ ಬೆಳೆಯುತ್ತಲೇ ಹೋಗುತ್ತದೆ. ಹೀಗೆಯೇ ಛೇದವು ಶೂನ್ಯಕ್ಕೆ ಹತ್ತಿರ ಹತ್ತಿರ ಸಮೀಪಿಸಿದಂತೆ, ಭಿನ್ನರಾಶಿಯ ಮೌಲ್ಯವು "ಅನಂತ" (ಅಂದರೆ ಅಂತವಿಲ್ಲದ್ದು) ಎಂಬ ಸೀಮಾತೀತವಾದ ಕಲ್ಪನೆಯೆಡೆಗೆ ಸಾಗುತ್ತದೆ.

ಬೃಹದಾರಣ್ಯಕೋಪನಿಷತ್ತಿನಲ್ಲಿ ಪರಬ್ರಹ್ಮ ತತ್ತ್ವವನ್ನು ಕುರಿತು "ಇದಂ ಮಹದ್ಭೂತಂ **ಅನಂತಂ ಅಪಾರಂ** ವಿಜ್ಞಾನಘನ ಏವ" ಎಂದು ನಿರೂಪಿಸಲಾಗಿದೆ.

ಶ್ರೀ ಶಂಕರ ಭಗವತ್ಪಾದರು ತಮ್ಮ ಭಾಷ್ಯದಲ್ಲಿ "...ಪ್ರಜ್ಞಾನಘನಂ **ಅನಂತಂ ಅಪಾರಂ** ಸ್ವಚ್ಛಂ ವ್ಯವತಿಷ್ಠತೇ" ಎಂಬುದಾಗಿ ವಿವರಿಸಿದ್ದಾರೆ.

ಅನಂತವನ್ನು ಸೂಚಿಸಲು ಎಂಟರ ಚಿಹ್ನೆಯನ್ನು ಅಡ್ಡಡ್ಡವಾಗಿ ಮಲಗಿಸಿದರೆ ಬರುವ ಆಕಾರವನ್ನು ($\infty$) ಬಳಸಲಾಗುತ್ತದೆ. ಉಪನಿಷತ್ತಿನ ಪ್ರಸಿದ್ಧವಾದ ಒಂದು ಶಾಂತಿ ಮಂತ್ರವು ಹೀಗಿದೆ :

**ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**

"ಓಂ. ಅದು ಪೂರ್ಣ. ಇದು ಪೂರ್ಣ, ಪೂರ್ಣದಿಂದ ಪೂರ್ಣವು ಹೊರಹೊಮ್ಮಿದೆ. ಹೀಗೆ ಪೂರ್ಣದಿಂದ ಪೂರ್ಣವು ಹೊರಬಂದರೂ ಉಳಿದಿರುವುದು ಪೂರ್ಣವಾಗಿಯೇ ಇದೆ."

ಅನೇಕ ಇಂದಿನ ಭಾರತೀಯ ಗಣಿತ ಲೇಖಕರು "ಪೂರ್ಣ" ಎಂಬ ಶಬ್ದಕ್ಕೆ "ಅನಂತ" (ಇನ್ಫಿನಿಟಿ) ಎಂದು ಅರ್ಥೈಸಿಕೊಳ್ಳುವ ವಾಡಿಕೆಯಿದೆ. ಆದರೆ, ಇಲ್ಲಿ ಸಂಭವಿಸುವ ಗಣಿತದ ಒಂದು ತೊಡಕೆಂದರೆ, ಅನಂತದಿಂದ ಅನಂತವನ್ನು ಕಳೆದರೆ ಅನಂತವೇ ಉಳಿಯುತ್ತದೆ ಎಂಬುದು. ಈ ಅಂಶವು ಗಣಿತದ ದೃಷ್ಟಿಯಿಂದ ತಪ್ಪಾಗುತ್ತದೆ. ಅನಂತದಿಂದ ಅನಂತವನ್ನು ಕಳೆದರೆ ($\infty - \infty$) ಬರುವುದು ಒಂದು "ಅನಿರ್ದಿಷ್ಟ ರೂಪ" (ಇಂಡಿಟರ್ಮಿನೇಟ್ ಫಾರ್ಮ್) ಆಗಿದ್ದು ಅದು ಪುನಃ ಅನಂತವಾಗಬೇಕಾಗಿಲ್ಲ.

ಹಾಗಲ್ಲದೆ, ಶಾಂತಿಮಂತ್ರದ "ಪೂರ್ಣ" ಎಂಬ ಶಬ್ದಕ್ಕೆ ಅನಂತದ ಬದಲು **"ಶೂನ್ಯ"** ಎಂದು ಅರ್ಥೈಸಿದರೆ, "ಶೂನ್ಯದಲ್ಲಿ ಶೂನ್ಯವನ್ನು ಕಳೆದರೆ ಶೂನ್ಯವೇ ಬರುತ್ತದೆ ($0-0=0$)" ಎಂದಾಗುತ್ತದೆ. ಇದು ಗಣಿತಶಾಸ್ತ್ರೀಯವಾಗಿ ಸರಿಯಾಗಿಯೇ ಇದೆ. ಈ ಅಂಶವನ್ನೇ "ಶೂನ್ಯವಾದೀ" ತತ್ತ್ವಜ್ಞಾನಿಗಳು (ನಿಹಿಲಿಸ್ಟ್ಸ್) ತಮ್ಮ ಸಿದ್ಧಾಂತಕ್ಕೆ ಒಂದು ತಾರ್ಕಿಕವಾದ ಗಣಿತದ ಸಾಧನೆ ಸಿಕ್ಕಿದೆ ಎಂದು ತಮ್ಮ ಬೆನ್ನನ್ನು ತಾವೇ ತಟ್ಟಿಕೊಂಡು ಸಂತೋಷಪಟ್ಟರೆ ಆಶ್ಚರ್ಯವೇನಿಲ್ಲ !

ಗಣಿತಶಾಸ್ತ್ರದಲ್ಲಿ ಬಹಳ ಶತಮಾನಗಳಷ್ಟು ಕಾಲ ಅನಂತದ ಬಗ್ಗೆ ಸ್ಪಷ್ಟವೂ, ನಿರ್ದಿಷ್ಟವೂ, ಆದ ಕಲ್ಪನೆಯಾಗಲೀ ಲಕ್ಷಣ ನಿರೂಪಣೆಯಾಗಲೀ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ, ಅನಂತದ ಕಲ್ಪನೆಯನ್ನು ಅಳವಡಿಸಿಕೊಳ್ಳುವ ಎಷ್ಟೋ ಸಮಸ್ಯೆಗಳಲ್ಲಿ ಅನೇಕ ತಾರ್ಕಿಕ ಅಸಂಗತಗಳೂ (ಪ್ಯಾರಡಾಕ್ಸಸ್) ತೊಡಕುಗಳೂ ಒದಗಿ ಬರುತ್ತಿದ್ದವು. ಅಂತಹ ಒಂದು ಅಸ್ಪಷ್ಟತೆಯನ್ನು ಮತ್ತು ತಾರ್ಕಿಕ ತೊಡಕನ್ನು ಹೋಗಲಾಡಿಸಿ, ಅದರ ನಿರ್ದಿಷ್ಟವಾದ ಲಕ್ಷಣ ನಿರೂಪಣೆಯನ್ನು ಹೊಂದಿಸಿದ ಕೀರ್ತಿಯು ಕಳೆದ ಶತಮಾನದಲ್ಲಿದ್ದ ಪ್ರಖ್ಯಾತ ಗಣಿತಜ್ಞ **ಜಾರ್ಜ್ ಕ್ಯಾಂಟರ್** (೧೮೪೫-೧೯೧೮) ಮಹಾಶಯನಿಗೆ ಸಲ್ಲುತ್ತದೆ. ಈತನು ಗಣಿತಶಾಸ್ತ್ರದಲ್ಲಿ ಬಹಳ ಮುಖ್ಯವೂ ಆಧುನಿಕವೂ

ಆಗಿರುವ "ಗಣಸಿದ್ಧಾಂತ"ವನ್ನು (ಸೆಟ್ ಥಿಯರಿ) ಸೃಷ್ಟಿಸಿ ಬೆಳೆಸಿದನು. ಅನಂತದ ಸ್ಪಷ್ಟವಾದ ಲಕ್ಷಣ ನಿರೂಪಣೆಗೆ ಕ್ಯಾಂಟರ್‌ನ ಗಣಸಿದ್ಧಾಂತದ ಆವಶ್ಯಕತೆ ಬಹಳವಾಗಿತ್ತು. ಆದ್ದರಿಂದಲೇ ಅಲ್ಲಿಯತನಕ ಅನಂತದ ಸ್ಪಷ್ಟವಾದ ಆಖ್ಯೆಯು ಸಾಧ್ಯವಾಗಲೇ ಇಲ್ಲ.

ಎರಡು ಗಣಗಳ ಮಧ್ಯೆ ಪರಸ್ಪರ ಸಂವಾದಿ ಸಂಬಂಧ (one-to-one correspondence) ಅಥವಾ ಒಂದಕ್ಕೊಂದು ಹೊಂದಾಣಿಕೆ ಇದ್ದರೆ, ಅಂತಹ ಎರಡು ಗಣಗಳು "ಸಮಸಂಯೋಗಿ"ಗಳು (ಇಕ್ವಲೆಂಟ್) ಎಂದು ಹೇಳಲ್ಪಡುತ್ತವೆ. $A$ ಎಂಬುದು ಒಂದು ನಿರ್ದಿಷ್ಟ ಸಂಖ್ಯೆಗಳಷ್ಟು ವಸ್ತುಗಳನ್ನು ಹೊಂದಿದ್ದು, ಅವುಗಳಲ್ಲಿ ಒಂದು ವಸ್ತುವನ್ನು ಕಡಿಮೆ ಮಾಡಿದರೆ ಉಳಿಯುವ ವಸ್ತುಗಳ ಗಣವನ್ನು $B$ ಎಂದು ಕರೆಯೋಣ. ಆಗ $B$ ಗಣವು $A$ ಗಣದ ಒಂದು ಉಪಗಣವಾಗುತ್ತದೆ. ಈಗ $A$ ಗಣಕ್ಕೂ ಮತ್ತು ಅದರ ಉಪಗಣವಾದ $B$ ಇವೆರಡರ ಮಧ್ಯೆ ಪರಸ್ಪರ ಹೊಂದಾಣಿಕೆಯು ಇರಲು ಸಾಧ್ಯವಿಲ್ಲ. ಆದ್ದರಿಂದ $A$ ಮತ್ತು $B$ ಗಣಗಳು ಸಮಸಂಯೋಗಿಗಳಾಗಲಾರವು.

ಎರಡು ಸಮಸಂಯೋಗಿ ಗಣಗಳು ಒಂದೇ ಸಂಖ್ಯೆಯನ್ನು ಸೂಚಿಸುತ್ತವೆ; ಆ ಸಂಖ್ಯೆಯನ್ನು ಆ ಗಣಗಳ "**ಆಖ್ಯಾತ ಸಂಖ್ಯೆ**" (ಅಥವಾ "ಮೂಲಾಂಕ" - ಕಾರ್ಡಿನಲ್ ನಂಬರ್) ಎಂದು ಕರೆಯುತ್ತೇವೆ. ಒಂದೇ ವಸ್ತುವನ್ನು ಹೊಂದಿರುವ ಗಣದ ಆಖ್ಯಾತ ಸಂಖ್ಯೆ ೧, ಎರಡು ವಸ್ತುಗಳ ಗಣದ ಆಖ್ಯಾತ ಸಂಖ್ಯೆಯು ೨, ಹೀಗೆ ಒಂದು ನಿರ್ದಿಷ್ಟ ಸಂಖ್ಯೆಗಳಷ್ಟು ವಸ್ತುಗಳನ್ನು ಹೊಂದಿದ ಗಣದ ಆಖ್ಯಾತ ಸಂಖ್ಯೆಯು ಆ ಗಣದಲ್ಲಿರುವ ವಸ್ತುಗಳ ಸಂಖ್ಯೆಯೇ ಆಗಿರುತ್ತದೆ.

ಯಾವುದೇ ಒಂದು ಗಣವು ಧನ ಪೂರ್ಣಾಂಕಗಳ ಗಣಕ್ಕೆ ಸಮಸಂಯೋಗಿಯಾಗಿದ್ದರೆ, ಅಂತಹ ಗಣವು - "ಪ್ರಗಣನೀಯ" (ಡೆನ್ಯುಮರೆಬಲ್) ಎಂದು ಹೇಳುತ್ತೇವೆ. ಒಂದು ಪ್ರಗಣನೀಯ ಗಣದ ವೈಶಿಷ್ಟ್ಯವೆಂದರೆ ಅದರ ವಸ್ತುಗಳನ್ನು ಮೊದಲನೆಯದು, ಎರಡನೆಯದು, ....ಮುಂತಾಗಿ ಜೋಡಿಸಬಹುದು. ಒಂದರ ಹಿಂದೆ ಇನ್ನೊಂದರಂತೆ ವಸ್ತುಗಳ "ಅನಂತ ಮೆರವಣಿಗೆ" ಸಾಧ್ಯ. ಉದಾಹರಣೆಗೆ, ಭಾಗಲಬ್ಧ ಸಂಖ್ಯೆಗಳ (ರ್‍ಯಾಷನಲ್ ನಂಬರ್ಸ್) ಗಣವು ಪ್ರಗಣನೀಯವಾಗಿದೆ. ಆದರೆ, ಅಭಾಗಲಬ್ಧ ಸಂಖ್ಯೆಗಳ (ಇರ್‍ಯಾಷನಲ್ ನಂಬರ್ಸ್) ಗಣವು ಪ್ರಗಣನೀಯವಲ್ಲ. ಅಂದರೆ, ಅಭಾಗಲಬ್ಧ ಸಂಖ್ಯೆಗಳನ್ನು ಒಂದರ ಪಕ್ಕದಲ್ಲಿ ಒಂದರಂತೆ ಸಾಲಾಗಿ ಜೋಡಿಸಲು ಸಾಧ್ಯವಿಲ್ಲ. ಇಂತಹ ಸಂಖ್ಯೆಗಳಿಗೆ ಉದಾಹರಣೆಯೆಂದರೆ. ೨ ಮತ್ತು ೩ ಸಂಖ್ಯೆಗಳ ವರ್ಗಮೂಲಗಳು, $\pi$ (ಪೈ) ಮುಂತಾದವುಗಳು. ಯಾವುದೇ ವೃತ್ತದ ಪರಿಧಿಯನ್ನು ಅದರ ವ್ಯಾಸದಿಂದ ಭಾಗಿಸಿದರೆ ಬರುವ ಸ್ಥಿರ ಸಂಖ್ಯೆಯೇ $\pi$ (ಪೈ).

ಇನ್ನೊಂದು ಉದಾಹರಣೆಯನ್ನು ಪರಿಶೀಲಿಸೋಣ. $N$ ಎಂಬುದು ೧, ೨, ೩,.... ಮುಂತಾದ ಧನ ಪೂರ್ಣಾಂಕಗಳ ಗಣವಾಗಿರಲಿ. ಅಂತೆಯೇ $E$ ಎಂಬುವುದು ೨, ೪, ೬.... ಮುಂತಾದ ಧನ ಸಮಸಂಖ್ಯೆಗಳ (ಈವನ್ ನಂಬರ್ಸ್) ಗಣವಾಗಿರಲಿ. $E$ ಗಣದ ಸಂಖ್ಯೆಗಳು $N$ ಗಣದ ಸಂಖ್ಯೆಗಳನ್ನು ೨ ರಿಂದ ಗುಣಿಸುವುದರಿಂದ ಬರುತ್ತವೆ. ಆದ್ದರಿಂದ

$N$ ಮತ್ತು $E$ ಗಣಗಳ ಮಧ್ಯೆ ಪರಸ್ಪರ ಹೊಂದಾಣಿಕೆಯಿದೆ; ಅಂದರೆ, ಈ ಎರಡು ಗಣಗಳು ಸಮಸಂಯೋಗಿಯಾಗಿವೆ. ಆದ್ದರಿಂದ, ಈ ಎರಡು ಗಣಗಳ ಆಖ್ಯಾತ ಸಂಖ್ಯೆಯು ಒಂದೇ ಆಗಿರುತ್ತದೆ. ಆದರೆ. $E$ ಗಣದ ಸಂಖ್ಯೆಗಳು (ಸಮ ಸಂಖ್ಯೆಗಳು) $N$ ಗಣದ ಒಂದು "ಉಪಗಣ" (ಸಬ್‌ಸೆಟ್). ಇಲ್ಲಿ $N$ ಗಣಕ್ಕೂ ಮತ್ತು ಅದರ ಒಂದು ಉಪಗಣಕ್ಕೂ ಪರಸ್ಪರ ಹೊಂದಾಣಿಕೆ (ಸಮ ಸಂಯೋಗಿ ಸಂಬಂಧ) ಇದೆ. ಈ ಸಂದರ್ಭದಲ್ಲೇ "ಅನಂತ"ದ ನಿರ್ದಿಷ್ಟವಾದ ವ್ಯಾಖ್ಯೆಯು ರೂಪಗೊಳ್ಳುತ್ತದೆ. ಈ ಉದಾಹರಣೆಯಲ್ಲಿ $N$ ಮತ್ತು $E$ ಗಣಗಳ ಆಖ್ಯಾತ ಸಂಖ್ಯೆಯು ಅನಂತವೆಂದು ಹೇಳಲ್ಪಡುತ್ತದೆ.

ಅಂದರೆ. ಯಾವುದೇ ಒಂದು ಗಣವು ಅದರ ಒಂದು ಉಪಗಣದೊಂದಿಗೆ ಸಮಸಂಯೋಗಿಯಾಗಿದ್ದರೆ. ಆ ಗಣದ ಆಖ್ಯಾತ ಸಂಖ್ಯೆಯೇ "ಅನಂತ" ಎಂದು ವ್ಯಾಖ್ಯಾನಿಸಲ್ಪಡುತ್ತದೆ.

ಇನ್ನೊಂದು ಸ್ವಾರಸ್ಯದ ಸಂಗತಿಯೆಂದರೆ, ಭಾಗಲಬ್ಧ ಸಂಖ್ಯೆಗಳ ಗಣ ಹಾಗೂ ಅಭಾಗಲಬ್ಧ ಸಂಖ್ಯೆಗಳ ಗಣ – ಇವೆರಡೂ ಅನಂತಗಣಗಳೇ ಆಗಿದ್ದರೂ ಕೂಡ ಅವೆರಡರ ಮಧ್ಯೆ ಪರಸ್ಪರ ಸಂವಾದಿ ಸಂಬಂಧವಿಲ್ಲ. ಅಷ್ಟೇ ಅಲ್ಲದೆ, ಅಭಾಗಲಬ್ಧ ಸಂಖ್ಯೆಗಳ ಗಣದ ಆಖ್ಯಾತ ಸಂಖ್ಯೆಯಾದ ಅನಂತವು ಭಾಗಲಬ್ಧ ಸಂಖ್ಯೆಗಳ ಗಣದ ಆಖ್ಯಾತ ಸಂಖ್ಯೆಯಾದ ಅನಂತಕ್ಕಿಂತಲೂ ಬಹಳ ಹೆಚ್ಚಿನ "ದರ್ಜೆ"ಯದು ! ಅಂದರೆ, ಒಂದು ರೀತಿಯಲ್ಲಿ ಅನಂತಗಳಲ್ಲೂ ಒಂದು ಹೆಚ್ಚು ಒಂದು ಕಡಿಮೆ ಎಂಬ ತಾರತಮ್ಯ ಉಂಟು !

ಒಂದು ಅನಂತ ಗಣದ "ಪ್ರಗಣನೀಯತೆ"ಯನ್ನು ಅರ್ಥಮಾಡಿಕೊಳ್ಳಲು ಈ ಕೆಳಗಿನ ಒಂದು ಸ್ವಾರಸ್ಯವಾದ ಕಾಲ್ಪನಿಕ ಸಂದರ್ಭವನ್ನು ಊಹಿಸಿಕೊಳ್ಳಬಹುದು.

ಭಾಗಲಬ್ಧ ಸಂಖ್ಯೆಗಳೂ (ರ್‍ಯಾಷನಲ್ ನಂಬರ್ಸ್) ಹಾಗೂ ಅಭಾಗಲಬ್ಧ ಸಂಖ್ಯೆಗಳೂ (ಇರ್‍ಯಾಷನಲ್ ನಂಬರ್ಸ್) ಒಂದು ವಿಶ್ವವಿದ್ಯಾನಿಲಯದ ಡಿಗ್ರಿ ಪರೀಕ್ಷೆಗೆ ಕುಳಿತುಕೊಂಡವಂತೆ. ಪರೀಕ್ಷೆಯ ಫಲಿತಾಂಶಗಳು ಹೊರಬಂದಾಗ, ಎಲ್ಲ ಭಾಗಲಬ್ಧ ಸಂಖ್ಯೆಗಳೂ ಪಾಸಾಗಿದ್ದವಂತೆ; ಹಾಗೂ ಅಭಾಗಲಬ್ಧ ಸಂಖ್ಯೆಗಳು ಫೇಲಾಗಿದ್ದವು. ಅನಂತ ಸಂಖ್ಯೆಯಲ್ಲಿ ಫೇಲಾದ ಅಭಾಗಲಬ್ಧ ಸಂಖ್ಯೆಗಳು ಮುಷ್ಕರ ಹೂಡಿದವು. ಆಗ, ಉಪಕುಲಪತಿಗಳು ಅವರನ್ನು ಸಮಾಧಾನ ಪಡಿಸಲು ಪ್ರಯತ್ನಿಸುತ್ತ ಹೇಳಿದರಂತೆ, "ನೀವೇಕೆ ನಮ್ಮ ವಿಶ್ವವಿದ್ಯಾಲಯದ ಬಗ್ಗೆ ಇಷ್ಟೊಂದು ನಿರಾಶರಾಗಿ ರೋಸಿಹೋಗಿದ್ದೀರಿ ? ಅಷ್ಟಕ್ಕೂ ಪಾಸಾದವರ ಸಂಖ್ಯೆ ಕೂಡ ಅನಂತವಾಗಿಯೇ ಇದೆ. ಇದು ಆಶಾದಾಯಕವಾದ ವಿಷಯವಲ್ಲವೆ ?" ಎಂದು. ಆದರೆ, ಫೇಲಾದ ಅಭಾಗಲಬ್ಧ ಸಂಖ್ಯೆಗಳಿಗೆ ಸಮಾಧಾನವಾಗಲಿಲ್ಲ. ಅವರ ಪ್ರಕಾರ ಫೇಲಾದವರ ಸಂಖ್ಯೆ ಶೇಕಡ ೧೦೦ಕ್ಕೆ ಬಹಳ ಹತ್ತಿರ ಹತ್ತಿರವಾಗಿಯೇ ಇತ್ತು. ಹೀಗಾಗಿ ಆ ನತದೃಷ್ಟ ಅಭ್ಯರ್ಥಿಗಳು ಸಾರ್ವತ್ರಿಕ ಚುನಾವಣೆಯಲ್ಲಿ . ಆಗಿನ್ನೂ ಸೋತು ನಿರುದ್ಯೋಗಿಗಳಾದ ಪುಢಾರಿಗಳನ್ನು

ಮುಂದಿಟ್ಟುಕೊಂಡು, ಉಪಕುಲಪತಿಗಳ ಬಳಿಗೆ ತೀವ್ರವಾಗಿ ಪ್ರತಿಭಟಿಸಲು ಸಾಲಾಗಿ ಮೆರವಣಿಗೆಯಲ್ಲಿ ಧಾವಿಸಲು ನಿರ್ಧರಿಸಿದರು. ಆದರೆ, ಈಗ ಅವರಿಗೆ ಇನ್ನೂ ಹೆಚ್ಚಿನ ನಿರಾಶೆ ಕಾದಿತ್ತು. ಅವರು ಎಷ್ಟೇ ಪ್ರಯತ್ನಪಟ್ಟರೂ ಕೂಡ ಒಬ್ಬರ ಹಿಂದೆ ಒಬ್ಬರು ನಿಲ್ಲಲು ಸಾಧ್ಯವೇ ಆಗಿರಲಿಲ್ಲ; ಅವರ "ಅನಂತ ಮೆರವಣಿಗೆ" ಕೇವಲ ಕನಸಿನ ಮಾತಾಯಿತು. ಕಾರಣ, ಅಭಾಗಲಬ್ಧ ಸಂಖ್ಯೆಗಳು ಪ್ರಗಣನೀಯವಲ್ಲ !

ಮರುವರ್ಷದ ಪರೀಕ್ಷೆಯ ಫಲಿತಾಂಶಗಳು ಅದಲು ಬದಲು ಆಗಿ ಬಂದವು. ಎಲ್ಲಾ ಭಾಗಲಬ್ಧ ಸಂಖ್ಯೆಗಳೂ ಫೇಲಾದವು. ಹಾಗೂ ಅಭಾಗಲಬ್ಧ ಸಂಖ್ಯೆಗಳು ಪಾಸಾದವು. ಪಾಸಾದ ಸಂಖ್ಯೆಗಳ ಸಂತೋಷಕ್ಕೆ ಪಾರವೇ ಇರಲಿಲ್ಲ. ಆದರೆ, ಈ ಸಂತೋಷವು ಬಹಳ ಹೊತ್ತು ಉಳಿಯಲಿಲ್ಲ. ನತದೃಷ್ಟವಾದ ಅಭಾಗಲಬ್ಧ ಸಂಖ್ಯೆಗಳಿಗೆ ಇನ್ನು ಹೆಚ್ಚು ಆಘಾತ ಕಾದಿತ್ತು. ಅವರು ತಮ್ಮ ಡಿಗ್ರಿಯನ್ನು ಸ್ವೀಕರಿಸಲು ಪದವಿಪ್ರದಾನ ಸಮಾರಂಭಕ್ಕೆ (ಕಾನ್ವೊಕೇಷನ್) ಹೋಗಬೇಕಿತ್ತು; ಇಲ್ಲದಿದ್ದರೆ ಗೈರು ಹಾಜರಿಯಲ್ಲಾದರೂ (ಇನ್ ಆಬ್ಸೆಂಷಿಯಾ) ಪಡೆಯಬಹುದಾಗಿತ್ತು.

ಪದವಿಪ್ರದಾನ ಸಮಾರಂಭದಲ್ಲಿ ಅಭ್ಯರ್ಥಿಗಳು ಒಬ್ಬರಾದ ಮೇಲೆ ಒಬ್ಬರು ತಮ್ಮ ಡಿಗ್ರಿ ಸರ್ಟಿಫಿಕೇಟನ್ನು ಮುಖ್ಯ ಅತಿಥಿಗಳಿಂದ ಪಡೆಯಬೇಕಾಗಿತ್ತು, ಆದರೆ, ಪ್ರಗಣನೀಯವಲ್ಲದ ಅಭಾಗ್ಯರಾದ ಅಭಾಗಲಬ್ಧ ಸಂಖ್ಯೆಗಳಿಗೆ ಇದು ಹೇಗೆ ತಾನೆ ಸಾಧ್ಯ ? ಹೋಗಲಿ, ಗೈರುಹಾಜರಿಯಲ್ಲೇ ಡಿಗ್ರಿಯನ್ನು ಪಡೆಯೋಣವೆಂದರೆ, ವಿಶ್ವವಿದ್ಯಾನಿಲಯದ ಕಚೇರಿಯವರು ಪ್ರಮಾಣ ಪತ್ರಗಳನ್ನೂ ಒಂದಾದ ಮೇಲೆ ಒಂದರಂತೆ ಬರೆಯಬೇಕಿತ್ತಷ್ಟೆ ! ಇದೂ ಕೂಡ ಸಾಧ್ಯವಿಲ್ಲ.

ಇನ್ನೂ ಅನೇಕ ಸ್ವಾರಸ್ಯವಾದ ಫಲಿತಾಂಶಗಳು ಅನಂತದ ಕಲ್ಪನೆಯಿಂದ ಹೊರಬಂದಿವೆ; ಕೆಲವು ಪ್ರಸಿದ್ಧವಾದ "ಅಸಂಗತ"ಗಳೂ (ಪ್ಯಾರಾಡಾಕ್ಸಸ್) ಇವೆ. ಅವುಗಳ ಪೈಕಿ **"ಜಿನೋವಿನ ಅಸಂಗತ"** ಬಹಳ ಜನಪ್ರಿಯವಾಗಿದೆ. ಜೇನೋ ಕ್ರಿ. ಪೂ. ಐದನೇ ಶತಮಾನದ ಖ್ಯಾತ ತತ್ತ್ವಜ್ಞಾನಿ ಹಾಗೂ ಗಣಿತಜ್ಞ. ಆತನ "ಅಚಿಲಿಸ್ ಮತ್ತು ಆಮೆ" ಎಂಬ ಒಂದು ಅಸಂಗತವು ಸ್ವಾರಸ್ಯಕರವಾಗಿದೆ. ಅಚಿಲಿಸ್ ಎಂಬಾತನು ಮತ್ತು ಒಂದು ಆಮೆ ಒಂದು ಸರಳರೇಖೆಯ ಮಾರ್ಗದಲ್ಲಿ ಒಂದೇ ದಿಕ್ಕಿನಲ್ಲಿ ಚಲಿಸಲು ಪ್ರಾರಂಭಿಸುತ್ತಾರೆ. ಅಚಿಲಿಸ್‌ಗಿಂತ ಸ್ವಲ್ಪ ದೂರ ಮುಂದಿನಿಂದ ಆಮೆಯು ತನ್ನ ಚಲನೆಯನ್ನು ಆರಂಭಿಸುತ್ತದೆ. ಅಚಿಲಿಸ್‌ನ ವೇಗವು ಆಮೆಯ ವೇಗಕ್ಕಿಂತ ಹೆಚ್ಚಾಗಿಯೇ ಇರುತ್ತದೆ. ಆಮೆಗಿಂತ ಹಿಂದಿರುವ ಅಚಿಲಿಸ್ ಆಮೆಯನ್ನು ದಾಟಿ ಹೋಗಬೇಕಾಗಿದ್ದರೆ, ಮೊದಲು ಆಮೆಯು ತನ್ನ ಚಲನೆಯನ್ನು ಪ್ರಾರಂಭಿಸಿದ ಬಿಂದುವನ್ನು $(P)$ ದಾಟಬೇಕಾಗುತ್ತದೆ. ಆತನು $P$ ಬಿಂದುವಿಗೆ ಬರುವಷ್ಟರಲ್ಲಿ, ಆಮೆಯು ಮುಂದಿನ ಒಂದು ಬಿಂದುವಾದ $P_1$ ಎಂಬಲ್ಲಿಗೆ ಸೇರಿರುತ್ತದೆ. ಅಚಿಲಿಸ್ $P_1$ ಬಳಿಗೆ ಬರುವಷ್ಟರಲ್ಲಿ ಆಮೆಯು ಇನ್ನೂ ಮುಂದಿನ ಒಂದು ಬಿಂದು $P_2$ ತಲುಪಿರುತ್ತದೆ. ಇನ್ನು ಅಚಿಲಿಸ್ $P_2$

ಬಳಿಗೆ ಬರುವಷ್ಟರಲ್ಲಿ ಆಮೆಯು ಇನ್ನು ಮುಂದಿನ ಒಂದು ಬಿಂದು $P_3$ ತನಕ ಚಲಿಸಿರುತ್ತದೆ. ಹೀಗೆ, ಅಚಿಲಿಸ್ ಆಮೆಯನ್ನು ಸಮೀಪಿಸುವಷ್ಟರಲ್ಲಿ, ಆಮೆಯು ಸಲ್ಪವರಲ್ಲೇ ಮುಂದು ಮುಂದು ಸಾಗಿರುತ್ತದೆ. ಆದ್ದರಿಂದ, ಅಚಿಲಿಸ್ ಆಮೆಯನ್ನು ದಾಟಲು ಸಾಧ್ಯವೇ ಇಲ್ಲ !

ಹಾಗೆಯೇ ಖ್ಯಾತ ತತ್ತ್ವಜ್ಞಾನಿ ಹಾಗೂ ಗಣಿತಜ್ಞ ಬರ್ಟ್ರಾಂಡ್ ರಸಲ್ ಅವರ "ಟ್ರೈಸ್ಟ್ರಂ ಶ್ಯಾಂಡಿ ಅಸಂಗತ" ಮುಂತಾದ ಅನೇಕ ಸ್ವಾರಸ್ಯಕರವಾದ ಅಸಂಗತಗಳು ಅನಂತದ ಕಲ್ಪನೆಯಿಂದ ಹೊರಬಂದಿವೆ.

"ಅನಂತದ ಸ್ವರಮೇಳವೇ (ಸಿಂಫೊನಿ) ವಿಶ್ಲೇಷಣ ಗಣಿತ" ಎಂದು ಈ ಶತಮಾನದ ಪ್ರಖ್ಯಾತ ಗಣಿತಜ್ಞ ಡೇವಿಡ್ ಹಿಲ್ಬರ್ಟ್ ಅನಂತವನ್ನು ಬಣ್ಣಿಸಿದ್ದಾನೆ. ಅನಂತದ ಮಹತ್ವವು ನಿಜಕ್ಕೂ ಅನಂತವಾಗಿಯೇ ಇದೆ !

* * *

"ಅನಂತ ! ಬೇರೆ ಯಾವ ಪ್ರಶ್ನೆಯೂ ಮಾನವನ ಅಂತರಂಗವನ್ನು ಇಷ್ಟೊಂದು ಗಾಢವಾಗಿ ತಟ್ಟಿಲ್ಲ."

*— ಡೇವಿಡ್ ಹಿಲ್ಬರ್ಟ್*

"ಗಣಿತವು ಅನಂತದ ವಿಜ್ಞಾನ !"

*— ಹರ್ಮನ್ ವೈಲ್*

"ಗಣಿತಶಾಸ್ತ್ರವು ಕೇವಲ ಮಾನವ ಬುದ್ಧಿಜನ್ಯವಾಗಿದ್ದು ಅನುಭವ ನಿರಪೇಕ್ಷವಾಗಿದ್ದರೂ ಕೂಡ ಅದು ಹೇಗೆ ನೈಜತೆಯ ಪರಿಸ್ಥಿತಿಗಳಿಗೆ ಅಷ್ಟು ಸಮರ್ಪಕವಾಗಿ ಹೊಂದಿಕೊಳ್ಳುತ್ತದೆ ಎಂಬುದು ನಿಜಕ್ಕೂ ಒಂದು ಒಗಟಾಗಿದೆ."

*— ಆಲ್ಬರ್ಟ್ ಐನ್‌ಸ್ಟೈನ್*

# ಅದ್ವೈತ - ಅನುಷ್ಠಾನ ವೇದಾಂತ



ಲಕ್ಷ್ಮೀಶ ತೋಳ್ಪಾಡಿ

ಆಧ್ಯಾತ್ಮ ವಿದ್ಯೆಯು ಒಂದು ವಿಲಕ್ಷಣ ವಿದ್ಯಮಾನವಾಗಿದೆ. ಲೋಕದೃಷ್ಟಿಯಿಂದ ನೋಡುವಾಗ ವಿಲಕ್ಷಣ. ಅದರ ರೀತಿಗದು ಸಹಜವೇ. ಲೋಕದಲ್ಲಿ ಅರಿವಿನ ಸ್ವರೂಪವನ್ನು ನೋಡಿರಿ. ಮಗುವಿಗೆ ಇಂದ್ರಿಯಗಳ ಮೂಲಕ ವಸ್ತುಪ್ರಪಂಚದ ಅಸ್ತಿತ್ವದ ಮೊದಲ ಅರಿವು. ಈ ಅರಿವಿನ ಜತೆಗೇ ಮಗುವಿಗೆ ತನ್ನ ಅಸ್ತಿತ್ವದ ಅರಿವೂ ಆಗುತ್ತ ಹೋಗುತ್ತದೆ.

ಈ ಎರಡು ಅರಿವುಗಳೂ ಬೇರೆ ಬೇರೆ ಅಲ್ಲ. ಅದು ಅವಿನಾ. ಒಂದಿಲ್ಲದೆ ಇನ್ನೊಂದಿಲ್ಲ. ಆದುದರಿಂದಲೇ ಮಗುವಿಗೆ ಅರಿವೆಂಬುದು ಒಂದು ಅಚ್ಚರಿ ಮತ್ತು ಆನಂದ. ಏಕೆಂದರೆ ಪ್ರಪಂಚಕ್ಕಿಂತ ಬೇರೆಯಾಗಿ, ತಾನು ಅದರ ಅರಿವು ಮಾಡಿಕೊಳ್ಳುತ್ತಿರುವವನು ಎಂಬ ಭಾವ ಇನ್ನೂ ಒಡಮೂಡದ ಸ್ಥಿತಿ ಅದು. ಅಂದರೆ ಜ್ಞಾತೃ ಜ್ಞೇಯಗಳಾಗಿ ವಿಭಕ್ತಗೊಳ್ಳದ ಅರಿವು. ಆದರೆ ಬೆಳೆದಂತೆ, ತಾನು ಇಂಥವನು, ಅರಿವು ಮಾಡಿಕೊಳ್ಳುತ್ತಿರುವವನು ಎಂಬ ನೋಟವೇ ಪ್ರಮುಖವಾಗಿ ಅರಿವಿನ ಸ್ವರೂಪ ಬದಲಾಗುತ್ತದೆ. ಅಲ್ಲಿದೆ ಪ್ರಪಂಚ ! ನಾನು ಪ್ರಪಂಚವನ್ನು ಅರಿಯುವವನು ! ಇದು ವಿಭಕ್ತಗೊಂಡ ಅರಿವು.

ಈ ನೆಲೆ ಗಟ್ಟಿಯಾದಂತೆ, ಪರಿಚಿತವಾದಂತೆ, ಎಲ್ಲವೂ ಈ ಪರಿಚಿತ ವ್ಯೂಹದೊಳಗೆ ಸೇರಿಕೊಳ್ಳುತ್ತ ಪರಿಚಿತವಾಗುತ್ತ ಹೋಗುತ್ತದೆ. ಹಾಗಾಗಿ ತಜ್ಞರು ಹೇಳುತ್ತಾರೆ "ಹುಟ್ಟಿ ಐದು ವರ್ಷಗಳೊಳಗೆ ಮಗುವಿನ ವ್ಯಕ್ತಿತ್ವದ ಬೀಜಾವಾಪ ಆಗಿರುತ್ತದೆ. ಆಮೇಲಿನದೆಲ್ಲವೂ ಆ ಬೀಜದ ಮೊಳಕೆಗಳಷ್ಟೆ. ಹೊಸದೇನಿಲ್ಲ."

ಇದು 'ಇಹ' !

ನಮ್ಮ ಎಲ್ಲ ರೋಮಾಂಚನಗಳೂ ಪರಿಚಿತವಲಯದಲ್ಲಿ ಮಾತ್ರ. ಪರಿಚಿತವನ್ನು ಮಾತ್ರ ನಾವು ಗುರುತಿಸಬಲ್ಲೆವು. ಗಾಯಕ ಹಾಡುವ ರಾಗ ನಮಗೆ ಪರಿಚಿತವಾಗಿದ್ದಾಗ

ನಮ್ಮ ಮುಖ ಅರಳುತ್ತದೆ. ಭಲೇ ಎನ್ನುತ್ತೇವೆ. ನಮ್ಮ 'ಪರಿಚಿತ'ವನ್ನೇ ಮತ್ತೆ ಮತ್ತೆ ನಾವು ಮುಟ್ಟಿ ನೋಡಿಕೊಳ್ಳುತ್ತಿರುವುದು. ಯಾವ ಹೊಸ ಅರಿವಿನ ವಿಷಯವಿದ್ದರೂ ಅದನ್ನು ನಮ್ಮ ಪರಿಚಿತ ಜ್ಞಾನವಲಯಕ್ಕೆ ಎಳೆತಂದು ಹೋಲಿಸುವುದೂ; ಬೆಲೆ ಕಟ್ಟುವುದೂ ಇತ್ಯಾದಿ ನಮ್ಮ ಬೌದ್ಧಿಕ ಕಾಯಕವಾಗಿದೆ. ಇದು ಲೌಕಿಕದ ಅನಿವಾರ್ಯ. ಬೆಳೆದಂತೆ ಅಚ್ಚರಿಪಡುವ ನಮ್ಮ ಸಂವೇದನಾ ಶಕ್ತಿಯೇ ಮುಸುಕಾಗುತ್ತ ಹೋಗುತ್ತದೆ. ಏಕೆಂದರೆ ನಮಗೆ ನಾವೇ ಪರಿಚಿತರಾದಂತೆ ನಮ್ಮ ಸಂವೇದನಾ ಸಾಮರ್ಥ್ಯವೂ ನಮಗೆ ಪರಿಚಿತವೇ. ಪರಿಚಿತ ಸಂವೇದನೆಯು ಎಂದೂ ಅಪರಿಚಿತವನ್ನು ಗ್ರಹಿಸಲಾರದು. ಅತ ಏವ ಅಚ್ಚರಿಪಡಲಾರದು.

ಲೋಕದ ಈ ಸ್ಥಿತಿಯಿಂದ; ನೆಲೆಯಿಂದ ನೋಡುವಾಗ ಆಧ್ಯಾತ್ಮಿಕ ಜ್ಞಾನವು ವಿಲಕ್ಷಣ. ಆ ಜ್ಞಾನದ ಸ್ವರೂಪವನ್ನು "ಆಶ್ಚರ್ಯ" ಎಂದೇ ಬಣ್ಣಿಸಿದ್ದಾರೆ.

ವಿಖ್ಯಾತವಾದ ಭಗವದ್ ಗೀತೆಯಲ್ಲಿ ಹೀಗಿದೆ ಬಣ್ಣನೆ.

"ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಂ
ಆಶ್ಚರ್ಯವದ್ ವದತಿ ತಥೈವ ಚಾನ್ಯಃ
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್"

"ಆಧ್ಯಾತ್ಮಿಕ ತತ್ತ್ವವನ್ನು ಕಂಡವನಿಗೆ ಅದೊಂದು ಬೆರಗು. ಅದರ ಬಗೆಗೆ ನುಡಿದಾಗಲೂ ಅದು ಬೆರಗಿನ ನುಡಿ. ಈ ನುಡಿಯನ್ನು ಕೇಳಿದಾಗಲೂ ಅದು ಮತ್ತೆ ಬೆರಗೇ. ಹೀಗೆ ಅದೊಂದು ನಿರಂತರ, ಎಂದೂ ಒಡೆಯದ ಬೆರಗು. ಆದುದರಿಂದ, ಇದು ಗೊತ್ತಾಗಿ ಬಿಟ್ಟಿತು ಎಂದು ಎಂದೂ ಎನ್ನುವಂತಿಲ್ಲ."

ಗೀತೆಯ ಮಾತೃಕೆ ಎನ್ನಬಹುದಾದ ಕಠೋಪನಿಷತ್ತು ಹೀಗೆ ನುಡಿಯುತ್ತದೆ:

"ಆಶ್ಚರ್ಯೋಽಸ್ಯ ವಕ್ತಾ ಕುಶಲೋಽಸ್ಯ ಲಬ್ಧಾ
ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ"

"ಬ್ರಹ್ಮ ತತ್ತ್ವವನ್ನು ಕಂಡು ಬೆರಗಾದವನು ತಾನು ಬೆರಗೇ ಆಗುವನು. ಅಂಥವನು ಅದರ ಬಗೆಗೆ ನುಡಿದಾಗ 'ಕುಶಲ'ನಾದವನು ಅದನ್ನು ಪಡೆಯಬಲ್ಲನು. ಅದನ್ನು ತಿಳಿದವನು ಒಂದು ಅಚ್ಚರಿ ! ಅವನಿಂದ ತಿಳಿಯುವುದು ಒಂದು ಕೌಶಲ !"

ಕೌಶಲವೆಂದರೆ ತನ್ನ ವ್ಯಕಿತ್ವದ ಎಲ್ಲ ಸೀಮಿತತೆಗಳನ್ನು ಕಳಚಿಕೊಳ್ಳುವ ಧೈರ್ಯ. ಅದುವರೆಗಿನ ತನ್ನ ಯೋಚನಾ ಸರಣಿ, ತನ್ನ ತರ್ಕ, ವಿಚಾರ ಮತ್ತು ಇವೆಲ್ಲದರೊಂದಿಗೆ ತಳಕು ಹಾಕಿಕೊಂಡ ತನ್ನ ಪರಿಚಿತ ವ್ಯಕ್ತಿತ್ವಕ್ಕೆ ವಿದಾಯ ಹೇಳಿ ನವೋನವ ವಸ್ತುವಿಗೆ ಎದೆ ತೆರೆಯುವ ಶ್ರದ್ಧೆ.

ತನಗೆ ತಾನೇ ಹೊಸದಾಗಬಲ್ಲ, ಅಪರಿಚಿತನಾಗಬಲ್ಲ ದಿಟ್ಟತನ. ಇದೀಗ ಕುಶಲತೆ. ಪರಿಚಿತತೆಯನ್ನು ಕಿತ್ತೊಗೆದು ಅಚ್ಚರಿಪಡಬಲ್ಲ ಸೂಕ್ಷ್ಮತೆ.

ಈ ಕುಶಲತೆ ಬಾಲ್ಯದಲ್ಲಿ ಇತ್ತು. ಹಾಗೆಂದುಕೊಳ್ಳದೆಯೇ ಸಹಜವಾಗಿ ಇತ್ತು. ಆದುದರಿಂದಲೇ ಬಾಲ್ಯವೊಂದು ಅಚ್ಚರಿ. ಮತ್ತು ಆಧ್ಯಾತ್ಮಿಕತೆ ಎಂದರೆ ಕಳೆದುಕೊಂಡ ಬಾಲ್ಯವನ್ನು, ಅಚ್ಚರಿಯನ್ನು ಮರಳಿ ಪಡೆದಂತೆ. ಹಾಗಾಗಿಯೇ ಜ್ಞಾನಿಗಳು ಮಕ್ಕಳಂತೆ ಇರುತ್ತಾರೆ ಎನ್ನುವುದು. ಇದೇ ನಿಜವಾದ ದ್ವಿಜತ್ವ.

ಉಪನಿಷತ್ತು ಹೇಳುವ 'ಕೌಶಲ' ಎಂದರೆ ಇದು. ಬುದ್ಧದೇವ 'ಕುಶಲ ಕರ್ಮ' 'ಅಕುಶಲ ಕರ್ಮ' ಎಂಬ ನುಡಿಗಟ್ಟನ್ನು ಉಪನಿಷತ್ತುಗಳಿಂದಲೇ ಎತ್ತಿಕೊಂಡಂತಿದೆ. 'ಕೌಶಲ'ವೆಂದರೆ ಪರಿಚಿತ 'ನಾನು'ವನ್ನು ಕೈಬಿಟ್ಟು ಅಪರಿಚಿತ 'ನಾನು' ತೋರಿಬರುವ ಪ್ರಕ್ರಿಯೆಯಾದರೆ 'ಆಶ್ಚರ್ಯ'ವೆಂದರೇನೆಂದು ನೋಡೋಣ.

'ಆಶ್ಚರ್ಯ' ಎಂದರೆ 'ಅಪರಿಚಿತತೆ' ಮತ್ತು 'ಅತಿಶಯತೆ'. ನಮ್ಮ ಎಲ್ಲ ಪರಿಚಿತ ಜ್ಞಾನದ ಆಚೆಗಿರುವುದರಿಂದ ಮತ್ತು ನಮ್ಮ ಕಲ್ಪನೆಯ ಎಲ್ಲ ಅತಿಶಯಗಳಿಂದ ಅತಿಶಯವಾದುದರಿಂದ ಅದು ದೊಡ್ಡ ಅಚ್ಚರಿ ! 'ಮಹತೋ ಮಹೀಯಾನ್'.'

ಎಂದೂ ಪರಿಚಿತ ಮಾಡಿಕೊಳ್ಳುವುದಕ್ಕೆ ಸಾಧ್ಯವಾಗದಷ್ಟು 'ಅಪರಿಚಿತ' ಅದು.

ಆದುದರಿಂದಲೇ ತಲವಕಾರೋಪನಿಷತ್ತು ಹೇಳುತ್ತದೆ– "ಅನ್ಯದೇವ ತತ್ ವಿದಿತಾತ್" "ನಿನಗೆ ಗೊತ್ತಿರುವುದಕ್ಕಿಂತ ಅದು ಬೇರೆಯೇ ಆಗಿದೆ." ಅಷ್ಟೇ ಅಲ್ಲ. ಗೊತ್ತಿಲ್ಲದೆ ಇರುವುದಕ್ಕಿಂದ ಕೂಡ ಬೇರೆಯೇ.

"ಅನ್ಯದೇನ ಅವಿದಿತಾತ್" ಅಂದರೆ ಪ್ರಾಕೃತವಾದ ಮನೋಬುದ್ಧಿಗಳಿಗೆ ಮೀರಿದ ಅರಿವಿನ ನೆಲೆ ಅದು.

ನಮ್ಮ ಪರಿಚಿತ "ನಾನು"ವನ್ನು ಮೀರಿದ, ನಮ್ಮಲ್ಲಿಯೇ ಇರುವ ಅಪರಿಚಿತ 'ನಾನು'ವು ಜಾಗ್ರತನಾದಾಗ ಮಾತ್ರ ಗ್ರಹಿಸಬಲ್ಲ ಅರಿವು ಅದು. ನಿಜವಾದ ಅಚ್ಚರಿ ಅಂದರೆ ಅವೆರಡೂ ಏಕಕಾಲದಲ್ಲಿ ನಡೆಯುವಂಥದಂತೆ.

ಆಧ್ಯಾತ್ಮಿಕ ಸಾಕ್ಷಾತ್ಕಾರವು ಸಂಭವಿಸಿದಾಗಲೇ ಅದನ್ನು ಗ್ರಹಿಸಬಲ್ಲ, ಅದುವರೆಗೆ ಸುಪ್ತವಾಗಿದ್ದ ಪ್ರಜ್ಞೆ (ಅಪರಿಚಿತ 'ನಾನು') ಯು ಜಾಗ್ರತವಾಗುವುದು ! ಇದು ಜಾಗ್ರತವಾದಾಗಲೇ ಸಾಕ್ಷಾತ್ಕಾರವು ಸಂಭವಿಸುವುದು ! ಇವೆರಡೂ ಒಮ್ಮೆಲೇ ನಡೆಯುವ ವಿದ್ಯಮಾನವಂತೆ. ಆದುದರಿಂದಲೇ ಸಾಕ್ಷಾತ್ಕಾರವು ಭಗವತ್‌ಪ್ರಸಾದದಿಂದಲೇ ಆಗುವಂಥದು ಎನ್ನುವುದು.

ಸುಪ್ತವಾಗಿರುವುದು ಜಾಗ್ರತವಾಗಬೇಕಾದರೆ ಈಗಾಗಲೇ ಜಾಗ್ರತವಾಗಿರುವುದು ಸುಪ್ತವಾಗಬೇಕು. ಪರಿಚಿತ 'ನಾನು' ಕುಸಿಯದೆ ಅಪರಿಚಿತ 'ನಾನು' ಮೇಲೇಳುವುದಿಲ್ಲ.

ಇದನ್ನೇ ಆಚಾರ್ಯ ಶಂಕರರು ತಮ್ಮ ಒಂದು ಹಾಡಿನಲ್ಲಿ ಮಾರ್ಮಿಕವಾಗಿ ಹೇಳಿದ್ದಾರೆ. ನಾಥ, ತವಾಹಂ– ನ ಮಾಮಕೀನಃ ತ್ವಂ."

ಹೇ ಪ್ರಭು. ನಾನು ನಿನ್ನವನು. ನೀನು ನನ್ನವನಲ್ಲ.

ಅಪರಿಚಿತಕ್ಕೆ ಪರಿಚಿತವನ್ನು ಪೂರ್ತಿ ಒಪ್ಪಿಸುವ 'ಕೌಶಲ' ಇದು. ಅಪರಿಚಿತವನ್ನು ಪರಿಚಿತಮಾಡಿಕೊಳ್ಳುವ ಲೌಕಿಕ ಅಲ್ಲ. ಈ ಅರ್ಥದಲ್ಲಿಯೇ ಅಧ್ಯಾತ್ಮವು ವಿಲಕ್ಷಣ.

ಗಣಿತ ಶಾಸ್ತ್ರದ ಪರಿಭಾಷೆಯಲ್ಲಿ ಹೇಳುವುದಾದರೆ, "ರೀತಿ"ಯ ಮೂಲಕ ಪಡೆದ ಉತ್ತರವಲ್ಲ. ಉತ್ತರವು ಮೊದಲೇ ಸಿದ್ಧವಾಗಿದೆ. "ಸಿದ್ಧ" ಉತ್ತರಕ್ಕೆ ಯಾವ 'ರೀತಿ' ? ಹೇಗೆ 'ರೀತಿ' ? ಯಾವುದೇ 'ರೀತಿ'ಯಿಂದ ಸಿದ್ಧವಾದ 'ಉತ್ತರ'ವಲ್ಲ ಅದು.

ಹಾಗೆ ನೋಡಿದರೆ ಅದು 'ಉತ್ತರ' ಕೂಡ ಅಲ್ಲ. 'ಉತ್ತರ'ವೆಂದು ಕರೆಯುವುದು ಕೂಡ ಅದನ್ನು ಪರಿಚಿತ ಮಾಡಿಕೊಳ್ಳುವ ಪ್ರಯತ್ನವೇ. ಯಾವುದಾದರೊಂದು 'ರೀತಿ'ಗೆ ಒಗ್ಗಿಸುವ ಪ್ರಯತ್ನವೇ.

ಈ ವಿಲಕ್ಷಣತೆಯನ್ನೇ ಶಂಕರರು— "ಅನುಭವಾವಸಾನತ್ವಾತ್ ಭೂತವಸ್ತು ವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ"— ಎಂದು ಬಣ್ಣಿಸಿದರು. ಇರುವ ವಸ್ತುವಿನ (=ಈಗಲೂ ಅನುಭವಿಸಿಕೊಂಡೇ ಇರುವ ವಸ್ತುವಿನ) ಅನುಭವದಲ್ಲಿಯೇ ಬ್ರಹ್ಮಜ್ಞಾನದ ನಿಲುಗಡೆ— ಎಂದು ಒತ್ತುಕೊಟ್ಟು ಹೇಳಿದರು. ಇದು ಉನ್ನತವಾದ ಹೇಳಿಕೆ. ಜ್ಞಾನ ಎಂದರೆ ಇರವಿನ ಅರಿವು. ಆ ಅರಿವು ಇರವಿಗಿಂತ ಬೇರೆಯಲ್ಲ. ಇರವಿನ ಅರಿವೇ ಆನಂದ. ಇದೇ ಸತ್; ಚಿತ್; ಆನಂದ. ಇರವಿನ ಈ ಅರಿವನ್ನು ಪಡೆವ ಬಗೆ ಹೇಗೆ ?

ಅಥವಾ ನಮ್ಮ ಇರವೇ ಆಗಿರುವ ಅರಿವು ನಮಗೆ ಮರವೆಯಾಗಿ ಅದನ್ನು ಮರಳಿ ಪಡೆಯಬೇಕಾಗಿ ಬಂದ ಈ ಸ್ಥಿತಿ ಬಂತು ಹೇಗೆ ? ಇಂಥ ಅಸಾಧಾರಣವಾದ, ಮೇಲ್ನೋಟಕ್ಕೆ ಆಂತರಿಕ ವಿರೋಧವುಳ್ಳಂತೆ ಕಾಣುವ ಸಮಸ್ಯೆಗಳನ್ನೇ ಆಧ್ಯಾತ್ಮ ವಿದ್ಯೆ ನಿರ್ವಹಿಸಬೇಕಾದದ್ದು.

ಈ ನಿರ್ವಹಣೆಗೆ ಅಪಾರವಾದ ಕೌಶಲ ಬೇಕು ಎನ್ನುತ್ತದೆ ಉಪನಿಷತ್ತು. "ಕುಶಲೋಽಸ್ಯ ಲಬ್ಧಾ" ಇಂಥ ಕೌಶಲ ಮನುಷ್ಯರಲ್ಲಿ ಇದೆ ಎಂದು ಕೂಡ ಈ ಮಾತಿನ ಧ್ವನಿ !

ಒಂದು ಕಡೆ ಇರವಿನ ಅಚ್ಚರಿ ! ಇನ್ನೊಂದೆಡೆ ಈ ಅಚ್ಚರಿಯನ್ನು ನಿಚ್ಚಳವಾಗಿ ಅರ್ಥಮಾಡಿಕೊಳ್ಳಬಲ್ಲ ಶಾಸ್ತ್ರದ ಕೌಶಲ ! ಇದನ್ನೇ ಇನ್ನೊಂದು ಪರಿಭಾಷೆಯಲ್ಲಿ ಹೇಳುವುದಾದರೆ, ಒಂದೆಡೆ ದರ್ಶನ ಅಥವಾ ಕಾಣ್ಕೆ (Vision). ಇನ್ನೊಂದೆಡೆ ಶಾಸ್ತ್ರ ಅಥವಾ ಈ ಕಾಣ್ಕೆಯ ಸಮುಚಿತ ಸಮೀಕರಣ. ದರ್ಶನ ಮೊದಲು. ಅಂದರೆ ಅನುಭವ ಮೊದಲು. ಶಾಸ್ತ್ರ ಅನಂತರ. ಶಾಸ್ತ್ರ ಮರಳಿ ಅನುಭವದಲ್ಲಿ ನಿಲುಗಡೆಯಾಗಬೇಕು.

"ಅನುಭವಾವಸಾನತ್ವಾತ್." "ಉತ್ತರ" ಮೊದಲು. "ರೀತಿ" ಅನಂತರ. ಇದು ಆಧ್ಯಾತ್ಮದ ವಿಲಕ್ಷಣ ಲೆಕ್ಕ. ಅತ ಏವ, ಸ್ವತಃ ಸಿದ್ಧ ಉತ್ತರವು ಪ್ರಕಟಗೊಳ್ಳಲು ಅನುಕೂಲವಾಗುವಂತೆ ಪ್ರಶ್ನೆಗಳನ್ನೂ ರೀತಿಗಳನ್ನೂ ರೂಪಿಸುವುದೇ ಶಾಸ್ತ್ರದ ಕುಶಲತೆ.

ಸೃಷ್ಟಿಯಲ್ಲಿ ಮೊದಲು ಪೂರ್ಣತೆಯ; ಏಕಾಗ್ರತೆಯ ಸ್ಥಿತಿ. ಬೆಳೆದಂತೆ, ಸೃಷ್ಟಿಚಕ್ರ ತಿರುಗಿದಂತೆ ಅಪೂರ್ಣತೆ. ಚಂಚಲಸ್ಥಿತಿ.

ಮಗುವಿನ ಏಕಾಗ್ರತೆ, ಅಖಂಡತೆ ಅಸಾಧಾರಣವಾದುದು/ ಮಗು ಬೆಳೆದಂತೆ ಈ ಏಕಾಗ್ರತೆಯಲ್ಲಿ ಬಿರುಕು. (Split).

ಅಖಂಡ ಏಕಾಗ್ರ ಸ್ಥಿತಿಯಲ್ಲಿಯೇ ಕಾಣ್ಕೆ. ದರ್ಶನ. ಆದುದರಿಂದಲೇ 'ದರ್ಶನ' ಮೊದಲು. ಭಾರತೀಯ ಪರಂಪರೆಯಲ್ಲಿ ಇದೇ ಅಪೌರುಷೇಯ ವಾಙ್ಮಯ. ಇದೇ ಪ್ರಮಾಣ. ಪೂರ್ವಾವಸ್ಥೆ. ಈ ಹಿನ್ನೆಲೆಯಲ್ಲಿಯೇ ಶಂಕರರು ಬೌದ್ಧರನ್ನು ಎದುರಿಸುವುದು.

ಅನುಭವವು ಅಭಾವಾತ್ಮಕವಾಗಿರಲು ಸಾಧ್ಯವೇ ಇಲ್ಲ. "ಭೂತ ವಸ್ತು ವಿಷಯ ತ್ವಾಚ್ಚ."

ಇದು ಇರವಿನ ಅರಿವು. ಅದು ಅನುಪಲಬ್ಧಿ ಅಲ್ಲ. ಉಪಲಬ್ಧಿ. "ಅಸ್ತೀತ್ಯೇವೋಪಲಬ್ಧವ್ಯಃ"

ನನಗನ್ನಿಸುತ್ತದೆ. ಬೌದ್ಧರನ್ನು ಶಂಕರರು ತಮ್ಮ ಕಾಲುಗಳ ಮೇಲೆ ಸರಿಯಾಗಿ ನಿಲ್ಲಿಸಿದರು ಎಂದು. ತತ್ತ್ವಶಾಸ್ತ್ರದ ಪರಂಪರೆಯಲ್ಲಿ ಇಂಥ ಸರಣಿಯು ನಿಲುಗಡೆ ಇಲ್ಲದೆ ನಡೆಯುತ್ತಿರುತ್ತದೆ. ಹೊರ ದೇಶಗಳಲ್ಲೂ ಇಂಥದು ನಡೆದಿದೆ. ಒಂದು ಹೇಳಬೇಕೆನ್ನಿಸುವ ಉದಾಹರಣೆ ಡೆಸ್ಕಾರ್ಟಿಸ್‌ನದು.

ಡೆಸ್ಕಾರ್ಟಿಸ್ (Rene Discartes) ಹದಿನೇಳನೇ ಶತಮಾನದ ಚಿಂತಕ. ಗಣಿತಜ್ಞ. ತನ್ನ ಇಪ್ಪತ್ತಮೂರನೇ ವಯಸ್ಸಿನಲ್ಲಿ ಈತನಿಗೆ ಒಂದು ಉಜ್ವಲ ದರ್ಶನವಾಯಿತು. ಗಂಟೆಗಳ ಕಾಲ ಡೆಸ್ಕಾರ್ಟಿಸ್ ಈ ದರ್ಶನದಲ್ಲಿ ಮುಳುಗಿದ್ದ. ಇದರ ಫಲವಾಗಿ ಅವನ ಪ್ರಸಿದ್ಧ ಉದ್ಗಾರ ಹೊರಬಿತ್ತು.

"I think, therefore I exist." ("Cogito, irgo sum")

"ನಾನು ಚಿಂತಿಸುತ್ತೇನೆ; ಆದುದರಿಂದ ನಾನು ಇದ್ದೇನೆ."

ಡೆಸ್ಕಾರ್ಟಿಸ್ ಎಲ್ಲವನ್ನೂ ಸಂದೇಹಿಸಬಲ್ಲವನಾಗಿದ್ದ. ಪರಿಚಿತ ಜ್ಞಾನ ಪರಂಪರೆಯನ್ನು, ಇಂದ್ರಿಯಾನುಭವಗಳನ್ನು, ಹಾಗೇ ತನಗೊಂದು ದೇಹ ಇದೆ ಎಂಬುದನ್ನೂ ಆತ ಸಂದೇಹಿಸಬಲ್ಲವನಾಗಿದ್ದ. ಆದರೆ ಈ ಎಲ್ಲವನ್ನೂ ಸಂದೇಹಿಸುವ ಮನಸ್ಸನ್ನು ಮಾತ್ರ ಡೆಸ್ಕಾರ್ಟಿಸ್‌ಗೆ ಸಂದೇಹಿಸಲಾಗಲಿಲ್ಲ. ಭಾರತೀಯ ಸನ್ನಿವೇಶದಲ್ಲಿಯಾಗಿದ್ದರೆ, ಮನಸ್ಸನ್ನೂ ಸಂದೇಹಿಸಿ ಅಸ್ತಿತ್ವವು ಅದರಾಚೆಗೂ ಹಬ್ಬಿರುವುದನ್ನು ತಿಳಿದು,

I exist, therefore I think ಎಂಬ ಉದ್ಗಾರ ಹೊರಡುತ್ತಿತ್ತು.

"ಯನ್ಮನಸಾ ನ ಮನುತೇ
ಯೇನಾಹುರ್ಮನೋಮತಂ
ತದೇವ ಬ್ರಹ್ಮ................"

"ಮನಸ್ಸಿನಿಂದ ತಿಳಿಯಲ್ಪಡುವಂಥದಲ್ಲ. ಎಲ್ಲವನ್ನೂ ತಿಳಿಯುವ ಆ ಮನಸ್ಸು ಯಾವುದರಿಂದ ತಿಳಿಯಲ್ಪಡುತ್ತದೆಯೋ– ಅದು ಬ್ರಹ್ಮ ತತ್ತ್ವ...." ಕಾಲ ಮೇಲೆ ನಿಲ್ಲಿಸುವುದು ಎಂದರೆ ಇದು. ಡೆಸ್ಕಾರ್ಟಸ್‌ನ ಈ ಹೇಳಿಕೆಯಿಂದ ಏನಾಯಿತೆಂದರೆ ಮನಸ್ಸು ಮತ್ತು ದೇಹ ಎರಡು ತೀರ ಭಿನ್ನ. ಸಂಬಂಧರಹಿತ ತತ್ತ್ವಗಳಾಗಿ ತಿಳಿಯಲ್ಪಟ್ಟಿತು. ಯೂರೋಪಿಯನ್ ವಿಜ್ಞಾನ ದೇಹವನ್ನು, ಅಮನಸ್ಕವಾದ ಬರಿಯ ಭೌತಿಕಯಂತ್ರವಾಗಿ ಗ್ರಹಿಸಿತು. ವೈದ್ಯಕೀಯ ವಿಜ್ಞಾನ ಈ ದುರ್ಗತಿಯನ್ನು ಕಳಚಿಕೊಂಡು ಹೊಸ ಅರಿವಿನತ್ತ ಹಾಯಬೇಕಾದರೆ ಮೂರು ಶತಮಾನಗಳು ಬೇಕಾದವು. ಈಗ ಇಪ್ಪತ್ತನೇ ಶತಮಾನದ ಚಿಂತನೆಗೆ ದೇಹ ಮತ್ತು ಮನ ಪರಸ್ಪರ ಪ್ರಭಾವಿಸಬಲ್ಲ, ಪರಸ್ಪರ ಸ್ಪಂದಿಸುವ ಅನ್ಯೋನ್ಯಾಶ್ರಯಿಗಳೆಂಬ ತಿಳಿವಳಿಕೆ ಹೊಳೆದಿದೆ.

"ದರ್ಶನ"ವನ್ನು ತಿಳಿಯುವ "ಕೌಶಲ" ಕೆಟ್ಟರೆ ದರ್ಶನಕ್ಕೆ ಮುಸುಕು ಬಿದ್ದಂತೆ. ಆದುದರಿಂದಲೇ "ಕುಶಲ"ರನ್ನು ಬೆಳೆಸುವ ಗುರು – ಶಿಷ್ಯ ಪರಂಪರೆಗೆ ಅಷ್ಟು ಪ್ರಾಧಾನ್ಯ. "ಕುಶಲೋಽಸ್ಯಲಬ್ಧಾ, ಕುಶಲಾನುಶಿಷ್ಟಃ"

ನೈಸರ್ಗಿಕ ಕೃಷಿಯ ಋಷಿ ಪುಕುವೋಕಾನದೂ ಒಂದು ಜ್ವಲಂತ ಉದಾಹರಣೆ. ಪುಕುವೋಕಾನಿಗೂ ತಾರುಣ್ಯದಲ್ಲಿ ಜಪಾನಿನ ಸಮುದ್ರತೀರದಲ್ಲೊಮ್ಮೆ ಮೈಮರೆಯಿಸುವಂಥ 'ದರ್ಶನ'ವಾಯಿತು. ಎಲ್ಲೆಡೆ ತುಂಬಿರುವ 'ಇರವಿ'ನ ಸಕೃದ್ದರ್ಶನ ಅದು. ಬೌದ್ಧನಾಗಿ, ಬೌದ್ಧ ಪರಿಭಾಷೆಯ ಪರಿಚಯ ಇದ್ದುದರಿಂದ "ಶೂನ್ಯದ ತರಂಗಗಳು ನಲಿಯುತ್ತಿದ್ದುವು" ಎಂದಾತ ಬಣ್ಣಿಸಿದ. ಈ ಕಾಣ್ಕೆ ಅವನ ಬದುಕನ್ನೆ ಬದಲಾಯಿಸಿತು. ವಿಜ್ಞಾನಿಯಾಗಿದ್ದವನು ಕೆಲಸ ಬಿಟ್ಟು ಕೃಷಿ ಭೂಮಿಗೆ ಬಂದ. ತಾನು ಮಾಡುವಂಥದೇನಿಲ್ಲ. ಎಲ್ಲ "ಶೂನ್ಯ ತರಂಗ ನರ್ತನ." ಆದರೆ ಈ ದರ್ಶನವನ್ನು ಕೃಷಿಯಲ್ಲಿ ಪರಿಮಳಿಸುವುದು ಹೇಗೆ ? "ಶೂನ್ಯ ಕೃಷಿ" ಹೇಗೆ ? ಮೂವತ್ತು ವರ್ಷಗಳ ಚಿಂತನೆಯಲ್ಲಿ ತಾನು ಕಂಡ ಕಾಣ್ಕೆಯನ್ನು ಪುಕುವೋಕಾ ಸಾಕಾರಗೊಳಿಸಿದ. ಅವನಿಗೆ ಅವನೇ ಅಚ್ಚರಿ ! ಅವನಿಗೆ ಅವನೇ ಕುಶಲ ! ದಾರ್ಶನಿಕರೆಲ್ಲ 'ಕುಶಲ'ರಾಗಬೇಕೆಂದಿಲ್ಲ.

ಅವರದು 'ಕಾಣ್ಕೆ'. ಅವರು ಕಂಡವರು; ದ್ರಷ್ಟಾರರು; ಅನುಭಾವಿಗಳು. ಇವರು ದ್ವಂದ್ವಾತ್ಮಕ ಲೋಕದಲ್ಲಿ ತಮ್ಮ ಕಾಣ್ಕೆಗೆ ಸರಿಯಾದ ಸಮೀಕರಣ ಮಾಡುತ್ತಾರೆ ಎಂದೇನೂ ಇಲ್ಲ. ಯಾರು ತಮ್ಮ ಕಾಣ್ಕೆಯನ್ನು ನಿಷ್ಕೃಷ್ಟವಾಗಿ ಸಮೀಕರಣ ಮಾಡಬಲ್ಲರು– ಅಂಥವರದು ಆಚಾರ್ಯಪ್ರತಿಭೆ. ಇಂಥವರು ಕುಶಲರ ಪರಿವಾರ; ಪರಂಪರೆಯೊಂದನ್ನು ರೂಪಿಸಬಲ್ಲರು. ಶಂಕರರು ಸೂತ್ರಭಾಷ್ಯದ ಮೊದಲಿಗೆ ತಮ್ಮ ಕಾಣ್ಕೆಯನ್ನು ವಿವರಿಸಿದರು. ಇದೇ ಪ್ರಸಿದ್ಧವಾದ ಅಧ್ಯಾಸ ಭಾಷ್ಯ. ಈ ಬೆಳಕಿನಲ್ಲಿ ಸೂತ್ರಗಳನ್ನು ವ್ಯಾಖ್ಯಾನಿಸುತ್ತ ಸಮೀಕರಣ ಮಾಡುತ್ತ ನಡೆದರು.

ವೈಚಾರಿಕವಾದ ಸಮೀಕರಣ ಮಾತ್ರವಲ್ಲ, ಸಾಮಾಜಿಕವಾದ ಉಪಾಸನಾ ವಿಧಿಗಳನ್ನು ಕೂಡ ಸಮೀಕರಣ ಮಾಡಿದರು. ಆದುದರಿಂದಲೇ ಅವರು ಆಚಾರ್ಯ ಶಂಕರರು. ವಿವಾದ ಮುಕ್ತರಲ್ಲದಿದ್ದರೂ ಅವರು ನಮ್ಮ ಮೊದಲ ಆಚಾರ್ಯರು.

* * * * *

ದಾರ್ಶನಿಕರೆಲ್ಲರೂ ಆಚಾರ್ಯಪುರುಷರಲ್ಲ. ಯುಕ್ತ ಸಮೀಕರಣವನ್ನು ಅವರು ಕೊಡಬೇಕೆಂದಿಲ್ಲ ಎಂದೆ. ಇದಕ್ಕೆ ಕಾರಣಗಳಿವೆ. ದರ್ಶನ ಎಂದರೇನೇ ಭೌತಿಕಸ್ತರದ ನೋಟಕ್ಕಿಂತ, ಒಂದು ಹೆಜ್ಜೆ ಎತ್ತರದ ಮಟ್ಟದಲ್ಲಿ ಕಾಣಬಹುದಾದ ಕಾಣ್ಕೆ. ಭೌತಿಕಸ್ತರದ ಲಕ್ಷಣವೇ ದ್ವಂದ್ವ; ವಿರೋಧ; ನಾನಾತ್ವ. ಇದು ಎಲ್ಲರ ಅನುಭವ.

ಇದಕ್ಕಿಂದ ಎತ್ತರದ ನೋಟದಲ್ಲಿ ದ್ವಂದ್ವ ವಿರೋಧ ನಾನಾತ್ವಗಳು ಒಂದು ಮಟ್ಟದಲ್ಲಿಯಾದರೂ ನಿರಸ್ತವಾಗಿ ಅವಿರೋಧ ತೋರಲೇಬೇಕು. ಎತ್ತರದ ನೋಟಕ್ಕೆ ಕಾಣುವುದು ಎಲ್ಲ ಪರಸ್ಪರ ಸಂಬಂಧಿತವಾದ ಸಮಗ್ರದೃಶ್ಯ. ಆ ಸ್ಥಿತಿಯೇ ಹಾಗಿರುತ್ತದೆ !

ಶಬ್ದ ಪ್ರಪಂಚದ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದ ವೈದಿಕದೃಷ್ಟಾರರು ಆ ಬಗೆಗೆ ಹೇಳಿದುದನ್ನು ಇಲ್ಲಿ ನೋಡಬಹುದು. ''ವಾಕ್''ಗೆ ನಾಲ್ಕು ಸ್ತರಗಳಿವೆಯಂತೆ.

''ಚತ್ವಾರಿ ವಾಕ್ ಪರಿಮಿತಾ ಪದಾನಿ
ತಾನಿ ವಿದುರ್ಬ್ರಾಹ್ಮಣಾಃ ಯೇ ಮನೀಷಿಣಃ
ಗುಹಾ ತ್ರೀಣಿ ನಿಹಿತಾ ನೇಂಗಯಂತಿ
ತುರೀಯಂ ವಾಚೋ ಮನುಷ್ಯಾ ವದಂತಿ '' ||

''ನಾಲ್ಕು ಎಡೆಗಳಲ್ಲಿ ವಾಕ್ಕು ಹರಿಯುತ್ತಿದೆ. ಚಿಂತಕರಿಗೆ ಇದು ತಿಳಿದಿದೆ. ಅವುಗಳಲ್ಲಿ ಮೂರು ಸ್ಥಾನಗಳು ಅಂತರ್ನಿಹಿತವಾಗಿ ಅಗೋಚರವಾಗಿವೆ. ನಾಲ್ಕನೆಯದು ಮನುಷ್ಯರ ನುಡಿಯಲ್ಲಿ ಹರಿದಾಡುತ್ತಿದೆ.'' ಈ ನಾಲ್ಕು ಎಡೆಗಳಿಗೆ ಹೆಸರುಗಳನ್ನು ಕೊಟ್ಟಿದ್ದಾರೆ.

ಪರಾ, ಪಶ್ಯಂತಿ, ಮಾಧ್ಯಮಾ ಮತ್ತು ವೈಖರೀ. ವೈಖರೀ ಎಂದರೆ ನಾನಾಡುವ ನುಡಿ. ಇದರ ಹಿಂದೆ ಮೂರು ಎಡೆಗಳಲ್ಲಿ ಹರಿದುಬರುತ್ತಿದೆ ನಾದ. ವೈಖರಿಗಿಂತ ಅವ್ಯವಹಿತ ಹಿಂದಿನದು ''ಮಧ್ಯಮಾ''. ಇಲ್ಲಿಯೇ ಸಂಗೀತದ ಉಗಮ. ಸಂವಾದಿ ಸ್ವರಗಳ ಸಂಯೋಜನೆಯಿಂದ ಸಂಗೀತ ತೀವ್ರ ಭಾವ ಪರಿಣಾಮವನ್ನುಂಟು ಮಾಡುತ್ತದೆ.

ಮಾತಿಗಿಂತ ಸಂಗೀತ ಶಕ್ತಿಶಾಲಿ. ಮಾತು ದ್ವಂದ್ವದ ವ್ಯೂಹದಲ್ಲಿ ಬಿದ್ದು ನರಳುತ್ತದೆ. ಸಂಗೀತ ಅದಕ್ಕಿಂತ ಒಂದು ಹೆಜ್ಜೆ ಮೇಲಿದೆ. ಅಲ್ಲಿ 'ವಿರೋಧ' ತೀರ ಕಡಮೆ. ಮಧ್ಯಮಾಕ್ಕಿಂತ ಹಿಂದಿನ ಎಡೆಯೇ ''ಪಶ್ಯಂತಿ''. ಇದು ಹೃದಯಸ್ಥಾನ. ಪಶ್ಯಂತಿ ಎಂದರೆ ನೋಡುವುದು ಎಂದರ್ಥ. ಹೌದು. ಇಲ್ಲಿ ವಾಕ್ಕನ್ನು ಕೇಳುವುದಲ್ಲ. ನೋಡುವುದು.

ತೀರ ಬಹಿರ್ಮುಖವಾದ ಇಂದ್ರಿಯ ಪ್ರಪಂಚದಲ್ಲಿ ಕಿವಿ ಕೇಳುತ್ತದೆ. ಕಣ್ಣು ನೋಡುತ್ತದೆ. ಒಂದು ಇನ್ನೊಂದರ ಕೆಲಸ ಮಾಡಲಾರದು. ಇದು ಭೌತಸಹಜ ದ್ವಂದ್ವ. ವಿರೋಧ.

ಈ ಸ್ಥಾನಕ್ಕಿಂತ ಹಿಂದೆ ಇರುವ ಅಂತರ್ಮುಖವಾದ ಶಕ್ತಿ ಕ್ಷೇತ್ರಕ್ಕೆ ಬಂದರೆ ಅಲ್ಲಿ ಇಂದ್ರಿಯಗಳು ಪರಸ್ಪರ ವಿರೋಧಿಗಳಲ್ಲ. ಏಕೆಂದರೆ ಎಲ್ಲ ಇಂದ್ರಿಯಗಳೂ ಕೆಲಸ ಮಾಡುವಂತೆಸಗಿದ ಪ್ರಾಣಶಕ್ತಿಯ ಕ್ಷೇತ್ರ ಅದು.

ಇಂದ್ರಿಯ ಕ್ಷೇತ್ರದಲ್ಲಿ ವಿರೋಧ. ಪ್ರಾಣಶಕ್ತಿಯ ಕ್ಷೇತ್ರದಲ್ಲಿ ಅವಿರೋಧ ! ಆದುದರಿಂದಲೇ ಯಾವುದು ಕಣ್ಣಿನ ಕಣ್ಣು ? ಚಕ್ಷುಷಃ ಚಕ್ಷುಃ ?

ಕಿವಿಗಳ ಕಿವಿ ? ಶ್ರೋತ್ರಸ್ಯ ಶ್ರೋತ್ರಂ ?
ಮಾತಿನ ಮಾತು ? ವಾಚೇ ಹ ವಾಚಂ ?
ಮನಸ್ಸಿನ ಮನಸ್ಸು ? ಮನಸೋ ಮನಃ ?

ಎಂಬ ಜಿಜ್ಞಾಸೆ ಉಪನಿಷತ್ತುಗಳ ತುಂಬೆಲ್ಲ ಹರಿಯುತ್ತಿರುವುದು. ಈ ಪಶ್ಯಂತೀ ಸ್ಥಾನದಲ್ಲಿಯೇ ಮನುಷ್ಯನಿಗೆ "ದರ್ಶನ" ಆಗುವುದು.

ಈ ಕಾರಣದಿಂದಲೇ 'ಮಂತ್ರ ದೃಷ್ಟಾರ' ಎಂಬ ನುಡಿಗಟ್ಟು ಹುಟ್ಟಿಕೊಂಡದ್ದು.

'ಮಂತ್ರಶ್ರೋತಾರ' ಅಲ್ಲ. ಮಂತ್ರ ಶ್ರವಣ ಅಲ್ಲ. ಮಂತ್ರದರ್ಶನ ! ಅಂದರೆ ಈ ಸ್ಥಾನದಲ್ಲಿ ಯಾವ ವಿರೋಧವೂ ಇಲ್ಲ. ದ್ವಂದ್ವವೂ ಇಲ್ಲ. ಎಲ್ಲವೂ ಸಮೀಕೃತ. 'ದೂರವಾಣಿ'ಯ ವ್ಯವಸ್ಥೆಯಲ್ಲಿ Optical fibre ಅಳವಡಿಸುವ ಒಂದು ವ್ಯವಸ್ಥೆ ಇದೆ. ದೂರವಾಣಿಯು ಕೇಳುವ ಶ್ರವಣ ವ್ಯವಸ್ಥೆ. Optical ಎಂದರೆ ಕಣ್ಣಿಗೆ ಸಂಬಂಧಪಟ್ಟಿದ್ದು. ಅಂದರೆ ಶಕ್ತಿಯ (Energy) ಕ್ಷೇತ್ರದಲ್ಲಿ ವಿರೋಧಗಳಿಲ್ಲ ಎಂದರ್ಥ.

ಆದುದರಿಂದಲೇ ಇಂಥ "ಕಾಣ್ಕೆ"ಯನ್ನು ಕಂಡವರು ದ್ವಂದ್ವವನ್ನು ಮೀರಿದವರಾಗಿ, ಶಕ್ತಿಯ ಕ್ಷೇತ್ರಕ್ಕೆ ಸಹಜವಾಗಿ "ಸಮೀಕೃತ"ರಾಗಿ ಅವಿರೋಧವಾಗಿ ಇರುತ್ತಾರೆ. ಅದು ಇತರರಿಗೆ ತಿಳಿಯುತ್ತದೋ ಇಲ್ಲವೋ ಎಂಬ ಗೊಂದಲ ಕೂಡ ಅವರಲ್ಲಿ ನಿರಸ್ತ. ಇಂಥವರನ್ನು ಹುಡುಕಿಕೊಂಡು ಹೋಗಿ ಅವರಿಂದ ಪಡೆಯಬೇಕಾದುದನ್ನು ಪಡೆ ಎಂಬ ಶಾಸ್ತ್ರವಚನ ಈ ಕಾರಣಕ್ಕಾಗಿಯೇ ಹುಟ್ಟಿದ್ದು ಕೂಡ.

ಛಾಂದೋಗ್ಯದಲ್ಲಿ ಇಂದ್ರಿಯಗಳು ಪ್ರತೀಕಗಳಾಗುವುದಕ್ಕೆ ಅಸಮರ್ಥ ಎಂದು ತಿಳಿಸುವ ವ್ಯಾಖ್ಯಾಯಿಕೆಗಳಿವೆ. ಒಮ್ಮೆ ದೇವತೆಗಳು ಘ್ರಾಣೇಂದ್ರಿಯವನ್ನು ಪ್ರತೀಕವನ್ನಾಗಿ ಕಲ್ಪಿಸಿ ಉದ್ಗೀಥನಾಮಕ ಭಗವಂತನನ್ನು ಉಪಾಸನೆ ಮಾಡುತ್ತಿದ್ದರಂತೆ. ಹುಟ್ಟಾಶತ್ರುಗಳಾದ ಅಸುರರು ಇದು ತಿಳಿದು ಘ್ರಾಣೇಂದ್ರಿಯವನ್ನು ಪಾಪಭೂಯಿಷ್ಠವನ್ನಾಗಿ ಮಾಡಿದರಂತೆ. ಈ ಕಾರಣದಿಂದಾಗಿಯೇ ಮೂಗು ಸುಗಂಧ, ದುರ್ಗಂಧ ಎರಡನ್ನೂ ಆಘ್ರಾಣಿಸುತ್ತದೆಯಂತೆ.

"ತಸ್ಮಾತ್ ತೇನ ಉಭಯಂ ಜಿಘ್ರತಿ ಸುರಭಿ ಚ ದುರ್ಗಂಧಿ ಚ" । ಎಲ್ಲ ಇಂದ್ರಿಯಗಳದ್ದೂ ಇದೇ ಸ್ಥಿತಿ. ವಾಕ್ಕು: ಸುಳ್ಳು ಮತ್ತು ಸತ್ಯ ಎರಡನ್ನೂ

ನುಡಿಯಬಲ್ಲುದು. ಕಣ್ಣು, ನೋಡಬೇಕಾದ್ದನ್ನೂ ನೋಡಬಾರದ್ದನ್ನೂ ಎರಡನ್ನೂ ನೋಡಬಲ್ಲುದು. ಕಿವಿ, ಕೇಳಬೇಕಾದ್ದನ್ನೂ ಕೇಳಬಾರದ್ದನ್ನೂ ಎರಡನ್ನೂ ಕೇಳಬಲ್ಲುದು. ಅಂದರೆ ಇಂದ್ರಿಯ ಪ್ರಪಂಚವಿಡೀ ದ್ವಂದ್ವದಿಂದ, ವಿರೋಧಗಳಿಂದ ಕೂಡಿದ್ದು. ಇದು ಉಪಾಸ್ಯವಲ್ಲ.

ಈ ಇಂದ್ರಿಯ ಪ್ರಪಂಚಕ್ಕೆ ಶಕ್ತಿಪ್ರದಾನ ಮಾಡುವ ಪ್ರಾಣನೇ ಉಪಾಸ್ಯ.

ಅಲ್ಲಿ ದ್ವಂದ್ವ ಇಲ್ಲ. ವಿರೋಧ ಇಲ್ಲ. ಇಂದ್ರಿಯ ಪ್ರಪಂಚದಿಂದ ಮೇಲೆದ್ದು ಪ್ರಾಣಪ್ರಪಂಚಕ್ಕೆ ಬನ್ನಿ ಎಂದು ಉಪನಿಷತ್ತು ಕರೆಕೊಡುತ್ತದೆ. ''ಪ್ರಾಣ''ನೆಂದರೆ ಸಮಗ್ರ, ಅಖಂಡ ಬದುಕು. ''ಇಂದ್ರಿಯ''ಗಳೆಂದರೆ ಖಂಡ, ವಿಭಕ್ತ ಬದುಕು. ಇದು ಉಪಾಸ್ಯವಲ್ಲ.

ವಿಭಕ್ತ ಬದುಕಿನಿಂದ ಅವಿಭಕ್ತಕ್ಕೆ, ನಾನಾತ್ವದಿಂದ ಏಕತ್ವಕ್ಕೆ, ವಿರೋಧದಿಂದ ಅವಿರೋಧೀ ನೆಲೆಗೆ ಏರುವುದೇ ಅದ್ವೈತ.

ಲೋಕ; ಬದುಕಿನಿಂದ ಸಾವಿನ ಕಡೆಗೆ ಸರಿಯುತ್ತಿದೆಯಾದರೆ ಮನೀಷಿಗಳು ತಮ್ಮನ್ನು ಸಾವಿನಿಂದ ಬದುಕಿನ ಕಡೆಗೆ ಒಯ್ಯೋ ಎಂದು ಪ್ರಾರ್ಥನೆ ಮಾಡಿದರು.

''ಮೃತ್ಯೋಃ ಮಾ ಅಮೃತಂ ಗಮಯ.''

ಅವರು ಈ ಬದುಕನ್ನೇ ಸಾವು ಎಂದು ಕರೆದರು. ಏಕೆಂದರೆ ಇದು ವಿಭಕ್ತವಾದ ಬದುಕು. ದ್ವಂದ್ವಪೀಡಿತ ಬದುಕು. ನಾನಾತ್ವದಿಂದ ವಿರೋಧಾಭಾಸಮಯಗೊಂಡ ಬದುಕು. ಹುಡುಕಿದರೆ ಇಲ್ಲಿಯೇ ಅವಿಭಕ್ತವಾದ, ನಿರ್ದ್ವಂದ್ವವಾದ, ಸರ್ವಸಮೀಕೃತವಾದ ಬದುಕು ಸಿಗಬಲ್ಲುದು. ಹಾಗೆ ಹುಡುಕುವ, ಹುಡುಕಾಟವಲ್ಲದ ಹುಡುಕಾಟವೇ ಅದ್ವೈತ.

# ಶ್ರೀ ಶಂಕರಭಗವತ್ಪಾದರು ಮತ್ತು ವೈಷ್ಣವ ದರ್ಶನ

ಶ್ರೀಶ್ರೀರಂಗಪ್ರಿಯ ಮಹಾದೇಶಿಕ ಶ್ರೀಪಾದಂಗಳು

ಶ್ರುತಿಸ್ಮೃತಿಪುರಾಣಾನಾಮಾಲಯಂ ಕರುಣಾಲಯಂ ।
ನಮಾಮಿ ಭಗವತ್ಪಾದಂ ಶಂಕರಂ ಲೋಕಶಂಕರಂ ॥

ಜ್ಞಾನಿಶ್ರೇಷ್ಠರೂ, ಭಕ್ತೋತ್ತಮರೂ, ಆಚಾರ್ಯವರಿಷ್ಠರೂ ಆಗಿರುವ ಶ್ರೀ ಶಂಕರ ಭಗವತ್ಪಾದರ ಪವಿತ್ರಜೀವನ ಮತ್ತು ಕೃತಿಗಳನ್ನು ಅನುಸಂಧಾನ ಮಾಡುವಾಗ ಭಕ್ತಿದರ್ಶನಗಳ ಉದ್ಧಾರದಲ್ಲಿ ಅವರು ವಹಿಸಿರುವ ಅದ್ವಿತೀಯವಾದ ಪಾತ್ರವು ಅದರ ಒಂದು ಮುಖ್ಯ ಭಾಗವಾಗಿರುವದು ಅರಿವಿಗೆ ಬರುತ್ತದೆ.

ಪರಜ್ಞಾನಕ್ಕೂ ಪರಭಕ್ತಿಗೂ ಪರಮಾರ್ಥದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಭಗವದ್ವಾಣಿಯಾದ ಗೀತಾಶಾಸ್ತ್ರದ ಎರಡನೇ ಅಧ್ಯಾಯದಲ್ಲಿ ಹೇಳಿರುವ ಸ್ಥಿತಪ್ರಜ್ಞನ ಲಕ್ಷಣಗಳಿಗೂ, ಹನ್ನೆರಡನೇ ಅಧ್ಯಾಯದಲ್ಲಿ ಮಂಡಿತವಾಗಿರುವ ಭಕ್ತನ ವರ್ಣನೆಗೂ ಯಾವ ಮುಖ್ಯವಾದ ವ್ಯತ್ಯಾಸವೂ ಇಲ್ಲ. ಆದರೂ ಕೂಡ ಜ್ಞಾನ–ಭಕ್ತಿಗಳ ಸಾಧನಾಮಾರ್ಗಗಳಲ್ಲಿ ಕೆಲವ್ಯತ್ಯಾಸಗಳನ್ನು ಗಮನಿಸಿ ಭಕ್ತಿದರ್ಶನವನ್ನು ಪ್ರತ್ಯೇಕವಾಗಿ ಪರಿಗಣಿಸಿ ಆ ಬಗೆಗೆ ವಿಚಾರ-ಅನುಷ್ಠಾನಗಳನ್ನು ಮಾಡುವ ವಾಡಿಕೆಯೂ ನಮ್ಮ ಸಂಪ್ರದಾಯದಲ್ಲಿ ಕಂಡುಬರುತ್ತದೆ.

ಈ ಭಕ್ತಿಯಪಂಥಗಳು ದೇವತೆಗಳ ಉಪಾಸನೆಗೆ ಪ್ರಧಾನವಾಗಿ ಸಂಬಂಧಪಟ್ಟಿರುವುದರಿಂದ ಇವುಗಳು ಮತಗಳೇ (Religions) ಹೊರತು ದರ್ಶನ (Philosophy) ಗಳಲ್ಲ ಎಂದು ಕೆಲವರು ಹೇಳುತ್ತಾರೆ. ಉದಾಹರಣೆಗೆ– ಶೈವಪಂಥವು ಶಿವನೇ ಸರ್ವೋತ್ತಮ ದೇವತೆ, ಅವನ ಉಪಾಸನೆಯೇ ಪರಮಶ್ರೇಷ್ಠವೆಂದು ಪ್ರತಿಪಾದಿಸುತ್ತದೆ. ವೈಷ್ಣವ ಪಂಥವು ನಾರಾಯಣನೇ ಸರ್ವಾಧಿಕನಾದ ದೇವತೆ, ಆತನ ಉಪಾಸನೆಯೇ ಸರ್ವೋತ್ತಮವಾದುದೆಂದು ಪ್ರತಿಪಾದಿಸುತ್ತದೆ. ಹೀಗೆ ಈ ಪಂಥಗಳು ಪ್ರಧಾನವಾಗಿ ದೇವತಾವಿಷಯಕವಾಗಿದ್ದರೂ ಇವುಗಳಲ್ಲಿ

ಶ್ರುತಿಸ್ಮೃತಿಪುರಾಣಾಗಮಗಳನ್ನು ಪ್ರಮಾಣಿಸಿದ ವೈಜ್ಞಾನಿಕ ವಿಚಾರ ಭಾಗವೂ ಒಳ ಅನುಭವವೂ ಪುಷ್ಕಳವಾಗಿ ಇರುವುದರಿಂದ ಇವುಗಳನ್ನು ಭಕ್ತಿದರ್ಶನಗಳೆಂದು ನಿರೂಪಿಸುವ ಪದ್ಧತಿಯೂ ಸಂಪ್ರದಾಯದಲ್ಲಿದೆ.

ಶೈವಂ ಚ ವೈಷ್ಣವಂ ಶಾಕ್ತಂ ಸೌರಂ ಗಾಣಪತಂ ತಥಾ ।
ಸ್ಕಾಂದಂ ಚ ಭಕ್ತಿಮಾರ್ಗಸ್ಯ ದರ್ಶನಾನಿ ಷಡೇವ ಹಿ ॥

ಎನ್ನುವ ವಚನವು ಈ ಅಭಿಪ್ರಾಯಕ್ಕೆ ಪುಷ್ಟಿಕೊಡುತ್ತದೆ.

ಈ ಭಕ್ತಿ ದರ್ಶನಗಳ ಸಂಖ್ಯೆ ತಮಗೆ ಅವಲಂಬನವಾದ ದೇವತೆಗೆ ಸಂಬಂಧಪಟ್ಟಂತೆ ಬೇಕಾದಷ್ಟು ಇರಬಹುದಾದರೂ ಅವುಗಳಲ್ಲಿ ಮೇಲಿನ ಶ್ಲೋಕದಲ್ಲಿ ಉದ್ಧೃತವಾಗಿರುವ ಆರು ದೇವತೆಗಳನ್ನು ಕುರಿತ ದರ್ಶನಗಳನ್ನು ಮಾತ್ರ ಪ್ರಧಾನವಾಗಿ ಪರಿಗಣಿಸುತ್ತಾರೆ. ಅವುಗಳಲ್ಲಿ

"ಆದಿತ್ಯಮಂಬಿಕಾಂ ವಿಷ್ಣುಂ ಗಣನಾಥಂ ಮಹೇಶ್ವರಮ್ ।"

ಎಂಬಂತೆ ಆದಿತ್ಯ, ಅಂಬಿಕಾ, ವಿಷ್ಣು, ಗಣನಾಥ ಮತ್ತು ಮಹೇಶ್ವರ ಎಂಬ ಐವರನ್ನು ಪಂಚಾಯತನ ಮೂರ್ತಿಗಳೆಂದೂ, ದೈವ, ಬ್ರಹ್ಮ, ಪಿತೃ, ಮನುಷ್ಯ ಮತ್ತು ಭೂತ ಯಜ್ಞಗಳೆಂಬ ಪಂಚಮಹಾಯಜ್ಞಗಳನ್ನು ಮಾಡುವ ಎಲ್ಲ ಶ್ರೋತ್ರಿಯರೂ ಈ ಎಲ್ಲ ಮೂರ್ತಿಗಳ ಪೂಜೆಯನ್ನೂ ಮಾಡುವುದು ಶ್ರೇಯಸ್ಕರವೆಂದೂ ಹೇಳುವ ಶಾಸ್ತ್ರವಾಕ್ಯಗಳಿವೆ.

"ಪಂಚದೇವಾನುಪಾಸೀತ ಪಂಚಯಜ್ಞಪರಾಯಣಃ ।"

(ಐದು ದೇವತೆಗಳಲ್ಲಿ ಯಾವುದಾದರೂ ಒಂದನ್ನು ಪ್ರಧಾನವಾಗಿ ಇಟ್ಟುಕೊಂಡು ಆರಾಧಿಸುವ ವಿಧಿ ಇದ್ದರೂ ಇವರೆಲ್ಲರೂ ಪೂಜೆಗೆ ವಿಷಯರಾಗುತ್ತಾರೆ.)

ಜ್ಞಾನ ಭಕ್ತಿಗಳ ಸಾಮರಸ್ಯವನ್ನು ತಮ್ಮ ಅನುಭವದಿಂದಲೂ ಶಾಸ್ತ್ರಾಧಾರದಿಂದಲೂ ಪ್ರತಿಪಾದಿಸಿದ ಶ್ರೀ ಶಂಕರಭಗವತ್ಪಾದರು ಆರು ಭಕ್ತಿದರ್ಶನಗಳ ಮತ್ತು ಪಂಚದೇವತೆಗಳ ಉಪಾಸನೆಯ ತತ್ತ್ವ ಮತ್ತು ಅನುಷ್ಠಾನಗಳನ್ನು ಉದ್ಧಾರ ಮಾಡಿದ ಆಚಾರ್ಯರೆಂದೂ ತಜ್ಞರು ಹೇಳುತ್ತಾರೆ.

ಈ ದರ್ಶನಗಳು ಮತ್ತು ಪಂಚದೇವತಾಪೂಜಾಪದ್ಧತಿಯು ಸತ್ಯಸನಾತನವಾಗಿದ್ದು ಶ್ರುತಿಸ್ಮೃತಿಪುರಾಣಾಗಮಗಳಲ್ಲಿ ಪ್ರತಿಪಾದಿತವಾಗಿದ್ದರೂ ಅವುಗಳನ್ನು ವ್ಯವಸ್ಥೆಗೊಳಿಸಿ ಪರಿಶುದ್ಧರೂಪದಲ್ಲಿ ಅವುಗಳ ಆಚರಣೆಯನ್ನು ಪ್ರತಿಪಾದನೆ ಮಾಡಿದರೆಂಬ ಕಾರಣದಿಂದ ಶ್ರೀ ಶಂಕರಭಗವತ್ಪಾದರನ್ನು ಅವುಗಳ ಸಂಸ್ಥಾಪಕರಾದ ಆಚಾರ್ಯರೆಂದು ಕರೆಯಲಾಗುತ್ತದೆ. (ಈ ಪಂಚ ದೇವತೆಗಳೆಲ್ಲರನ್ನೂ ಒಟ್ಟಾಗಿ ಅಥವಾ ಬಿಡಿಬಿಡಿಯಾಗಿ ಕೆಲವರನ್ನು ಆರಾಧನೆ ಮಾಡುವುದೂ **"ಏತಾನ್ ವ್ಯಸ್ತಾನ್ ಸಮಸ್ತಾನ್ ವಾ"** ಎಂಬಂತೆ ಸ್ಮೃತಿಗಳಿಗೆ ಸಮ್ಮತವಾಗುತ್ತದೆ.)

ಮೇಲೆ ಹೇಳಿದಂತೆ ಶೈವ, ವೈಷ್ಣವ, ಶಾಕ್ತ, ಸೌರ, ಗಾಣಪತ ಮತ್ತು ಸ್ಕಾಂದ ಎಂಬ ಷಡ್ದರ್ಶನವರ್ಗವು ಶ್ರೀ ಶಂಕರಾಚಾರ್ಯರ ಕಾಲದಲ್ಲಿ ಮತ್ತು ಅವರಿಗಿಂತಲೂ ಹಿಂದಿನಿಂದಲೂ ಪ್ರಚಲಿತವಾಗಿದ್ದರೂ ಅವು ಅರಿಷಡ್ವರ್ಗಕ್ಕೆ ವಿಷಯವಾಗಿ ಶೋಚನೀಯ ಸ್ಥಿತಿಯಲ್ಲಿತ್ತು. ಶೈವರು ವೈಷ್ಣವರು ಮುಂತಾದವರು ತಮ್ಮ ತಮ್ಮ ದೇವತೆಯ ಉತ್ಕರ್ಷವನ್ನು ಪ್ರತಿಪಾದಿಸುವ ಪರ್ಯಾಯವಾಗಿ ದೇವತಾನ್ತರ ನಿಂದೆಯಲ್ಲಿ ಆಸಕ್ತರಾಗಿ ರಾಗದ್ವೇಷಗಳಿಗೆ ವಶರಾಗಿ ವೈದಿಕ ಸಂಸ್ಕೃತಿಗೆ ಹಾನಿ ತರುತ್ತಿದ್ದರು. ಶ್ಮಶಾನಪೂಜೆ, ಮದ್ಯಮಾಂಸಸೇವನೆ. ವೇದವಿರುದ್ಧವಾದ ಬಲಿಕರ್ಮ ಮುಂತಾದ ವಾಮಾಚಾರಗಳಲ್ಲಿ ನಿರತರಾಗಿದ್ದರು. ಈ ದೋಷಗಳನ್ನು ನಿವಾರಣೆ ಮಾಡಿ ಆ ಭಕ್ತಿದರ್ಶನದ ದೇವತೆಗಳನ್ನು ವೇದ ಮತ್ತು ಅವುಗಳಿಗೆ ವಿರೋಧವಿಲ್ಲದ ಆಗಮಗಳ ಪದ್ಧತಿಯಂತೆ ಆರಾಧಿಸುವ ವ್ಯವಸ್ಥೆಯನ್ನು ಹೊರತಂದ ಕೀರ್ತಿ ಶ್ರೀಶಂಕರಭಗವತ್ಪಾದರಿಗೆ ಸೇರಿದೆ. ಉದಾಹರಣೆಗೆ– ಶಿವ, ವಿಷ್ಣು ಮುಂತಾದ ಆಯಾ ದೇವತೆಗಳ ಆರಾಧನಾ ವಿಧಿಯಲ್ಲಿ ಆಯಾ ದೇವತೆಗಳೇ ಸರ್ವಶ್ರೇಷ್ಠವೆಂದು ಧರಿಸಲ್ಪಡಬೇಕಿದ್ದರೂ ಅವೆಲ್ಲವೂ ಪರಬ್ರಹ್ಮಸ್ವರೂಪವೇ ಆಗಿವೆ. ಪರಬ್ರಹ್ಮೋಪಾಸನೆಗೆ ಮುಖ್ಯತಮವಾದ ಮಾಧ್ಯಮಗಳಾಗಿವೆ. ಪರಬ್ರಹ್ಮ ವಾಚಕವಾದ ಪ್ರಣವದ ಕಲೆಗಳೇ ಆಗಿವೆ ಎಂಬುದನ್ನು ಅವರು ತಮ್ಮ ಕೃತಿಗಳಿಂದ ತೋರಿಸಿಕೊಟ್ಟರು.

ಶ್ರೀ ಶಂಕರಭಗವತ್ಪಾದರ ಗ್ರಂಥಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಈ ಮಹಾದೇವತೆಗಳೆಲ್ಲರ ಪ್ರಶಂಸೆಯೂ ಕಂಡುಬರುತ್ತದೆ. ವಿಚಾರಪೂರ್ವಕವಾಗಿ ನೋಡಿದಾಗ ಈ ಎಲ್ಲ ದೇವತೆಗಳೂ ಭಗವನ್ತನ ಒಂದೊಂದು ಶಕ್ತಿಯ ವಿಶೇಷವಾಗಿವೆ. ಎಲ್ಲವೂ ಸರ್ವಜ್ಞನೂ ಸರ್ವಶಕ್ತನೂ ಆದ ಪರಮಾತ್ಮನಲ್ಲಿಯೇ ತಾತ್ಪರ್ಯವನ್ನು ಹೊಂದಿವೆ. ಶ್ರೇಯಸ್ಸಿನ ಸಾಧನೆಗೆ ಈ ಎಲ್ಲ ದೇವತೆಗಳೂ ವಿಶೇಷವಾಗಿ ಒಂದೊಂದು ರೀತಿಯಲ್ಲಿ ಸಹಾಯಕರಾಗುತ್ತಾರೆ. ಉಪಾಸನೆಗೆ ಬರುವ ವಿಘ್ನಗಳನ್ನು ಪರಿಹರಿಸಲು ವಿಘ್ನೇಶ್ವರನು ವಿಶೇಷವಾಗಿ ಸಹಾಯ ಮಾಡುತ್ತಾನೆ. **"ಆರೋಗ್ಯಂ ಭಾಸ್ಕರಾದಿಚ್ಛೇತ್"** ಎಂಬಂತೆ ಆರೋಗ್ಯವನ್ನು ಸೂರ್ಯನು ಅನುಗ್ರಹಿಸುತ್ತಾನೆ. ಶಕ್ತಿ-ಸಂಪತ್ತುಗಳನ್ನು ಶಕ್ತಿದೇವತೆಯು ದಯಪಾಲಿಸುತ್ತಾಳೆ. ಸಿದ್ಧಿಗಳನ್ನು ಸುಬ್ರಹ್ಮಣ್ಯನು ನೀಡುತ್ತಾನೆ. "ಜ್ಞಾನಂ ಮಹೇಶ್ವರಾದಿಚ್ಛೇತ್" ಎಂಬಂತೆ ಮಹಾದೇವನು ಶುದ್ಧಜ್ಞಾನವನ್ನು ಕರುಣಿಸುತ್ತಾರೆ. "ಮೋಕ್ಷಂ ಇಚ್ಛೇಜ್ಜನಾರ್ದನಾತ್" ಎಂಬಂತೆ ಮಹಾವಿಷ್ಣುವು ಮೋಕ್ಷವನ್ನು ಕರುಣಿಸುತ್ತಾನೆ. ಇವರಲ್ಲಿ ಎಲ್ಲರಿಗೂ ಎಲ್ಲ ಸಿದ್ಧಿಗಳನ್ನೂ ಕೊಡುವ ಸಾಮರ್ಥ್ಯವಿದ್ದರೂ ಒಬ್ಬೊಬ್ಬರಿಗೆ ಒಂದೊಂದು ವಿಷಯದಲ್ಲಿ ಪ್ರಾಧಾನ್ಯ. ಈ ಸಿದ್ಧಿಗಳಲ್ಲಿ ಎಲ್ಲವೂ ಶ್ರೇಯಸ್ಸಿಗೆ ಅವಶ್ಯಕವಾಗಿರುವುದರಿಂದ ಇವರೆಲ್ಲರೂ ಪೂಜ್ಯರೇ ಆಗಿರುವರು. ಶ್ರೀ ಶಂಕರಭಗವತ್ಪಾದರ ಸ್ತೋತ್ರಗಳಲ್ಲಿ ಮಹೇಶ್ವರ, ಮಹಾವಿಷ್ಣು, ಗಣೇಶ, ಶಕ್ತಿ, ಸುಬ್ರಹ್ಮಣ್ಯ ಇವರೆಲ್ಲರ ಸ್ತುತಿಗಳೂ ಕಂಡುಬರುತ್ತವೆ. ಆದರೂ ಶಿವ, ವಿಷ್ಣು, ಶಕ್ತಿ ಇವರನ್ನು ಕುರಿತ ಸ್ತೋತ್ರಗಳು ಹೆಚ್ಚಾಗಿವೆ.

ವ್ಯಾಸಸಮಾಸಾತ್ಮಕವಾಗಿ ವಿಚಾರ ಮಾಡಿದಾಗ ಇವರಲ್ಲಿ ನಾಲ್ಕು ದೇವತೆಗಳು ಶಿವ–ವಿಷ್ಣು ಇವರಲ್ಲೇ ಅನ್ತರ್ಗತರಾಗುತ್ತಾರೆ.

ಶ್ರೀ ಶಂಕರಾಚಾರ್ಯರು ತಮ್ಮ ಗಂಗಾಷ್ಟಕದಲ್ಲಿ "ಭೂಯಾದ್ಭಕ್ತಿರವಿಚ್ಯುತಾ ಹರಿಹರಾದ್ವೈತಾತ್ಮಿಕಾ ಶಾಶ್ವತೀ" ಎಂದೂ "ಪ್ರಶ್ನೋತ್ತರ ಮಾಲಿಕೆ"ಯಲ್ಲಿ "ಶಂಕರನಾರಾಯಣಾತ್ಮಕಂ ತತ್ತ್ವಂ" ಎಂದೂ ಮೊಳಗುವುದನ್ನೂ ಇಲ್ಲಿ ನೆನಪಿಸಿಕೊಳ್ಳಬಹುದು. ಅವರು ತಮ್ಮ ವಿಷ್ಣು ಸಹಸ್ರನಾಮ ಉಪೋದ್ಘಾತದಲ್ಲಿ ಮಹಾವಿಷ್ಣು, ಮಹಾದೇವ ಇವರ ಐಕ್ಯವನ್ನೇ ಸಾರುವ ಹರಿವಂಶ ಶ್ಲೋಕಗಳನ್ನು ಎತ್ತಿ ಹೇಳಿರುವುದನ್ನೂ ಸ್ಮರಿಸಬಹುದು :-

"ಯಾನ್ಯೇವತವನಾಮಾನಿ ಮಮ ನಾಮಾನಿ ಚಾಚ್ಯುತ ।
ಆವಯೋರನ್ತರಂ ನಾಸ್ತಿ ಹ್ಯರ್ಥತಃ ಶಬ್ದತ್ಯೋಽಪಿವಾ ॥"[೧]

ಶಕ್ತಿಯು ವೈಷ್ಣವೀ ಶಕ್ತಿ, ಶಾಂಭವೀ ಶಕ್ತಿ ಎಂಬ ಪ್ರಕಾರದಲ್ಲಿ ವಿಷ್ಣುವಿನ ಅಥವಾ ಶಿವನ ಗಣದಲ್ಲಿ ಸೇರಿಕೊಳ್ಳುತ್ತಾಳೆ. ವಿಘ್ನ ಪರಿಹಾರಕ ಮೂರ್ತಿಯು ಶಿವ–ವಿಷ್ಣು ಇಬ್ಬರ ಗಣಗಳಲ್ಲೂ ಕಂಡುಬರುತ್ತಾನೆ. ಕುಮಾರನು ಶಿವಗಣಗಳಲ್ಲಿ ಅಂತರ್ಗತನಾಗುತ್ತಾನೆ. ಸೂರ್ಯನು ಶಿವ–ವಿಷ್ಣು ಇವರಿಬ್ಬರ ಧ್ಯಾನಕ್ಕೂ ನಿಕೇತನವಾಗುತ್ತಾನೆ.

"ಕೋ ಬ್ರಾಹ್ಮಣೈರುಪಾಸ್ಯಃ
ಗಾಯತ್ರ್ಯರ್ಕಾಗ್ನಿಗೋಚರಃ ಶಂಭುಃ ।"

ಧ್ಯೇಯಃ ಸದಾ ಸವಿತೃ ಮಂಡಲ ಮಧ್ಯವರ್ತೀ
ನಾರಾಯಣಃ ಸರಸಿಜಾಸನ ಸನ್ನಿವಿಷ್ಟಃ ॥

ಪಂಚಮೂರ್ತಿಗಳೂ ಪಂಚಮಹಾಭೂತಗಳ ಅಧಿಷ್ಠಾತೃಗಳೆಂದು ಅವುಗಳ ಹಿನ್ನೆಲೆಯಲ್ಲಿರುವ ಪರಮಚೈತನ್ಯವೇ ಪರಮಾತ್ಮನೆಂದೂ ಉಪಾಸನೆ ಮಾಡುವ ಪದ್ಧತಿಯೂ ಇದೆ.

ಶ್ರೀ ಶಂಕರಭಗವತ್ಪಾದರು ಭಕ್ತಿಯ ಆರು ದರ್ಶನಗಳನ್ನೂ ಸಮರಸದಿಂದ ಮಾನ್ಯಮಾಡಿರುವುದರಿಂದ ಎಲ್ಲ ದರ್ಶನಗಳಿಗೆ ಸೇರಿದವರೂ ಶ್ರೀ ಶಂಕರರನ್ನು ತಮ್ಮ ಆಚಾರ್ಯರೆಂದು ಪರಿಗಣಿಸುತ್ತಾರೆ. ಪ್ರತಿಯೊಬ್ಬರೂ ಶ್ರೀ ಶಂಕರಾಚಾರ್ಯರಿಗೆ ತಮ್ಮ ದರ್ಶನವೇ ಇಷ್ಟತಮವಾದುದೆಂದೂ ತಿಳಿಯುತ್ತಾರೆ. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಅಜಮಹಾರಾಜನ ರಾಜ್ಯದಲ್ಲಿ ಪ್ರಜೆಗಳಲ್ಲಿ ಪ್ರತಿಯೊಬ್ಬನೂ ರಾಜನಿಗೆ ತಾನೇ ಅತ್ಯಂತ ಪ್ರಿಯತಮನೆಂದು ತಿಳಿಯುತ್ತಿದ್ದನೆಂದು ನಮ್ಮ ರಾಷ್ಟ್ರಕವಿ ಕಾಳಿದಾಸನು ಸುಂದರವಾಗಿ ವರ್ಣಿಸುತ್ತಾನೆ.

---

೧. ಢುಂಡಿರಾಜನ ಮುದ್ರಾರಾಕ್ಷಸ ವ್ಯಾಖ್ಯಾನದಲ್ಲಿ ಈ ವಿಷಯವನ್ನು ಗಮನಿಸಲಾಗಿದೆ.

ಅಹಮೇವ ಮತೋ ಮಹೀಪತೇಃ
ಇತಿ ಸರ್ವಃ ಪ್ರಕೃತಿಷ್ವ ಮನ್ಯತ ।[೨]

ಶ್ರೀ ಸೀತಾದೇವಿ, ಲಕ್ಷ್ಮಣ, ಭರತ ಶತ್ರುಘ್ನರು, ಮಾರುತಿ ಇವರಲ್ಲಿ ಪ್ರತಿಯೊಬ್ಬರೂ ತಾವೇ ಶ್ರೀರಾಮನಿಗೆ ಪ್ರಿಯತಮರೆಂದು ಭಾವಿಸುತ್ತಿದ್ದರಂತೆ. ಹೀಗೆ ಎಲ್ಲ ಭಕ್ತಿದರ್ಶನಗಳ ಅನುಯಾಯಿಗಳೂ ಶ್ರೀ ಶಂಕರಾಚಾರ್ಯರಿಗೆ ತಮ್ಮ ದರ್ಶನದಲ್ಲೇ ವಿಶೇಷವಾಗಿ ತಾತ್ಪರ್ಯವೆಂದು ಹೇಳುತ್ತಿರುವಾಗ ವೈಷ್ಣವ ದರ್ಶನಗಳು ಶ್ರೀ ಶಂಕರಾಚಾರ್ಯರನ್ನು ಹೇಗೆ ಭಾವಿಸುತ್ತವೆ ಎಂದು ಇಲ್ಲಿ ಸಂಕ್ಷೇಪವಾಗಿ ನಿರೂಪಣ ಮಾಡುತ್ತೇವೆ. ದೇವತೆಗಳಲ್ಲಿ ಮಹಾವಿಷ್ಣುವೇ ಪರಾದೇವತೆ, ಪರಮೇಶ್ವರ, ಪರವಾಸುದೇವ, ಪರಬ್ರಹ್ಮ ಪುರುಷೋತ್ತಮ. ಕ್ಷರ ಮತ್ತು ಅಕ್ಷರ ಪುರುಷರಿಬ್ಬರಿಗಿಂತಲೂ ತಾನೇ ಉತ್ತಮನೆಂದು ಭಗವಂತನು ಗೀತೆಯಲ್ಲಿ ಸ್ಪಷ್ಟವಾಗಿ ಸಾರುವುದಿಲ್ಲವೆ ?

"ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ।"
"ಹರಿರ್ಯಥೈಕಃ ಪುರುಷೋತ್ತಮಃ ಸ್ಮೃತಃ ।"

ಎಂದು ಕಾಳಿದಾಸನು ಹೇಳುತ್ತಾನೆ. ಶ್ರೀ ಮಹಾವಿಷ್ಣುವು ಮಂಗಲ ದೇವತೆಯಾದ ಮಹಾಲಕ್ಷ್ಮಿಗೂ ಮಾಂಗಲ್ಯವಾದವನು. "ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂಪದಂ । ಎಂದು ಕಠಶ್ರುತಿಯು ವಿಷ್ಣುವಿನ ಪರಮಪದವನ್ನೇ ಆಧ್ಯಾತ್ಮಿಕ ಯಾತ್ರೆಯ ಪರಮಪಾರವೆಂದು ಪರಿಗಣಿಸುತ್ತದೆ. ಶ್ರೀ ನಾರಾಯಣನ ಪರಮಪಾರಮ್ಯವನ್ನು ಕೊಂಡಾಡುವ ಶ್ರುತಿಸ್ಮೃತಿ ಪುರಾಣೇತಿಹಾಸಗಳು ಅಪರಿಮಿತವಾಗಿವೆ– ಎಂದು ವೈಷ್ಣವ ದರ್ಶನಗಳು ಘೋಷಣೆ ಮಾಡುತ್ತವೆ. ಈ ಅಭಿಪ್ರಾಯವು ಶ್ರೀ ಶಂಕರಾಚಾರ್ಯರಿಗೆ ಸಮ್ಮತವೇ ಆಗಿದೆ.

ಶ್ರೀ ಶಂಕರಾಚಾರ್ಯರ ಸ್ತೋತ್ರಗ್ರಂಥಗಳಲ್ಲಿ ಉಳಿದ ಭಕ್ತಿದರ್ಶನಗಳ ಉಪಾಸ್ಯದೇವತೆಗಳ ಸ್ತುತಿಗಳು ಕಂಡುಬಂದರೂ ಅವರ ಭಾಷ್ಯಗ್ರಂಥಗಳಲ್ಲಿ ನಾರಾಯಣನ ಉಪಾಸನೆಯನ್ನೇ ಎತ್ತಿ ಹೇಳಿದೆ. ಆತನ ನಾಮಗಳನ್ನೇ ಸ್ಪಷ್ಟವಾಗಿ ನಿರ್ದೇಶಿಸಿದೆ.

"ನಾರಾಯಣಃ ಪರೋಽವ್ಯಕ್ತಾತ್" ಎಂದು ಆತನ ದಿವ್ಯ ನಾಮದಿಂದಲೇ ಗೀತಾಭಾಷ್ಯ ಪ್ರಾರಂಭವಾಗುತ್ತದೆ. ಇಡೀ ಭಗವದ್ಗೀತಾಭಾಷ್ಯವು ವಾಸುದೇವ ಮಹಾತ್ಮ್ಯದ ವರ್ಣನೆಯಿಂದ ಓತಪ್ರೋತವಾಗಿದೆ.

ಪ್ರಣವವು ವಿಷ್ಣ್ವಾದಿಗಳ ಪ್ರತಿಮಾಸ್ಥಾನವಾಗಿ ಬ್ರಹ್ಮಭಾವಕ್ಕೆ ವಿಷಯವಾಗುತ್ತದೆ ಎಂದು ಅವರ ಪ್ರಶ್ನೋಪನಿಷದ್ಭಾಷ್ಯವು ಮೊಳಗುತ್ತದೆ.

---

೨. ರಘುವಂಶ – ೮-೮.

"ಓಂ ಕಾರೇ ತು ವಿಷ್ಣ್ವಾದಿ ಪ್ರತಿಮಾಸ್ಥಾನೀಯೇ ಭಕ್ತ್ಯಾವೇಶಿತ–
ಬ್ರಹ್ಮಭಾವೇ ಧ್ಯಾಯಿನಾಂ ತತ್ಪ್ರಸೀದತೀತಿ ಅವಗಮ್ಯತೇ ।"

ತೈತ್ತಿರೀಯೋಪನಿಷದ್ಭಾಷ್ಯದಲ್ಲೂ ಪ್ರಣವವು ಪರಾಪರ ಬ್ರಹ್ಮಗಳಿಗೆ ಆಲಂಬನವಾಗಿದೆ ಎಂದು ತೋರಿಸಲು ವಿಷ್ಣುವಿನ ಪ್ರತಿಮೆಯನ್ನೇ ಉಪಮಾನವನ್ನಾಗಿ ಕೊಟ್ಟಿದೆ.

"ಸ ಹಿ ಆಲಂಬನಂ ಬ್ರಹ್ಮಣಃ ಪರಸ್ಯಾಪರಸ್ಯ ಚ ಪ್ರತಿಮೇವ ವಿಷ್ಣೋಃ ।"

ಅವರ ರಾಜಯೋಗ ಭಾಷ್ಯದಲ್ಲಿ ನಾರಾಯಣನ ಸ್ಥಾನವನ್ನೇ ಪರಮನಯನೋತ್ಸವ ಕಾರಣ; ಅದನ್ನು ತಿಳಿದವನು ತಾನೆ ಮುಕ್ತಿಯನ್ನು ಪಡೆಯುತ್ತಾನೆ ಎಂಬುದು ಯೋಗಶಾಸ್ತ್ರಗಳ ಸಿದ್ಧಾಂತವೆಂದು ಸುಸ್ಪಷ್ಟವಾಗಿ ಸಾರಲಾಗಿದೆ :

ತದೇವ ರಮ್ಯಂ ಪರಮನಯನೋತ್ಸವ ಕಾರಣಂ
ಸಕಲನಿಷ್ಕಲಂ ಆಪೋಜ್ಯೋತಿಃ ಸ್ಥಲಂ ನಾರಾಯಣ–
ಸ್ಥಲಂ ಚೇತಿ ಯೋಗಶಾಸ್ತ್ರೇಷು ಪ್ರಸಿದ್ಧಂ,
ತದ್ವೇತ್ತಾ ಮೋಕ್ಷಭಾಗೀ ಸ್ಯಾತ್ ।

ಶ್ರೀ ಶಂಕರಾಚಾರ್ಯರ ಪರಮಭಕ್ತರೂ ಸುಪ್ರಸಿದ್ಧ ನಾರಾಯಣೀಯದ ಕರ್ತೃಗಳೂ ಆದ ನಾರಾಯಣ ಭಟ್ಟಾದ್ರಿಯವರು ನಾರಾಯಣನೇ ಭಗವಾನ್ ಎಂಬ ಶಬ್ದಕ್ಕೆ ಮುಖ್ಯ ವಿಷಯವಾಗುತ್ತಾನೆ; ಉಳಿದ ಎಲ್ಲ ದೇವತೆಗಳೂ ಆತನ ವಿಭೂತಿಗಳು. ಆತನಿಂದ ಐಶ್ವರ್ಯಾದಿಗಳನ್ನು ಪಡೆದವರು– ಎಂದು ಸ್ಪಷ್ಟವಾಗಿ ಘೋಷಿಸುತ್ತಾರೆ.

ಐಶ್ವರ್ಯಂ ಶಂಕರಾದೀಶ್ವರವಿನಿಯಮನಂ ವಿಶ್ವತೇಜೋಹರಾಣಾಂ
ತೇಜಃ ಸಂಹಾರಿ ವೀರ್ಯಂ ವಿಮಲಮಪಿ ಯಶೋ
ನಿಃಸ್ಪೃಹೈಶ್ಚೋಪಗೀತಮ್ ।
ಅಂಗಾಸಂಗಾ ಸದಾ ಶ್ರೀರಖಿಲವಿದಸಿ ನ ಕ್ವಾಪಿತೇ ಸಂಗವಾರ್ತಾ
ತದ್ವಾತಾಗಾರವಾಸಿನ್ ! ಮುರಹರ ಭಗವಚ್ಛಬ್ದ ಮುಖ್ಯಾಶ್ರಯೋಽಸಿ ॥[೩]

ವೈಷ್ಣವ ಮತದಲ್ಲಿ ಭಗವಂತನ ಪೂಜೆಗೆ ಯಾವ ಸ್ಥಾನವೋ ಭಗವಂತನ ಪರಮ ಭಕ್ತರಿಗೂ ಅದೇ ಸ್ಥಾನ; ಅದಕ್ಕಿಂತಲೂ ಹೆಚ್ಚಿನ ಸ್ಥಾನ.

"ವಿಷ್ಣೋರಾರಾಧನಾತ್ ಪ್ರೋಕ್ತಂ ತದೀಯಾರಾಧನಂ ಪರಮ್ ।"

ಶ್ರೀ ಶಂಕರಭಗವತ್ಪಾದರು ತಮ್ಮ ವಿಷ್ಣುಪಾದಾದಿಕೇಶಾಂತಸ್ತುತಿಯಲ್ಲಿ ಶ್ರೀ ಭಗವಂತನ ದಿವ್ಯಮಂಗಳ ವಿಗ್ರಹವನ್ನು ಅಡಿಯಿಂದ ಮುಡಿಯವರೆಗೆ ಧ್ಯಾನ ಮಾಡಿದ ನಂತರ ಆ ಭಗವಂತನ ದಿವ್ಯಮೂರ್ತಿಯನ್ನು ಯಾರು ಅಡಿಯಿಂದ ಮುಡಿಯವರೆಗೆ ಧ್ಯಾನಮಾಡಿ ತಮ್ಮ ನಾಲಿಗೆ ಎಂಬ ಅಗ್ನಿಯಲ್ಲಿ ಹರಿಚರಿತವೆಂಬ ಹವಿಸ್ಸನ್ನು ಹೋಮ

೩. ನಾರಾಯಣೀಯಂ I-೧-೧೦.

ಮಾಡುತ್ತಾರೆಯೋ ಅಂತಹವರ ಪಾದಾರವಿಂದಗಳಲ್ಲಿಯೂ ನಾನು ಹಾಗೆಯೇ ನಮಸ್ಕಾರ ಮಾಡುತ್ತೇನೆ– ಎಂದು ಇದರಂತೆಯೇ ಅಪ್ಪಣೆಕೊಡಿಸುತ್ತಾರೆ.

"ಆಪಾದಾದಾ ಚ ಶೀರ್ಷಾದ್ವಪುರಿದಮನಘಂ ವೈಷ್ಣವಂ ಯಃ ಸ್ವಚಿತ್ತೇ
ಧತ್ತೇ ನಿತ್ಯಂ ನಿರಸ್ತಾಖಿಲಕಲಿಕಲುಷೇ ಸನ್ತತಾತ್ತಃ ಪ್ರಮೋದಮ್ ।
ಜುಹ್ವಜ್ಜಿಹ್ವಾಕೃಶಾನೌ ಹರಿಚರಿತಹವಿಃ ಸ್ತೋತ್ರ ಮಂತ್ರಾನುಪಾಠೈಃ
ತತ್ಪಾದಾಂಭೋರುಹಾಭ್ಯಾಂ ಸತತಮಪಿ ನಮಸ್ಕುರ್ಮಹೇ ನಿರ್ಮಲಾಭ್ಯಾಮ್ ॥"[೪]

ಭಗವತ್ಪಾದರು ಪರಮೇಶ್ವರ ಎಂಬ ಶಬ್ದದಿಂದ ಶ್ರೀ ವಿಷ್ಣುವನ್ನೇ ಸಂಬೋಧಿಸುತ್ತಾರೆ.

ಮತ್ಸ್ಯಾದಿಭಿರವತಾರೈ–
ರವತಾರವತಾವತಾ ಸದಾ ವಸುಧಾಮ್ ।
ಪರಮೇಶ್ವರ ಪರಿಪಾಲ್ಯೋ
ಭವತಾ ಭವತಾಪ ಭೀತೋಽಹಮ್ ॥[೫]

ಶ್ರೀ ವೈಷ್ಣವರು ಮಂತ್ರರತ್ನವೆಂದು ಭಾವಿಸಿ ಜಪಿಸುವ "ದ್ವಯಮನ್ತ್ರದ" ಸಾಹಿತ್ಯವನ್ನು ಶ್ರೀ ಶಂಕರಾಚಾರ್ಯರ ಷಟ್‌ಪದೀ ಸ್ತೋತ್ರವು ಒಳಗೊಂಡಿದೆ.

ನಾರಾಯಣ ಕರುಣಾಮಯ
ಶರಣಂ ಕರವಾಣಿ ತಾವಕೌ ಚರಣೌ ॥[೬]

ಶ್ರೀ ಶಂಕರಾಚಾರ್ಯರ ಅನನ್ತರ ಕಾಲದ ಆಚಾರ್ಯರಾದ ಶ್ರೀ ರಾಮಾನುಜಾಚಾರ್ಯರು, ಶ್ರೀ ನಿಂಬಾರ್ಕರು, ಶ್ರೀ ಮಧ್ವಾಚಾರ್ಯರು ಮುಂತಾದವರು ಸಿದ್ಧಾನ್ತಿಸುವ ವಿಷ್ಣುಪಾರಮ್ಯವು ಶ್ರೀ ಶಂಕರಾಚಾರ್ಯರಿಗೂ ಸಮ್ಮತವೇ, ಆದರೆ ಆ ಎಲ್ಲ ಭಕ್ತಿಯ ತಾತ್ಪರ್ಯವೂ ನಿತ್ಯಶುದ್ಧ ಬುದ್ಧ ಮುಕ್ತ ಸ್ವರೂಪವಾದ ಪರಬ್ರಹ್ಮ ಪರಮಾದ್ವೈತದಲ್ಲಿಯೇ ತಾತ್ಪರ್ಯ – ಎಂಬುದು ಅವರ ಸಿದ್ಧಾನ್ತ.

ಈ ಅನೇಕ ವೈಷ್ಣವ ದರ್ಶನಗಳಲ್ಲಿ ಶ್ರೀ ರಾಮಾನುಜಾಚಾರ್ಯರು ಪ್ರತಿಪಾದಿಸಿದ ವಿಶಿಷ್ಟಾದ್ವೈತ ದರ್ಶನ ಮತ್ತು ಶ್ರೀ ವೈಷ್ಣವ ದರ್ಶನಗಳು ಶ್ರೀ ಶಂಕರಾಚಾರ್ಯರ ಸಿದ್ಧಾನ್ತಕ್ಕೆ ಅನೇಕ ವಿಷಯಗಳಲ್ಲಿ ನಿಕಟತಮವಾಗಿದೆ.

೧. ಎರಡು ದರ್ಶನಗಳಲ್ಲಿಯೂ ಸಮಸ್ತಜೀವಿಗಳಿಗೂ ಮುಕ್ತಿಯುಂಟು. ಎಲ್ಲ ಜೀವಿಗಳೂ ಪರಿಪೂರ್ಣಬ್ರಹ್ಮಾನಂದವನ್ನು ಅನುಭವಿಸಬಹುದು ಎಂದು ಸಾರಲ್ಪಟ್ಟಿದೆ.

---

೪. ವಿಷ್ಣುಪಾದಾದಿಕೇಶಾನ್ತ ಸ್ತೋತ್ರಂ – ೫೧.
೫. ಷಟ್‌ಪದೀಸ್ತೋತ್ರಂ – ೫.
೬. ಷಟ್‌ಪದೀಸ್ತೋತ್ರಂ – ೭.

ಬ್ರಹ್ಮಾನಂದರಸಾನುಭೂತಿಕಲಿತೈಃ ಪೂತೈಃ ಸುಶೀತೈಃ ಸಿತೈಃ ।

— ಶ್ರೀ ಶಂಕರರು

ಪರಬ್ರಹ್ಮಾನಂದಾನುಭವಪರಿವಾಹಾಃ ರಸಧಿಯಃ

— ಶ್ರೀ ವೇದಾನ್ತ ದೇಶಿಕರು

ಎಂಬ ಆಚಾರ್ಯವಾಣಿಯನ್ನು ಇಲ್ಲಿ ಸ್ಮರಿಸಬಹುದು.

೨. ಎರಡು ದರ್ಶನಗಳಲ್ಲೂ ಪರಮಾತ್ಮನು ಉಪಾದಾನ ಮತ್ತು ನಿಮಿತ್ತ ಉಭಯವಿಧಕಾರಣನೆಂದು ನಿರೂಪಿತವಾಗಿದೆ.

೩. ಸೂತ್ರಭಾಷ್ಯದಲ್ಲಿ ಇಬ್ಬರು ಆಚಾರ್ಯರೂ ಹೇಳಿರುವ ವಿಷಯವಾಕ್ಯಗಳು ಸಾಮಾನ್ಯವಾಗಿ ಒಂದೇ ಆಗಿವೆ.[೭]

೪. ಶ್ರೀ ಶಂಕರಾಚಾರ್ಯರು ಬೌದ್ಧಸಾಂಖ್ಯದರ್ಶನಗಳ ಬಗೆಗೆ ಖಂಡುತುಂಡಾಗಿ ಮಾತನಾಡಿದ್ದರೂ ವೈಷ್ಣವದರ್ಶನವನ್ನೂ ಹೇಳುವ ಶ್ರೀಪಾಂಚರಾತ್ರಾಗಮದ ಬಗ್ಗೆ ಕಟುಮಾತುಗಳನ್ನಾಡದೆ ಅದರ ಉಪಾಸನಾಭಾಗವನ್ನು ಉಪಾದೇಯವನ್ನಾಗಿ ಹೇಳಿದ್ದಾರೆ. ಉಳಿದ ತಂತ್ರಗಳು ಪರಮೇಶ್ವರನನ್ನು ಕೇವಲ ನಿಮಿತ್ತಕಾರಣನೆಂದು ಬೋಧಿಸುತ್ತವೆ. ಆದರೆ ಆತನು ಉಪಾದಾನ ಮತ್ತು ನಿಮಿತ್ತ ಉಭಯ ವಿಧಕಾರಣನೂ ಆಗಿರುವನೆಂದು ಶ್ರೀ ಪಾಂಚರಾತ್ರಾಗಮವು ತಿಳಿಸುತ್ತದೆ. ಶ್ರೀ ಶಂಕರಾಚಾರ್ಯರೂ ಉಭಯವಿಧ ಕಾರಣವಾದಿಗಳು.

ಶ್ರೀ ಪಾಂಚರಾತ್ರಾಗಮವು ಪಾರಿಭಾಷಿಕವಾಗಿ ಭಾಗವತಧರ್ಮವನ್ನು ಬೋಧಿಸುತ್ತದೆ. "ಭಾಗವತಾಸ್ತಾವತ್ ಮನ್ಯನ್ತೇ ಉತ್ಪತ್ತ್ಯಸಂಭವಾಕಾರಣಂ"

— ಶ್ರೀ ಶಾಂಕರಭಾಷ್ಯ

ಆ ಭಾಗವತ ಎಂಬ ಶಬ್ದವೂ ಅವರಿಗೆ ಪ್ರಿಯವಾದುದು. "ವ್ಯಾಸಾದಿ ಭಾಗವತಪುಂಗವಹೃನ್ನಿವಾಸ" ಎಂದು ಅದನ್ನು ತಮ್ಮ "ಪರಾವಲಂಬನ ಸ್ತೋತ್ರ"ದಲ್ಲಿ ಪ್ರೀತಿಯಿಂದ ಉದ್ಧರಿಸುತ್ತಾರೆ.

ಶ್ರೀ ಶಂಕರರು ತಾವು ಯಾವ ಗ್ರಂಥಕ್ಕೆ ಮೊಟ್ಟಮೊದಲಿಗೆ ಭಾಷ್ಯ ಬರೆಯಬೇಕು ? ಈ ವಿಷಯದಲ್ಲಿ ಭಗವದಿಚ್ಛೆಯೇನು— ಎಂದು ತಿಳಿಯಲು ತಮ್ಮ ತಮ್ಮ ಪುಸ್ತಕ ಭಂಡಾರದ ಬೇರೆ ಬೇರೆ ಕಡೆಗಳಿಗೆ ಶಿಷ್ಯರನ್ನು ಕಳುಹಿಸಿ "ಕಣ್ಣು ಮುಚ್ಚಿಕೊಂಡು ನಿಮ್ಮ ಕೈಗೆ ಸಿಕ್ಕಿದ ಪುಸ್ತಕವನ್ನು ತೆಗೆದುಕೊಂಡು ಬನ್ನಿ" ಎಂದು

---

೭. ಶೈವ ವೈಷ್ಣವಾಗಮಗಳು ಶ್ರೀ ಶಂಕರಾಚಾರ್ಯರಿಗೆ ಉಪಾಸನಾವಿಷಯಗಳಲ್ಲಿ ಆದರಣೀಯವಾಗಿವೆ ಎಂಬುದನ್ನು ಸೂಚಿಸಲು ಶ್ರೀ ಸ್ವರ್ಣವಲ್ಲೀ ಮಠಾಧೀಶರಾದ ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಶ್ರೀಗಳವರು ಈ ಎರಡು ಆಗಮಗಳನ್ನು ಕುರಿತ ಬ್ರಹ್ಮಸೂತ್ರಗಳನ್ನು ವಾಕ್ಯಾರ್ಥಕ್ಕಾಗಿ ಒಟ್ಟಿಗೇ ತೆಗೆದುಕೊಂಡದ್ದನ್ನು ಇಲ್ಲಿ ಸ್ಮರಿಸುತ್ತೇವೆ.

ಹೇಳಿದರು. ಅದರಂತೆ ಮಾಡಿದಾಗ ಆ ಶಿಷ್ಯರೆಲ್ಲರ ಕೈಗಳಲ್ಲೂ ಶ್ರೀ ವಿಷ್ಣುಸಹಸ್ರನಾಮದ ಪುಸ್ತಕಗಳೇ ದೊರೆತದ್ದರಿಂದ ಶ್ರೀಮದಾಚಾರ್ಯರು ಆ ಗ್ರಂಥಕ್ಕೇ ಮೊಟ್ಟ ಮೊದಲನೆಯ ಭಾಷ್ಯವನ್ನು ಬರೆದರು– ಎಂದು ಒಂದು ಕಥೆ ಇದೆ. ಶ್ರೀಮದಾಚಾರ್ಯರು ತಮ್ಮ ಪೂರ್ವಾಶ್ರಮದ ಮಾತೃಶ್ರೀಯವರ ಅನ್ತ್ಯಕಾಲದಲ್ಲಿ ಅವರ ಬಳಿಗೆ ದಯಮಾಡಿಸಿ ಆಕೆಯನ್ನು ವಿಷ್ಣುಪಾರ್ಷದರು ಬಂದು ವೈಕುಂಠಕ್ಕೆ ಒಯ್ಯುವಂತೆ ಮಾಡಿದರು– ಎಂದು ಶ್ರೀ ಶಂಕರ ವಿಜಯದಲ್ಲಿ ಹೇಳಿದೆ. ಹೀಗೆ ಶಂಕರ ಭಗವತ್ಪಾದರ ಪ್ರಸ್ಥಾನ ಭಾಷ್ಯಗಳನ್ನೂ ಸ್ತೋತ್ರ ಕೃತಿಗಳನ್ನೂ ಪರಿಶೀಲಿಸಿದಾಗ ವೈಷ್ಣವದರ್ಶನಗಳು ಅವರಿಗೆ ಅತ್ಯಂತ ಪ್ರಿಯವಾಗಿದ್ದುವೆಂದು ಸ್ಪಷ್ಟವಾಗುತ್ತದೆ. ಅವರು ಭಕ್ತಿದರ್ಶನಗಳಲ್ಲಿ ಒಂದಾದ ವೈಷ್ಣವ ಧರ್ಮದ ಮಹಾಚಾರ್ಯರಾಗಿದ್ದರೆಂಬುದು ಸಿದ್ಧವಾಗುತ್ತದೆ.

ಇತಿ ಶ್ರೀ ಶ್ರೀ ರಂಗಪ್ರಿಯ ಶ್ರೀಪಾದ ಶ್ರೀ ಶ್ರೀಃ

# ಶ್ರೀ ಶಂಕರ ಭಗವತ್ಪಾದರು ಮತ್ತು ಶಾಕ್ತ ತಂತ್ರ*



ಡಾ. ಆರ್. ಗಣೇಶ

ಶ್ರೀ ಶಂಕರಾಚಾರ್ಯರಿಗೂ ಶಾಕ್ತ ತಂತ್ರಗಳಿಗೂ ಸಂಬಂಧವುಂಟೇ ಇಲ್ಲವೇ ? ಇದ್ದಲ್ಲಿ ಆ ಪರಿಯಾದರೂ ಎಂಥದ್ದು ? ಭಗವತ್ಪಾದರ ಹೆಸರಿನಲ್ಲಿರುವ ಶಾಕ್ತತಂತ್ರವೈಷಯಿಕ ಗ್ರಂಥಗಳು ದಿಟವಾಗಿ ಆದಿಶಂಕರರೆನಿಸಿದ ಅವರವೇ ? ಅಥವಾ ಇತರ ಶಾಂಕರಪೀಠದ ಯತಿಗಳ ನಿರ್ಮಾಣಗಳೇ ? ವಿಶುದ್ಧ ವೇದಾಂತದರ್ಶನದ ಪರಮೋಚ್ಚ ಪ್ರತಿಪಾದಕರಾದ ಭಗವತ್ಪಾದರು 'ಅವೈದಿಕ'ವೆನ್ನಲಾದ ತಂತ್ರಗಳತ್ತ ಆಕೃಷ್ಟರಾಗುವುದು ಸಾಧ್ಯವೇ ? ಸಾಧುವೇ ? ಅವರ ಹೆಸರಿನಲ್ಲಿರುವ ಶಾಕ್ತತಂತ್ರಸಂಬಂಧಿತ ಗ್ರಂಥಗಳ ಸಂಖ್ಯೆಯಾದರೂ ಎಷ್ಟು ? ಎಂಬಿವೇ ಮುಂತಾದ ಹತ್ತಾರು ಜಟಿಲ ಪ್ರಶ್ನೆಗಳು ಸಂಶೋಧಕರನ್ನು ಈ ಒಂದು ಶತಮಾನದಲ್ಲಿ ಕಾಡುತ್ತಲೇ ಬಂದಿವೆ. ತೀರ್ಮಾನಗಳೂ ಸಮಾಧಾನಗಳೂ ಮತ್ತೆ ಮತ್ತೆ ಪ್ರಶ್ನಿತವಾಗಿ ಪ್ರತಿಯುಕ್ತವಾಗಿ ಇನ್ನಷ್ಟು ಮತ್ತಷ್ಟು ತುಮುಲವನ್ನೇ ತರುತ್ತಿವೆ. ಶ್ರದ್ಧಾಳುಗಳ ಸವಾಲುಗಳೊಂದು ಕಡೆ, ಸಂಶೋಧಕರ ಸಮಸ್ಯೆಗಳು ಮತ್ತೊಂದು ಕಡೆ ಆಸಕ್ತರನ್ನು ದಿಕ್ಕುಗೆಡಿಸುವಂತಿವೆ. ಹೀಗಾಗಿ ಇಂಥ ವಿಷಯದ ಬಗೆಗೆ ನಾನರಿತಷ್ಟನ್ನು ತೀರ ಸಂಕ್ಷೇಪವಾಗಿ ಸಾಧಕ-ಬಾಧಕಗಳೊಡನೆ ನಿವೇದಿಸುವದಲ್ಲದೆ ನನಗೆ ಹೆಚ್ಚಿನ ವಿಸ್ತಾರ ಕಾಣಿಸದು.

ಶ್ರೀ ಶಂಕರ ಭಗವತ್ಪಾದರ ಹೆಸರಿನಲ್ಲಿ ಪ್ರಸಿದ್ಧವಿರುವ ಶಾಕ್ತ ತಂತ್ರ ಕೃತಿಗಳು ನಾಲ್ಕು. ಅವನ್ನು ಕ್ರಮವಾಗಿ ಸೌಂದರ್ಯಲಹರೀ, ಆನಂದಲಹರೀ, ಲಲಿತಾ ತ್ರಿಶತೀ ಭಾಷ್ಯ ಮತ್ತು ಪ್ರಪಂಚಸಾರಗಳೆಂದು ವಿದ್ವಾಂಸರು ಗುರುತಿಸುತ್ತಾರೆ. ಆದರೆ ಅನೇಕ

---

* ಈ ಲೇಖನವು ಆಚಾರ್ಯ ಶ್ರೀ ಶಂಕರ ಹಾಗೂ ಶಾಕ್ತ ತಂತ್ರಗಳ ನಡುವಿನ ಸಂಭಾವ್ಯ-ಸಂಬಂಧಗಳ ಬಗೆಗೆ ಚರ್ಚಿಸುವುದಲ್ಲದೆ ಶಾಕ್ತತತ್ತ್ವವನ್ನಾಗಲೀ ಶ್ರೀ ಶಂಕರರ ಶಾಕ್ತತಂತ್ರ ಗ್ರಂಥಗಳ ವಿಷಯ ವಿನ್ಯಾಸವನ್ನಾಗಲಿ ಅಲ್ಲ. ಈ ಬರೆಹವು ಅನೇಕ ಮಿತಿಗಳೊಳಗೆ ರೂಪುಗೊಂಡ ಕೇವಲ ಶೋಧಕ ನಿಬಂಧವಲ್ಲದೆ ಸಾಧಕ ಪ್ರಬಂಧವಲ್ಲ.

ಆಧುನಿಕ ವಿದ್ವಾಂಸರು ಇವು ಆಚಾರ್ಯವಿರಚಿತವಲ್ಲವೆಂದೂ ವಿಶುದ್ಧೌಪನಿಷದವಾದಿಯಾದ ಶ್ರೀ ಶಂಕರರು ಇಂಥ ಕೃತಿಗಳನ್ನು ರಚಿಸಲಾರರೆಂದೂ ಆಕ್ಷೇಪಿಸುತ್ತಾರೆ. ಮುಖ್ಯವಾಗಿ ಅವರೆಲ್ಲ ಆಚಾರ್ಯರ ಪ್ರಸ್ಥಾನತ್ರಯ ಭಾಷ್ಯಗಳಲ್ಲೆಲ್ಲಿಯೂ ಶಾಕ್ತಾದಿ ತಂತ್ರಗಳ ಬಗ್ಗೆ ಆದರವಿಲ್ಲದಿರುವುದನ್ನೂ ಕೇವಲ ಪೂರ್ವಪಕ್ಷವೆಂಬಂತೆ ಈ ಆಗಮವಿಧಾನಗಳ ಬಗೆಗೆ ಅಭಿಪ್ರಾಯವಿರುವುದನ್ನೂ ಪ್ರಬಲ ಸಾಕ್ಷ್ಯಗಳೆಂದು ಪರಿಗಣಿಸುತ್ತಾರೆ. (ಬ್ರಹ್ಮಸೂತ್ರ ಭಾಷ್ಯದಲ್ಲಿ ಉತ್ಪತ್ತ್ಯಧಿಕರಣ ಹಾಗೂ ಪತ್ಯುರಸಾಮಂಜಸ್ಯಾಧಿಕರಣಗಳಲ್ಲಿಯೂ ಗೀತಾ ಭಾಷ್ಯದಲ್ಲಿ (IX-೨೫) 'ಭೂತೇಜ್ಯ' ಎಂಬ ಶಬ್ದಕ್ಕೆ ವಿನಾಯಕ–ಮಾತೃಗಣ–ಚತುರ್ಭಗಿನೀತ್ಯಾದಿ ಪೂಜಕರಾದ ತಾಮಸದೇವತಾರಾಧಕರೆಂಬ ಒಕ್ಕಣೆಯಲ್ಲಿಯೂ (XVII–೪) ಈ ಸಂಗತಿ ಪರಿಶೀಲನೀಯ). ಆಚಾರ್ಯರು ಶ್ರೀವಿದ್ಯಾದಿ ತತ್ತ್ವಪ್ರವರ್ತಕರಾಗಿದ್ದಲ್ಲಿ ಇಂಥ ಮಾತುಗಳನ್ನವರು ಆಡುತ್ತಿರಲಿಲ್ಲವೆಂಬುದನ್ನು ನಿಗಮನವಾಗಿ ಒತ್ತಿ ಹೇಳುವುದೂ ಉಂಟು.

ಇನ್ನು ಪ್ರಪಂಚಸಾರ, ಸೌಂದರ್ಯ ಲಹರೀತ್ಯಾದಿಗ್ರಂಥಗಳ ಬಗೆಗೂ ಹೀಗೆಯೇ ಉಪಪತ್ತಿಗಳನ್ನು ನೀಡುವರು. ಸೌಂದರ್ಯಲಹರಿಯ ವ್ಯಾಖ್ಯಾತೃಗಳಲ್ಲಿಯೇ ಅದರ ಕರ್ತೃತ್ವದ ಬಗೆಗೆ ಭಿನ್ನಾಭಿಪ್ರಾಯಗಳುಂಟು. ಸಾಕ್ಷಾತ್ ಶಿವನೇ ಇದನ್ನು ಬರೆದನೆಂದು ಡಿಂಡಿಮ ವ್ಯಾಖ್ಯೆ, ಜಗನ್ಮಾತೆಯೇ ಇವನ್ನು ರಚಿಸಿದಳೆಂದು ದ್ರವಿಡರಾಜ ಪ್ರವರಸೇನನ ಸುಧಾವಿದ್ಯೋತಿನಿಯೂ ಉಟ್ಟಂಕಿಸುತ್ತವೆ. ಅಲ್ಲದೆ ಸೌಂದರ್ಯಲಹರಿಯಲ್ಲಿ ಬರುವ ದ್ರವಿಡಶಿಶು (ಪದ್ಯ-೭೫), ಮೂಕ ಕವಿ (ಪದ್ಯ-೯೦) ಮುಂತಾದುವುಗಳೂ ಅದರ ಕರ್ತೃತ್ವ ಸಿದ್ಧಿಗೆ ತೊಡಕಾಗಿವೆಯೆಂದು ಮತ್ತೊಂದು ಆಕ್ಷೇಪ. ಪ್ರಪಂಚಸಾರವು ಬೃಹದ್ಗ್ರಂಥ. ಇದು ಅನೇಕ ತಂತ್ರಾಗಮಗಳ ಸಂಗ್ರಹ, ಕ್ರೋಡೀಕರಣ ಎಂಬುದಾಗಿಯೇ ತೋರುತ್ತದೆ. ಅಲ್ಲದೆ ಶೈಲಿಯೂ ನೀರಸ, ಶಿಥಿಲ, ಪುನರುಕ್ತಿಭೂಯಿಷ್ಠ. ಜೊತೆಗೆ ಇದಕ್ಕೆ ಪದ್ಮಪಾದರದೆನ್ನಲಾದ ಟೀಕೆಯು ಇರುವದಾದರೂ ಅದನ್ನೂ ಹೀಗೆಯೇ ನಿರಾಕರಿಸುವುದುಂಟು. ವಿಷ್ಣುಸಹಸ್ರನಾಮಭಾಷ್ಯ, ನೃಸಿಂಹ ಪೂರ್ವತಾಪನ್ಯುಪನಿಷದ್ಭಾಷ್ಯ ಹಾಗೂ ಶ್ವೇತಾಶ್ವತರೋಪನಿಷದ್ಭಾಷ್ಯಗಳು ಆಚಾರ್ಯರದೆನ್ನಬಹುದಾದರೆ ಶ್ರೀಶಂಕರರ ಶಕ್ತ್ಯಾದ್ಯಾಗಮಾಸಕ್ತಿ ಸ್ಥಾಪಿತವಾಗುವುದೆಂಬ ಮತವೂ ಉಂಟಾದರೂ ಈ ಮೇಲಣ ಭಾಷ್ಯಗಳು ಉಳಿದ ಪ್ರಸ್ಥಾನತ್ರಯಭಾಷ್ಯಗಳಿಗಿಂತ ವಿಲಕ್ಷಣ ಶೈಲಿಯಿಂದ ಕೂಡಿದ್ದು ದೀರ್ಘತರ ಪೌರಾಣಿಕ-ತಂತ್ರಾಗಮಾದ್ಯವತರಣಿಕೆಗಳಿಂದಲೂ ಶೈಲೀ ಶೈಥಿಲ್ಯದಿಂದಲೂ ಶ್ರೀ ಶಂಕರೋತ್ತರ ಗ್ರಂಥಗಳ ಉಲ್ಲೇಖಗಳಿಂದಲೂ ಸ್ವತೋವ್ಯಾಘಾತಕಾರಿಗಳಾಗಿವೆಯೆಂದು ಮತ್ತೆ ಆಕ್ಷೇಪವುಂಟು. ಹೀಗಿರಲು ಯಥಾರ್ಥ ನಿರ್ಧಾರಕ್ಕೆ ಎಡೆಯೆಲ್ಲಿ ?

ಇನ್ನು ಆಚಾರ್ಯರ ಆಗಮಾಸಕ್ತಿಯನ್ನು ಪ್ರತಿಪಾದಿಸಲು ಸಂಪ್ರದಾಯವನ್ನು ಪ್ರಬಲವಾಗಿ ಮುಂದೊಡ್ಡಲಾಗಿದೆ. ಶ್ರೀ ವಿದ್ಯಾರ್ಣವ ಗ್ರಂಥವು ಶ್ರೀ ಶಂಕರರಿಗೆ ಯತಿಶಿಷ್ಯರಲ್ಲದೆ ಗೃಹಸ್ಥಶಿಷ್ಯರನೇಕರಿದ್ದರೆಂದೂ ಪದ್ಮಪಾದ, ಬೋಧ, ಗೀರ್ವಾಣ,

ಆನಂದತೀರ್ಥ, ಶಂಕರ, ಸುಂದರ, ವಿಷ್ಣುಶರ್ಮ. ಲಕ್ಷ್ಮಣ, ಮಲ್ಲಿಕಾರ್ಜುನ, ಶ್ರೀವಿಕ್ರಮ, ಶ್ರೀಧರ, ಕಪರ್ದಿ, ಕೇಶವ, ದಾಮೋದರ ಮುಂತಾದ ಹದಿನಾಲ್ಕು ಜನರು ಪ್ರಮುಖರೆಂದೂ ತಿಳಿಸುವುದಲ್ಲದೆ ಶ್ರೀ ವಿದ್ಯಾರ್ಣವ ಕರ್ತೃ ಪ್ರಗಲ್ಭಾಚಾರ್ಯನು ವಿಷ್ಣುಶರ್ಮನ ಸಾಕ್ಷಾತ್ ಶಿಷ್ಯನೆಂದೂ ಹೇಳುವುದು. ಕಾಮರಾಜ ವಿದ್ಯಾಗ್ರಂಥವು 'ಸಂಪ್ರದಾಯೋ ಹಿ ನಾನ್ಯೋಽಸ್ತಿ ಲೋಕೇ ಶ್ರೀಶಂಕರಾದ್ಬಹಿಃ' ಎನ್ನುತ್ತದೆ. ಮಹಾನುಶಾಸನದಲ್ಲಿಯೂ ಇಂಥ ಮಾತಿದೆ. ಸುಂದರ ಎಂಬ ಆಚಾರ್ಯ ಶಿಷ್ಯರಿಂದ ಬಂದ ಪರಂಪರೆಯಲ್ಲಿಯೇ ಸುಪ್ರಸಿದ್ಧರಾದ ಭಾಸ್ಕರರಾಯಮಖಿಗಳು ಉದಿಸಿದರೆಂಬುದೂ ಸುವಿದಿತ. ಆದರೆ ಇಂಥ ಆಧಾರಗಳಿಗೂ ಅಡ್ಡಿಗಳುಂಟು. ಇಲ್ಲಿ ಉಲ್ಲೇಖಿಗೊಂಡ ಶಂಕರಾಚಾರ್ಯರು ಸಾಕ್ಷಾತ್ ಆದಿಶಂಕರರಲ್ಲವೆಂದೂ ಅವರಿಂದ ಮುಂದೆ ಬಂದ ಪರಂಪರೆಯ ಮತ್ತಾರೋ ಒಬ್ಬ ಗಣ್ಯಯತಿಗಳೆಂದೂ ಹೇಳುವರು. ಅಷ್ಟೇ ಅಲ್ಲ, ಗದ್ಯವಲ್ಲರಿಯೆಂಬ ಶ್ರೀವಿದ್ಯಾಗ್ರಂಥವು ಆಚಾರ್ಯರಿಗೆ ಗೃಹಸ್ಥಶಿಷ್ಯರೇ ಇರಲಿಲ್ಲವೆಂದು ಹೇಳಿದ ಮಾತನ್ನು ಪ್ರತಿವಾದಕ್ಕಾಗಿ ಮುಂದಿಡುವುದುಂಟು. ಒಟ್ಟಿನಲ್ಲಿ ಮತ್ತೂ ಮತ್ತೂ ಖಂಡನ-ಮಂಡನಗಳೇ ಮುಂದುವರಿದಿವೆ.

ಇರಲಿ, ನಾವು ಪ್ರಸ್ತುತ ಏನೆಂದು ಊಹಿಸಬಹುದೋ ಅಷ್ಟನ್ನು ನೋಡೋಣ. ಆಚಾರ್ಯರು ಶಾರೀರಿಕ ಭಾಷ್ಯದಲ್ಲಿ "ಸಮ್ಯಗ್ದರ್ಶನಾಭ್ಯುಪಾಯೋ ಹಿ ಯೋಗೋ ವೇದೇ ವಿಹಿತಃ............ ಲಿಂಗಾನಿ ಚ ವೈದಿಕಾನಿ ಯೋಗ ವಿಷಯಾಣಿ ಸಹಸ್ರಶಃ ಉಪಲಭ್ಯಂತೇ" (II ೧-೩) ಎಂದಿದ್ದಾರೆ. ಆದರೆ ಅವನ್ನೆಲ್ಲ ಸೂತ್ರಭಾಷ್ಯದಲ್ಲಿ ವಿವರಿಸಿಲ್ಲ. ಕಾರಣವೇನೆಂದರೆ ಅಂಥ ಕೆಲಸವಲ್ಲಿ ಪ್ರಸ್ತುತವೂ ಅಲ್ಲ. ಆದರೆ ಅವರದೇ ಎಂದು ಈಚೆಗೆ (ಜಪಾನಿನ ನಕಮುರಾ, ಯೂರೋಪಿನ ಲೆಗೆಟ್ ಮತ್ತು ಅಲ್‌ಸ್ಟಾನ್, ಅಮೆರಿಕೆಯ ಮಯೇಡಾ ಮುಂತಾದ ವಿದ್ವಾಂಸರು) ಕಂಪ್ಯೂಟರ್ ಆಧಾರಿತ ಶೈಲಿ-ವ್ಯಾಕರಣ ರಚನಾ ತಂತ್ರಗಳ ಆಧಾರದಿಂದ ತೀರ್ಮಾನಿಸಿರುವ ಯೋಗಸೂತ್ರಭಾಷ್ಯದಲ್ಲಿ ಇಂಥ ವೈದಿಕಯೋಗಗಳ ವಿಸ್ತೃತ ಪರಾಮರ್ಶೆಯುಂಟು. ಅಷ್ಟೇ ಅಲ್ಲ, ಈ ಗ್ರಂಥದಲ್ಲಿ ವೇದಾಂತಾನುರೋಧಿಯಾದ ಪಾತಂಜಲ ಚಿಂತನೆಯ ಪ್ರತಿಪಾದನೆಯೂ ಉಂಟು. ಇಂಥ ವೈದಿಕಯೋಗ ಹಾಗೂ ಸಾಧನವಿಧಾನಗಳಲ್ಲಿಯೇ ಶ್ರೀವಿದ್ಯಾದಿತಂತ್ರಗಳೂ ಅಡಕವಾಗುತ್ತವೆನ್ನಬಹುದು. ಉಪನಿಷತ್ತುಗಳಲ್ಲಿ ಬರುವ ವಿವಿಧ ವಿದ್ಯೆಗಳೆಂದು ಹೆಸರಾದ (ಉದಾ:- ಶಾಂಡಿಲ್ಯವಿದ್ಯಾ, ಮಧುವಿದ್ಯಾ, ಉಪಕೋಸಲವಿದ್ಯಾ, ದಹರವಿದ್ಯಾ ಇತ್ಯಾದಿ), ಮೂವತ್ತೆರಡು ಉಪಾಸನೆಗಳ ಬಗೆಗೆ ಯಾವುದೇ ಉಪನಿಷದ್ಭಾಷ್ಯಗಳೂ ವಿಶೇಷವಾದ ಬೆಳಕನ್ನೇನೂ ಚೆಲ್ಲಿಲ್ಲ. ಆದರೆ ಇಂಥ ರಹಸ್ಯವೂ ಗುರು-ಶಿಷ್ಯ ಪರಂಪರೈಕವೇದ್ಯವೂ ಆದ ಉಪಾಸನಕ್ರಮಗಳು ತಂತ್ರಾಗಮಗಳಲ್ಲಿ ಸಮುಚಿತ ಪರಿವೇಷದಿಂದ ಬಂದುವೆಂಬುದು ಸುಲಭವೇದ್ಯ. ಹೀಗಿರಲು ಈ ಬಗೆಯ ಉಪನಿಷದ್ವಿದ್ಯಾಶ್ರಯವಾದ ತಂತ್ರಾಗಮಗಳ ಮೂಲಕ ಉಪಾಸನಾನುಕೂಲತೆಗಾಗಿ ಆಚಾರ್ಯರೇಕೆ ಯತ್ನಿಸಿರಬಾರದು ? ದಶೋಪನಿಷತ್ತುಗಳಲ್ಲದೆ ಮತ್ತೆಷ್ಟೋ ಅಪ್ರಸಿದ್ಧೋಪನಿಷತ್ತುಗಳೆಲ್ಲ ಹೆಚ್ಚಾಗಿ ಇಂಥ ಉಪಾಸನಪರವಾಗಿರುವುದೂ ಅವುಗಳ

ತಾಂತ್ರಿಕನೇಪಥ್ಯವೂ ಸ್ಮರಣೀಯ. ಇವೆಲ್ಲ ಆಕಸ್ಮಿಕ-ಯಾದೃಚ್ಛಿಕಗಳಲ್ಲ, ಸಂಪ್ರದಾಯ ಸಾಂಕರ್ಯವೂ ಅಲ್ಲ. ಎಲ್ಲಕ್ಕೂ ಮಿಗಿಲಾಗಿ ಸಕಲಾಗಮಗಳೂ (ಶೈವ, ವೈಷ್ಣವ ಹಾಗೂ ಶಾಕ್ತ) ಅದ್ವೈತತತ್ತ್ವವನ್ನು ಪ್ರತಿಪಾದಿಸುತ್ತಿದ್ದರೂ ಶಾಕ್ತಾಗಮಗಳು ವಿಶೇಷವಾಗಿ, ನಿರಪವಾದವಾಗಿ ಕೇವಲ ಅದ್ವೈತವೊಂದನ್ನೇ ಸರ್ವತ್ರ ಹೇಳುವ ಕಾರಣ ಇದು ಆಚಾರ್ಯರ ವಿಶೇಷಾಭಿಮಾನಕ್ಕೆ ಪಾತ್ರವಾಗಿದ್ದಿರಬಹುದೆಂದೂ ಅವರ ಪ್ರಭಾವವೂ ಈ ಸಂಪ್ರದಾಯದ ಮೇಲೆ ಹೆಚ್ಚಾಗಿದ್ದಿರಬಹುದೆಂದೂ ಊಹಿಸುವುದು ಅಸಿಂಧುವಾಗದಷ್ಟೆ.

ಪ್ರಪಂಚಸಾರವು ಆಚಾರ್ಯರ ಸಾಕ್ಷಾತ್ ಕೃತಿಯಲ್ಲ. ಆದರೆ ಅವರು ಸಂಪಾದಿಸಿದ ಗ್ರಂಥವೆಂಬುದನ್ನು ಡಾ|| ಗೋವಿಂದಚಂದ್ರ ಪಾಂಡೆಯವರು ಪ್ರತಿಪಾದಿಸಿದ್ದಾರೆ. ಆದರೆ ಸೌಂದರ್ಯಲಹರಿಯಂತೂ ಆಚಾರ್ಯರದೇ ಹೌದೆಂದಿದ್ದಾರೆ. ವೈಯಕ್ತಿಕವಾಗಿ ನನಗೂ ಸಹ ಅದರ ಶೈಲಿ, ಕಲ್ಪನೆ, ಬಿಗಿ, ಬನಿ, ಅಚ್ಚುಕಟ್ಟುಗಳೂ ಆಚಾರ್ಯ ಲೇಖನಿಯನ್ನೇ ನೆನಪಿಸುವುದೆಂದು ಭಾವಿಸುತ್ತೇನೆ. ಜೊತೆಗೆ ಲಹರೀಕಾವ್ಯಪರಂಪರೆಗೆ ಇದೊಂದು ಆದಿಮಸ್ರೋತಸ್ಸಾಯಿತು. ಈ ಅಂಶವೂ ಗಮನಾರ್ಹ. ಏಕೆಂದರೆ ಕಾಳಿದಾಸನಂಥ ಮಹಾಕವಿಯಿಂದ ಹೊಮ್ಮಿದ ಮೇಘದೂತವು ಅನೇಕ ದೂತ (ಸಂದೇಶ) ಕಾವ್ಯಗಳಿಗೂ ಅವುಗಳ ಮಂದಾಕ್ರಾಂತಾವೃತ್ತೈಕ ಪ್ರೀತಿಗೂ ಕಾರಣವಾದಂತೆ ಆಚಾರ್ಯರಂಥ ಮಹಾಪುರುಷರ ಸೌಂದರ್ಯ ಲಹರಿಯು ಮುಂದೆ ಪಂಡಿತ ರಾಜ ಜಗನ್ನಾಥನಂಥ ಅತ್ಯಭಿಮಾನಿಗಳೂ ಅನುಕರಿಸಿದ ಲಹರೀ ನಾಮಧೇಯದ ಸ್ತುತಿಕಾವ್ಯಗಳಿಗೂ ಅದೇ ಶಿಖರಿಣೀ ವೃತ್ತ ವೈಭವಕ್ಕೂ ಹೆದ್ದಾರಿ ಹಾಕಿತೆಂಬುದನ್ನು ನಾವು ಮರೆಯುವಂತಿಲ್ಲ.

ಇತ್ತೀಚೆಗೆ ಪಾಲ್ ಹ್ಯಾಕರ್ ಅವರು ಸಂಶೋಧಿಸಿ ಹೇಳಿದಂತೆ ಆಚಾರ್ಯರು ಯೋಗಿಗಳೂ ಆಗಿದ್ದರು, ವೇದಾಂತಿಗಳೂ ಆಗಿದ್ದರು, ತಂತ್ರಾನುಷ್ಠಾನಿಗಳೂ ಎನಿಸಿದ್ದರು. ಇವೆಲ್ಲ ಈಚೀಚಿನ ಪುನರ್ವಿಮರ್ಶನ ಫಲಗಳು. ಹೀಗಾಗಿ ನಾವೂ ಈ ನಿಲುವಿಗೆ ಓಂಕಾರ ಪುರಸ್ಸರ ಸಂಮತಿಯನ್ನು ಸೂಚಿಸಬಹುದು.

# ಸಂಸ್ಕೃತ ಸಾಹಿತ್ಯದ ಮೇಲೆ ಶಂಕರರ ಅದ್ವೈತ ಸಿದ್ಧಾಂತದ ಪ್ರಭಾವ



ಡಾ. ಜಿ. ಎನ್. ಭಟ್

ಶ್ರುತಿ ಸ್ಮೃತಿ ಪುರಾಣಾನಾಂ ಆಲಯಂ ಕರುಣಾಲಯಮ್ ।
ನಮಾಮಿ ಭಗವತ್ಪಾದಂ ಶಂಕರಂ ಲೋಕಶಂಕರಮ್ ॥

ಅದ್ವೈತತತ್ತ್ವ ಶ್ರೀಮದ್ ಶಂಕರಾಚಾರ್ಯರಿಗಿಂತ ಮೊದಲೇ ನಮ್ಮ ಶ್ರುತಿ ಸ್ಮೃತಿ ಪುರಾಣಗಳಲ್ಲಿ ಓತ್‌ಪ್ರೋತವಾಗಿದೆಯೆಂಬುದು ಸರ್ವವಿದಿತ. ಅವುಗಳ ನಿಲಯವೇ ಆದ ಆಚಾರ್ಯ ಶಂಕರರು ಸಿದ್ಧಾಂತದ ರೂಪದಲ್ಲಿ, ಸಂಘರ್ಷಪೂರ್ಣವಾದ ಸಂಧಿಕಾಲದಲ್ಲಿ, ಪುನಃ ಪ್ರತಿಷ್ಠಾಪಿಸಿದರು ಎಂಬುದೇ ಮಹತ್ವಪೂರ್ಣವಾದ ಅಂಶ. ಶಂಕರರ ಅದ್ವೈತ ಪ್ರತಿಪಾದಕವಾದ ಭಾಷ್ಯ, ಸ್ತೋತ್ರ ಮುಂತಾದ ಕೃತಿಗಳೇ ವಿಶಾಲಾರ್ಥದಲ್ಲಿ ಸಾಹಿತ್ಯಗಳೇ ಆಗಿವೆ. ಭಾಷೆಯ ಶೈಲಿ, ರಚನೆ, ಅಕ್ಷರ ವಿನ್ಯಾಸ, ಉಪಯೋಗಿಸಿದ ಅಲಂಕಾರಗಳು, ಛಂದಸ್ಸು, ಪ್ರಾಸ, ವೃತ್ತ್ಯನುಪ್ರಾಸಾದಿ ಲಯಗತಿಗಳು ಎಂತಹ ಸಾಹಿತಿಗೂ ಮಾರ್ಗದರ್ಶಕ; ಆದರ್ಶದಾಯಕ. ಶಂಕರರ ನಂತರದ ಅನೇಕ ಕವಿಗಳು, ಸಾಹಿತಿಗಳು ರಚಿಸಿದ ಸಾಹಿತ್ಯದ ಮೇಲೆ ಶತ ಶತಮಾನಗಳ ಕಾಲ ಅವರ ಸಿದ್ಧಾಂತದ ಪ್ರಭಾವವೂ ಗಾಢವಾಗಿಯೇ ಇದೆ. ಅದನ್ನು ಒರೆಗೆ ಹಚ್ಚಿ ದಾಖಲೆಗೆ ತೆಗೆದುಕೊಳ್ಳುವುದು ಮಾತ್ರ ಅತ್ಯಂತ ದುಸ್ತರವಾದುದು. ಅಂತಹ ದುಸ್ತರ ಕಾರ್ಯದ ಪ್ರಾರಂಭಿಕ ಪ್ರಯತ್ನ ಮಾತ್ರ ಈ ಪ್ರಬಂಧದಲ್ಲಿದೆಯೆನ್ನಬಹುದು.

## ಆದಿಶಂಕರರ ಕಾಲ

ಶಂಕರರ ಅದ್ವೈತ ಸಿದ್ಧಾಂತದ ಪ್ರಭಾವವು ಸಾಹಿತ್ಯದ ಮೇಲೆ ಆದುದನ್ನು ಪರಿಗಣಿಸುವ ಮೊದಲು ಶಂಕರರ ಜನ್ಮಕಾಲವನ್ನು ಕುರಿತು ಪರಾಂಬರಿಸಬೇಕಾದುದು ಅನಿವಾರ್ಯ; ಇದರಲ್ಲಿ ಅನೇಕ ಭಿನ್ನಮತಗಳಿವೆ. ಪರಂಪರೆಯ ಹಿನ್ನೆಲೆಯಲ್ಲಿ ದಕ್ಷಿಣದ ಪ್ರಧಾನ ಮಠಗಳಾದ ಶೃಂಗೇರಿ ಹಾಗೂ ಕಾಂಚಿ ಮಠಗಳ ಪರಂಪರೆ ಬೇರೆ ಬೇರೆ ದಾಖಲೆಗಳನ್ನು ದಾಖಲಿಸುತ್ತವೆ. ಶಂಕರರ ಜೀವನ, ಸಿದ್ಧಿಸಾಧನೆಗಳನ್ನು ಚಿತ್ತರಿಸುವ

'ಶಂಕರ ದಿಗ್ವಿಜಯ'ಗಳು ಭಿನ್ನವಾದ ಕಾಲಗಳನ್ನೇ ದಾಖಲಿಸುತ್ತವೆ. ಉದಾಹರಣೆಗೆ ಕಾಂಚಿಮಠದ ಪರಂಪರೆ ಶಂಕರರ ಕಾಲಾವಧಿಯನ್ನು ಕ್ರಿಸ್ತಪೂರ್ವ ೫೦೯ ರಿಂದ ೪೭೬ ರ ವರೆಗೆಂದು ಹೇಳುತ್ತದೆ. ದ್ವಾರಕಾ ಶಾರದಾ ಪೀಠವು ಶಂಕರರ ಕಾಲವು ಯುಧಿಷ್ಠಿರಯುಗ ೨೬೩೧ ರಿಂದ ೨೬೬೩ ಎಂದು ಹೇಳುತ್ತದೆ. ಈ ಕಾಲ ವ್ಯಾಪಕತೆಯಲ್ಲಿ ವೈರುಧ್ಯ ವೈವಿಧ್ಯತೆಗಳನ್ನು ಕಂಡಾಗ 'ಶಂಕರ' ಎಂಬ ಅನೇಕ ಆಚಾರ್ಯರು ಬೇರೆ ಬೇರೆ ಕಾಲದಲ್ಲಿ ಅದೇ ಅಭಿಧಾನದಿಂದ ಇರಬಹುದೆನಿಸುತ್ತದೆ. ಉದಾಹರಣೆಗೆ ಕಾಂಚಿ ಸಂಪ್ರದಾಯವು ಆದಿಶಂಕರ, ಕೃಪಾಶಂಕರ, ಉಜ್ವಲಶಂಕರ, ಮೂಕಶಂಕರ ಹಾಗೂ ಅಭಿನವ ಶಂಕ ಎಂದು ಐದು ಶಂಕರರನ್ನು ಉಲ್ಲೇಖಿಸಿದೆ (ಲೈಫ್ ಎಂಡ್ ಥಾಟ್ ಆಫ್ ಶಂಕರಾಚಾರ್ಯ : ಗೋವಿಂದಚಂದ್ರ ಪಾಂಡೆ). ಶೃಂಗೇರಿ ಪರಂಪರೆ ಹೇಳುವ ಶಂಕರರ ಕಾಲ ಕ್ರಿ. ಶಕ ಏಳನೇ ಶತಮಾನ ಎಂಬುದು ಆಧುನಿಕ ಇತಿಹಾಸಕಾರರು ನಿಗದಿಪಡಿಸುವ ಕಾಲಕ್ಕೆ ಸಾಮ್ಯತೆಯನ್ನು ತರುತ್ತದೆ. ಹೀಗೆ ಕುಮಾರಿಲ ಭಟ್ಟರ ಕಾಲವನ್ನು ಆಧರಿಸಿ ಶಂಕರರ ಒಪ್ಪಿತ ಕಾಲಾವಧಿ ಸರಿಸುಮಾರು ಕ್ರಿ. ಶ. ೭೫೦ ರಿಂದ ೮೦೦ ರ ವರೆಗಿನದಾಗಿರಬೇಕೆಂದು ನಂಬಲಾಗಿದೆ. ಪ್ರಸ್ತುತ ಪ್ರಬಂಧದಲ್ಲಿ, ಹಾಗಾಗಿ, ೮ನೇ ಶತಮಾನದ ನಂತರದ ಕಾಲವನ್ನು ಅವರ ಸಿದ್ಧಾಂತದ ಪ್ರಭಾವವಿರುವ ಸಾಹಿತ್ಯಾನ್ವೇಷಣೆಗೆ ಪರಿಗಣಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಶಾಂಕರ ಅದ್ವೈತ ಸಿದ್ಧಾಂತವೇನೆಂಬುದನ್ನು ಸಾರರೂಪದಲ್ಲಿ ಇಲ್ಲಿ ಉಲ್ಲೇಖಿಸುವದು ಸೂಕ್ತವೆನಿಸುತ್ತದೆ. ತದನಂತರ ಸಹಜವಾಗಿಯೇ ಈ ತತ್ವ ಯಾವ ಸಾಹಿತ್ಯದಲ್ಲಿದೆಯೆಂದು ಪರಿಶೀಲಿಸಲು ಅನುಕೂಲವಾಗುತ್ತದೆ :

ಶಂಕರರ ಸಿದ್ಧಾಂತದ ಸಾರವನ್ನೆಲ್ಲ ಅವರ ಶಿಷ್ಯರು ಶ್ಲೋಕಾರ್ಧದಲ್ಲೇ ಹೇಳಿದ್ದಾರೆ : "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ'' ಅಂದರೆ ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯಾರೂಪವಾದುದು, ಜೀವನೂ ಬ್ರಹ್ಮನೇ, ಬೇರೆಯಲ್ಲ.

ಉಪನಿಷತ್ತು ಹೇಳುವ ಬ್ರಹ್ಮ ಮತ್ತು ಆತ್ಮ ಎಂಬ ಪದಗಳು ಅದ್ವೈತ ಪರಮ ಸತ್ಯವನ್ನು ತಿಳಿಸುತ್ತದೆ. ಪರಮಸತ್ಯವನ್ನು ನಿರುಪಾಧಿಕವಾಗಿ ಹೇಳುವುದು ಸಾಧ್ಯವಿಲ್ಲವಾದುದರಿಂದ ಉಪನಿಷತ್ತುಗಳು ಅದನ್ನು 'ನೇತಿ' 'ನೇತಿ' ಅಂದರೆ ಇದಲ್ಲ, ಇದಲ್ಲ ಎಂದು ವ್ಯವಹರಿಸುತ್ತವೆ. ಸರ್ವಾಂತರ್ಯಾಮಿಯೇ ಪರಮಸತ್ಯ, ಬ್ರಹ್ಮವು ಸತ್ಯ, ಜ್ಞಾನ, ಆನಂದ ಮುಂತಾಗಿ ಹೇಳಲಾಗಿದೆ. ಬ್ರಹ್ಮವು ನಿರ್ಗುಣವಾದುದು. ಅದು 'ಒಂದು' ಎಂದು ಹೇಳಿದರೆ ಸಂಖ್ಯೆಯ ಉಪಾಧಿಯಾಗಿ ಪರಮಸತ್ಯಕ್ಕೆ ಮಿತಿ ಹಾಕಿದ ಹಾಗಾಗುತ್ತದೆ. ಆದುದರಿಂದಲೇ ಶಂಕರರು ತಮ್ಮ ಸಿದ್ಧಾಂತವನ್ನು 'ಅದ್ವೈತ''– ಎರಡಲ್ಲದ್ದು ಎಂದು ಹೇಳಿದ್ದಾರೆ.

ಸಾಪೇಕ್ಷ ದೃಷ್ಟಿಯಲ್ಲಿ ಬ್ರಹ್ಮನುದೇವರಾಗಿ ಜಗತ್ಕಾರಣನಾಗಿ ಕಾಣುತ್ತಾನೆ. ಇದು ವ್ಯಾವಹಾರಿಕ ಸತ್ಯ. ಪಾರಮಾರ್ಥಿಕವಾಗಿ ಹಾಗಲ್ಲ.

ದೇವರೆಂಬುದು ಉಪಾಧಿಗೊಳಗಾದ ಬ್ರಹ್ಮ; ಉಪಾಧಿಯನ್ನುಂಟುಮಾಡುವುದು ಮಾಯೆ; ಅಂದರೆ ಹಗ್ಗವೇ ಹಾವಾಗಿ ಕಾಣುವ, ಅನುಭವಿಸುವ ಭ್ರಾಂತಿ. ಈ ಮಾಯೆಯು ಬ್ರಹ್ಮನಿಂದ ಬೇರೆಯಾದ ವಸ್ತುವಲ್ಲ.

ಹೀಗೆ 'ಅಹಂ ಬ್ರಹ್ಮಾಸ್ಮಿ', 'ಸೋಽಹಂ', 'ತತ್ವಮಸಿ' ಮುಂತಾದ ಮಹಾವಾಕ್ಯಗಳಿಂದ ಅದ್ವೈತ ಸಿದ್ಧಾಂತವನ್ನು ಸಿದ್ಧಪಡಿಸಿದ್ದಾರೆ.

ಅದ್ವೈತ ತತ್ವದ ಪ್ರಕಾರ ಜ್ಞಾನಯೋಗವೇ ಪ್ರಧಾನ ಮಾರ್ಗ. ಅದ್ವೈತದಲ್ಲಿ ಜ್ಞಾನವೇ ನೇರ ದಾರಿ. ಯಾಕೆಂದರೆ ಮೋಕ್ಷವೆಂಬುದು ಹೊಸದಾಗಿ ಸಾಧಿಸಬೇಕಾದುದಲ್ಲ. ಆತ್ಮಕ್ಕೆ ಮೋಕ್ಷವೆಂಬುದು ಶಾಶ್ವತಸ್ವಭಾವ. ಇದರ ಅರಿವು "ಆತ್ಮಜ್ಞಾನ"ದಿಂದಾಗುತ್ತದೆ. ಇದನ್ನು ಅರಿಯಲು ಭೌತಶರೀರದ ನಾಶದವರೆಗೆ ಕಾಯಬೇಕೆಂದಿಲ್ಲ. ದೇಹವಿರುವಾಗಲೇ 'ಜೀವನ್ಮುಕ್ತಿ'ಯನ್ನು ಅನುಭವಿಸಬಹುದು. ತನಗೂ ಶಾಶ್ವತವಸ್ತುವಿಗೂ ಯಾವ ವ್ಯತ್ಯಾಸವೂ ಇಲ್ಲದಿರುವದು ಅರ್ಥವಾದಾಗಲೇ 'ಅದ್ವೈತಾನುಭವ' ಆಗುತ್ತದೆ.

ಶಂಕರರ ಈ ಅದ್ವೈತ ಸಿದ್ಧಾಂತದ ಪ್ರಭಾವ ಮೊಟ್ಟಮೊದಲಾದುದು, ನಮಗೆ ತಿಳಿದುಬರುವಂತೆ, ಅನಂತರ ಅವರ ಸಾಕ್ಷಾತ್ ಶಿಷ್ಯನಾದ 'ಹಸ್ತಾಮಲಕ' ಎಂಬ ಉಡುಪಿಯ ಬಳಿಯ ಶ್ರೀವಲ್ಲಿ (ಶಿವಳ್ಳಿ) ಅಗ್ರಹಾರದ ಮೂಕ ಬಾಲಕನ ಮೇಲೆ.

## ೧) ಹಸ್ತಾಮಲಕ

ಶ್ರೀಬಲಿ ಎಂಬ ಅಗ್ರಹಾರದ ಪ್ರಭಾಕರನೆಂಬ ಬ್ರಾಹ್ಮಣನು ತನ್ನ ಒಬ್ಬನೇ ಮೂಗ ಮಗನನ್ನು ಆಚಾರ್ಯರ ಬಳಿಗೆ ಕರೆತಂದು ನಮಸ್ಕಾರ ಮಾಡಿಸಿದನು. ಆದಿಶಂಕರರ ದರ್ಶನ ಮಾತ್ರದಿಂದಲೇ ಅವನ ಹೃದಯದಲ್ಲಿ ಅದ್ವೈತವೇದಾಂತ ಸ್ಫೂರ್ತವಾಗಿ ಅವನ ಬಾಯಿಯಿಂದ ಶ್ಲೋಕರೂಪದ ವೇದಾಂತ ಸಾಹಿತ್ಯ ಹೊರಹೊಮ್ಮಿತು. ಮೂಕತ್ವ ಇಲ್ಲವಾಯಿತು. ಇತ್ತೀಚೆಯ ಸಂಶೋಧನದಲ್ಲಿ ಕಂಡುಬಂದಂತೆ ಹಸ್ತಾಮಲಕನ ಊರು ಉಡುಪಿ ಬಳಿಯಲ್ಲಿದ್ದ ಶಿವಳ್ಳಿ. ಶಂಕರ ವಿಜಯಗಳಲ್ಲಿ ಹೇಳಿದ ಶ್ರೀಬಲಿ, ಶ್ರೀವಲ್ಲಿ (ವ್ಯಾಸಾಚರೀಯ ಶಂಕರ ವಿಜಯ) ಅಥವಾ ಶಿವವಿಹಾರ (ಗೋವಿಂದನಾಥ ರಚಿತ ಶಂಕರ ವಿಜಯ) ವೆಂದು ಹೆಸರಿಸಲ್ಪಟ್ಟಿದೆ.

ಹಸ್ತಾಮಲಕ ಬಾಲಕನ ಮುಖದಿಂದ ೧೨ ಶ್ಲೋಕಗಳು ಬಂದವು. ಅವುಗಳಲ್ಲಿ ಒಂದೆರಡು ಶ್ಲೋಕಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದೆ :

ನಿಮಿತ್ತಂ ಮನಶ್ಚಕ್ಷುರಾದಿ ಪ್ರವೃತ್ತೌ
ನಿರಸ್ತಾಖಿಲೋಪಾಧಿ ರಾಕಾಶ ಕಲ್ಪಃ ।
ರವಿರ್ಲೋಕ ಚೇಷ್ಟಾನಿಮಿತ್ತಂ ಯಥಾ ಯಃ
ಸ ನಿತ್ಯೋಪಲಬ್ಧಿ ಸ್ವರೂಪೋಽಹಮಾತ್ಮಾ ॥

(ಜಗತ್ತಿನ ಎಲ್ಲ ಚರಾಚರ ಜೀವಿಗಳ ಚೇಷ್ಟೆಗೆ ಸೂರ್ಯನು ಹೇಗೆ ಕಾರಣೀಭೂತನೋ ಹಾಗೇ ಮನಸ್ಸು ಮೊದಲಾದ ಅಂತರಿಂದ್ರಿಯಗಳ, ಕಣ್ಣು ಮುಂತಾದ ಬಾಹ್ಯೇಂದ್ರಿಯಗಳ

ಪ್ರವೃತ್ತಿಗೆ ನಿಮಿತ್ತನಾಗಿದ್ದರೂ ಯಾವುದೇ ಉಪಾಧಿಯ ಸೋಂಕಿಲ್ಲದೇ ಆಕಾಶದ ಹಾಗಿರುವ, ನಿತ್ಯಚೈತನ್ಯ ಸ್ವರೂಪನಾದ ಆತ್ಮನೇ ನಾನು.)

ಮುಖಾಭಾಸಕೋ ದರ್ಪಣೇ ದೃಶ್ಯಮಾನೋ
ಮುಖತ್ವಾತ್ ಪೃಥಕ್ತ್ವೇನ ನೈವಾಸ್ತಿ ವಸ್ತು ।
ಚಿದಾಭಾಸಕೋ ಧೀಷು ಜೀವೋಽಪಿ ತದ್ವತ್
ಸ ನಿತ್ಯೋಪಲಬ್ಧಿ ಸ್ವರೂಪೋಽಹಮಾತ್ಮಾ ॥

(ಮಾಧವೀಯ ಶಂಕರವಿಜಯ ೧೨ನೇ ಸರ್ಗ)

(ಕನ್ನಡಿಯಲ್ಲಿ ಕಾಣಿಸುವದು ಮುಖದ ಅಭಾಸ ಮಾತ್ರ. ಮುಖದಂತೆಯೇ ತೋರುವ ಕೆಲವು ಲಕ್ಷಣಗಳ ಹೊರತಾಗಿ "ಮುಖ" ಎಂಬ ವಸ್ತು ಕನ್ನಡಿಯಲ್ಲಿ ಇಲ್ಲ. ಹಾಗೆಯೇ ಜೀವನು ಕೂಡ ಇಂದ್ರಿಯಗಳಲ್ಲಿ ತೋರುವ ಆತ್ಮದ (ಜ್ಞಾನದ) ಅಭಾಸ ಮಾತ್ರ. ಅಂತಹ ನಿತ್ಯ ಚೈತನ್ಯ ಸ್ವರೂಪನಾದ ಆತ್ಮನೇ ನಾನು.)

(ಅನುವಾದ : ಡಾ. ನೀಟಿಲಾಪುರ ಕೃಷ್ಣಮೂರ್ತಿಯವರ
ತುಳುನಾಡಿನ ಪ್ರಪ್ರಥಮ ಸಂಸ್ಕೃತ ಕೃತಿ ಲೇಖನ)

ಇವರು ರಚಿಸಿದ ಶ್ಲೋಕಗಳಲ್ಲಿ ಶಾಂಕರ ಸಿದ್ಧಾಂತದ ಅದ್ವೈತವು ಸುಸ್ಪಷ್ಟವಾಗಿ ಪ್ರತಿಪಾದಿತವಾಗಿದೆ.)

## ೨) ಲೀಲಾಶುಕ :

ಈ ಕವಿಯ ಕಾಲದ ಬಗೆಗೆ ಭಿನ್ನಾಭಿಪ್ರಾಯವಿದೆ. ಇವನೋರ್ವ ಭಕ್ತಿ ಸಂಪ್ರದಾಯದ ಕವಿಯಾದರೂ ಅದ್ವೈತವನ್ನು ನಂಬುವ, ಕಾವ್ಯಗಳಲ್ಲಿ ಅದನ್ನು ವ್ಯಂಜಿಸುವ ಕವಿಯಾಗಿದ್ದನೆಂಬುದು ಅವನ ಕೃತಿಗಳಲ್ಲಿಯ ಶ್ಲೋಕಗಳನ್ನು ಗಮನಿಸಿದಾಗ ತಿಳಿದುಬರುತ್ತದೆ. ಕೇನೋಪನಿಷತ್ತಿನ ಶಂಕರಭಾಷ್ಯಕ್ಕೆ 'ಶಂಕರ ಹೃದಯಾಂಗಣ' ಎಂಬ ವಿಸ್ತೃತ ವ್ಯಾಖ್ಯಾನವನ್ನು ಇವನು ಬರೆದಿದ್ದಾನೆ. ಇವನು 'ಬಿಲ್ವಮಂಗಲ' ಕವಿಯೆಂದೂ ಪ್ರಸಿದ್ಧನಾಗಿದ್ದಾನೆ. ಕೇರಳ ಪ್ರಾಂತದ (ಈಗ) ಕಾಸರಗೋಡಿನ ಹತ್ತಿರ ಪಂಚ 'ಮಂಗಲ' ಎಂಬ ಹೆಸರಿನ ಗ್ರಾಮಗಳಿವೆ. ಅವುಗಳಲ್ಲಿ 'ಬಿಲ್ವಮಂಗಲ'ವೂ ಒಂದು; ಅಲ್ಲಿಯ ಅನಂತಪುರದ ಕೃಷ್ಣ ದೇವಸ್ಥಾನದಲ್ಲಿ ಈ ಕವಿಯಿದ್ದನೆಂದೂ ಅನಂತರ ತಿರುವನಂತಪುರದ ದೇವಸ್ಥಾನದಲ್ಲಿದ್ದು ಜೀವಿಸಿದನೆಂದೂ ನಂಬಲಾಗಿದೆ. ಮೂಲತಃ ದಕ್ಷಿಣ ಕನ್ನಡದ ಬೆಳ್ತಂಗಡಿ ತಾಲೂಕಿನ ಕೊಕ್ಕಡ ಗ್ರಾಮದ ದಿವಾಕರನೆಂಬುದು ಇವನ ಮೂಲ ಹೆಸರು (ಕೊಕ್ಕಡ ಪದ್ಮನಾಭ ಶಾಸ್ತ್ರಿಗಳ ಸ್ತೋತ್ರದಲ್ಲಿ ಈ ರೀತಿ ಉಲ್ಲೇಖಿತವಾಗಿದೆ).

ಇವನು ೧೧ ನೇ ಶತಮಾನಕ್ಕೆ ಸೇರಿದವನು. ಶೈವನಾದರೂ ಕೃಷ್ಣ ಭಕ್ತನು. 'ಕರಾರವಿಂದೇನ ಪದಾರವಿಂದಂ....;' ಕಸ್ತೂರಿ ತಿಲಕಂ.... ಲಲಾಟ ಫಲಕಂ, 'ಯಂ ಶೈವಾ ಸಮುಪಾಸತೇ ಶಿವ ಇತಿ....' ಮುಂತಾದ ಪ್ರಸಿದ್ಧ ಶ್ಲೋಕಗಳು ಇವನ ಕೃತಿಗಳಿಂದಲೇ ಬಂದವುಗಳು. ಅಂದಮೇಲೆ, ಇವನ ಮೇಲೆ ಶಂಕರರ ಅದ್ವೈತ ಸಿದ್ಧಾಂತದ ಪ್ರಭಾವವಾದುದನ್ನು ಗುರುತಿಸಬಹುದು. 'ಶ್ರೀಕೃಷ್ಣ ಕರ್ಣಾಮೃತಮ್; ಗೋವಿಂದ

ದಾಮೋದರ ಸ್ತೋತ್ರಮ್', 'ಶ್ಯಾಮಲಾ ದಂಡಕಮ್' ಮುಂತಾಗಿ ೨೮ ಕಾವ್ಯ ಸ್ತೋತ್ರಗಳು ಇವನ ರಚನೆಗಳೆಂದು ಪರಿಗಣಿಸಲಾಗಿದೆ. ಇವನ 'ಪುರುಷಾಕಾರ' ಎಂಬುದು 'ದೈವಂ' ಎಂಬ ಗ್ರಂಥದ ವ್ಯಾಖ್ಯಾನ ರೂಪ. ಅದರ ಮಂಗಳಾಚರಣದ ಶ್ಲೋಕದಲ್ಲಿ ಶಾಂಕರ ಸಿದ್ಧಾಂತವು ಹೇಗೆ ಹೊಮ್ಮಿದೆ ಎಂಬುದನ್ನು ಗಮನಿಸಬಹುದು :

ಸಚ್ಚಿತ್ಸು ಖೈಕರಸವಸ್ತುನಿ ಯತ್ರವಿಶ್ವಂ
ಮಿಥ್ಯೈವರೂಪ್ಯಮಿವ ರಾಜತಿ ಶುಕ್ರ ಭಿತ್ತೌ ।
ತಸ್ಮಿನ್ ಪ್ರತೀಚಿ ಪರಮಾತ್ಮನಿ ಚಿತ್ತ ವೃತ್ತಿಃ
ಬ್ರಹ್ಮಾಹಮಸ್ಮಿ ಪದಮಿತ್ಯನಿಶಂ ಮಮಾಸ್ತು ॥

## ೩) ಕೃಷ್ಣಮಿಶ್ರನ ಪ್ರಬೋಧ ಚಂದ್ರೋದಯ

ಈ ಕೃಷ್ಣಮಿಶ್ರನು ೧೧ನೇ ಶತಮಾನದ ಅಂತ್ಯಭಾಗದಲ್ಲಿದ್ದ ಕವಿ. ಪ್ರಬೋಧ ಚಂದ್ರೋದಯುವೆಂಬ ಶಾಂತರಸ ಪ್ರಧಾನವಾದ ನಾಟಕವನ್ನು ಇವನು ರಚಿಸಿದನು. ಇದನ್ನು ಅದ್ವೈತ ಸಿದ್ಧಾಂತ ಪ್ರತಿಪಾದನೆಗಾಗಿಯೇ ಬರೆದುದೆಂದು ತೋರುತ್ತದೆ. ಈ ನಾಟಕದ ಪ್ರಭಾವದಿಂದ, ವಿಶಿಷ್ಟಾದ್ವೈತ ಸಿದ್ಧಾಂತದ ಪ್ರತಿಪಾದನೆಗಾಗಿ ದೇಶಿಕರು 'ಸಂಕಲ್ಪ ಸೂರ್ಯೋದಯ' ಎಂಬ ನಾಟಕವನ್ನು ಬರೆದಿದ್ದಾರೆ.

'ಪ್ರಬೋಧ ಚಂದ್ರೋದಯ' ಆರು ಅಂಕಗಳುಳ್ಳ ನಾಟಕ; ಅದರ ಕಥಾ ಸಾರಾಂಶ ಹೀಗಿದೆ :

**ಪ್ರಥಮಾಂಕ :** ಈಶ್ವರನಿಗೆ ಮಾಯೆಯಲ್ಲಿ (ಅವಿದ್ಯೆ) ಮನಸ್ಸೆಂಬ ಮಗ. ಅವನಿಗೆ ಪ್ರವೃತ್ತಿ ಹಾಗೂ ನಿವೃತ್ತಿ ಎಂಬ ಇಬ್ಬರು ಪತ್ನಿಯರು. ಪ್ರವೃತ್ತಿಯಲ್ಲಿ ಮಹಾಮೋಹ, ಕಾಮ, ಕ್ರೋಧ, ಅಹಂಕಾರ, ಮದ ಮಾತ್ಸರ್ಯ ಮುಂತಾದ ಮಕ್ಕಳು ಹುಟ್ಟುತ್ತಾರೆ. ಅವರಿಗೆ ರತಿ, ಹಿಂಸೆ ಮೊದಲಾದ ಮಡದಿಯರು ! ಮನಸ್ಸು ಅಹಂಕಾರವನ್ನು ಅನುವರ್ತಿಸಿ ಈಶ್ವರನನ್ನೇ ಬಂಧಿಸುವನು ! ಮಹಾಮೋಹಾದಿಗಳು ಈ ಬಂಧನ ಬಿಗಿಗೊಳಿಸುವರು, ವಿವೇಕಾದಿಗಳು ಅವರಿಗೆ ವಿರೋಧಿಗಳಾಗುತ್ತಾರೆ.

**ದ್ವಿತೀಯಾಂಕ :** ಮಹಾಮೋಹ ಹಾಗೂ ಅವನ ಪರಿವಾರಗಳಾದ ದಂಭಾಹಂಕಾರಗಳು ಕಾಶಿಯಲ್ಲಿ ಅಧಿಕಾರ ನಡೆಸುತ್ತಾರೆ. ಆಗ ಚಾರ್ವಾಕನು ಬಂದು ಎಲ್ಲರೂ ವೇದಮಾರ್ಗಗಳನ್ನು ಬಿಡುತ್ತಿರುವರಾದರೂ ತಮಗೆ ವಿಷ್ಣು ಭಕ್ತಿಯ ಪ್ರಭಾವದ ಭಯವಿರುವದಾಗಿ ಹೇಳುತ್ತಾನೆ. ಕೂಡಲೇ ಮಹಾಮೋಹನು ಇನ್ನೊಂದು ಕಡೆ ವೈರಾಗ್ಯಾದಿಗಳು ಭೇದೋಪಾಯದಿಂದ ಅಗಲಿಸಿದಂತೆಯೂ. ಶಾಂತಿ ಮತ್ತು ಅವಳ ತಾಯಿ ಶ್ರದ್ಧೆ ಸೇರಿ ವಿವೇಕನೊಡನೆ ಉತ್ಸಾಹದೇವಿಯನ್ನು ಸೇರಿಸಲು ಪ್ರಯತ್ನಿಸುವಂತೆ ವರದಿ ಮಾಡುತ್ತಾನೆ. ಆಗ ಕಾಮನು ಧರ್ಮನನ್ನು ಬಂಧಿಸಬೇಕೆಂದೂ, ಕ್ರೋಧ ಲೋಭಗಳು ಶಾಂತಿಯನ್ನು ಜಯಿಸಬೇಕೆಂದೂ ಮಿಥ್ಯಾ ದೃಷ್ಟಿ ಶ್ರದ್ಧೆಯನ್ನು ಎಳೆದುತಂದು ನಾಸ್ತಿಕರಲ್ಲಿ ಸೇರಿಸಬೇಕೆಂದೂ ಮಹಾಮೋಹನು ಅಪ್ಪಣೆ ಮಾಡುತ್ತಾನೆ.

**ತೃತೀಯಾಂಕ :** ಶಾಂತಿಯ ತಾಯಿಯಾದ ಸಾತ್ವಿಕಶ್ರದ್ಧೆಯನ್ನು ಹುಡುಕುತ್ತಿರುವಾಗ ಜೈನ ಬೌದ್ಧ ಸಂನ್ಯಾಸಿಗಳಲ್ಲಿ ತಾಮಸಿಕ ಶ್ರದ್ಧೆಯನ್ನೂ ಕಾಪಾಲಿಕ ರಾಜರಲ್ಲಿ ರಾಜಸ ಶ್ರದ್ಧೆಯನ್ನೂ ನೋಡುವಳು. ಸಾತ್ವಿಕ ಶ್ರದ್ಧಾಧರ್ಮಗಳು ವಿಷ್ಣು ಭಕ್ತಿಯಲ್ಲಿ ಸೇರಿ ಸಜ್ಜನರ ಹೃದಯದಲ್ಲಿ ನೆಲೆಸಿರುವ ವಿಷಯ ತಿಳಿಯುತ್ತದೆ. ಇವುಗಳನ್ನು ಹಿಡಿಯಲು ಕಾಪಾಲಿಕನು ಮಹಾಭೈರವಿ ವಿದ್ಯೆ ಕಳಿಸುತ್ತಾನೆ.

**ಚತುರ್ಥಾಂಕ :** ಭೈರವಿಗೆ ಸಿಕ್ಕಿದ ಧರ್ಮಶ್ರದ್ಧೆಯರನ್ನು ವಿಷ್ಣುಭಕ್ತಿಯು ಬಿಡಿಸಿ ವಿವೇಕನಲ್ಲಿಗೆ ಕಳುಹಿಸುವಳು. ವಿವೇಕ ಮಹಾರಾಜನು ವಸ್ತು ವಿಚಾರವನ್ನು ಕಾಮನ ಮೇಲೂ, ಕ್ಷಮೆಯನ್ನು ಕ್ರೋಧನ ಮೇಲೂ ಸಂತೋಷವನ್ನು ಲೋಭದ ಮೇಲೂ ಕಳುಹಿಸಿ ತಾನು ಯುದ್ಧಕ್ಕೆ ಸಜ್ಜಾಗಿ ಹೊರಟು ಕಾಶಿಯ ಆದಿಕೇಶವ ದೇವಾಲಯದಲ್ಲಿ ಬೀಡುಬಿಡುವನು.

**ಪಂಚಮಾಂಕ :** ಚಕ್ರತೀರ್ಥದಲ್ಲಿದ್ದ ವಿಷ್ಣುಭಕ್ತಿ ಶಾಂತಿಯರಿಗೆ ಶ್ರದ್ಧೆಯು ಯುದ್ಧ ವಿವರವನ್ನು ಅರುಹುವಳು. ವಿವೇಕನು ವಿಜಯಿಯಾಗುತ್ತಾನೆ. ಮಹಾಮೋಹ ಅಡಗುತ್ತಾನೆ. ಮನಸನು ತನ್ನ ಬಂಧು ಬಳಗದ ಮರಣದ ದುಃಖದಿಂದ ಆತ್ಮಹತ್ಯೆಗೆ ಎಣಿಸಿದಾಗ ಸರಸ್ವತಿಯು ಸಮಾಧಾನ ಮಾಡುತ್ತಾಳೆ. ಆಗ ಅಲ್ಲಿಗೆ ಬಂದ ವೈರಾಗ್ಯವನ್ನು ವಿಷ್ಣುಭಕ್ತಿ ಕಳುಹಿಸಿ ಮೈತ್ರಿ ಮೊದಲಾದವರನ್ನು ಮಾನಸನು ಸ್ವಾಗತಿಸಿ ಸಮಾಧಾನ ಮಾಡುತ್ತಾನೆ.

**ಷಷ್ಠಾಂಕ :** ಶಾಂತಿ ಉಪನಿಷದ್ದೇವಿಯನ್ನೂ ಶ್ರದ್ಧೆ ವಿವೇಕನನ್ನೂ ಕರೆದು ಸೇರಿಸುತ್ತಾರೆ. ಉಪನಿಷತ್ತು ತಾನು ಮತಗಳಲ್ಲಿ ಪಟ್ಟ ಕಷ್ಟಗಳನ್ನೂ ಕೊನೆಗೆ ಗೀತೆಯಲ್ಲಿ ಅಡಗಿಕೊಂಡಿದ್ದನ್ನೂ ಹೇಳಿ, ಪುರುಷನೇ ಪರಮೇಶ್ವರನೆಂದು ತಿಳಿಸಿ, ಧ್ಯಾನ ಮಾಡಿದಾಗ ಪ್ರಬೋಧನ ಜನನವಾಗುತ್ತದೆ. ವಿದ್ಯೆ ಮಗಳಾಗಿ ಜನಿಸುತ್ತಾಳೆ. ಅವಿದ್ಯೆಯ ಬಂಧನ ತೊಲಗುತ್ತದೆ. ವಿಷ್ಣುಭಕ್ತಿ ಬಂದು ಆಶೀರ್ವದಿಸುತ್ತಾಳೆ. ಇಲ್ಲಿ ಮತಿವಿವೇಕವೇ (ಮನಸ್ಸು) ಕಥಾನಾಯಕ.

ಹೀಗೆ ನಾಟಕದ ವಸ್ತು ಅದ್ವೈತ ಸಿದ್ಧಾಂತ ಈಶ್ವರ – ಮಾಯೆಯರ ಈ ಸಂಬಂಧ ಅವಿನಾಭಾವವೆಂಬಂತೆ ಪತಿ ಪತ್ನಿಯರಾಗಿ ಜೋಡಿಸಿದೆ. ಶ್ರದ್ಧೆ, ವಿವೇಕ, ಮೋಹ, ಕಾಮ ಕ್ರೋಧ, ಪ್ರವೃತ್ತಿ, ನಿವೃತ್ತಿ ಮೊದಲಾದ ಅದ್ವೈತ ಸಿದ್ಧಾಂತ ಸ್ಥಾಪನೆಯ ಪಾರಿಭಾಷಿಕ ಪದಾರ್ಥ ರೂಪದಲ್ಲಿಯೇ ರೂಪಕವಾಗಿ ಚಿತ್ರಿಸಲಾಗಿದೆ. ಪ್ರಬೋಧ ಉದಯವೇ ಆತ್ಮಜ್ಞಾನವಾಗಿದೆ.

ಉಳಿದ ದರ್ಶನಗಳ ಸೆಳಕೂ ಇಲ್ಲದೆ, ವಿಷ್ಣು ಭಕ್ತಿಯನ್ನೂ ಕವಿ ಜೋಡಿಸಿದ್ದಾನೆ. ಆ ಸಮಯದಲ್ಲಿ ವೈದಿಕ ಮತ ಕ್ಷೀಣಿಸಿದ್ದಿರಬಹುದಾದ್ದರಿಂದ ಅವುಗಳ ಕುರಿತು ತೀಕ್ಷ್ಣ ಹಾಸ್ಯವನ್ನೂ ಜೋಡಿಸಲಾಗಿದೆ. ವೇದಾಂತಸಾರವನ್ನು ಸ್ವಾಧೀನಪಡಿಸಿಕೊಂಡು ಸ್ಪಷ್ಟವಾಗಿ ರಸವತ್ತಾಗಿ ಮಾಡಿರುವಲ್ಲಿ ಕವಿ ಅಪೂರ್ವ ಸಾಮರ್ಥ್ಯವನ್ನೂ ಚಾತುರ್ಯವನ್ನೂ ತೋರಿಸಿದ್ದಾನೆಂದು ಡಿ. ಕೃಷ್ಣಯ್ಯಂಗಾರರು ಅಭಿಪ್ರಾಯ ಪಟ್ಟಿದ್ದಾರೆ.

(ಇವರು ಪ್ರಬೋಧ ಚಂದ್ರೋದಯದ ಮಾದರಿಯಲ್ಲಿ ರಚಿತವಾದ ಸಂಕಲ್ಪ ಸೂರ್ಯೋದಯವೆಂಬ ನಾಟಕವನ್ನು ಅನುವಾದಿಸಿದವರು. ಈ ನಾಟಕವು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ.)

ಅಧ್ಯಾತ್ಮ ವಿಷಯುವಿರುವ ಅನೇಕ ಮತಗ್ರಂಥಗಳು ಸಿಗುತ್ತವೆ. ಆದರೆ ಮನೋಹರವಾದ ಸರ್ವರಸಪೋಷಣೆಗಳ ಮೂಲಕ ಸಮಾಜಕಲ್ಯಾಣವನ್ನು ಉದ್ದೇಶಿಸಿದ, ವಿಲಕ್ಷಣ ಪಾತ್ರಗಳುಳ್ಳ ಇಂತಹ ದೃಶ್ಯಕಾವ್ಯಗಳು ವಿರಳ. ಕ್ರಿ. ಶ. ೨ನೇ ಶತಮಾನದಷ್ಟು ಹಿಂದೆ ಅಶ್ವಘೋಷನೆಂಬ ಕವಿ ಬುದ್ಧಚರಿತವೆಂಬ ಶ್ರವ್ಯಕಾವ್ಯವನ್ನು ಮತಪ್ರಚಾರಕ್ಕಾಗಿ ಬರೆದುದು ಮಾತ್ರ ಈ ಹಿಂದಿನ ಉದಾಹರಣೆಯಾಗಿದೆ. ಪ್ರಬೋಧಚಂದ್ರೋದಯಕ್ಕೆ ಚಂದ್ರಿಕಾ, ಪ್ರಕಾಶ ಎಂಬ ವ್ಯಾಖ್ಯಾನಗಳೂ ಇವೆ. ಈ ನಾಟಕದ ಪ್ರಧಾನ ರಸ ಶಾಂತ. ಆಕಾರವಿಲ್ಲದ ಗುಣಗಳೂ ಧರ್ಮಗಳೂ ಪಾತ್ರಗಳ ರೂಪದಲ್ಲಿ ರಂಗದ ಮೇಲೆ ಬಂದಾಗ ಅವರೇ ಆ ಗುಣ ಧರ್ಮ ಪ್ರತೀಕ ವ್ಯಕ್ತಿಗಳಾದುದರಿಂದ ಇದು ಪ್ರತೀಕರೂಪ ದೃಶ್ಯ ಸಾಹಿತ್ಯದ ಸಾಲಿಗೆ ಸೇರುತ್ತದೆ. ಸಾಹಿತ್ಯಾಸಕ್ತರು ಇಂತಹ ಸಾಹಿತ್ಯ ಪ್ರಕಾರದ ಬಗೆಗೆ ವಿಶೇಷ ಆಸಕ್ತಿ ವಹಿಸದಿದ್ದರೂ ವೇದಾಂತದಂತಹ ಗಹನ ತತ್ತ್ವಗಳನ್ನು ಮನೋಜ್ಞವಾಗಿ ತಿಳಿಯಪಡಿಸುವುದಕ್ಕೆ ಇದೊಂದು ಉತ್ತಮ ಮಾಧ್ಯಮವೆಂದು ಬೋಧಕರೂ ತಿಳಿದಿದ್ದರೆಂಬುದು ಗಮನಾರ್ಹ.

ಈ ಅದ್ವೈತ ಸಿದ್ಧಾಂತ ಪ್ರಭಾವದ ಪ್ರಚಾರ ಮಾಡುವ ಈ ನಾಟಕದ ವಾಕ್ಯಗಳು ಸಮಾಸಭೂಯಿಷ್ಠವಾಗಿದ್ದರೂ ಸರಳ ಸುಲಲಿತ ವಾಕ್ಯಗಳೂ ಇವೆ :- ನೋಡಿ;

**ಪುರುಷ :** ದೇವಿ, ತ್ವತ್ ಪ್ರಸಾದಾತ್ ಜ್ಞಾತುಮಿಚ್ಛಾಮಿ ಕೋಽಯಮೀಶ್ವರೋ ನಾಮೇತಿ ।

**ಉಪನಿಷತ್ :** (ಸಕೋಪಮಿವ) ಕೋ ನಾಮ ಆತ್ಮಾನಂ ಅಜಾನಂತಂ ಅಂಧಮಿವ ಪ್ರತ್ಯುತ್ತರಂ ದಾಸ್ಯತಿ.

**ಪುರುಷ :** (ಸಹರ್ಷಂ) ಕಥಮಹಮಾತ್ಮಾ ಪುರುಷ ಪರಮೇಶ್ವರಃ ।

**ಉಪನಿಷತ್ :** ಏವಮೇತತ್ ತಥಾ ಹಿ-

ಅಸೌತ್ವದನ್ಯೋನ ಸನಾತನಃ ಪುಮಾನ್
ಭವಾನ್ ನ ದೇವಾತ್ ಪುರುಷೋತ್ತಮಾತ್ಪರಃ ।
ಸ ಏಷ ಭಿನ್ನಸ್ತ್ವದ್ ಅನಾದಿ ಮಾಯಯಾ
ದ್ವಿಧೇವ ಬಿಂಬಮ್ ಸಲಿಲೇ ವಿವಸ್ವತಃ ॥

(VI ಅಂಕ, ೨೬ ಶ್ಲೋಕ)

(ಆ ಸನಾತನ ಪುರುಷ ನಿನಗಿಂತ ಭಿನ್ನನಲ್ಲ, ನೀನು ಪುರುಷೋತ್ತಮನಿಗಿಂತ ಭಿನ್ನನಲ್ಲ. ನಿನ್ನ ಅನಾದಿಮಾಯೆಯಿಂದ ಇದು ಭಿನ್ನವಾಗಿ ತೋರುತ್ತದೆ. ಒಂದೇ ಸೂರ್ಯಬಿಂಬ ನೀರಿನಲ್ಲಿ ತರಂಗ ಭೇದದಿಂದ ಹೇಗೆ ಭಿನ್ನವಾಗಿ ಭಿನ್ನವಾಗಿ ಪ್ರತ್ಯೇಕವಾಗಿ ಕಾಣುತ್ತದೆಯೋ ಹಾಗೆ.)

ಇಲ್ಲಿ ಅದ್ವೈತ ಸಿದ್ಧಾಂತವನ್ನು ಹಾಗೂ ಹಸ್ತಾಮಲಕರ ಶ್ಲೋಕದಲ್ಲಿ ಬರುವ ಅದೇ ವೇದಾಂತದ ಸಾದೃಶ್ಯವನ್ನು ಕಾಣಬಹುದು. ಹಾಗೆ ಇನ್ನೊಂದೆರಡು ಉದಾಹರಣೆಗಳು :

ಇದೇ ಆರನೆಯ ಅಂಕದಲ್ಲಿ "ಉದ್ದಾಮದಂತಿಧಾಮ...." ಮುಂತಾಗಿ ಪ್ರಬೋಧೋದಯವನ್ನು ಸಾರುವ ಶ್ಲೋಕಕ್ಕೆ ಹೀಗೆ ಬರೆಯಲಾಗಿದೆ.

ಹೃತ್ ಪುಂಡರೀಕ ಛೇದನೇನ ವಿದ್ಯಾವೃತ್ತ್ ಜಾತಾಯಾಂಸಾ ವೃತ್ತಿಃ
ಕತಕರಜೋನ್ಯಾಯೇನ ಅವಿದ್ಯಾಂ ನಾಶಯಿತ್ವಾ ಸ್ವಯಮಪಿ ವಿನಶ್ಯತಿ ।
ತದಭಿಪ್ರಾಯೋಗ್ಯೈವ 'ಮೋಹಂಗ್ರಸಂತೀ ಅಂತರ್ಧತ್ತೇ' ಇತ್ಯುಕ್ತಮ್ । ಇಯಂ
ಜೀವನ್ ಮುಕ್ತತಾ ಸ್ಥಿತಿಃ । (ವ್ಯಾಖ್ಯಾನ VI ನೇ ೨೭ನೇ ಶ್ಲೋಕ)

ಹೀಗೆ ಇಲ್ಲಿ 'ಜೀವನಮುಕ್ತಿ'ಯ ಶ್ರೀ ಶಂಕರರ ಸಿದ್ಧಾಂತವನ್ನು ಪ್ರಬೋಧೋದಯವನ್ನು ನೀಡಿದ್ದಾರೆ. ಅದೇ ರೀತಿ 'ನೇತಿವಾದ'ದ ಶಂಕರ ಸಿದ್ಧಾಂತವನ್ನು ಕೆಳಗಿನ ಶ್ಲೋಕದಲ್ಲಿ ನೋಡಬಹುದು.

ಏಷೋಽಸ್ಮೀತಿ ವಿವಿಚ್ಯ ನೇತಿಪದದಾಶ್ಚಿತ್ತೇನ ಸಾರ್ಧಂಕೃತೇ ।
ತತ್ತ್ವಾನಾಂ ವಿಲಯೇ ಚಿದಾತ್ಮನಿ ಪರಿಜ್ಞಾತೇ ತ್ವಮರ್ಥೇ ಪುನಃ ।
ಶ್ರುತ್ವಾ ತತ್ತ್ವಮಸೀತಿ ಬಾಧಿತ ಭವಧ್ವಾಂತಂ ತದಾತ್ಮಪ್ರಭಂ
ಶಾಂತಂ ಜ್ಯೋತಿರನಂತಮಂತರುದಿತಾನಂದಃ ಸಮುದ್ಯೋತತೇ ॥

('ಏಷೋಽಸ್ಮಿ' 'ನೇತಿ' ಇತ್ಯಾದಿ ಪದಗಳಿಂದ ವಿವೇಕ ಹೊಂದಿ ತತ್ತ್ವವಿಲಯದ ದ್ವಾರಾ ತ್ವಮರ್ಥವನ್ನು ಚಿದಾತ್ಮನಲ್ಲಿಟ್ಟಾಗ 'ತತ್ತ್ವಮಸಿ' ವಾಕ್ಯದಿಂದ ಸಂಸಾರದ ತಮೋ ನಿವರ್ತಕವಾದ ಸ್ವಯಂ ಪ್ರಕಾಶದ ಅನಂತ-ಶಾಂತ-ಜ್ಯೋತಿ ಪ್ರಕಟವಾಗುತ್ತದೆ.)

ಹೀಗೆ ಶಂಕರರ ಅದ್ವೈತ ಸಿದ್ಧಾಂತದಿಂದ ಪ್ರಭಾವಿತವಾಗಿ ಅದರ ಪ್ರಚಾರಕ್ಕೆಂದೇ ರಚಿತವಾದ ಶಂಕರ ವಿಜಯಗಳ ಹೊರತಾಗಿ. ಸಾಹಿತ್ಯ ಪ್ರಕಾಶದ ದೃಶ್ಯಕಾವ್ಯವನ್ನು ಆಶ್ರಯಿಸಿ ಪ್ರಸಿದ್ಧವೂ ಹೃದಯಂಗಮವೂ ಆಗದು. 'ಪ್ರಬೋಧ ಚಂದ್ರೋದಯ' ನಾಟಕವೊಂದೇ ಎಂದು ಧಾರಾಳವಾಗಿ ಹೇಳಬಹುದು.

**ಶ್ರೀ ಹರ್ಷ :** ಈ ಕವಿಯ 'ನೈಷಧೀಯ ಚರಿತಮ್' ಪಂಚಮಹಾಕಾವ್ಯಗಳಲ್ಲಿ ಒಂದೆಂದು ಪ್ರಸಿದ್ಧವಾಗಿದೆ. ಇವನು೧೨ ನೇ ಶತಮಾನದ ಉತ್ತರಾರ್ಧದಲ್ಲಿದ್ದ ಜಯಚಂದ್ರ ರಾಜನ ಆಸ್ಥಾನ ಪಂಡಿತನಾಗಿದ್ದನು.

ಇದು ೨೨ ಸರ್ಗಗಳುಳ್ಳ ಮಹಾಕಾವ್ಯ. 'ಖಂಡನಖಾದ್ಯ' ಎಂಬ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ ಗ್ರಂಥಕರ್ತನಿವನು. ಈ ತತ್ತ್ವ ಪ್ರತಿಪಾದನೆ ಮಾಡಿದ ಶ್ಲೋಕಗಳು ೬. ೧೩. ಹಾಗೂ ೧೭ ನೇ ಸರ್ಗಗಳಲ್ಲಿದೆಯೆಂದು ವಿಮರ್ಶಕರು ಅಭಿಪ್ರಾಯ ನೀಡಿದ್ದಾರೆ.

'ನೈಷಧೀಯ ಚರಿತಮ್' ಮಹಾಕಾವ್ಯದ ೬ ನೆಯ ಸರ್ಗದ ಕೊನೆಯಲ್ಲಿ ಇದು 'ಖಂಡನ ಖಂಡಖಾದ್ಯ'ದ ಸಹೋದರನೆಂದು ಅವನೇ ಹೇಳಿರುವದರಿಂದ ಅದ್ವೈತ ಪ್ರತಿಪಾದನೆಯ ಶ್ಲೋಕಗಳಿವೆಯೆಂಬುದನ್ನು ಅವನೇ ಸೂಚಿಸಿದ್ದಾನೆ. ಹಾಗೂ ಬೇರೆ ಮತಗಳ ಖಂಡನೆಗಳೂ ಇಲ್ಲಿ ಗೋಚರವಿವೆ.

(ಷಷ್ಠಿಃ ಖಂಡಿತ ಖಂಡತೋಽಪಿ ಸಹಜಾತ್ ಕ್ಷೋದಕ್ಷಮೇ ತನ್ಮಹಾಕಾವ್ಯೇ ಚಾರುಣಿ ನೈಷಧೀಯ ಚರಿತೇ ಸರ್ಗೋಽಗಮದ್ಭಾಸ್ವರಃ । (೬/೧೩)

ಆದರೆ ನಮಗೆ ಅದ್ವೈತ ತತ್ತ್ವದ ಅವನ ಸ್ಪಷ್ಟಪ್ರತಿಪಾದನೆಯ ೧೩ನೇ ಸರ್ಗದ ೩೬ನೇ ಶ್ಲೋಕದಲ್ಲಿ ಕಾಣುತ್ತದೆ.

ಪ್ರಾಪ್ತುಂ ಪ್ರಯಚ್ಛತಿ ನ ಪಕ್ಷಚತುಷ್ಟಯೀ ತಾಂ
ತಲ್ಲಾಭ ಶಂಸಿನಿನ ಪಂಚಮ ಕೋಟಿ ಮಾತ್ರೇ ।
ಶ್ರದ್ಧಾಂದಧೇ ನಿಷದರಾಟ್ ವಿಮತೌ ಮತಾನಾಂ
ಅದ್ವೈತ ತತ್ತ್ವ ಇವ ಸತ್ಯ ತರೇಽಪಿ ಲೋಕಃ ॥
(೧೩.೩೬)

ಇದರ ಸಂದರ್ಭ ಹೀಗಿದೆ :

ದಮಯಂತಿಯು ಸ್ವಯಂವರಕ್ಕಾಗಿ ಸಭೆ ಸಿದ್ಧಗೊಂಡಿದೆ. ಎಲ್ಲ ರಾಜ, ಮಹಾರಾಜರೂ ಆಸನ ಸ್ವೀಕರಿಸಿದ್ದಾರೆ. ನಳನು ದಮಯಂತಿಯ ಹಾರದ ನಿರೀಕ್ಷೆಯಲ್ಲಿ ಸಹಜವಾಗಿಯೇ ಇದ್ದಾನೆ. ಹಾರಸಹಿತಳಾಗಿ ಎದುರುಗಡೆ ದಮಯಂತಿ ನಿಂತಿದ್ದಾಳೆ. ಆದರೆ ಆಶ್ಚರ್ಯಾಘಾತ ! ದಮಯಂತಿಗೆ ಒಬ್ಬ ನಳನಲ್ಲ, ಐದು ನಳರು ಕಂಗೊಳಿಸುತ್ತಾರೆ ! ನಳನಿಗೂ ಅದೇ ಚಿಂತೆ; ನಿಜ ನಳನಾದ ತನ್ನನ್ನು ಹೇಗೆ ಗುರುತಿಸಿಯಾಳು ? ನನಗಿಂತ ಮೊದಲು ನಾಲ್ಕು ಜನರೂ ನಳರೂಪದಲ್ಲಿ ಸರತಿಯಲ್ಲಿದ್ದಾರೆ. ಒಬ್ಬನಲ್ಲವೆಂದರೂ ಎರಡನೆಯ, ಮೂರು, ನಾಲ್ಕನೆಯವನನ್ನಾದರೂ ನಿಜನಳನೆಂದು ನಂಬಿ ಹಾರ ಹಾಕಿಬಿಡಬಹುದಲ್ಲ ? ಆದರೆ ಕೊನೆಯವನಾದ ನಿಜವಾದ ನಳನಾದ ನನ್ನನ್ನು ಅರಿತು ಸ್ವೀಕರಿಸಿಯಾಳೆ ? ಸಾಮಾನ್ಯರಿಗೆ ತಿಳಿಯದಿರಬಹುದು; ಆದರೆ ಶುದ್ಧ ಪ್ರೇಮಿಯಾದರೂ ದಮಯಂತಿ ತಿಳಿಯಲೇಬೇಕಲ್ಲ ! ತಿಳಿದೇ ತಿಳಿಯುತ್ತಾಳೆ ಎಂದು ನಳನಿಗೆ ಶ್ರದ್ಧೆ ಬರಲಿಲ್ಲ. ಯಾಕೆಂದರೆ ಇದು ಸತ್ಯೇತರ.

ಅಂದರೆ ಅದ್ವೈತದಂತೇ ಇದು ಸತ್ಯತರಃ ಅದ್ವೈತ ತತ್ತ್ವ ತಿಳಿಯುವದು ಕಷ್ಟ. ಅದರ ಬಗೆಗೆ ಶ್ರದ್ಧೆಯಿರುವುದೇ ಕಷ್ಟ. ಹಾಗಾಗಿ ಮೊದಮೊದಲಿಗೆ ಮತತತ್ತ್ವಗಳನ್ನೆ ಪರಮತತ್ತ್ವವೆಂದು ನಂಬುವವರೇ ಹೆಚ್ಚು ಎಂಬುದು ಕವಿಯ ಅಭಿಪ್ರಾಯ. ಈ ಶ್ಲೋಕದ ಮಲ್ಲಿನಾಥನ ವ್ಯಾಖ್ಯಾನದಲ್ಲಿ ಇದನ್ನು ಹೇಗೆ ಹೇಳಿದ್ದಾರೆ : ಮೊದಲ ನಾಲ್ಕು ನಳರು ಇಂದ್ರ, ಅಗ್ನಿ, ಯಮ, ತರುಣರಷ್ಟೆ, ಅವರನ್ನು ಸತ್ (ಸಾಂಖ್ಯ), ಅಸತ್ (ನೈಯಾಯಿಕ), ಸದಸತ್ (ಜೈನ) ಹಾಗೂ ವಿಲಕ್ಷಿತ ಸದಸತ್ (ಬೌದ್ಧ) ಎಂದು ವ್ಯಾಖ್ಯಾನಿಸಿದ್ದಾರೆ. ಸಾಮಾನ್ಯ ಬುದ್ಧಿಯಿರುವವನು ಹೇಗೆ ಸಾಂಖ್ಯಾದಿ ಷಡ್‌ದರ್ಶನಗಳಲ್ಲಿ ಪ್ರಾರಂಭಿಕವಾದ

ಸಿದ್ಧಾಂತಗಳನ್ನೇ ನಿಜವೆಂದು ನಂಬುವನೋ ಅದರಂತೆ ಮೊದಲ ನಾಲ್ವರನ್ನು ನಿಜ ನಳರೆಂದೇ ಸಭಾಸದರು ನಂಬಿಯಾರು. ಆದರೆ ವೇದೋಪನಿಷತ್ತಿನ ರಹಸ್ಯವರಿತ 'ಏಕಮೇವೋದ್ವಿತೀಯಂ ಬ್ರಹ್ಮ' ನೇಹ ನಾನಾ ಸ್ತಿ ಕಿಂಚನ' ಎಂಬುದರ ನಿಜಾರ್ಥ ತಿಳಿದವನು ಮಾತ್ರ ಹಾಗೆಣಿಸಲಾರ. ನಿಜತತ್ತ್ವವನ್ನರಿಯಲು ಮೊದಲಿನ ನಾಲ್ಕು ಮತಗಳು ಅಡಚಣೆಗಳೆಂದೇ ಭಾವಿಸುತ್ತಾನೆ. ನಿಜ ನಳನನ್ನು ತಿಳಿಯಲು ಮೊದಲಿನ ನಾಲ್ಕು ಮಿಥ್ಯಾರೂಪಿ ನಟರು ತೊಂದರೆ ಕೊಡುತ್ತಿರುವ ಹಾಗೆ. ದಮಯಂತಿಗೆ ನಳನ ಸಮ್ಯಜ್ಞಾನವಾಗಲು ಹೇಗೆ ಕಷ್ಟವಾಗುತ್ತದೆಯೋ ಹಾಗೇ ವಿಶೇಷ ಜ್ಞಾನಿಗಳಿಗೂ ಅದ್ವೈತ ತತ್ತ್ವವು 'ಸತ್ಯತರ'ವಾದುದರಿಂದ ಅರಿಯುವದು ಕಷ್ಟ. ಆದರೆ ಅದೇ ಪರಮ ಜ್ಞಾನವೆಂಬುದು ಕವಿಯ ಅಭಿಪ್ರಾಯ.

ಅದರಂತೇ ೧೭ನೇ ಸರ್ಗದಲ್ಲಿ ಗೌರಮಾದಿ ಅನೇಕ ಇತರ ಮತಗಳನ್ನು ಖಂಡಿಸಿದ್ದಾನೆ.

ಹೀಗೆ ಇಲ್ಲಿ ಶ್ರೀ ಶಂಕರಾದ್ವೈತ ಸಿದ್ಧಾಂತದ ಬಗೆಗೆ ನಿಖರವಾಗಿ ಲಭ್ಯವಾದ ಕೆಲವು ಗ್ರಂಥಕಾವ್ಯಗಳ ಉಲ್ಲೇಖ ಮಾತ್ರ ಮಾಡಲಾಗಿದೆ. ಅಪ್ಪಯ್ಯದೀಕ್ಷಿತರು ರಚಿಸಿದ ೧೦೧ ಗ್ರಂಥಗಳು ಹಾಗೂ ಅದರಂತೇ ಹಲವು ಅದ್ವೈತ ಪ್ರತಿಪಾದಕ ಗ್ರಂಥಗಳಿದ್ದರೂ ಅವು ಶುದ್ಧ ಸಾಹಿತ್ಯಿಕ ಕಾವ್ಯ ಪರಂಪರೆಯೊಳಗೆ ಬರುವದಿಲ್ಲವಾದ್ದರಿಂದ ಅವುಗಳನ್ನು ಇಲ್ಲಿ ಪರಿಗಣಿಸಿಲ್ಲ. ಶೃಂಗೇರಿ, ಸ್ವರ್ಣವಲ್ಲೀ ಮಠಗಳಿಗೆ ಸೇರಿದ ಸನ್ಯಾಸಿಗಳೂ ಅನೇಕ ಗ್ರಂಥಗಳನ್ನು ರಚಿಸಿದ್ದಾರೆಂಬುದು ಇಲ್ಲಿ ಉಲ್ಲೇಖನಾರ್ಹವಾಗಿದೆ. ವಿದ್ಯಾರಣ್ಯ ಭಾರತೀ ತೀರ್ಥರ 'ಸುಭಾಷಿತ ಸುಧಾನಿಧಿ', ಸಚ್ಚಿದಾನಂದ ಭಾರತೀ ಸ್ವಾಮಿಗಳ ರಾಮಚಂದ್ರೋದಯ, ಇಮ್ಮಡಿ ಸಚ್ಚಿದಾನಂದ ಭಾರತಿಗಳ ಶಾರದಾ ಸ್ತೋತ್ರ, 'ಮೂಕಾಂಬಿಕಾ ಸ್ತೋತ್ರ' ಮುಂತಾದವುಗಳಲ್ಲಿ ಅದ್ವೈತ ಪ್ರಭಾವಿ ಸಾಹಿತ್ಯವಿರುವದೂ ಉಲ್ಲೇಖನೀಯ. ಕಂಚೀ. ದ್ವಾರಕಾ. ಬದರೀ, ಶ್ರೀ ರಾಮಚಂದ್ರಾಪುರಮಠ ಮೊದಲಾದ ಅದ್ವೈತ ಪರಂಪರೆಯ ಮಠಗಳಲ್ಲಿಯೂ ಆಗಾಗ ಸ್ತೋತ್ರಾದಿ ಸಾಹಿತ್ಯ ರಚನೆಯ ಬಗೆಗೆ ಕೇಳಿಬರುತ್ತದೆ. ಇಲ್ಲೆಲ್ಲ ಪ್ರತ್ಯಕ್ಷ, ಪರೋಕ್ಷವಾಗಿ. ಆದಿಶಂಕರರ ಅದ್ವೈತತತ್ತ್ವ ಅವರು ರಚಿಸಿದ ವಿಶಿಷ್ಟ ಛಂದಸ್ಸು ವೃತ್ತಿ, ಪ್ರಾಸಗಳ ಪ್ರಭಾವವೂ ಆಗಿದೆ. ಅವರು ಅದೃಶ್ಯರಾದ ಮೇಲೆ ಅನೇಕ ಸ್ತೋತ್ರಗಳು ರಚನೆಯಾಗಿ ಶಂಕರಾಚಾರ್ಯರ ಕೃತಿಯೆಂದೇ ಪ್ರಚುರಗೊಂಡಿವೆ.

ಆದರೆ ಸಾಹಿತ್ಯದಲ್ಲಿ ರಸ ಗುಣ, ಛಂದಸ್ಸುಗಳಿಗೇ ಪ್ರಾಧಾನ್ಯತೆ. ಸಹೃದಯರು ಬಯಸುವದೂ ಅದನ್ನೇ ಹೊರತು, ತತ್ತ್ವ ಸಿದ್ಧಾಂತಗಳನ್ನಾಗಲಿ, ಮತಪ್ರಚಾರಗಳನ್ನಾಗಲೀ ಅಲ್ಲ ಎಂಬುದು ೧೯೬೮ರ ಈಚೆಗಿನ ಸಾಹಿತ್ಯ ರಚನೆಗಳನ್ನು ಗಮನಿಸಿದರೆ ಕಂಡುಬರುತ್ತದೆ. ೧೧೫ಕ್ಕಿಂತ ಹೆಚ್ಚು ಸಂಸ್ಕೃತ ಸಾಹಿತ್ಯ ಗ್ರಂಥಗಳ ರಚನೆ ಇಲ್ಲಿಯುವರೆಗಾದರೂ ಶಂಕರರ ಅದ್ವೈತ ಸಿದ್ಧಾಂತ ಪ್ರಭಾವವಿರುವ ಸಾಹಿತ್ಯ ವಿರಳವಾಗಿದೆ. ಅಲ್ಲಲ್ಲಿ ದೇವಸ್ಥಾನಗಳ ಸುಪ್ರಭಾತ ಹಾಗೂ ಸ್ತೋತ್ರಗಳಲ್ಲಿ

ಕಾಣಸಿಗಬಹುದಷ್ಟೆ. ಆದರೆ ಶಾಂಕರ ಮತಾನುಯಾಯಿಗಳ ಮೇಲೆ ಮಾತ್ರ ಶಾಂಕರ ಸಿದ್ಧ ಪ್ರಭಾವವಾಗಿ ಸಾಹಿತ್ಯ ನಿರ್ಮಾಣವಾಗಿದೆ.

ಉದಾಹರಣೆಗೆ ೧೯೮೪ ರಲ್ಲಿ ಪ್ರಕಟವಾದ ಪ್ರೊ. ಮಂಜುನಾಥ ಭಟ್ಟರ 'ವಿರಕ್ತಿ ವಿಥಿಕಾ' ಖಂಡಕಾವ್ಯ. ಮೂಲತಃ ಉಡುಪಿಯವರಾದ ಇವರು ಮಂಗಳೂರಿನ ಅಲೋಶಿಯಸ್ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದರು. ದ್ವೈತ ಪಂಥದ ಮಧ್ವಾಚಾರ್ಯಾನುಯಾಯಿ ವೈಷ್ಣವರು; ಶಿವಳ್ಳಿಯವರು. ಆದರೂ ತಮ್ಮ ಶತ ಶ್ಲೋಕದಲ್ಲಿ ಶಾಂಕರ ಸಿದ್ಧಾಂತ ಪ್ರಭಾವದಿಂದ ಶ್ಲೋಕ ರಚಿಸಿದ. ಶ್ಲೋಕಗಳಲ್ಲಿ ಒಂದನ್ನು ಗಮನಿಸಿರಿ.

ದ್ವಂದ್ವಾತೀತಂ ತ್ರಿಗುಣರಹಿತಂ ಸ್ವಾನುಸಂಧಾನ ಸಾಧ್ಯಂ
ಹ್ಲಾದೋದ್ರೇಕಾದ್ಧೃದಿ ವಿಕಸಿತಂ ನೇತಿ ನೇತ್ಯೇದಿ ಲಕ್ಷ್ಯಮ್ ।
ಸಾಕ್ಷ್ಯಂ ಬೋಧೇಃ ಸ್ಥಗಿತ ಭುವನಂ ವಿಶ್ವಜಾಲೈಕ ಮೂಲಂ
ತತ್ತ್ವಂ ತತ್ತ್ವಂ ಕಲಯ ಮನಸಾ ಕೇವಲೈಃ ಕಿಂ ಪ್ರಲಾಪೈಃ ॥

**ಕವಿಗಳೇ ಮಾಡಿದ ಅನುವಾದ :** ದ್ವಂದ್ವಾತೀತವೂ, ತ್ರಿಗುಣರಹಿತವೂ ಆತ್ಮಾನ್ವೇಷಣೆಯೊಂದರಿಂದಲೇ ಸಾಧ್ಯವೂ ಆನಂದೋದ್ರೇಕದಿಂದ ಹೃದಯದಲ್ಲಿ ಪ್ರಕಾಶಿಸುವಂತಹದ್ದೂ 'ನೇತಿ, ನೇತಿ' ಸಾಧನೆಯ ಲಕ್ಷ್ಯವೂ, ಜ್ಞಾನೋದಯಕ್ಕೆ ಸಾಕ್ಷ್ಯವೂ ಭುವನವ್ಯಾಪಿಯೂ ವಿಶ್ವದ ಮೂಲವೂ ಆಗಿರತಕ್ಕ ಆ ಪರತತ್ತ್ವವನ್ನು ('ತತ್ತ್ವಮಸಿ' ತತ್ತ್ವದ ತಿರುಳನ್ನು) ಮನದಲ್ಲೇ ವಿಚಾರಿಸುತ್ತಿರು; ವ್ಯರ್ಥವಾದ ಅಲ್ಲಸಲ್ಲದ ಮಾತುಗಳಿಂದೇನು ?)

ಇಂತಹ ಹತ್ತಾರು ಶ್ಲೋಕಗಳನ್ನು (ಶ್ಲೋಕ ೮೩ ರಿಂದ ೯೮ ರ ವರೆಗೆ) ಈ 'ವಿರಕ್ತಿ ವಿಥಿಕಾ' ಕಾವ್ಯದಿಂದ ಸುಲಭವಾಗಿ ಗುರುತಿಸಬಹುದು.

ಇದರಂತೆ ಅದ್ವೈತ, ಭಕ್ತಿಸಿದ್ಧಾಂತ ಪ್ರತಿಪಾದಕ ರಾಮಕೃಷ್ಣಾಶ್ರಮದ ಸಾಧು ಸನ್ಯಾಸಿಗಳ. ಸ್ತೋತ್ರ ಗ್ರಂಥಗಳೂ ಇವೆ. ಶ್ರೀ ನಾರಾಯಣ ಗುರುಗಳ 'ದರ್ಶನ ಮಾಲಾ' ಗ್ರಂಥವಿದೆ. ವೇದಾಂತ ರಹಸ್ಯದ ದೃಷ್ಟಿಯಿಂದ ಕವಿ ಭಟ್ಟತ್ತಿರಿಯ 'ನಾರಾಯಗೀಯಮ್' ಕಾವ್ಯವನ್ನೂ ಕೆಲವರು ಉಲ್ಲೇಖಿಸುತ್ತಾರೆ.

ಶಂಕರ ಸಿದ್ಧಾಂತ ಪ್ರಭಾವದಿಂದಲೇ 'ಶಂಕರವಿಜಯ' ಮಾಧವೀಯ ಶಂಕರವಿಜಯ 'ಅನಂತಾನಂದಗಿರಿ ಶಂಕರ ವಿಜಯ' ಮುಂತಾಗಿ ರಚಿತವಾದುದು ತಿಳಿದೇ ಇದೆ.

ಹೀಗೆ ಪ್ರತ್ಯಕ್ಷ ಅಪ್ರತ್ಯಕ್ಷವಾಗಿ ಶಾಂಕರರ ಅದ್ವೈತ ಸಿದ್ಧಾಂತ ಸಂಸ್ಕೃತಿ ಸಾಹಿತ್ಯ ಮೇಲಾಗಿದೆಯೆಂಬುದು ನಿರ್ವಿವಾದ, ಅದಕೆ ಅವರ ವ್ಯಕ್ತಿತ್ವ ಹಾಗೂ ತತ್ತ್ವಗಳು ಎಷ್ಟು ಪ್ರಚಾರ ಪ್ರಸಿದ್ಧಿಯನ್ನು ಪಡೆದಿವೆಯೋ ಅಷ್ಟು ವ್ಯಾಪಕತ್ವದಲ್ಲಿ ಕಾವ್ಯ. ನಟಿರಾದಿ ಸಾಹಿತ್ಯಗಳ ರೂಪದಲ್ಲಿ ಕಂಗೊಳಿಸಲಿಲ್ಲವೆಂಬುದೂ ಈ ಮೊದಲೇ ಹೇಳಿದ ಸಹೃದಯರ ಸಂವೇದಿಯಿಂದ ತಿಳಿದುಬರುತ್ತದೆ.

# ತಮಿಳು ಸಾಹಿತ್ಯದ ಮೇಲೆ ಶಂಕರರ ಅದ್ವೈತ ಸಿದ್ಧಾಂತದ ಪ್ರಭಾವ

ಡಾ. ಶ್ರೀಕೃಷ್ಣ ಭಟ್ ಅರ್ತಿಕಜೆ

ತಮಿಳು ಅತ್ಯಂತ ಪ್ರಾಚೀನವಾದ ದ್ರಾವಿಡ ಭಾಷೆ. ತಮಿಳು ಸಾಹಿತ್ಯ ಹೆಚ್ಚು ಕಡಿಮೆ ಇಪ್ಪತ್ತೈದು ಶತಮಾನಗಳ ಚರಿತ್ರೆಯುಳ್ಳದ್ದೆಂದು ಹೇಳುತ್ತಾರೆ. ಪ್ರಾರಂಭದಲ್ಲಿ ತಮಿಳುನಾಡಿನಲ್ಲಿ ಪರಭಾಷೆಗಳವರ ಪ್ರಭಾವವೂ ಪರಭಾಷಾ ಸಾಹಿತ್ಯದ ಪ್ರಭಾವವೂ ಬಹಳ ಕಡಿಮೆಯಾಗಿತ್ತು. ಆದ್ದರಿಂದ ಅಲ್ಲಲ್ಲೇ ಬಳಕೆಯಾಗಿದ್ದ ನಾಡಪದಗಳಿಂದಲೇ ಕವಿತೆಗಳು ರಚಿತವಾದುವು. ಪಶ್ಚಿಮ ಸಮುದ್ರ ತೀರ ಪ್ರದೇಶವಾದ ಕೇರಳದಲ್ಲಿ (ಆಗ ಬಳಕೆಯಲ್ಲಿದ್ದ ಹೆಸರು ಚೇರನಾಡು) ಬಾಳುತ್ತಿದ್ದ ಜನರು ತಮಿಳು ಕವಿತೆಗಳನ್ನು ಕಲಿಯುತ್ತಿದ್ದರು. ವಿದ್ವಾಂಸರು ತಮಿಳು ಕವಿತೆಗಳನ್ನು ರಚಿಸುತ್ತಿದ್ದರು. ಬಹಳ ಹಳೆಯ ಹಾಡುಗಳ ಸಂಗ್ರಹಗಳಾಗಿರುವ ಸಂಘಂ ಸಾಹಿತ್ಯದ ಕಾಲಕ್ಕೂ (ಕ್ರಿ. ಪೂ. ೫೦೦ – ಕ್ರಿ. ಶ. ೨೦೦) ಕ್ರಿ. ಶ. ಏಳನೆಯ ಶತಮಾನಕ್ಕೂ ಮಧ್ಯದ ನಡುಗಾಲದಲ್ಲಿ ಸಂಸ್ಕೃತವನ್ನು ಕಲಿತ ವಿದ್ವಾಂಸರ ಸಂಬಂಧ ತಮಿಳುನಾಡಿನಲ್ಲಿತ್ತು. ಜೈನ ಮತವೂ ಬೌದ್ಧ ಮತವೂ ತಮಿಳುನಾಡಿನಲ್ಲಿ ಹರಡತೊಡಗಿದ ಮೇಲೆ ಆ ಮತಕ್ಕೆ ಸೇರಿದವರಲ್ಲಿ ಹಲವರು ಸಂಸ್ಕೃತ, ಪ್ರಾಕೃತ, ಪಾಲಿ ಭಾಷೆಗಳನ್ನು ಕಲಿತವರಾದ್ದರಿಂದ ಉತ್ತರ ದೇಶದ ಭಾಷೆಗಳ ಶಬ್ದಗಳು ತಮಿಳಿನಲ್ಲಿ ಬೆರೆಯತೊಡಗಿದವು. ತಮಿಳಿನ ಮೇಲೆ ಸಂಸ್ಕೃತ ಸಾಹಿತ್ಯ ಗ್ರಂಥಗಳ ಪ್ರಭಾವ ಮೆಲ್ಲ ಮೆಲ್ಲನೆ ಏರ್ಪಟ್ಟಿತು. ಆಗಲೇ ಹಲವು ಸಂಸ್ಕೃತ ಶಬ್ದಗಳು ತಮಿಳಿನಲ್ಲಿ ಬೆರೆತುಕೊಂಡವು. ಆಗ ಭಾರತದಲ್ಲಿ ಸಾಹಿತ್ಯ ಭಾಷೆಗಳಾಗಿ ಪರಿಗಣಿಸಲ್ಪಟ್ಟವು ಎರಡೇ. ಒಂದು ತಮಿಳು; ಮತ್ತೊಂದು ಸಂಸ್ಕೃತ. ತಮಿಳನ್ನು 'ತೆನ್ ಮೊಟಿ' (ದಕ್ಷಿಣದ ಭಾಷೆ) ಎಂದೂ ಸಂಸ್ಕೃತವನ್ನು 'ವಡಮೊಟಿ' (ಉತ್ತರದ ಭಾಷೆ) ಎಂದೂ ಆ ಕಾಲದವರು ಕರೆಯುತ್ತ ಬಂದರು. 'ದ್ರಾವಿಡಮ್' ಎಂಬ ಮಾತು ಆ ಕಾಲದ ತಮಿಳು ಸಾಹಿತ್ಯದಲ್ಲಿ ಉಪಯೋಗವಾಗಿಲ್ಲ. ತಿರುನಾವುಕ್ಕರಸರು (ಕ್ರಿ. ಶ. ಏಳನೆಯ ಶತಮಾನ) ಶಿವಭಗವಂತನು ಎಲ್ಲವೂ ಆಗಿರುವನು ಎಂದು ಹಾಡುವ ಸ್ಥಳದಲ್ಲಿ 'ಅರಿಯನ್ ಕಂಡಾಯ್, ತಮಿಳನ್ ಕಂಡಾಯ್ (ಆರ್ಯ ಕಂಡಯ್ಯ ತಮಿಳ ಕಂಡಯ್ಯ) ಎಂದು

ಭಾರತದ ಕಲಾಮಾರ್ಗದಲ್ಲಿ ಉಂಟಾದ ವಿಂಗಡಣೆಯನ್ನು ಎರಡು ಜಾತಿಗಳಾಗಿಯೇ ನಿರ್ದೇಶಿಸಿದ್ದಾರೆ. ಸ್ವಾಮಿ ಶಿವನ ಡಮರುಗದ ಒಂದು ಬದಿಯಿಂದ ಹುಟ್ಟಿದ ಶಬ್ದ ಸಂಸ್ಕೃತವಾಯಿತೆಂದೂ ಇನ್ನೊಂದು ಬದಿಯಿಂದ ಹುಟ್ಟಿದ ಶಬ್ದ ತಮಿಳು ಆಯಿತೆಂದೂ ಪುರಾಣ ಕಥೆ ಒಳಗೆ ಬಂದಿದೆ. ಶಿವನು ಸಂಸ್ಕೃತ (ವಡಮೊಟಿ) ವನ್ನು ಪಾಣಿನಿಗೂ ದಕ್ಷಿಣದ ಭಾಷೆಯಾದ ತಮಿಳನ್ನು ಅಗಸ್ತ್ಯರಿಗೂ ಕಲಿಸಿಕೊಟ್ಟು ಎರಡೂ ಭಾಷೆಗಳನ್ನು ಬೆಳೆಯುವಂತೆ ಮಾಡಿದನೆಂದೂ ಪುರಾಣ ಕಥೆಯಿದೆ.

ಕ್ರಿ. ಶ. ಎಂಟನೆಯ ಶತಮಾನದ ಅನಂತರ ಸಂಸ್ಕೃತದಿಂದ ಜೈನರು ಕೆಲವು ಗ್ರಂಥಗಳನ್ನು ತಮಿಳಿಗೆ ಭಾಷಾಂತರ ಮಾಡಿಯೂ ಆಧರಿಸಿಯೂ ಬರೆಯತೊಡಗಿದರು. ಮುಂದೆ ಪಲ್ಲವರ ಆಳಿಕೆಯ ಕಾಲದಲ್ಲಿ ತಮಿಳು, ಸಂಸ್ಕೃತ ಭಾಷೆಗಳಿಗೂ ಅವಕ್ಕೆ ಸೇರಿದ ಕಲೆಗಳಿಗೂ ಆಶ್ರಯ ದೊರೆಯತೊಡಗಿತು. ಹೀಗಾಗಿ ತಮಿಳು ನಾಡಿನಲ್ಲಿ ಎರಡೂ ಭಾಷೆಗಳನ್ನು ಕಲಿತು ಪಳಗಿದ ವಿದ್ವಾಂಸರ ಪರಂಪರೆಯೊಡನೆ ಸಂಸ್ಕೃತವನ್ನು ಮಾತ್ರವೇ ಕಲಿತ ವಿದ್ವಾಂಸರೂ ತಮಿಳನ್ನು ಮಾತ್ರವೇ ಕಲಿತ ವಿದ್ವಾಂಸರೂ ಜೊತೆ ಜೊತೆಯಲ್ಲೇ ಬಾಳುತ್ತ ಬಂದರು. ಶಂಕರರ ಅದ್ವೈತ ಸಿದ್ಧಾಂತವೂ ರಾಮಾನುಜರ ವಿಶಿಷ್ಟಾದ್ವೈತ ಸಿದ್ಧಾಂತವೂ ಹರಡ ತೊಡಗಿದಾಗ ಸಂಸ್ಕೃತ ಕಲಿತವರ ಸಂಖ್ಯೆ ಹೆಚ್ಚಿತು. ಸಂಸ್ಕೃತ ಪುರಾಣಗಳು ತಮಿಳಿನಲ್ಲಿ ಭಾಷಾಂತರಗೊಂಡವು. ಸಂಸ್ಕೃತ ಶಬ್ದಗಳನ್ನೂ ತಮಿಳು ಶಬ್ದಗಳನ್ನೂ ಬೆರಸಿದ 'ಮಣಿ ಪ್ರವಾಳ'ವೆಂಬ ಒಂದು ವಿಶಿಷ್ಟ ಭಾಷಾಶೈಲಿಯು ಬಳಕೆಗೆ ಬಂತು. ಆಳ್ವಾರರುಗಳ ಕವಿತೆಗಳಿಗೆ ವಿವರಣಾತ್ಮಕ ವ್ಯಾಖ್ಯಾನಗಳನ್ನು ಬರೆದ ವೈಷ್ಣವ ವಿದ್ವಾಂಸರೂ ಶೈವಗ್ರಂಥಗಳನ್ನು ರಚಿಸಿದ ಶೈವ ವಿದ್ವಾಂಸರೂ ಆ ಭಾಷಾ ಶೈಲಿಯನ್ನು ಪ್ರೋತ್ಸಾಹಿಸಿದರು. ಆ ಮೂಲಕ ಸಂಸ್ಕೃತಕ್ಕೂ ತಮಿಳಿಗೂ ನಿಕಟ ಸಂಬಂಧವುಂಟಾಗಬಹುದೆಂದೂ ನಂಬಿದರು. ಆದರೆ ಮುಂದಿನ ತಮಿಳು ವಿದ್ವಾಂಸರು ಈ ಪ್ರಯತ್ನವನ್ನು ಪ್ರೋತ್ಸಾಹಿಸಲಿಲ್ಲ. ಅವರೆಲ್ಲರೂ ತಮಿಳು ಭಾಷೆಯ ಸ್ವಭಾವವನ್ನರಿತುಕೊಂಡು ಅದಕ್ಕೆ ಒಪ್ಪುವ ರೀತಿಯಲ್ಲಿ ತಮ್ಮ ಗ್ರಂಥಗಳನ್ನು ರಚಿಸಿದರು. ಮುಂದೆ ದ್ರಾವಿಡ ಭಾಷೆಗಳಲ್ಲಿ ಪರಸ್ಪರ ಸಂಬಂಧ ಏರ್ಪಟ್ಟಿತು. ತಮಿಳಿನ ಮೇಲೆ ಭಾರತದ ಇತರ ಭಾಷೆಗಳ ಹಾಗೂ ಐರೋಪ್ಯ ಭಾಷೆಗಳ ಪ್ರಭಾವವುಂಟಾಯಿತು. ವಿವಿಧ ರೀತಿಯ ಆಧುನಿಕ ಸಾಹಿತ್ಯ ರೂಪಗಳು ತಮಿಳಿಗೆ ಬಂದುವು.

ತಮಿಳು ಭಾಷೆಯ ಮೊದಲ ಗ್ರಂಥ 'ತೊಳ್ಕಾಪ್ಪಿಯಂ' ಕ್ರಿ. ಪೂ. ಮೂರನೆಯ ಶತಮಾನದಲ್ಲಿ ರಚಿತವಾಯಿತೆಂದು ನಂಬಲಾಗಿದೆ. ಅದಕ್ಕೆ ಹಿಂದೆಯೇ ತಮಿಳಿನಲ್ಲಿ ಸಾಹಿತ್ಯ ಗ್ರಂಥಗಳೂ ಲಕ್ಷಣ ಗ್ರಂಥಗಳೂ ಇದ್ದುವೆಂದು ವಿದ್ವಾಂಸರು ತಿಳಿಯುತ್ತಾರೆ. ತೊಳ್ಕಾಪ್ಪಿಯಂ ತಮಿಳಿನ ಪುರಾತನ ಲಕ್ಷಣ ಗ್ರಂಥ. ತೊಳ್ಕಾಪ್ಪಿಯ ನಾರ್ ಎಂಬ ಪುರಾತನ ವಿದ್ವಾಂಸರು ಅಂದಿನ ಭಾಷೆಯನ್ನೂ ಗ್ರಂಥಗಳನ್ನೂ ಚೆನ್ನಾಗಿ ವಿಮರ್ಶೆ ಮಾಡಿ, ಈ ಗ್ರಂಥವನ್ನು ರಚಿಸಿದರು. ಪುರಾತನ ತಮಿಳು ಸಾಹಿತ್ಯ 'ಸಂಘಂ ಸಾಹಿತ್ಯ' ಎಂಬ ಹೆಸರಿನಿಂದ ಗುರುತಿಸಲ್ಪಡುತ್ತದೆ. 'ಸಂಘಂ ಸಾಹಿತ್ಯ' ಎಂಬ ಗುಂಪಿನಲ್ಲಿರುವ ಕವಿತೆಗಳ ಕಾಲ ಕ್ರಿ. ಪೂ. ೫೦೦ ರಿಂದ ಕ್ರಿ. ಶ. ೧೦೦ ರ ವರೆಗೆ ಎಂದು ಹೇಳುತ್ತಾರೆ. ಸಂಘಂ

ಸಾಹಿತ್ಯವನ್ನು ಅಗನಾನೂರು ಹಾಗೂ ಪುರನಾನೂರು ಎಂದು ವಿಂಗಡಿಸುತ್ತಾರೆ. ಪ್ರೇಮ ವಿಷಯಕವಾದ ಕಲ್ಪನೆಯನ್ನು 'ಅಗಮ್' (ಒಳಗಿನದು. ಅಂತಃಕರಣ ಸಂಬಂಧಿ) ಎಂದೂ ವೀರ. ದಾನ. ಔದಾರ್ಯ. ಕೀರ್ತಿ ಮೊದಲಾದ ಜೀವನ ವಿಷಯಗಳನ್ನು 'ಪುಱಮ್' (ಹೊರಗಿನದು, ಬಾಹ್ಯ) ಎಂದೂ ಕರೆಯಲಾಗಿದೆ. ಅಂತರಂಗ ಗೀತಗಳಲ್ಲಿ ಕಲ್ಪನೆಯ ನಾಯಕನ ಮತ್ತು ನಾಯಕಿಯ ಪ್ರೇಮ ನಿರೂಪಿತವಾಗಿರುತ್ತದೆ. ಪುಱಮ್ ಅಥವಾ ಬಾಹ್ಯ ವಿಷಯಕ ಕವಿತೆಗಳಲ್ಲಿ ದೇಶವನ್ನಾಳುವ ರಾಜ್ಯಾಧಿಪತಿಯ ಶ್ರೇಷ್ಠವಾದ ವೀರ ಕಾರ್ಯಗಳೂ ದಾನ ಗುಣವೂ ದೇಶದ ಪ್ರಜೆಗಳಲ್ಲಿ ಶ್ರೇಷ್ಠರಾದವರ ಮಹಾಕಾರ್ಯಗಳೂ ಇತರ ವಿಷಯಗಳೂ ವರ್ಣಿಸಲ್ಪಟ್ಟಿವೆ. ಕ್ರಿ. ಶ. ೧೦೦ ರಿಂದ ಕ್ರಿ. ಶ. ೫೦೦ ರ ಕಾಲವನ್ನು ನೀತಿ ಗ್ರಂಥಗಳ ಕಾಲವೆಂದು ಕರೆಯುತ್ತಾರೆ. ಈ ಕಾಲದಲ್ಲಿ ರಚಿತವಾದ ಕೆಲವು ಗ್ರಂಥಗಳನ್ನು ಪದಿನೆಣ್ ಕೀೞ್‌ಕಣಕ್ಕು (ಹದಿನೆಂಟು ಕಿರುಗ್ರಂಥಗಳು) ಎಂದು ಗುರುತಿಸಿದರು. ಕೀೞ್‌ಕಣಕ್ಕು ಎಂಬುದು ಪಾದಗಳು ಕಡಿಮೆಯಾದ ಪದ್ಯಗಳಿಂದಾದ ಗ್ರಂಥಗಳನ್ನು ಸೂಚಿಸುತ್ತದೆ. ನೀತಿಗ್ರಂಥಗಳಲ್ಲಿ ಸರ್ವಶ್ರೇಷ್ಠವಾದ ತಿರುಕ್ಕುಱಳ್ ಈ ಕಾಲದಲ್ಲಿ ರಚಿತವಾಯಿತು. ಇದನ್ನು ರಚಿಸಿದವರು ತಿರುವಳ್ಳುವರ್. ಎರಡು ಅಡಿಗಳುಳ್ಳ 'ವೆಣ್ಬಾ' ಪದ್ಯಕ್ಕೆ 'ಕುಱಳ್ ವೆಣ್ಬಾ' ಎಂದು ಹೆಸರು. ಈ ಕುಱಳ್ ವೆಣ್ಬಾದಿಂದ ರಚಿತವಾದ ಗ್ರಂಥಕ್ಕೆ 'ತಿರುಕ್ಕುಱಳ್' ಎಂಬ ಹೆಸರು ಬಂತು. ತಿರುಕ್ಕುಱಳ್‌ನಲ್ಲಿ ಅಱಮ್ (ಧರ್ಮ), ಪೊರುಳ್ (ಅರ್ಥ), ಮತ್ತು ಇನ್ಬಮ್ (ಕಾಮ) ಎಂಬ ಮೂರು ವಿಭಾಗಗಳಿವೆ. ಈ ಲೋಕದಲ್ಲಿ ಸನ್ಮಾರ್ಗದಿಂದ ಬಾಳಿದರೆ ಮೋಕ್ಷ ತಾನಾಗಿಯೇ ದೊರೆಯುತ್ತದೆ ಎಂಬುದು ತಿರುವಳ್ಳುವರ ಅಭಿಪ್ರಾಯವಾದ್ದರಿಂದ ಪುರುಷಾರ್ಥಗಳಲ್ಲಿ ನಾಲ್ಕನೆಯದಾದ ಮೋಕ್ಷವನ್ನು ಕುರಿತು ಅವರು ವಿವರಿಸಲಿಲ್ಲ. ತಿರುಕ್ಕುಱಳ್‌ನಲ್ಲಿ ಸಮಾನತೆ, ಧರ್ಮ ಶ್ರದ್ಧೆ. ಲೋಕವ್ಯವಹಾರ ಜ್ಞಾನ. ಪ್ರೇಮದ ಕಲ್ಪನೆ, ಮಾರ್ಗ ಮತ್ತು ಸಂಸ್ಕೃತಿ ಮುಂತಾದ ವಿಚಾರಗಳ ನಿರೂಪಣೆಯಿದೆ. ತಿರುವಳ್ಳುವರ ಹೊಸದೃಷ್ಟಿ ಇಲ್ಲಿನ ಪದ್ಯಗಳಲ್ಲಿ ಅಭಿವ್ಯಕ್ತವಾಗಿದೆ. 'ನಾಲಡಿಯಾರ್' ಎಂಬುದು ತಿರುಕ್ಕುಱಳ್‌ನ ಬಳಿಕ ಬಂದ ಪ್ರಶಂಸಾರ್ಹವಾದ ಪುರಾತನ ನೀತಿಗ್ರಂಥ. ಅನಂತರ ಇನ್ನೂ ಅನೇಕ ನೀತಿ ಗ್ರಂಥಗಳು ತಮಿಳಿನಲ್ಲಿ ರಚಿತವಾದುವು.

ನೀತಿ ಸಾಹಿತ್ಯದ ಅನಂತರ ಕಾಲದಲ್ಲಿ ಪ್ರಸಿದ್ಧವಾದ ಶಿಲಪ್ಪದಿಗಾರಮ್, ಮಣಿಮೇಖಲೈ, ಮುತ್ತೊಳ್ಳಾಯಿರಂ ಮುಂತಾದ ಪುರಾತನ ಕಾವ್ಯಗಳು ರಚನೆಯಾದುವು. ತಮಿಳು ಸಾಹಿತ್ಯ ಚರಿತ್ರೆಯ ನಡುಗಾಲದಲ್ಲಿ ಬಂದ ನಾಯನ್ಮಾರರು ಹಾಗೂ ಆಳ್ವಾರರುಗಳಿಂದ ಶೈವ ಭಕ್ತಿಸಾಹಿತ್ಯ ಮತ್ತು ವೈಷ್ಣವ ಭಕ್ತಿಸಾಹಿತ್ಯದ ರಚನೆಯಾಯಿತು. ನಾಯನ್ಮಾರರಲ್ಲಿ ಕಾರೈಕ್ಕಾಲ್ ಅಮ್ಮೈಯಾರ್, ತಿರುಮೂಲರು, ತಿರುನಾವುಕ್ಕರಸರು, ತಿರುಜ್ಞಾನ ಸಂಬಂಧರು, ಸುಂದರ ಮೂರ್ತಿಗಳು ಪ್ರಸಿದ್ಧರು. ಆಳ್ವಾರರುಗಳಲ್ಲಿ ಪೇಯಾಳ್ವಾರ್, ಪೂದತ್ತಾಳ್ವಾರ್, ಪೊಯ್‌ಗೈಯಾಳ್ವಾರ್, ಪೆರಿಯಾಳ್ವಾರ್, ಆಂಡಾಳ್, ತಿರುಮಂಗೈಯಾಳ್ವಾರ್, ಕುಲಶೇಖರ ಆಳ್ವಾರ್, ನಮ್ಮಾಳ್ವಾರ್ ಮೊದಲಾದವರು ಪ್ರಮುಖರು. ತಮಿಳುನಾಡಿನ ಭಕ್ತಿ ಸಾಹಿತ್ಯ ಪರಂಪರೆಯಲ್ಲಿ ಶೈವನಾಯನ್ಮಾರರೂ,

ವೈಷ್ಣವ ಆಳ್ವಾರರುಗಳೂ ಸರಿಸಮನಾಗಿ ನಿಂತು ಹರ-ಹರಿ ಪಾರಮ್ಯಗಳನ್ನು ಸಾರಿ ಭಕ್ತಿಮಾರ್ಗದ ಹಿರಿಮೆಯನ್ನು ಎತ್ತಿ ಹಿಡಿದಿದ್ದಾರೆ. ಈ ಶೈವ ವೈಷ್ಣವ ಪಂಥಗಳು ವೈದಿಕ ಮಾರ್ಗದ ಎರಡು ಭಿನ್ನ ಮಾರ್ಗಗಳಲ್ಲಿ ನಡೆದು ಭಕ್ತಿ – ಅನುಭಾವಗಳ ಮೂಲಕ ಜಾತಿ ಕುಲಗಳನ್ನೆಣಿಸದೆ ದೈವಿಕ ಚಿಂತನೆಗಳಿಗೆ ಜನರ ಹೃದಯದಲ್ಲಿ ಇಂಬುಗೊಟ್ಟವು. ಈ ಭಕ್ತರು ಇನಿದಾದ ತಮಿಳು ನುಡಿಗಳಲ್ಲಿ ವೇದೋಪನಿಷತ್ತುಗಳ ಗಂಗೆಯನ್ನು ಹರಿಸಿ ಜನರಾಡುವ ಭಾಷೆಗೆ ದೇವ ಭಾಷೆಯ ಮಹತ್ವವನ್ನು ನೀಡಿದರು. ಅವರ ಅನುಭವದ ಮಾತುಗಳು ವೇದದಷ್ಟೇ ಪವಿತ್ರವೂ ಪ್ರಸಿದ್ಧವೂ ಎನಿಸಿದುವು.

ಕ್ರಿ. ಶ. ೯೦೦ ರಿಂದ ೧೨೦೦ ರ ಕಾಲದಲ್ಲಿ ಕಾವ್ಯ ಸಾಹಿತ್ಯದ ರಚನೆಯಾಯಿತು. ಜೀವಕ ಚಿಂತಾಮಣಿ, ಪೆರುಂಗತ್ತೈ ಮೊದಲಾದ ಜೈನ, ಬೌದ್ಧ ಗ್ರಂಥಗಳೂ, ಪೆರಿಯ ಪುರಾಣಂ, ಕಂಬರಾಮಾಯಣಂ ಮುಂತಾದ ಪ್ರಮುಖ ಗ್ರಂಥಗಳೂ ಈ ಕಾಲದಲ್ಲಿ ರಚಿತವಾದುವು. ಕ್ರಿ. ಶ. ೧೨೦೦ ರಿಂದ ೧೫೦೦ ರ ಕಾಲದಲ್ಲಿ ಅನೇಕ ಗದ್ಯಗ್ರಂಥಗಳ ರಚನೆಯಾಯಿತು. ಕ್ರಿ. ಶ. ೧೫೦೦ ರಿಂದ ೧೮೦೦ ರ ಕಾಲದಲ್ಲಿ ಅನೇಕ ಪುರಾಣಗಳು ಹಾಗೂ ಸ್ಥಳ ಪುರಾಣಗಳು ರಚಿತವಾದುವು. ಈ ಕಾಲದಲ್ಲಿ ಗದ್ಯ ಶೈಲಿಯ ಅಭಿವೃದ್ಧಿಯೂ ಆಯಿತು. ಮುಂದೆ ಆಧುನಿಕ ಕಾಲದಲ್ಲಿ ಕಾದಂಬರಿ, ಸಣ್ಣ ಕಥೆ, ನಾಟಕ, ಜೀವನ ಚರಿತ್ರೆ, ಪ್ರಬಂಧ, ವಿಮರ್ಶೆ ಮುಂತಾದ ಸಾಹಿತ್ಯ ಪ್ರಕಾರಗಳ ಬೆಳವಣಿಗೆಯಾಯಿತು. ಈ ರೀತಿ ದೀರ್ಘ ಕಾಲ ಬೆಳೆದುಬಂದ ತಮಿಳು ಸಾಹಿತ್ಯವನ್ನವಲೋಕಿಸಿದಾಗ ಅದ್ವೈತ ತತ್ತ್ವದ ಪ್ರಭಾವವು ಗಮನಾರ್ಹವಾಗಿ ಆಗಿರುವುದು ಕಂಡುಬರುತ್ತದೆ.

ಭಾರತೀಯ ತತ್ತ್ವಶಾಸ್ತ್ರದ ವಿವಿಧ ಪದ್ಧತಿಗಳಲ್ಲಿ ವೇದಾಂತವೇ ಅತ್ಯುತ್ಕೃಷ್ಟವಾದ, ಸಮಗ್ರವಾದ ಪದ್ಧತಿಯೆಂದು ಪರಿಗಣಿತವಾಗಿದೆ. ಬಾದರಾಯಣನ ಬ್ರಹ್ಮಸೂತ್ರವೆಂಬ ಭದ್ರವಾದ ಅಡಿಗಲ್ಲಿನ ಮೇಲೆ ವೇದಾಂತ ಪದ್ಧತಿಯೆಂಬ ಸೌಧವು ನಿರ್ಮಿತವಾಗಿದೆ. ಪ್ರಮುಖವಾದ ಉಪನಿಷತ್ತುಗಳು ಹಾಗೂ ಭಗವದ್ಗೀತೆ ಇವು ವೇದಾಂತವನ್ನು ಪ್ರತಿಪಾದಿಸುವ ಇತರ ಅಧಿಕೃತ ಮೂಲ ಗ್ರಂಥಗಳಾಗಿವೆ. ಗೌಡಪಾದರನ್ನು ಅದ್ವೈತ ವೇದಾಂತದ ಮೊದಲ ವ್ಯವಸ್ಥಿತ ಪ್ರತಿಪಾದಕರೆಂದು ಪರಿಗಣಿಸಲಾಗಿದೆ. ಕ್ರಿ. ಶ. ಏಳನೆಯ ಶತಮಾನದ ಕೊನೆ ಹಾಗೂ ಕ್ರಿ. ಶ. ಎಂಟನೆಯ ಶತಮಾನದ ಆದಿಭಾಗದಲ್ಲಿ ಅವರು ಜೀವಿಸಿದ್ದರು. ಮಾಂಡೂಕ್ಯ ಉಪನಿಷತ್ತಿಗೆ ಅವರು ಬರೆದ 'ಮಾಂಡೂಕ್ಯ ಕಾರಿಕಾ' ಎಂಬ ವ್ಯಾಖ್ಯಾನವು ವೇದಾಂತ ವಿಚಾರದ ಮೂಲ ತತ್ತ್ವಗಳನ್ನು ಒಳಗೊಂಡಿದೆ. ಅವರು ಮಾಧ್ಯಮಿಕ ಹಾಗೂ ಯೋಗಾಚಾರ ಎಂಬ ಬೌದ್ಧ ವಿದ್ವಾಂಸರ ವಿಚಾರಗಳಿಂದ ಪ್ರಭಾವಿತರಾಗಿದ್ದರೆಂದು ಹೇಳಲಾಗಿದೆ. ಅದ್ವೈತ ವೇದಾಂತದ ಅಧಿಕೃತ ಭಾಷ್ಯಕಾರರಾದ ಶಂಕರರು ತಾವು ರಚಿಸಿದ ಪ್ರಸ್ಥಾನ ತ್ರಯಗಳ ಅಮೂಲ್ಯ ವ್ಯಾಖ್ಯಾನ ಹಾಗೂ ಉಪದೇಶ ಸಹಸ್ರೀ, ವಿವೇಕ ಚೂಡಾಮಣಿ ಮುಂತಾದ ತಮ್ಮ ಸ್ವಂತ ಕೃತಿಗಳ ಮೂಲಕ ಅದ್ವೈತ ವೇದಾಂತದ ಅಧ್ಯಯನವನ್ನು ಶ್ರೀಮಂತಗೊಳಿಸಿದರು. ಅವರ ಹಿರಿಯ ಸಮಕಾಲೀನರಾದ ಮಂಡನಮಿಶ್ರ ಹಾಗೂ

ಅವರ ಅನುಯಾಯಿಗಳಾದ ಸುರೇಶ್ವರ ಮತ್ತು ವಾಚಸ್ಪತಿ ಮಿಶ್ರ ಮುಂತಾದವರು ವೇದಾಂತದ ಪ್ರಚಾರಕ್ಕೆ ತಮ್ಮ ಪಾಲಿನ ಕೊಡುಗೆಗಳನ್ನು ನೀಡಿದ್ದಾರೆ.

ತಮಿಳು ಸಾಹಿತ್ಯದ ಮೇಲೆ ವೇದಾಂತ ವಿಚಾರಗಳ ಪ್ರಭಾವ ಯಾವ ರೀತಿ ಆಗಿದೆಯೆಂಬ ವಿಷಯದ ಅಧ್ಯಯನ ಕುತೂಹಲಕಾರಿಯಾದುದು. ತಮಿಳು ಪರಂಪರೆಯಲ್ಲಿ ವೇದಾಂತ ತತ್ತ್ವವನ್ನು ಅದ್ವೈತ, ವೇದಾಂತ, ಮಾಯಾವಾದ, ಪ್ರತಿಬಿಂಬವಾದ ಹಾಗೂ ಶಂಕರ ಮತ ಎಂದು ನಾನಾ ವಿಧವಾಗಿ ತಿಳಿಯಲಾಗಿದೆ. ತಮಿಳು ಸಾಹಿತ್ಯದ ಮೇಲಾದ ಅದ್ವೈತ ವೇದಾಂತದ ಪ್ರಭಾವವನ್ನು ತಿಳಿಯಲು ಬಹಳಷ್ಟು ಮಾಹಿತಿಗಳು, ವಿಷಯಗಳು ದೊರೆಯುತ್ತವೆ. ಅದ್ವೈತ ತತ್ತ್ವಕ್ಕೆ ಸಂಬಂಧಿಸಿದಂತೆ ತಮಿಳಿನಲ್ಲಿ ದೊರೆಯುವ ವಿಚಾರಗಳು, ಆಕರಗಳು ವೈವಿಧ್ಯಮಯವಾಗಿವೆ. ಅದ್ವೈತ ವೇದಾಂತದ ಕುರಿತು ತಮಿಳಿನಲ್ಲಿ ಮೂಲ ಸ್ವಂತ ಕೃತಿಗಳಲ್ಲದೆ ಅವುಗಳನ್ನು ಕುರಿತು ಉತ್ತಮ ವ್ಯಾಖ್ಯಾನಗಳೂ ಇರುವುದು ಗಮನಾರ್ಹವಾಗಿದೆ. ಕ್ರಿ. ಶ. ೫೦೦ ರಿಂದ ೧೩೫೦ ರ ವರೆಗೆ ಬಂದ ತಮಿಳಿನ ತಾರ್ಕಿಕ ಬರಹಗಳಲ್ಲಿ ಮುಖ್ಯವಾಗಿ ಶೈವ ಭಕ್ತಿ ಸಾಹಿತ್ಯ ಹಾಗೂ ಶಾಸ್ತ್ರ ಕೃತಿಗಳಲ್ಲಿ ವೇದಾಂತ ವಿಚಾರಗಳಿಗೆ ಸಂಬಂಧಿಸಿದ ಸಾಕಷ್ಟು ಉಲ್ಲೇಖಗಳು ಇರುವುದು ಕಂಡುಬರುತ್ತದೆ. ಕಾರೈಕ್ಕಾಲ್ ಅಮ್ಮೈಯಾರ್ (ಕ್ರಿ. ಶ. ೫೦೦). ತಿರುಜ್ಞಾನ ಸಂಬಂಧರು (ಕ್ರಿ. ಶ. ೬೫೦), ತಿರುನಾವುಕ್ಕರಸರು (ಕ್ರಿ. ಶ. ೫೭೫ ರಿಂದ ೬೬೦), ಸುಂದರರು (ಕ್ರಿ. ಶ. ೭೧೦), ಮತ್ತು ಮಾಣಿಕ್ಕವಾಚಕರು (ಕ್ರಿ. ಶ. ೮೦೦) ರಚಿಸಿದ ಭಕ್ತಿಗೀತೆಗಳನ್ನೊಳಗೊಂಡ 'ತಿರುಮಂತಿರಂ'ನಲ್ಲಿ ಶೈವಭಕ್ತರ ದೃಷ್ಟಿಕೋನದಿಂದ ವೇದಾಂತದ ಸ್ಥಾನವನ್ನು ಕುರಿತು ಅಧ್ಯಯನ ಮಾಡಲು ಬಹಳಷ್ಟು ಮಾಹಿತಿಗಳು ದೊರೆಯುತ್ತವೆ. ಶಿವಜ್ಞಾನ ಸಿದ್ಧಿಯಾರರ (ಕ್ರಿ. ಶ. ೧೩೦೦) ಪರಪಕ್ಷ ಮಾತ್ರವಲ್ಲದೆ ತತ್ತ್ವಪ್ರಕಾಶಂ (ಕ್ರಿ. ಶ. ೧೪೦೦) ಮತ್ತು ಶಿವನೆರಿಪ್ರಕಾಶಂ (ಕ್ರಿ. ಶ. ೧೪೫೦) ಹಾಗೂ ಅವುಗಳ ವ್ಯಾಖ್ಯಾನಗಳಲ್ಲಿ ವೇದಾಂತಕ್ಕೆ ಸಂಬಂಧಿಸಿದ ಅನೇಕ ವಿಚಾರಗಳು ದೊರೆಯುತ್ತವೆ.

ತಮಿಳಿನ ಪ್ರಾಚೀನ ಬೌದ್ಧ ಮಹಾಕಾವ್ಯವಾದ ಮಣಿ ಮೇಖಲೈಯಲ್ಲಿ (ಕ್ರಿ. ಶ. ೪೫೦) ಶಂಕರಾಚಾರ್ಯರಿಗಿಂತಲೂ ಬಹಳ ಹಿಂದೆ ಇದ್ದ 'ವೇದಾಂತ ಸೂತ್ರ'ದ ಅತಿ ಪ್ರಾಚೀನ ವ್ಯಾಖ್ಯಾನಕಾರನೆನ್ನಿಸಿದ ಕೃತಕೋಟಿಯ ವ್ಯಾಖ್ಯಾನವನ್ನು ಕುರಿತ ಉಲ್ಲೇಖವಿದೆ. ಸಂತ ಅರುಣ ಗಿರಿನಾಥರ (ಕ್ರಿ. ಶ. ೧೪೦೦) ಗೀತೆಗಳಲ್ಲಿ ವೇದಾಂತದ ಪ್ರಭಾವವನ್ನು ಕಾಣಬಹುದು. ಇಂತಹ ವಿರಳ ಹಾಗೂ ಅಲ್ಲಲ್ಲಿ ಚದರಿ ಹೋಗಿರುವ ಅದ್ವೈತ ವಿಚಾರಗಳ ಹಾಗೂ ಪ್ರಾಚೀನ ಕಾವ್ಯಗಳಲ್ಲಿ ದೊರೆಯುವ ಉಲ್ಲೇಖಗಳ ಹೊರತಾಗಿ ವೇದಾಂತದ ಪ್ರಚಾರಕ್ಕೆಂದೇ ರಚಿತವಾದ ಕೆಲವು ಕೃತಿಗಳೂ ತಮಿಳಿನಲ್ಲಿವೆ. ತಿರುಮೂಲರ 'ತಿರುಮಂತಿರಂ' ಕೃತಿಯಲ್ಲಿ ಅದ್ವೈತವನ್ನು ಸಾಮಾನ್ಯವಾಗಿ ವೇದಾಂತವೆಂದು ಕರೆಯಲಾಗಿದೆ. ಒಂದು ಪದ್ಯದಲ್ಲಿ ಅದ್ವೈತವನ್ನು ವೇದಾಂತವೆಂದೂ ಮಾಯಾವಾದವೆಂದೂ ಹೇಳಲಾಗಿದೆ. ಶಂಕರಾಚಾರ್ಯರಿಗಿಂತ ಮೊದಲೇ ಬಂದ ಮಣಿಮೇಖಲೈ ಎಂಬ ತಮಿಳು ಮಹಾಕಾವ್ಯದಲ್ಲಿ ಅದ್ವೈತ ವೇದಾಂತದ ಪ್ರಭಾವವನ್ನು

ಗುರುತಿಸಬಹುದು. ವೇದಾಂತದ ವಿಚಾರಗಳನ್ನೂ ಭಾವನೆಗಳನ್ನೂ ಪ್ರಚಾರ ಮಾಡುವ ಉದ್ದೇಶದಿಂದ ತಮಿಳು ಹಾಗೂ ಸಂಸ್ಕೃತದಲ್ಲಿ ಪಾಂಡಿತ್ಯ ಹೊಂದಿದ್ದ ವೇದಾಂತ ತತ್ತ್ವಪ್ರತಿಪಾದಕರು ಸಂಸ್ಕೃತದಲ್ಲಿರುವ ಪ್ರಮುಖವಾದ ಅದ್ವೈತ ಕೃತಿಗಳನ್ನೂ ವ್ಯಾಖ್ಯಾನಗಳನ್ನೂ ತಮಿಳಿಗೆ ಅನುವಾದಿಸತೊಡಗಿದರು. ಕೆಲವರು ಅದ್ವೈತ ತತ್ತ್ವಗಳ ಕುರಿತು ಸ್ವಂತ ಕೃತಿಗಳನ್ನು ರಚಿಸುವುದರಲ್ಲಿ ಯಶಸ್ವಿಯಾದರು. ಆ ಮೂಲಕ ತಮಿಳು ಬಲ್ಲ ಸಾಮಾನ್ಯ ಜನರಿಗೆ ವೇದಾಂತದ ಮೂಲ ತತ್ತ್ವಗಳನ್ನು ತಿಳಿಯಲು ಸಾಧ್ಯವಾಯಿತು.

ಹದಿನಾಲ್ಕನೆಯ ಶತಮಾನದ ಕೊನೆ ಹಾಗೂ ಹದಿನೈದನೆಯ ಶತಮಾನದ ಆದಿಯಲ್ಲಿದ್ದ ತತ್ತುವರಾಯರು 'ಅಟಿಂಗಳ್ ಮುರೈ' ಎಂಬ ಹೆಸರಿನಲ್ಲಿ ಸಂಗ್ರಹಿಸಿದ ತಮ್ಮ ಹದಿನೆಂಟು ಸ್ವಂತ ಕೃತಿಗಳ ಮೂಲಕ ಅದ್ವೈತ ವೇದಾಂತದ ಪ್ರಚಾರಕ್ಕೆ ವಿಶೇಷ ಕೊಡುಗೆಯನ್ನಿತ್ತರು. ಅವರ ಕೃತಿಗಳಲ್ಲಿ 'ಅಜ್ಞವದೈಪ್ಪರಣಿ' ಮತ್ತು 'ಮೋಹವದೈಪ್ಪರಣಿ' ಎಂಬವು ಪ್ರಮುಖವಾಗಿವೆ. ಈ ಎರಡು ಕೃತಿಗಳಲ್ಲಿ ಅಜ್ಞಾನ ಹಾಗೂ ಭ್ರಾಂತಿಗಳ ನಾಶ. ಮಾಯೆಯನ್ನು ಜಯಿಸುವುದು ಮುಂತಾದ ತತ್ತ್ವಗಳು 'ಪರಣಿ' ಎನ್ನುವ ದೇಶೀ ಸಾಹಿತ್ಯರೂಪದಲ್ಲಿ ನಿರೂಪಿತವಾಗಿವೆ. ಅವರ 'ಪಾಡು ತುರೈ' ಎಂಬ ಕೃತಿಯೂ ಅದ್ವೈತಿಗಳ ಮೇಲೆ ವಿಶೇಷ ಪ್ರಭಾವವನ್ನು ಬೀರಿದೆ. ಅವರು ತಮಿಳಿಗೆ ಅನುವಾದಿಸಿದ ಸೂತ ಸಂಹಿತದ ಅನುವಾದವಾದ 'ಬ್ರಹ್ಮಗೀತ'ದಲ್ಲಿಯೂ ವೇದಾಂತದ ವಿಚಾರಗಳಿವೆ. 'ಈಶ್ವರ ಗೀತಾ' ಎನ್ನುವ ಅವರ ಇನ್ನೊಂದು ಅನುವಾದ ಕೃತಿಯು ತಮಿಳು ವೇದಾಂತದ ವ್ಯಾಖ್ಯಾನ ಗ್ರಂಥಗಳಲ್ಲಿ ಆಗಾಗ ಉಲ್ಲೇಖಿಸಲ್ಪಟ್ಟಿದೆ. 'ಕುರುಂತಿರಟ್ಟು' ಮತ್ತು 'ಪೆರುಂತಿರಟ್ಟು' ಎಂಬ ಕಾವ್ಯಸಂಗ್ರಹಗಳಲ್ಲಿ ತತ್ತುವರಾಯರು ರಚಿಸಿದ ವೇದಾಂತವನ್ನು ಕುರಿತ ಕವನಗಳಿವೆ.

ಅವರ ಬಳಿಕ ಬಂದ ತಾಂಡವರಾಯರು ರಚಿಸಿದ ಅತ್ಯಂತ ಪ್ರಸಿದ್ಧ ಕೃತಿಯಾದ 'ಕೈವಲ್ಯ ನವನೀತಂ'ಗೆ ಅನೇಕ ವಿದ್ವಾಂಸರು ವ್ಯಾಖ್ಯಾನವನ್ನು ಬರೆದಿದ್ದು ಅದು ತಮಿಳಿನಲ್ಲಿ ಅದ್ವೈತ ವೇದಾಂತವನ್ನು ಕುರಿತ ಪ್ರಭಾವಶಾಲಿ ಹಾಗೂ ಜನಪ್ರಿಯ ಕೃತಿಯೆಂದು ಪರಿಗಣಿಸಲ್ಪಟ್ಟಿದೆ. ತಾಂಡವರಾಯರು ಹದಿನಾರನೆಯ ಶತಮಾನದ ಕೊನೆಯಲ್ಲಿ ಜೀವಿಸಿದ್ದರು. ಅವರೊಬ್ಬ ದೊಡ್ಡ ಅನುಭಾವಿಯಾಗಿದ್ದರು. ಪ್ರಸ್ಥಾನತ್ರಯ ಹಾಗೂ ಅವುಗಳ ವ್ಯಾಖ್ಯಾನ ಮತ್ತು ಪ್ರಸಿದ್ಧ ವೇದಾಂತ ಕೃತಿಗಳ ಕುರಿತು ಅವರಿಗಿದ್ದ ಅಗಾಧ ಪಾಂಡಿತ್ಯವು ಅವರ ಕೃತಿಯ ಪ್ರತಿಯೊಂದು ಪದ್ಯದಲ್ಲಿಯೂ ಅಭಿವ್ಯಕ್ತವಾಗಿದೆ. ಈ ಕೃತಿಯು ಗುರುಶಿಷ್ಯರ ಸಂಭಾಷಣೆಯ ರೂಪದಲ್ಲಿದೆ. ಇದರಲ್ಲಿ "ತತ್ತುವವಿಳಕ್ಕಪ್ಪಟಲಂ' ಮತ್ತು 'ಸಂದೇಹಂ ತೆಳಿದಲ್ ಪಟಲಂ' ಎಂಬ ಎರಡು ಭಾಗಗಳಿವೆ. ಶಿಷ್ಯನ ಸಂದೇಹವನ್ನು ಸಂಪೂರ್ಣ ನಿವಾರಿಸಿ ಅದ್ವೈತ ಧರ್ಮದ ಮೂಲತತ್ತ್ವಗಳನ್ನು ಈ ಕೃತಿ ಸ್ಥಿರಗೊಳಿಸುತ್ತದೆ. ಕೃತಿಯಲ್ಲಿ ಒಟ್ಟು ೨೮೮ ಪದ್ಯಗಳಿವೆ. ಅವು ವೃತ್ತಛಂದಸ್ಸಿನಲ್ಲಿವೆ. ಭಾಷೆ ಸರಳ ಸುಂದರವಾಗಿದೆ. ಈ ಕೃತಿ ತೆಲುಗು, ಮಲಯಾಳ, ಸಂಸ್ಕೃತ ಹಾಗೂ ಜರ್ಮನ್ ಭಾಷೆಗಳಿಗೆ ಅನುವಾದಗೊಂಡಿದೆ. ಇದರಲ್ಲಿ ಅಪರೋಕ್ಷ ಜ್ಞಾನ ಹೊಂದುವುದರ ಹಾಗೂ ಅನುಭೂತಿಯ ಸ್ಥಿತಿಯನ್ನು ಪಡೆಯುವ

ಅಗತ್ಯವನ್ನು ಒತ್ತಿ ಹೇಳಲಾಗಿದೆ. ಜ್ಞಾನದ ವಿವಿಧ ಮೂಲಗಳನ್ನು ಅನುಭವ (ಬೋಧೆ), ಊಹೆ (ಅನುಮಾನ) ಮತ್ತು ಮಾತಿನ ಪ್ರಮಾಣ ಎಂದು ಮೂರು ವಿಚಾರಗಳಿಗೆ ಇಳಿಸಲಾಗಿದೆ. 'ಕೈವಲ್ಯ ನವನೀತಂ' ಅದ್ವೈತ ಸಿದ್ಧಾಂತವನ್ನು ಸುಂದರವಾದ ವೃತ್ತಗಳಲ್ಲಿ ಪ್ರಕಾಶಪಡಿಸುವ ಕೃತಿ. ತತ್ತ್ವ ವಿವರಣೆಯನ್ನೊಳಗೊಂಡ ಗ್ರಂಥವನ್ನು ಇಷ್ಟು ರಸವತ್ತಾಗಿ ರಚಿಸಲು ಸಾಧ್ಯವೇ ಎಂದು ಓದುಗರು ವಿಸ್ಮಯ ಪಡುವ ರೀತಿಯಲ್ಲಿ ಇದು ರಚಿತವಾಗಿದೆ. ಪದ್ಯಗಳು ಸುಲಭ ಶೈಲಿಯಲ್ಲಿವೆ. ಆತ್ಮನ ಪ್ರತ್ಯೇಕ ಐಕ್ಯವನ್ನು ವಿವರಿಸಿ ಬೆಳಗಿಸುವ ಬೆಣ್ಣೆಯೇ ಕೈವಲ್ಯ ನವನೀತ. ಉಪನಿಷತ್ತುಗಳು ಹಾಗೂ ಶಂಕರರು ಕೊಡುವ ವಿವರಣೆಗಳೆಂಬ ಹಾಲ್ಗಡಲನ್ನು ಕಡೆದು ತೆಗೆದ ಬೆಣ್ಣೆ ಇದು. ಯೋಗ್ಯ ರೀತಿಯಲ್ಲಿ ಮತತತ್ತ್ವಗಳನ್ನು ಬಹಳ ಸಂಗ್ರಹವಾಗಿ ಹಾಗೂ ಸ್ವಾರಸ್ಯಕರವಾಗಿ ಈ ಕೃತಿಯಲ್ಲಿ ನಿರೂಪಿಸಲಾಗಿದೆ. ಕೆಲವು ವೀರಶೈವ ವಿದ್ವಾಂಸರು ಅದ್ವೈತ ವೇದಾಂತದ ಅಧ್ಯಯನದಲ್ಲಿ ಆಸಕ್ತಿಯನ್ನು ತೋರಿದರು. ಶಾಂತಲಿಂಗ ಸ್ವಾಮಿಗಳ ಕೃತಿಗಳಲ್ಲಿ ಮುಖ್ಯವಾಗಿ ಅವಿರೊತ ಉಂದಿಯಾರ್. ವೈರಾಗ್ಯ ಶತಕಂ ಮತ್ತು ವೈರಾಗ್ಯ ದೀಪಂಗಳಲ್ಲಿ ಹಾಗೂ ತಿರುಪ್ಪೊರೂರ್ ಚಿದಂಬರ ಸ್ವಾಮಿಗಳ ಉತ್ತಮ ವ್ಯಾಖ್ಯಾನಗಳಲ್ಲಿ ಅದ್ವೈತ ತತ್ತ್ವದ ವಿಚಾರಗಳಿವೆ. ವೃದ್ಧಾಚಲಂ ವೀರಶೈವ ಮಠದ ಕುಮಾರದೇವರು ಬರೆದ ಹದಿನಾರು ಕೃತಿಗಳನ್ನು ಒಟ್ಟಾಗಿ 'ಶಾತ್ತಿರಕೋವೈ' ಎಂಬುದಾಗಿ ಕರೆಯುತ್ತಾರೆ. ಅವುಗಳಲ್ಲಿ 'ಮಹಾರಾಜಾ ತುರವು' ಎಂಬ ಕೃತಿಯನ್ನು ಅದ್ವೈತದ ವಿಚಾರಗಳನ್ನು ಸ್ಥಿರಗೊಳಿಸುವುದಕ್ಕಾಗಿ ವೇದಾಂತದ ವ್ಯಾಖ್ಯಾನಗಳಲ್ಲಿ ಬಹಳಷ್ಟು ಉಲ್ಲೇಖಿಸಲಾಗಿದೆ.

ಕ್ರಿ. ಶ. ೧೭೦೦ ರಲ್ಲಿದ್ದ ಮತ್ತೊಬ್ಬ ವೀರಶೈವ ಕವಿ ಶಿವಪ್ರಕಾಶರ್ ತಮ್ಮ ಪ್ರಸಿದ್ಧ ಕೃತಿಯಾದ 'ಪ್ರಭುಲಿಂಗ ಲೀಲೈ' ಮೂಲಕ ವೇದಾಂತದ ಬಗ್ಗೆ ತಮಗಿದ್ದ ಪಾಂಡಿತ್ಯವನ್ನು ಪ್ರಕಟಪಡಿಸಿದ್ದಾರೆ. ಕನ್ನಡದಲ್ಲಿ ಅವರಿಗಿದ್ದ ಪಾಂಡಿತ್ಯದಿಂದಾಗಿ ಪ್ರಭುಲಿಂಗಲೀಲೆಯನ್ನು ಕನ್ನಡದಿಂದ ತಮಿಳಿಗೆ ಅನುವಾದಿಸಲು ಅವರಿಗೆ ಸಾಧ್ಯವಾಯಿತು. ಅವರು ನಿಜಗುಣ ಶಿವಯೋಗಿಯ ವೇದಾಂತ ಚೂಡಾಮಣಿಯನ್ನು ಸುಂದರವಾದ ತಮಿಳಿನಲ್ಲಿ ಅನುವಾದಿಸಿದ್ದಾರೆ. ಕಣ್ಣುಡೈಯವಳ್ಳಲ್‌ರ 'ಒಳಿವಿಲ್ ಒಡುಕ್ಕಂ' ಎಂಬ ಕೃತಿಯನ್ನು ಕೂಡಾ (ಕ್ರಿ. ಶ. ೧೭೦೦) ಅದ್ವೈತ ವೇದಾಂತದ ಅಧಿಕೃತ ಕೃತಿಯೆಂದು ಪರಿಗಣಿಸಲಾಗಿದೆ.

ವೀರೈ ಆಳವಂದಾರ್ ಅವರ 'ಜ್ಞಾನವಾಸಿಷ್ಟಂ' ಹಾಗೂ ಪಿರಸೈ ಅರುಣಾಚಲ ಸ್ವಾಮಿಗಳು ಅದಕ್ಕೆ ಬರೆದ ವ್ಯಾಖ್ಯಾನ ಎರಡೂ ಗಮನಾರ್ಹ ಕೃತಿಗಳು. ಪಟ್ಟಿಣಾರ್ ಅವರು ಮಾಡಿದ ಭಗವದ್ಗೀತೆಯ ಅನುವಾದವು ೫೪೫ ತಮಿಳು ವೃತ್ತಗಳಿಂದ ಕೂಡಿದ್ದು ತಮಿಳಿನ ಅದ್ವೈತ ವೇದಾಂತದ ಚರಿತ್ರೆಯಲ್ಲಿ ಒಂದು ಮೈಲಿಗಲ್ಲಾಗಿದೆ. ಇದೊಂದು ಪ್ರಮುಖ ಘಟ್ಟವಾಗಿದೆ. ಅವರು ಸುಮಾರು ೩೦೦ ವರ್ಷಗಳ ಹಿಂದೆ ಜೀವಿಸಿರಬೇಕೆಂದು ತಿಳಿಯಲಾಗಿದೆ. ಪೊನ್ನಾಂಬಲ ಸ್ವಾಮಿಗಳು ಈ ಕೃತಿಗೆ ಉತ್ತಮ ವ್ಯಾಖ್ಯಾನವನ್ನು ರಚಿಸಿದ್ದಾರೆ. ಗದ್ಯಕೃತಿಗಳಲ್ಲಿ ಕಾಳಹಸ್ತಿಯ ಶೇಷಾದ್ರಿ ಶಿವಂ ಅವರ 'ನಾನಾ ಜೀವವಾದ ಕಟ್ಟಳೈ' ಎಂಬುದು ಗಮನಾರ್ಹವಾಗಿದೆ. ಅವರ ಕಾಲ ೧೭ನೆಯ ಶತಮಾನ. ಅವರು ವೇದಾಂತದ ಸಮರ್ಥ ಪ್ರತಿಪಾದಕರಾಗಿದ್ದರಲ್ಲದೆ ಅನೇಕ ಶಿಷ್ಯರಿಗೆ ಮಾರ್ಗದರ್ಶನ

ನೀಡಿದ್ದರು. ಅವರ ಕಟ್ಟಳೈ ಕೃತಿಯಲ್ಲಿ ಎಂಟು ಭಾಗಗಳಿವೆ. ಅದ್ವೈತಕ್ಕೆ ಸಂಬಂಧಪಟ್ಟ ಒಂದು ಸಾವಿರ ಪ್ರಶ್ನೆಗಳು ಹಾಗೂ ಅವುಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಅಗತ್ಯವಾದ ಉತ್ತರಗಳಿವೆ. ಈ ಕೃತಿಯನ್ನು ಅವರು ಮೊದಲು ಸಂಸ್ಕೃತದಲ್ಲಿ ಬರೆದರೆಂದೂ ಬಳಿಕ ಅವರ ಶಿಷ್ಯರಲ್ಲಿ ಒಬ್ಬರಾದ ನಾರಾಯಣ ಶಿವಂ ಎಂಬವರು ಅದನ್ನು ತಮಿಳಿಗೆ ಅನುವಾದಿಸಿದರೆಂದೂ ಹೇಳುತ್ತಾರೆ. ಏನೇ ಇದ್ದರೂ ಇದು ಅದ್ವೈತ ವೇದಾಂತಕ್ಕೆ ಸಂಬಂಧಿಸಿದ ಉತ್ತಮ ಕೃತಿಯೆನ್ನುವುದರಲ್ಲಿ ಸಂದೇಹವಿಲ್ಲ. ತಮಿಳು ವೃತ್ತಛಂದಸ್ಸಿನಲ್ಲಿ ರಚಿತವಾಗಿರುವ ವಿದ್ಯಾರಣ್ಯರ ಪಂಚದಶಿಯ ಅನುವಾದವೂ ಒಂದು ಶ್ರೇಷ್ಠ ಕೃತಿ. ಇದರಲ್ಲಿ ಮೂರು ಪಂಚಕಗಳು ಹಾಗೂ ಹದಿನೈದು ಪ್ರಕರಣಗಳಿವೆ. ವಿವೇಕ ಪಂಚಕ ಹಾಗೂ ದೀಪ ಪಂಚಕವನ್ನು ನಿತ್ಯಾನಂದ ಸ್ವಾಮಿಗಳೂ ಆನಂದ ಪಂಚಕವನ್ನು ವೀರಸುಬ್ಬಯ್ಯ ಸ್ವಾಮಿಗಳೂ ತಮಿಳಿಗೆ ಅನುವಾದಿಸಿದ್ದಾರೆ. ಇಡೀ ಕೃತಿಯಲ್ಲಿ ಒಟ್ಟು ೭೫೧ ಪದ್ಯಗಳಿವೆ. ಈ ಕೃತಿಗೆ ತಂಜಾವೂರಿನ ಸಮೀಪದ ಪುನವಾಸಲ್‌ನ ವೇದಾಂತ ಮಠದ ಮಹೇಶ್ವರಾನಂದಗಿರಿ ಎಂಬವರು ವ್ಯಾಖ್ಯಾನವನ್ನು ಬರೆದಿದ್ದಾರೆ.

೧೯೦೧ ರಲ್ಲಿ ತಂಜಾವೂರಿನ ಕುಪ್ಪುಸ್ವಾಮಿ ರಾಜು ಎಂಬವರು ನಿಶ್ಚಲಾನಂದರ 'ವೃತ್ತಿ ಪ್ರಭಾಕರಂ' (ಕ್ರಿ. ಶ. ೧೭೦೦) ಎಂಬ ಕೃತಿಯನ್ನು ತಮಿಳು ಗದ್ಯದಲ್ಲಿ ಅನುವಾದಿಸಿದ್ದಾರೆ. ಅವರು ಅದ್ವೈತಕ್ಕೆ ಸಂಬಂಧಿಸಿದ ಇನ್ನೂ ಕೆಲವು ಕೃತಿಗಳನ್ನು ಅನುವಾದಿಸಿದ್ದಾರೆ. ೧೯೦೬ ರಲ್ಲಿ ವಿ. ಎಸ್. ರಾಮಚಂದ್ರ ಶಾಸ್ತ್ರಿಯವರು ಮಧುಸೂದನ ಸರಸ್ವತಿಯವರ 'ಸಿದ್ಧಾಂತ ಬಿಂದು' ಎಂಬ ಕೃತಿಯನ್ನು ತಮಿಳಿಗೆ ಅನುವಾದಿಸಿದರು. ಇವರು ಅನೇಕ ಉಪನಿಷತ್ ಕೃತಿಗಳನ್ನು ತಮಿಳು ಗದ್ಯದಲ್ಲಿ ಅನುವಾದಿಸಿದ್ದಾರೆ. ಎ. ಶಿವರಾವ್ ಎಂಬವರು ತಮಿಳಿಗೆ ಅನುವಾದಿಸಿದ 'ವಿಚಾರ ಸಾಗರಂ' ಎಂಬ ಕೃತಿಯನ್ನು ತಂಜಾವೂರಿನ ವಿ. ಕುಪ್ಪುಸ್ವಾಮಿ ರಾಜು ಅವರು ಪರಿಷ್ಕರಿಸಿದ್ದಾರೆ. ಮಾತೈ ತಿರುವೆಂಕಟ ಸ್ವಾಮಿಗಳು ಪ್ರಬೋಧ ಚಂದ್ರೋದಯವನ್ನು ತಮಿಳು ಪದ್ಯದಲ್ಲಿ ಅನುವಾದಿಸಿದ್ದಾರೆ.

ವಡಿವೇಲು ಚೆಟ್ಟಿಯಾರ್ ತಮ್ಮ ಕೈವಲ್ಯ ನವನೀತಂನ ವ್ಯಾಖ್ಯಾನದಲ್ಲಿ ಅನೇಕ ತಮಿಳು ಅದ್ವೈತ ಗ್ರಂಥಗಳನ್ನು ಉಲ್ಲೇಖಿಸಿದ್ದಾರೆ. ಅವುಗಳಲ್ಲಿ 'ಅತ್ತುವಿತ ಉಣ್‌ಮೈ', ಅತಿರಹಸ್ಯಂ, ಅಪರೋಕ್ಷಾನುಭೂತಿ, ಅರಿವಾನಂದ ಸಿದ್ಧಿಯಾರ್. ಅಷ್ಟಾದಶರಹಸ್ಯಂಗಳ್ ಲಕ್ಷಣಾವೃತ್ತಿ, ಸಿದ್ಧಾಂತ ಶಿಖಾಮಣಿ, ಜೀವಜ್ಞಾನ ಪ್ರಕಾಶ ವೆಣ್‌ಪಾ, ಸ್ವರೂಪ ಸಾರಂ, ಮೋಕ್ಷ ಸಾಧನ ವಿಳಕ್ಕಂ. ರಿಪುಗೀತೈ ಮುಂತಾದುವು ಮುಖ್ಯವಾಗಿವೆ. ಈ ಕೃತಿಗಳು ಸುಮಾರು ೩೦೦ ವರ್ಷಗಳ ಹಿಂದೆ ರಚಿತವಾಗಿರಬೇಕೆಂದು ಹೇಳಲಾಗಿದೆ.

ಆಧುನಿಕ ತಮಿಳು ಸಾಹಿತಿಗಳಲ್ಲಿ ಭಗವಾನ್ ರಮಣರು ಅದ್ವಿತೀಯರು. ಅವರು ತಮ್ಮ ಅಮೂಲ್ಯ ಕೃತಿಗಳಾದ ಆತ್ಮಪೂತಂ, ನಾನ್‌ಯಾರ್, ಉಳ್ಳದು ನಾರ್ಪದು ಮುಂತಾದುವುಗಳ ಮೂಲಕ ತಮಿಳು ವೇದಾಂತ ಸಾಹಿತ್ಯವನ್ನು ಸಮೃದ್ಧಗೊಳಿಸಿದರು. ಕಳೆದ ಹಾಗೂ ಶತಮಾನದ ಕೆಲವು ಸೃಜನಶೀಲ ಬರಹಗಾರರು ತಮ್ಮ ಕೃತಿಗಳಲ್ಲಿ ಅದ್ವೈತ ವೇದಾಂತಕ್ಕೆ ಸಂಬಂಧಿಸಿದ ವಿಚಾರಗಳನ್ನು ಚಿತ್ರಿಸಲು ತುಂಬ ಆಸಕ್ತಿ ತೋರಿಸಿದುದು ಗಮನಾರ್ಹವಾಗಿದೆ. ಪ್ರೊ. ಪಿ. ಸುಂದರಂ ಪಿಳ್ಳೈ (೧೮೫೫–೧೮೯೭) ಎಂಬವರು

'ಮನೋನ್ಮಣೀಯಂ' ಎಂಬ ತಮ್ಮ ಪ್ರಸಿದ್ಧ ಗೀತನಾಟಕದಲ್ಲಿ ಪಾತ್ರಚಿತ್ರಣ ಹಾಗೂ ಕಥಾ ನಿರೂಪಣೆಗಳಲ್ಲಿ ಅದ್ವೈತ ವೇದಾಂತವನ್ನು ಸುಂದರವಾಗಿ ನಿರೂಪಿಸಿದ್ದಾರೆ. ಇಡೀ ನಾಟಕವು ವೇದಾಂತ ಚಿತ್ರಣದ ರೂಪಕವಾಗಿದೆ. ನಿಷ್ಠಾ ಬರರ್ ಎಂಬ ವಿಶಿಷ್ಟ ಪಾತ್ರದಲ್ಲಿ ಒಬ್ಬ ಸಮರ್ಥ ವೇದಾಂತ ಪ್ರತಿಪಾದಕನನ್ನು ಕಾಣಬಹುದು. ರಾಜಂ ಅಯ್ಯರ್ ಅವರ 'ಕಮಲಾಂಬಾಳ್ ಚರಿತ್ರಂ' ಎನ್ನುವ ತಮಿಳು ಸಾಮಾಜಿಕ ಕಾದಂಬರಿಯಲ್ಲಿ ವೇದಾಂತಕ್ಕೆ ಸಂಬಂಧಿಸಿದ ಕೆಲವು ವಿಚಾರ ಹಾಗೂ ಚಿಂತನೆಗಳಿರುವುದು ಗಮನಾರ್ಹವಾಗಿದೆ. ಮಹಾ ಕವಿ ಸುಬ್ರಹ್ಮಣ್ಯ ಭಾರತಿಯವರ ಕವಿತೆಗಳಲ್ಲಿ ವೇದಾಂತದ ವಿಚಾರಗಳು ಕಲಾತ್ಮಕವಾಗಿ ನಿರೂಪಿತವಾಗಿವೆ. ಅದ್ವೈತ ವೇದಾಂತದ ಬಗೆಗೆ ಅವರಿಗಿದ್ದ ನಿಶ್ಚಲವಾದ ಒಲವಿಗೆ ಅವರ ಪ್ರಬಂಧಗಳೂ ನಿದರ್ಶನಗಳಾಗಿವೆ. ಅವರು ಅದ್ವೈತದ ಕಟ್ಟಾ ಅನುಯಾಯಿ ಎಂಬುದು ಅವರ ಪ್ರಬಂಧ ಬರಹಗಳಲ್ಲಿ ಅಭಿವ್ಯಕ್ತವಾಗಿದೆ. ಅವರು ಪಾಂಡಿಚೇರಿಯಲ್ಲಿ ಅರವಿಂದರ ಜೊತೆ ಬಾಳಿದರೆಂಬುದು ಗಮನಾರ್ಹ. ಸುಬ್ರಹ್ಮಣ್ಯ ಭಾರತಿಯವರು ಆಶಾವಾದಿಯಾಗಿದ್ದರಲ್ಲದೆ ಸ್ವಾಮಿ ವಿವೇಕಾನಂದರಿಂದ ಅತ್ಯಂತ ಪ್ರಭಾವಿತರಾಗಿದ್ದರು. ಶುದ್ಧಾನಂದ ಭಾರತಿಯವರು ಇನ್ನೋರ್ವ ಬಹುಭಾಷಾ ಪಂಡಿತ ಹಾಗೂ ವೇದಾಂತದಲ್ಲಿ ನಂಬಿಕೆಯಿದ್ದ ಆಧುನಿಕ ತಮಿಳು ಕವಿ. ಅರವಿಂದರ ಹಾಗೂ ಸುಬ್ರಹ್ಮಣ್ಯ ಭಾರತಿಯವರ ಪ್ರಭಾವಕ್ಕೆ ಒಳಗಾದ ಇವರ ಕೃತಿಗಳಲ್ಲಿ ಅದ್ವೈತ ತತ್ತ್ವಗಳ ನೇರ ನಿರೂಪಣೆಯಿದೆ. ಇತ್ತೀಚಿನ ತಮಿಳು ಕಾದಂಬರಿಕಾರರಲ್ಲಿ ಜಯಕಾಂತನ್ ಅದ್ವೈತದ ಪ್ರಭಾವಕ್ಕೆ ಒಳಗಾದುದು ಕಂಡುಬರುತ್ತದೆ. ಅವರ ಜನಪ್ರಿಯ ಕಾದಂಬರಿಯಾದ 'ಒರು ಮನಿದನ್ ಒರು ವೀಡು ಒರು ಉಲಗಂ' (ಒಬ್ಬ ಮನುಷ್ಯ ಒಂದು ಮನೆ ಒಂದು ಲೋಕ) ಎಂಬುದರಲ್ಲಿ ವೇದಾಂತಕ್ಕೆ ಸಂಬಂಧಪಟ್ಟ ವಿಚಾರಗಳಿವೆ. ಆದರೆ ಅವರಿಗೆ ಅದ್ವೈತ ತತ್ತ್ವದಲ್ಲಿ ಆಳವಾದ ಜ್ಞಾನವಿದೆಯೋ ಎಂಬುದು ತಿಳಿದಿಲ್ಲ.

ತಮಿಳು ಸಾಹಿತ್ಯದ ಮೇಲೆ ಶಂಕರರ ಅದ್ವೈತ ಸಿದ್ಧಾಂತದ ಪ್ರಭಾವ ಎಂಬ ವಿಚಾರವನ್ನು ಗಮನಿಸಿದಾಗ ಕಂಡುಬರುವ ಪ್ರಮುಖ ಕೃತಿ ತಾಂಡವರಾಯರ ಕೈವಲ್ಯ ನವನೀತಂ. ಬ್ರಹ್ಮ. ಜೀವ. ಮಾಯಾ. ಜೀವನ್ಮುಕ್ತ ಹಾಗೂ ಆನಂದ ಮುಂತಾದ ವಿಚಾರಗಳು 'ಕೈವಲ್ಯ ನವನೀತಂ'ನಲ್ಲಿ ನಿರೂಪಿತವಾಗಿವೆ. ಸತ್. ಚಿತ್. ಆನಂದ ಎಂಬ ಮೂರು ಗುಣಗಳಿಂದ ಕೂಡಿರುವವನೆ ಬ್ರಹ್ಮ. 'ಕೈವಲ್ಯ ನವನೀತಂ'ನಲ್ಲಿ ಇದನ್ನು ವಿವರಿಸಲು ಎರಡು ಹೋಲಿಕೆಗಳನ್ನು ಕೊಡಲಾಗಿದೆ. ಶೈತ್ಯ. ದ್ರವತ್ವ ಮತ್ತು ಶುಭ್ರತ ನೀರಿನ ಗುಣ, ತೇಜಸ್ಸು. ಉಷ್ಣತೆ ಹಾಗೂ ಕೆಂಪಗಿರುವಿಕೆ ಬೆಂಕಿಯ ಗುಣ. ಹಾಗೆಯೇ ಸತ್ ಚಿತ್ ಆನಂದ ಬ್ರಹ್ಮನ ಗುಣ.

ಸಂತ ಅರುಣಗಿರಿ ಎಂಬವರು ಬ್ರಹ್ಮನನ್ನು ಕುರಿತ ನೇತಿ ನೇತಿ ಸಿದ್ಧಾಂತವನ್ನೇ ತಮ್ಮ 'ಕಂದರಲಂಕಾರಂ' ಎಂಬ ಕೃತಿಯಲ್ಲಿ ನಿರೂಪಿಸಿದ್ದಾರೆ. ಅವನು ಆಕಾಶವಲ್ಲ, ಗಾಳಿಯಲ್ಲ, ಬೆಂಕಿಯಲ್ಲ. ನೀರಲ್ಲ. ಭೂಮಿಯಲ್ಲ. ಅವನು ತಾನ್–ನಾನ್ ಎರಡೂ ಅಲ್ಲ. ಅವನು ನಿರಾಕಾರನೂ ಅಲ್ಲ. ಸಾಕಾರನೂ ಅಲ್ಲ. (ಸಶರೀರಿಯೂ ಅಲ್ಲ; ಅಶರೀರಿಯೂ ಅಲ್ಲ) ಈ ರೀತಿ ಉಪನಿಷತ್ತಿನ ತತ್ತ್ವವು ತಮಿಳು ಸಂತರ ಆಧ್ಯಾತ್ಮಿಕ ವಿಚಾರಗಳಲ್ಲಿ ಪ್ರಚುರಗೊಂಡಿವೆ.

ತಾಂಡವರಾಯರು ನೇತಿ ತತ್ತ್ವವನ್ನು ಉಪಯೋಗಿಸಿ ಬ್ರಹ್ಮನನ್ನು ತಿಳಿಯುವ ವಿಧಾನವನ್ನು ಒಂದು ಸುಂದರವಾದ ದೃಷ್ಟಾಂತದ ಮೂಲಕ ತಿಳಿಸಿದ್ದಾರೆ. ಆಗ ತಾನೇ ಮದುವೆಯಾದ ದಂಪತಿಗಳು ಸಂಭ್ರಮದ ಊರ ಜಾತ್ರೆಯನ್ನು ನೋಡಲು ಹೋಗುತ್ತಾರೆ. ಜನಜಂಗುಳಿ ವಿಪರೀತವಾಗಿತ್ತು. ತಿಕ್ಕಾಟ. ನೂಕು ನುಗ್ಗಲಿನ ಮಧ್ಯೆ ಗಂಡ ಹೆಂಡತಿ ಬೇರೆ ಬೇರೆಯಾದರು. ಗಂಡನನ್ನು ಪಡೆಯಲು ಪ್ರಯತ್ನಿಸಿದ ಹೆಂಡತಿ ಎಲ್ಲರಲ್ಲೂ ಸಹಾಯಕ್ಕಾಗಿ ಮೊರೆಯಿಟ್ಟಳು. ಆಗ ಅವಳಿಗೆ ಯೋಗ್ಯ ಯುವಕರಲ್ಲಿ ಒಬ್ಬೊಬ್ಬರನ್ನು ತೋರಿಸಿ ಈತ ನಿನ್ನ ಪತಿಯೇ ಎಂದು ಕೇಳಲಾಯಿತು. ಆಗ ಆಕೆ ಈತನಲ್ಲ, ಇವನಲ್ಲ ಎನ್ನುತ್ತಾಳೆ. ಕೊನೆಗೆ ತನ್ನ ಪತಿಯೇ ಎದುರಿಗೆ ಬಂದಾಗ ಅವಳ ಮುಖ ಕೆಂಪಾಗುತ್ತದೆ. ಅವಳು ಏನೂ ಹೇಳದೆ ಮೌನ ತಾಳುತ್ತಾಳೆ. ಈ ರೀತಿಯಲ್ಲಿ ಮಾಯೆಯ ಪ್ರತಿಯೊಂದು ಅಂಶವನ್ನೂ ತೊರೆಯುತ್ತಾ ಬಂದಾಗ ಉಳಿಯುವುದೇ ಬ್ರಹ್ಮ–ದೊಡ್ಡದೊಂದು ಮೌನ. ತಮಿಳಿನಲ್ಲಿ 'ಮೌನವೇ ದಿವ್ಯಜ್ಞಾನದ ಮೇಲಿನ ಸೀಮೆ' ಎಂಬ ಮಾತಿದೆ (Silence is the upper limit of supreme knowledge).

ಬ್ರಹ್ಮನನ್ನು ತಿರುಮೂಲರು 'ನಿರ್ಗುಣನ್' ಎಂದು ಪರಿಗಣಿಸುತ್ತಾರೆ. ಸತ್–ಚಿತ್–ಆನಂದಗಳ ವಿವರಣೆಯೂ ಇವರ ಕೃತಿಯಲ್ಲಿದೆ. ಸಚ್ಚಿದಾನಂದ ಸ್ವರೂಪನಾದ ಬ್ರಹ್ಮನು ಒಬ್ಬನೇ. ಅವನೇ ಎಲ್ಲವೂ ಎಂಬುದನ್ನು ಪರಂಪರಾಗತ ವಿಧಾನಗಳಾದ ಶ್ರುತಿ. ಯುಕ್ತಿ ಮತ್ತು ಅನುಭವಗಳ ಮೂಲಕ ತಿಳಿಯಬಹುದೆಂಬುದನ್ನು ಇದರಲ್ಲಿ ತಿಳಿಸಲಾಗಿದೆ. ತಾಂಡವರಾಯರು ವೇದಾಂತ ಕೃತಿಗಳು ಹಾಗೂ ಅವುಗಳ ವ್ಯಾಖ್ಯಾನಗಳ ಕುರಿತು ತಮಗಿರುವ ಅದ್ಭುತ ಪಾಂಡಿತ್ಯದಿಂದ ಬ್ರಹ್ಮ ಮತ್ತು ಆತ್ಮನ ಐಕ್ಯವನ್ನು ಲಕ್ಷಣತ್ರಯಗಳ ಮೂಲಕ ನಿರೂಪಿಸಿದ್ದಾನೆ. ಬ್ರಹ್ಮ ಮತ್ತು ಆತ್ಮನ ಸಂಬಂಧವನ್ನು (ತತ್ ಮತ್ತು ತ್ವಂ–ಈಶ್ವರ ಮತ್ತು ಜೀವ) ಚೆನ್ನಾಗಿ ವಿವರಿಸಿದ್ದಾರೆ. "ಬ್ರಹ್ಮನು ಜೀವಗಳಲ್ಲಿ ಸೇರಿದ್ದಾನೆ. ಶರೀರವೇ ಆತ್ಮವಲ್ಲ. ಪ್ರಾಣವಾಯುವೇ ಆತ್ಮನಲ್ಲ. ಮನಸ್ಸು ಆತ್ಮನಲ್ಲ. ಬುದ್ಧಿ ಅಥವಾ ವಿಜ್ಞಾನಮಯ ಕೋಶ ಆತ್ಮನಲ್ಲ. ಆನಂದಮಯ ಕೋಶ ಆತ್ಮನಲ್ಲ. ಇವು ಮಾಯೆ ಅಥವಾ ಅವಿದ್ಯೆಯಿಂದ ಜನಿಸಿದುವು. ಇವೆಲ್ಲವೂ ಸೇರಿದರೂ ಆತ್ಮವಾಗುವದಿಲ್ಲ. ಆತ್ಮನು ಸಮ. ಸ್ಥಿರ. ಸಾಕ್ಷಿ. ಏಕ, ನಿತ್ಯ ಹಾಗೂ ವ್ಯಾಪಿ" ಎಂದು ತಾಂಡವರಾಯರು ವಿವರಿಸುತ್ತಾರೆ. ಜೀವ ಮತ್ತು ಈಶ್ವರರೊಳಗಿನ ವ್ಯತ್ಯಾಸದ ನಿರೂಪಣೆ ಕೈವಲ್ಯ ನವನೀತದಲ್ಲಿದೆ. ಜೀವಕ್ಕೆ ಮೋಹ (attachment) ವಿದೆ. ಈಶ್ವರನಿಗೆ ಮೋಹವಿಲ್ಲ. ಈಶ್ವರನು ಸರ್ವರಿಗೂ ಸಮಾನನಾದರೂ ಉತ್ತಮರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಎಲ್ಲಾ ಫಲಗಳನ್ನೂ ನೀಡುತ್ತಾನೆ. ಅವರ ಮೇಲೆ ಕರುಣೆ ತೋರಿಸುತ್ತಾನೆ. ಇದನ್ನು ತಮಿಳಿನಲ್ಲಿ 'ಅರಕ್ಕರುಣೈ' ಎನ್ನಲಾಗಿದೆ. ದುಷ್ಟರನ್ನು ಈಶ್ವರನು ಶಿಕ್ಷಿಸುತ್ತಾನೆ. ಅವರಿಗೆ ದುಃಖ. ಬಡತನವನ್ನು ನೀಡುತ್ತಾನೆ. ಇದನ್ನು ತಮಿಳಿನಲ್ಲಿ 'ಮರಕ್ಕರುಣೈ' ಎನ್ನಲಾಗಿದೆ.

ಜೀವಾತ್ಮನನ್ನು ಕುರಿತ ಮುಪ್ಪುರಿ ತತ್ತ್ವಗಳಾದ (Three fold theories) ಅವಚ್ಛೇದವಾದ (Theory of limitation), ಬಿಂಬ ಪ್ರತಿಬಿಂಬವಾದ (Reflection

Theory) ಮತ್ತು ಆಭಾಸವಾದ (Semblance Theory) ವನ್ನು ತಾಂಡವರಾಯರು ಕೈವಲ್ಯ ನವನೀತದಲ್ಲಿ ವಿವರಿಸಿದ್ದಾರೆ. ಆತ್ಮನ ಬಗೆಗಳಾದ ಗೌಣಾತ್ಮನ್. ಮಿಥ್ಯಾತ್ಮನ್, ಕರ್ತಾತ್ಮನ್ ಹಾಗೂ ಮುಖ್ಯಾತ್ಮನ್ ಕುರಿತು, ಮಾಯೆಯು ಕುರಿತು, ಸೂಕ್ಷ್ಮರೂಪ ಸ್ಥೂಲರೂಪಗಳ ಕುರಿತು ಹಾಗೂ ಆವರಣ ಶಕ್ತಿಯ ಪಾತ್ರವೇನೆಂಬುದರ ಬಗ್ಗೆ. ಏಳು ರೀತಿಯ ಅವಸ್ಥೆಗಳ ಬಗ್ಗೆ ಮುಕ್ತಿ ಅಥವಾ ಬಿಡುಗಡೆಯ ಬಗ್ಗೆ ಸಾಧನ ಚತುಷ್ಟಯಗಳ ಬಗ್ಗೆ. ವಿವೇಕ, ನಿರಾಶೆಗಳ ಬಗ್ಗೆ, ಸಮ. ದಮ, ಉಪರತಿ, ತಿತೀಕ್ಷಾ, ಸಮಾಧಿ ಹಾಗೂ ಶ್ರದ್ಧಾ ಎಂಬ ಆರು ನೀತಿ ಸಂಹಿತೆಗಳ ಬಗ್ಗೆ, ಮುಮುಕ್ಷುತ್ವ, ವೈರಾಗ್ಯ ಮತ್ತು ಜೀವನ್ಮುಕ್ತರ ಕುರಿತು, ಬ್ರಹ್ಮವಿದರ ಕುರಿತು, ಏಳು ರೀತಿಯ ಅಜ್ಞಾನ ಭೂಮಿ ಹಾಗೂ ಏಳು ರೀತಿಯ ಜ್ಞಾನ ಭೂಮಿಗಳ ಬಗ್ಗೆ ಎಂಟು ರೀತಿಯ ಆನಂದದ ಮೆಟ್ಟಿಲುಗಳಾದ ವಿಷಯ ಸುಖ, ಬ್ರಹ್ಮ ಸುಖ. ವಾಸನಾ ಸುಖ. ಆತ್ಮ ಸುಖ, ಮುಖ್ಯ ಸುಖ, ನಿಜಸುಖ. ಅದ್ವೈತ ಸುಖ ಹಾಗೂ ಜ್ಞಾನ ಸುಖಗಳ ಬಗ್ಗೆ ಕೈವಲ್ಯ ನವನೀತದಲ್ಲಿ ತಾಂಡವರಾಯರು ವಿವರವಾಗಿ ವಿಶ್ಲೇಷಿಸಿದ್ದಾರೆ.

ಮಾನವನ ಅತ್ಯುಚ್ಚ ಧ್ಯೇಯ ಅಥವಾ ಪರಮಪುರುಷಾರ್ಥವಾದ ಮುಕ್ತಿ ಅಥವಾ ಮೋಕ್ಷದ ಕುರಿತು ವೇದಾಂತವನ್ನೊಳಗೊಂಡ ತಮಿಳು ಕೃತಿಗಳಲ್ಲಿ ಸುಂದರವಾಗಿ ನಿರೂಪಿತವಾಗಿದೆ.

ತಮಿಳು ಸಾಹಿತ್ಯದ ಮೇಲೆ ಶಂಕರರ ಅದ್ವೈತದ ಪ್ರಭಾವ ಎನ್ನುವ ವಿಚಾರವನ್ನು ಪರಿಶೀಲಿಸಿದಾಗ ಈ ಕೆಳಗಿನ ಅಂಶಗಳನ್ನು ಗಮನಿಸಬಹುದು –

ಎಲ್ಲಾ ಭಾಷೆಗಳ ಸಾಹಿತ್ಯದ ಮೇಲೆ ಆದಂತೆ ತಮಿಳು ಸಾಹಿತ್ಯದ ಮೇಲೂ ಶಂಕರರ ಅದ್ವೈತದ ಪ್ರಭಾವ ಗಮನಾರ್ಹವಾಗಿ ಆಗಿರುವುದು ಕಂಡುಬರುತ್ತದೆ. ಅದ್ವೈತ ವೇದಾಂತಕ್ಕೆ ಸಂಬಂಧಪಟ್ಟ ಹಲವಾರು ಅನುವಾದ ಕೃತಿಗಳು ಹಾಗೂ ಅನೇಕ ಸ್ವಂತ ಕೃತಿಗಳು ತಮಿಳಿನಲ್ಲಿ ರಚಿತವಾಗಿವೆ. ಮುಖ್ಯವಾಗಿ ಕೈವಲ್ಯ ನವನೀತಂ ಎಂಬ ಕೃತಿ ತಾಂಡವರಾಯರಿಂದ ರಚಿತವಾಗಿದ್ದು ಅದ್ವೈತ ಸಿದ್ಧಾಂತವನ್ನು ಮುಖ್ಯವಾಗಿ ಪ್ರತಿಪಾದಿಸುತ್ತದೆ. ಧಾರ್ಮಿಕ ಕ್ಷೇತ್ರದಲ್ಲಿ ನೋಡಿದಾಗ ಅನೇಕ ಸಂಸ್ಥೆಗಳು, ಮಠಗಳು ಶಂಕರಾಚಾರ್ಯರ ಬೋಧನೆಗಳನ್ನು ತತ್ವಗಳನ್ನು ಅನುಸರಿಸುವುದು ಕಂಡುಬರುತ್ತದೆ. ಉದಾಹರಣೆಗೆ ಸನ್ಮತದ ಅನುಸರಣೆಯು ತಮಿಳುನಾಡಿನಲ್ಲಿ ಅತ್ಯಂತ ಜನಪ್ರಿಯವಾಗಿದೆ. ಆಧುನಿಕ ಸಂಸ್ಥೆಗಳೂ ಇದಕ್ಕೆ ಹೊರತಲ್ಲವೆಂಬುದು ತಿಳಿಯುತ್ತದೆ. ಒಟ್ಟಿನಲ್ಲಿ ತಮಿಳು ಸಾಹಿತ್ಯದ ಮೇಲಾದ ಅದ್ವೈತ ತತ್ವದ ಪ್ರಭಾವವನ್ನು ಕುರಿತು ವಿವೇಚಿಸಿದಾಗ ತಿಳಿದು ಬರುವ ಮುಖ್ಯಾಂಶಗಳನ್ನು ಈ ರೀತಿ ಸಂಗ್ರಹಿಸಬಹುದು.

೧. ಶಂಕರಾಚಾರ್ಯರಿಗಿಂತ ಮೊದಲೇ ತಮಿಳುನಾಡಿನಲ್ಲಿ ಅದ್ವೈತ ತತ್ವ ಪ್ರಚಾರದಲ್ಲಿತ್ತು.

೨. 'ಮಣಿ ಮೇಖಲೈ' ಎಂಬ ತಮಿಳಿನ ಬೌದ್ಧ ಮಹಾಕಾವ್ಯದಲ್ಲಿ ಬ್ರಹ್ಮಸೂತ್ರದ ಪ್ರಾಚೀನ ವ್ಯಾಖ್ಯಾನಕಾರರಲ್ಲಿ ಒಬ್ಬರಾದ ಕೃತಕೋಟಿಯ ಬಗ್ಗೆ (ಕ್ರಿ. ಶ. ೫೦೦)

ಉಲ್ಲೇಖವಿದೆ. ಅವರು ಎಂಟು ಪ್ರಮಾಣಗಳೇ ಜ್ಞಾನದ ಮೂಲಗಳೆಂದು ಪ್ರಚಾರ ಮಾಡಿದ್ದಾರೆ.

೩. ವೇದಾಂತ ಮತ್ತು ಮಾಯಾವಾದ ಎಂಬ ಪದಗಳನ್ನು ಪ್ರಾಚೀನ ತಮಿಳು ಕಾವ್ಯಗಳಲ್ಲಿ ವೇದಾಂತಕ್ಕೆ ಬದಲಾಗಿ ಬಳಸಲಾಗಿದೆ.

೪. ತಿರುಮೂಲರ 'ತಿರುಮಂತಿರಂ' ಅನ್ನು (ಕ್ರಿ. ಶ. ೫೦೦) ಶೈವ ಸಿದ್ಧಾಂತದ ಪ್ರಾಚೀನ ಮೂಲಗ್ರಂಥವೆಂದು ಪರಿಗಣಿಸಲಾಗಿದೆ. ಇದರಲ್ಲಿ ವೇದಾಂತದ ಮೂಲಭೂತ ತತ್ತ್ವಗಳಿವೆ.

೫. ಮಹಾಕಾವ್ಯವನ್ನು ತಮಿಳಿನಲ್ಲಿ 'ಪೇರುರೈ' ಎಂದು ಅನುವಾದ ಮಾಡಲಾಗಿದೆ ಹಾಗೂ ಅದರ ಪ್ರಾಧಾನ್ಯದ ಬಗ್ಗೆ ತಿಳಿಸಲಾಗಿದ್ದು ತಿರುಮಂತಿರಂನಲ್ಲಿರುವ ಲಕ್ಷಣ ತ್ರಯವೆಂಬ ತಂತ್ರವನ್ನು ಬಳಸಲಾಗಿದೆ.

೬. ಕಾರೈಕ್ಕಾಲ್ ಅಮ್ಮೈಯಾರ್ (ಕ್ರಿ. ಶ. ೫೦೦) ತ್ರಿಪುಟಿ-ಜ್ಞಾನದ ತತ್ತ್ವವನ್ನು ಶಿವನನ್ನು ಸಂಬೋಧಿಸಿದ ಒಂದು ಸ್ತೋತ್ರಗೀತೆಯಲ್ಲಿ ಅಭಿವ್ಯಕ್ತಪಡಿಸಿದ್ದಾಳೆ.

೭. ತಿರುಜ್ಞಾನ ಸಂಬಂಧರ್ (ಕ್ರಿ. ಶ. ೬೫೦) ಅಪ್ಪರ್ (ಕ್ರಿ. ಶ. ೬೫೦) ಸುಂದರರ್ (ಕ್ರಿ. ಶ. ೭೧೦) ಮತ್ತು ಮಾಣಿಕ್ಕವಾಚಕರ (ಕ್ರಿ. ಶ. ೮೦೦) ಸ್ತೋತ್ರಗೀತೆಗಳಲ್ಲಿ ವೇದಾಂತದ ವಿಚಾರಗಳು ಸ್ಪಷ್ಟವಾಗಿ ಅಭಿವ್ಯಕ್ತವಾಗಿವೆ.

೮. ಶಂಕರಾಚಾರ್ಯರ ಬಳಿಕ ಬಂದ ಶೈವ ಶಾಸ್ತ್ರಗ್ರಂಥಗಳಾದ ಶಿವಜ್ಞಾನ ಸಿದ್ಧಿಯಾರ್. ತತ್ತ್ವ ಪ್ರಕಾಶಂ ಶಿವನೆರಿ ಪ್ರಕಾಶಂ (ಕ್ರಿ. ಶ. ೧೩೦೦-೧೪೫೦) ಮುಂತಾದುವುಗಳಲ್ಲಿ ವೇದಾಂತದ ವಿಚಾರಗಳಿವೆ.

೯. ತಮಿಳಿನಲ್ಲಿರುವ ವೇದಾಂತದ ಕೃತಿಗಳಲ್ಲಿ ತಾಂಡವರಾಯರ 'ಕೈವಲ್ಯ ನವನೀತಂ' ಪ್ರಥಮ ಸ್ಥಾನ ಪಡೆಯುತ್ತದೆ.

೧೦. ಕೈವಲ್ಯ ನವನೀತಂನಲ್ಲಿ ದೊರೆಯುವ ಪೂರ್ಣವನ್ನು ನಿರ್ದೇಶಿಸುವ ಗುಣಧರ್ಮ ಹಾಗೂ ಉಪಾಧಿಗಳ ಸಕಾರಾತ್ಮಕ ಅಥವಾ ನಕಾರಾತ್ಮಕ ಭಾವಗಳಲ್ಲಿ ಬ್ರಹ್ಮನ ಸಹಜ ಸ್ವಭಾವದ ಅಭಿವ್ಯಕ್ತಿಯಿದೆ.

೧೧. ಸತ್‌ಚಿತ್ ಆನಂದದ ಐಕ್ಯವನ್ನು ನಿರೂಪಿಸಲು ಕೈವಲ್ಯ ನವನೀತಂನಲ್ಲಿ ಬಳಸಿದ ವಿಧಾನವು ಲೇಖಕರ ಪ್ರತಿಭೆಗೆ ಸಾಕ್ಷಿಯಾಗಿದೆ.

೧೨. ಆತ್ಮ ಶೋಧನೆಯ ವಿಧಾನವು ಕೈವಲ್ಯ ನವನೀತಂನಲ್ಲಿ ಚೆನ್ನಾಗಿ ನಿರೂಪಿತವಾಗಿದೆ.

೧೩. ಅದರಲ್ಲಿ ಜೀವಾತ್ಮನನ್ನು ಕುರಿತ ಮುಪ್ಪುರಿಯ ತತ್ತ್ವಗಳಿವೆ.

೧೪. ವಿವಿಧ ರೀತಿಯ ಆತ್ಮಗಳನ್ನು ಕುರಿತ ನಿರೂಪಣೆಯಲ್ಲಿ ತಾಂಡವರಾಯರು ಪಂಚದಶಿಯನ್ನು ಅನುಸರಿಸಿದ್ದಾರೆ.

೧೫. ಕೈವಲ್ಯ ನವನೀತಂನಲ್ಲಿ ಬರುವ ಅದ್ವೈತವನ್ನು ಕುರಿತ ವಿಶ್ಲೇಷಣೆಯಲ್ಲಿ ಮಾಯೆಯ ತತ್ತ್ವವು ಪ್ರಮುಖ ಸ್ಥಾನವನ್ನು ಪಡೆದಿದೆ.

೧೬. ಮಾಯೆಯ ಶಕ್ತಿಗಳಾದ ಆವರಣ ಮತ್ತು ವಿಕ್ಷೇಪಗಳ ವಿವರ ಹಾಗೂ ಈ ಭೌತಿಕ ಜಗತ್ತಿನಲ್ಲಿ ಅವುಗಳ ಪಾತ್ರವೇನು ಎಂಬ ವಿಚಾರ ಕೈವಲ್ಯ ನವನೀತಂನಲ್ಲಿ ಚೆನ್ನಾಗಿ ನಿರೂಪಿತವಾಗಿದೆ.

೧೭. ಶಂಕರಾಚಾರ್ಯರ ಕಾಲದಲ್ಲಿ ಇಲ್ಲದ ಪಂಚೀಕರಣ ತತ್ವವು ಈ ಕೃತಿಯಲ್ಲಿ ನಿರೂಪಿತವಾಗಿದೆ.

೧೮. ಮುಕ್ತಿಯ ಮಾರ್ಗದಲ್ಲಿ ಬೋಧಕರ. ಉಪದೇಶಕರ ಪಾತ್ರವು ಪ್ರಮುಖ ಸ್ಥಾನ ಪಡೆಯುತ್ತದೆ.

೧೯. ಮುಮುಕ್ಷುವಿನ ಆಧ್ಯಾತ್ಮಿಕ ಪ್ರಗತಿಗೆ ಸಾಧನ ಚತುಷ್ಟಯಗಳು ಮೂಲ ನೀತಿಶಾಸ್ತ್ರ ಅಥವಾ ಧರ್ಮಸಿದ್ಧಾಂತಗಳಾಗಿವೆ.

೨೦. ಆಧ್ಯಾತ್ಮಿಕ ಪ್ರಗತಿಗೆ ವೈರಾಗ್ಯವೇ ಮುಖ್ಯವೆಂದು ಒತ್ತಿ ಹೇಳಲಾಗಿದೆ.

೨೧. ಆತ್ಮ ಪರಮಾತ್ಮ ಒಂದಾಗುವುದನ್ನು ಅರಿತುಕೊಳ್ಳುವುದೇ ಜೀವನದ ಪರಮೋಚ್ಚ ಗುರಿ.

೨೨. ತಾಂಡವರಾಯರು ನಾಲ್ಕು ರೀತಿಯ ಜೀವನ್ಮುಕ್ತರು ಹಾಗೂ ಅವರ ವಿಶಿಷ್ಟ ಗುಣಗಳನ್ನು ಕುರಿತು ತಮ್ಮ ಕೃತಿಯಲ್ಲಿ ವಿವರವಾಗಿ ನಿರೂಪಿಸಿದ್ದಾರೆ.

೨೩. ಕೈವಲ್ಯ ನವನೀತಂನಲ್ಲಿ ಅಜ್ಞಾನದ ಏಳು ಹಂತಗಳನ್ನು ಹಾಗೂ ಏಳು ರೀತಿಯ ಜ್ಞಾನ ಭೂಮಿಗಳನ್ನು ವಿವರಿಸಲಾಗಿದೆ.

೨೪. ಪಂಚದಶಿಯನ್ನು ಅನುಸರಿಸಿದ ತಾಂಡವರಾಯರು ಎಂಟು ರೀತಿಯ ಆನಂದವನ್ನು ಗುರುತಿಸಿ ಅವುಗಳಲ್ಲಿ ಅದ್ವೈತ ಸುಖ ಹಾಗೂ ಜ್ಞಾನ ಸುಖಗಳನ್ನು ಬ್ರಹ್ಮಾನಂದವೆಂದು ಗುರುತಿಸಿದ್ದಾರೆ.

೨೫. ಅದ್ವೈತ ವೇದಾಂತವು ತಮಿಳು ಸೃಜನಶೀಲ ಬರಹಗಾರರ ಮೇಲೆ ಸಾಕಷ್ಟು ಪ್ರಭಾವವನ್ನುಂಟು ಮಾಡಿದೆ. ಅದ್ವೈತ ವೇದಾಂತದ ಪ್ರಭಾವಕ್ಕೆ ಒಳಗಾದ ಆಧುನಿಕ ಬರಹಗಾರರಲ್ಲಿ ಸುಂದರಂ ಪಿಳ್ಳೈ ಹಾಗೂ ಸುಬ್ರಹ್ಮಣ್ಯ ಭಾರತಿ ಅತ್ಯಂತ ಪ್ರಮುಖರು.

## ಅದ್ವೈತ ವೇದಾಂತ ತತ್ವಗಳನ್ನೊಳಗೊಂಡ ತಮಿಳು ಕೃತಿಗಳು

೧. ಶಿವಜ್ಞಾನ ಸಿದ್ಧಿಯಾರ್ – ಅರುಳ್‌ನಂದಿಶಿವಂ
೨. ತಿರುಪ್ಪುಗಳ್ – ಅರುಣ ಗಿರಿನಾಥರ್
೩. ಮಣಿಮೇಖಲೈ – ಚಾತ್ರನಾರ್
೪. ತಮಿಳು ಗದ್ಯದಲ್ಲಿ ವೃತ್ತಿಪ್ರಭಾಕರಂ – ವಿ. ಕುಪ್ಪುಸ್ವಾಮಿರಾಜು
೫. ತಿರುವಾಚಕಂ – ಮಾಣಿಕ್ಕ ವಾಚಕರ್
೬. ಸ್ವಾನುಭವ ತಿರಟ್ಟು – ಮುತ್ತು ರಾಮಲಿಂಗ ಸ್ವಾಮಿಗಳ್

೭. ತಮಿಳು ಗದ್ಯದಲ್ಲಿ ಪಂಚದಶಿ – ನಿತ್ಯಾನಂದ ಸ್ವಾಮಿಗಳು ಹಾಗೂ ಸುಬ್ಬಯ್ಯ ಸ್ವಾಮಿಗಳು
೮. ಪರಮಾರ್ಥದರಿಶನಂ (ತಮಿಳು ಪದ್ಯದಲ್ಲಿ ಭಗವದ್ಗೀತೆ) – ಪಟ್ಟಿಣಾರ್
೯. ಪದಿನೊರಾಂ ತಿರುಮುರೈ
೧೦. ತಿರುವಿಳ್ಳೆಯಾಡಲ್ ಪುರಾಣಂ – ಪರಂಜ್ಯೋತಿ ಮುನಿವರ್
೧೧. ತಮಿಳು ಗದ್ಯದಲ್ಲಿ ಸಿದ್ಧಾಂತಬಿಂದು – ರಾಮಚಂದ್ರ ಶಾಸ್ತ್ರಿ ವಿ. ಎಸ್.
೧೨. ಅವಿರೋತ ಉಂತಿಯಾರ್ (ವ್ಯಾಖ್ಯಾನ ಸಹಿತ) – ಶಾಂತಲಿಂಗರ್
೧೩. ವೈರಾಗ್ಯ ದೀಪಂ (ವ್ಯಾಖ್ಯಾನ ಸಹಿತ) – ಶಾಂತಲಿಂಗರ್
೧೪. ಪೆರಿಯ ಪುರಾಣಂ – ಶೇಕ್ಕಿಳಾರ್
೧೫. ನಾನಾ ಜೀವವಾದ ಕಟ್ಟಳೈ (ವ್ಯಾಖ್ಯಾನ ಸಹಿತ) – ಶೇಷಾದ್ರಿ ಶಿವಜ್ಞರ್
೧೬. ಪ್ರಭುಲಿಂಗ ಲೀಲೈ – ಶಿವಪ್ರಕಾಶರ್
೧೭. ವೇದಾಂತ ಚೂಡಾಮಣಿ (ತಮಿಳು ಗದ್ಯದಲ್ಲಿ) – ಶಿವಪ್ರಕಾಶರ್
೧೮. ಸುಬ್ರಹ್ಮಣ್ಯ ಭಾರತಿಯವರ ಕವನಗಳು ಹಾಗೂ ಪ್ರಬಂಧಗಳು
೧೯. ಮನೋನ್ಮಣೀಯಂ – ಸುಂದರಂ ಪಿಳ್ಳೈ
೨೦. ಏಳಾಂ ತಿರುಮುರೈ – ಸುಂದರರ್
೨೧. ಅತಂಗಳ್ ಮುರೈ – ತತ್ತುವರಾಯರ್
೨೨. ಕೈವಲ್ಯ ನವನೀತಂ – ತಾಂಡವರಾಯರ್
೨೩. ತಾಯುಮಾನವರ್ ಪಾಡಲ್ ತಿರಟ್ಟು –
೨೪. ೧. ೨. ೩ ತಿರುಮುರೈಗಳು – ತಿರುಜ್ಞಾನ ಸಂಬಂಧರ್
೨೫. ತಿರುಮಂತಿರಂ – ತಿರುಮೂಲರ್
೨೬. ೪, ೫, ೬ ತಿರುಮುರೈಗಳು – ತಿರುನಾವುಕ್ಕರಸರ್
೨೭. ಜ್ಞಾನವಾಸಿಷ್ಟಂ – ವೀರೈ ಆಳವಂದಾರ್

ಮುಂತಾದುವು.

# ಶಂಕರಾದ್ವೈತ ಮತ್ತು ತೆಲುಗು ಸಾಹಿತ್ಯ



ಡಾ. ಜೇ. ಸದಾನಂದಂ

ಸುಮಾರು ಒಂದುಸಾವಿರ ವರ್ಷಗಳ ಇತಿಹಾಸವಿರುವ ತೆಲುಗು ಸಾಹಿತ್ಯವನ್ನು ಪರಿಶೀಲಿಸಿದಾಗ ಬಹುಪಾಲು ಎಲ್ಲ ಸಾಹಿತ್ಯಕೃತಿಗಳಲ್ಲಿಯೂ ನಮಗೆ ಪ್ರಧಾನವಾಗಿ ಎದ್ದು ಕಾಣುವ ಸಿದ್ಧಾಂತವೆಂದರೆ ಅದ್ವೈತವೇ. ಪಾಲ್ಕುರಿಕಿ ಸೋಮನಾಥನು ತನ್ನ ಕೃತಿಗಳಲ್ಲಿ ನಿರೂಪಿಸಿದ್ದು ಶಿವಾದ್ವೈತವನ್ನು. ಅದು ಶಂಕರರ ಅದ್ವೈತಸಿದ್ಧಾಂತದಿಂದ ಕವಲೊಡೆದ ಸಿದ್ಧಾಂತವೆಂದೆ ಹೇಳಬಹುದು. ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಮತವು ಆಂಧ್ರದಲ್ಲಿ ವಿಶೇಷವಾಗಿ ಜನಾದರಣೆ ಹೊಂದಿದ್ದಾಗ್ಯೂ ಆ ಸಿದ್ಧಾಂತವನ್ನು ಅವಲಂಬಿಸಿ ಬಂದ ಸಾಹಿತ್ಯ ತುಂಬಾ ಕಡಿಮೆ ಎಂದೇ ಹೇಳಬೇಕು. ಶ್ರೀಕೃಷ್ಣದೇವರಾಯನು ಬರೆದನೆಂದು ಭಾವಿಸಲಾಗಿರುವ "ಆಮುಕ್ತಮಾಲ್ಯದ" ಕೃತಿಯಲ್ಲಿಯೂ, ತೆಲುಗು ಪದಕವಿತಾ ಪಿತಾಮಹರೆಂದು ಹೆಗ್ಗಳಿಕೆಗೆ ಪಾತ್ರರಾದ ಅನ್ನಮಾಚಾರ್ಯರ ಕೃತಿಗಳಲ್ಲಿಯೂ ನಾವು ವಿಶಿಷ್ಟಾದ್ವೈತವನ್ನು ಕಾಣಬಹುದಾಗಿದೆ.

ಆಂಧ್ರದ ಸಾಂಸ್ಕೃತಿಕ ಚರಿತ್ರೆಯನ್ನು ಪರಿಶೀಲಿಸಿದಾಗ, ಇಲ್ಲಿ ಮೊದಲಿಗೆ ಬೌದ್ಧಧರ್ಮ ವಿಶೇಷವಾಗಿ ಪ್ರಚಲಿತವಾಗಿದ್ದು, ಅದು ಸುಮಾರು ಆರು ಮತ್ತು ಏಳನೆಯ ಶತಮಾನದ ವೇಳೆಗೆ ಹಲವಾರು ಕಾರಣಗಳಿಂದ ಕಣ್ಮರೆಯಾಯಿತೆಂದೂ ತಿಳಿದುಬರುತ್ತದೆ. ಅನಂತರ ಆಂಧ್ರದಲ್ಲಿ ವೈದಿಕ ಮತ್ತು ಜೈನ ಮತಗಳು ವಿಶೇಷವಾಗಿ ಜನಾದರಣೆಯನ್ನು ಪಡೆದಿದ್ದವು. ಆಳರಸರ ಬೆಂಬಲವನ್ನು ಪಡೆದಿದ್ದ ಜೈನ ಧರ್ಮವು ಎಂಟು, ಒಂಬತ್ತು ಮತ್ತು ಹತ್ತನೆಯ ಶತಮಾನಗಳಲ್ಲಿ ಆಂಧ್ರದೇಶದಲ್ಲಿ ತುಂಬಾ ವ್ಯಾಪಕವಾಗಿ ಪ್ರಚಲಿತವಾಗಿತ್ತು. ಆ ಸಂದರ್ಭದಲ್ಲಿ ಸಾಹಿತ್ಯ ರಚನೆಮಾಡಿದವರೇ ಕನ್ನಡದ ಪಂಪ, ಪೊನ್ನ ಮೊದಲಾದವರು. ಜೈನರು ತಮ್ಮ ಧರ್ಮವನ್ನು ಪ್ರಚಾರಮಾಡಲು ಖಂಡಿತವಾಗಿ ತೆಲುಗು ಭಾಷೆಯನ್ನು ಬಳಸಿಕೊಂಡಿರಬೇಕು. ಆದರೆ ಇಂದು ಅವು ಯಾವುವೂ ನಮಗೆ ಉಪಲಬ್ಧವಿಲ್ಲ. ಆದರೆ ಜೈನರು ತೆಲುಗು ಭಾಷೆಯಲ್ಲಿ ಸಾಹಿತ್ಯ ರಚನೆ ಮಾಡಿರಬಹುದೆಂಬ ಊಹೆಗೆ ಹಲವಾರು ಆಧಾರಗಳು ನಮಗೆ ದೊರೆಯುತ್ತವೆ.

ಇದುವರೆಗೆ ತೆಲುಗು ಭಾಷೆಯಲ್ಲಿ ಉಪಲಬ್ಧವಾದ ಮೊಟ್ಟಮೊದಲ ಸಾಹಿತ್ಯ ಕೃತಿಯೆಂದರೆ ನನ್ನಯನು ರಚಿಸಿದ "ಆಂಧ್ರ ಮಹಾಭಾರತ". ವ್ಯಾಸಭಾರತವನ್ನು ಆಂಧ್ರೀಕರಿಸುವ ಮೊದಲ ಪ್ರಯತ್ನ ಮಾಡಿದ ನನ್ನಯ ಅದನ್ನು ಪೂರ್ಣಗೊಳಿಸಲಿಲ್ಲ. ಅದನ್ನು ಅನಂತರ ಬಂದ ತಿಕ್ಕನ ಮತ್ತು ಎಱ್ಱನ ಕವಿಗಳು ಪೂರ್ಣಗೊಳಿಸಿದರು.

ಇಡೀ ದಾಕ್ಷಿಣಾತ್ಯ ಸಾಹಿತ್ಯವನ್ನು ಗಮನಿಸಿದಾಗ ಅದನ್ನು ಜೈನರೇ ಬಳಸಿಕೊಂಡಿರುವುದು ನಮಗೆ ಕಂಡುಬರುತ್ತದೆ. ಅದೂ ವಿಶೇಷವಾಗಿ ತಮ್ಮ ಮತ ಪ್ರಚಾರಕ್ಕೆ ಬಳಸಿಕೊಂಡಿರುವದು ಕಂಡುಬರುತ್ತದೆ. ಆದರೆ ಅದುವರೆಗೆ ಯಾವ ಬ್ರಾಹ್ಮಣ ಕವಿಯೂ ಧರ್ಮದ ಪ್ರತಿಪಾದನೆಗೆ ಸಾಹಿತ್ಯವನ್ನು ಆಶ್ರಯಿಸಿರಲಿಲ್ಲ. ಬಹುಶಃ ಇದಕ್ಕೆ ಕಾರಣ ವೈದಿಕ ಧರ್ಮವು ಕೇವಲ ವಿದ್ಯಾವಂತ ಬ್ರಾಹ್ಮಣ ಸಮಾಜಕ್ಕೆ ಪರಿಮಿತವಾಗಿದ್ದುದು. ಅದು ತನ್ನ ವ್ಯಾಪ್ತಿಗೆ ಬೇರೆಯವರನ್ನು ಆಕರ್ಷಿಸುವ ಪ್ರಯತ್ನ ಮಾಡಲಿಲ್ಲ. ಆದರೆ ನೂತನ ಮತಗಳಾದ ಜೈನ ಬೌದ್ಧಗಳಿಗೆ ಜನರ ಅಗತ್ಯವಿತ್ತು ಎಂಬುದನ್ನು ಮರೆಯುವ ಹಾಗಿಲ್ಲ.

ನನ್ನಯನ ಕಾಲಕ್ಕೆ ಜೈನಧರ್ಮ ತನ್ನ ಹಿಂದಿನ ರಾಜಾಶ್ರಯದ ಮನ್ನಣೆಯ ಉಚ್ಛ್ರಾಯ ಸ್ಥಿತಿಯನ್ನು ಕಳೆದುಕೊಂಡು ಅವನತಿಯನ್ನು ಕಂಡಿತ್ತು ಎಂದು ಹೇಳಬಹುದು. ಇದೇ ಸಂದರ್ಭದಲ್ಲಿ ವೈದಿಕ ಧರ್ಮ ಕ್ರಮೇಣ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡಿತು. ಇಂತಹ ಸಂದರ್ಭದಲ್ಲಿ ಬಂದ ನನ್ನಯನು ವೈದಿಕ ಧರ್ಮವನ್ನು ಎತ್ತಿಹಿಡಿಯುವುದಕ್ಕಾಗಿಯೇ ಪಂಚಮವೇದವೆನಿಸಿಕೊಂಡ ಮಹಾಭಾರತವನ್ನು ತೆಲುಗಿಗೆ ಅನುವಾದ ಮಾಡಿದ. ಆ ವೇಳೆಗೆ ಮೂಲ ವೈದಿಕಧರ್ಮದಿಂದ ವೈಷ್ಣವ ಮತ್ತು ಶೈವ ಎಂಬ ಎರಡು ಪಂಥಗಳು ಕವಲೊಡೆದಿದ್ದರೂ ನನ್ನಯ ಹಿಂದಿನ ವೈದಿಕಧರ್ಮದ ಆಶಯ ಮತ್ತು ಸಿದ್ಧಾಂತಗಳನ್ನು ಆಶ್ರಯಿಸಿದ. ತನ್ನ ಕೃತಿಯ ಪ್ರಾರಂಭದಲ್ಲಿಯೇ –

> ಶ್ರೀವಾಣೀ ಗಿರಿಜಾಶ್ಚಿರಾಯ ದಧತೋ ವಕ್ಷೋಮುಖಾಂಗೇಷುಯೇ
> ಲೋಕಾನಾಂ ಸ್ಥಿತಿ ಮಾವಹಂತ್ಯವಿಹತಾಂ ಸ್ತ್ರೀ ಪುಂಸ ಯೋಗೋದ್ಭವಾಂ ।
> ತೇ ವೇದತ್ರಯಮೂರ್ತಯಸ್ತ್ರಿಪುರುಷಾಸ್ಸಂಪೂಜಿತಾವಸ್ಸುರೈಃ
> ಭೂಯಾಸುಃ ಪುರುಷೋತ್ತಮಾಂಬುಜಭವ ಶ್ರೀಕಂಧರಾಶ್ರೇಯಸೇ ।

ಭಾರತಮು : ೧-೧-೧

ಎಂದು ತ್ರಿಮೂರ್ತಿಗಳನ್ನು, ಅವರ ಪತ್ನಿಯರನ್ನು ಕುರಿತು ಪ್ರಾರ್ಥಿಸಿದ್ದಾನೆ.

ಭಾರತದಲ್ಲಿ "ಚತುರ್ವೇದ ಪ್ರಮುಖ ನಿಖಿಲಸುರಮುನಿ ಪೂಜಿತನಾದ ಶ್ರೀಕೃಷ್ಣನ ಮಹಾತ್ಮ್ಯವೂ ಸಹ ಇದೆ" ಎಂಬುದು ನನ್ನಯನ ಅಭಿಪ್ರಾಯ. ಅಷ್ಟೇ ಅಲ್ಲ, ಅದನ್ನು ಶ್ರದ್ಧೆಯಿಂದ ಪಠಿಸಿದರೆ "ಭಕ್ತಿಯುಕ್ತರಾದ ಭಾಗವತರಿಗೆ ಭಕ್ತವತ್ಸಲನಾದ ಶ್ರೀವಲ್ಲಭನು ಭವಭಯಗಳೆಲ್ಲವನ್ನು ಕಳೆದು ಇಷ್ಟಾರ್ಥ ಸಂಸಿದ್ಧಿಯನ್ನು ಕರುಣಿಸುತ್ತಾನೆ" ಎಂಬುದಾಗಿ ನನ್ನಯ ಹೇಳುತ್ತಾನೆ.

ಮುನಿಗಳು ರೌಮಹರ್ಷಣಿಯನ್ನು ಕುರಿತು "ಯಾವುದನ್ನು ಕೇಳಿದರೆ ಜ್ಞಾನಸಮಗ್ರವಾಗುತ್ತದೆಯೋ ಪಾಪಕ್ಷಯವಾಗುತ್ತದೆಯೋ" ಅಂತಹ ಕಥೆಯನ್ನು ತಾವು ಕೇಳಲು ಇಚ್ಛಿಸಿರುವುದಾಗಿ ಹೇಳುತ್ತಾರೆ. ಈ ಸಮಗ್ರ ಜ್ಞಾನದ ಸಮಗ್ರ ಸ್ವರೂಪವೇನೆಂಬುದನ್ನು ನನ್ನಯನು ವಿವರಿಸಿಲ್ಲವಾದರೂ" ತನ್ನ ಕೃತಿಯುದ್ದಕ್ಕೂ ಅಲ್ಲಲ್ಲಿ ಅಲ್ಪಸ್ವಲ್ಪ ಸೂಚನೆ ನೀಡಿದ್ದಾನೆ. "ಭಾರತ ಭಾರತೀ ಗಭಸ್ತಿಚಯಗಳಿಂದ ಪರಾಶರಾತ್ಮಜಾಂಭೋರುಹ ಮಿತ್ರನು ಸಂಸಾರ ವಿಕಾರ ವಿಕಾರ ಸಂತಮಸ ಜಾಲ ವಿಜೃಂಭಣೆಯನ್ನು ತೊಲಗಿಸುವ"ನೆಂದು ವರ್ಣಿಸುತ್ತಾನೆ. (೧-೧-೨೨) ಪರ್ವಾನುಕ್ರಮಣಿಕೆಯನ್ನು ಹೇಳುವ ಸಂದರ್ಭದಲ್ಲಿ ಶಾಂತಿಪರ್ವವನ್ನು ಕುರಿತು "ಯಾವುದನ್ನು ತಿಳಿದರೆ ಸರ್ವಜ್ಞಾನ ಸಂಪನ್ನರಾಗುತ್ತಾರೆಯೋ, ಅಂತಹ ಮೋಕ್ಷಧರ್ಮವನ್ನು ಭೀಷ್ಮನು ಹೇಳುವುದು" ಎಂಬ ವಿವರಣೆಯನ್ನು ನೀಡಿದ್ದಾನೆ (೧-೧-೫೭) ಇಲ್ಲಿಯೂ ಆ ಮೋಕ್ಷದ ಸ್ವರೂಪವೇನು ಎಂಬುದನ್ನು ನನ್ನಯ ಸ್ಪಷ್ಟಪಡಿಸಿಲ್ಲ. ಅದಕ್ಕೆ ಇಲ್ಲಿ ಅವಕಾಶವೂ ಇಲ್ಲ. ಹಾಗೆಯೇ ಭಾರತವನ್ನು ಓದುವುದರಿಂದ ನಾಲ್ಕು ವೇದಗಳು ಹದಿನೆಂಟು ಪುರಾಣಗಳು ತತ್ತ್ವಮಿತ ಧರ್ಮಶಾಸ್ತ್ರಗಳು. ಮೋಕ್ಷ ಶಾಸ್ತ್ರತತ್ತ್ವಗಳು ತಿಳಿಸಿದ ಫಲ ಲಭಿಸುತ್ತದೆ." ಎಂದು ಹೇಳುತ್ತಾನೆ. (೧-೧-೭೦) ಯಯಾತಿ ಅಷ್ಟಕಾದಿಗಳಿಗೆ ಧರ್ಮವನ್ನು ಬೋಧಿಸುವಾಗ "ವಿಶುದ್ಧ ಜ್ಞಾನದಿಂದ ಮುಕ್ತರಾಗುತ್ತಾರೆ" ಎಂಬ ಮಾತು. ಹೇಳಿಸುತ್ತಾನೆ.

ಮೇಲಿನ ನಿದರ್ಶನಗಳನ್ನು ಗಮನಿಸಿದಾಗ– ಜೀವಿಯ ಸಂಸಾರ ಘೋರ ಕಗ್ಗತ್ತಲು. ಪರಬ್ರಹ್ಮನಿಗೆ ಗುಣ ಸಂಸ್ಪರ್ಶದಿಂದಾಗಿ ವಿಕಾರವೆಂಬುದಕ್ಕೆ ವಿಶುದ್ಧ ಜ್ಞಾನದಿಂದಲೇ ಮುಕ್ತಿ ಎಂಬುದನ್ನು ಶಂಕರಾಚಾರ್ಯರ ಅದ್ವೈತ ನಿರೂಪಣೆಯ ಹೆಜ್ಜೆಯ ಗುರುತುಗಳು ಎಂಬುದಾಗಿ ಗ್ರಹಿಸಿದರೆ ತಪ್ಪಾಗಲಾರದು.

ಇಲ್ಲಿ ಒಂದು ಸಮಸ್ಯೆ ಬರುತ್ತದೆ. ನನ್ನಯನು ತನ್ನ ಕೃತಿಯಲ್ಲಿ ಅದ್ವೈತ ವೇದಾಂತವನ್ನು ಸ್ಪಷ್ಟವಾಗಿ ಏಕೆ ಪ್ರತಿಪಾದಿಸಲಿಲ್ಲ ? ಎಂಬುದು. ಅದಕ್ಕೆ ನಮಗೆ ಎರಡು ರೀತಿಯ ಸಮಾಧಾನ ದೊರೆಯುತ್ತದೆ. ಒಂದು, ನನ್ನಯ ಇಡೀ ಭಾರತವನ್ನು ಅನುವಾದ ಮಾಡಲಿಲ್ಲ. ಆದಿಸಭಾಪರ್ವಗಳು ಮತ್ತು ಅರಣ್ಯ ಪರ್ವದಲ್ಲಿ ಕೆಲಭಾಗ ಮಾತ್ರ ಅನುವಾದ ಮಾಡಿದ್ದಾನೆ. ಯಾವ ಕಾರಣದಿಂದಲೋ ಏನೋ ಅದು ಮುಂದುವರಿಯಲಿಲ್ಲ. ಹೀಗಾಗಿ ನಿಜವಾಗಿ ವೇದಾಂತ, ಧರ್ಮ, ಮೋಕ್ಷ ಸಂಬಂಧವಾದ ವಿಷಯಗಳು ಬರುವ ಪರ್ವಗಳನ್ನು ಆತ ಬರೆಯಲೇ ಇಲ್ಲ. ಬಹುಶಃ ಆತನೇ ಇಡೀ ಭಾರತವನ್ನು ಬರೆದಿದ್ದರೆ ಖಂಡಿತಾ ಆಯಾ ಭಾಗಗಳಲ್ಲಿ ಶಂಕರಾದ್ವೈತವನ್ನು ಸ್ಪಷ್ಟವಾಗಿ ವಿವರಿಸುತ್ತಿದ್ದನೆಂದು ಊಹಿಸಬಹುದು, ಇನ್ನು ಎರಡನೆಯ ಸಮಾಧಾನ ಭಾರತದ ಆವಿರ್ಭಾವಕ್ಕೆ ಮತ್ತು ಭಾರತದ ಬಗೆಗೆ ನನ್ನಯನಿಗಿರುವ ದೃಷ್ಟಿಕೋನಕ್ಕೆ ಸಂಬಂಧಪಟ್ಟದ್ದು.

ರಾಜರಾಜ ನರೇಂದ್ರನು ನನ್ನಯನನ್ನು ಮಹಾಭಾರತವನ್ನು ತೆಲುಗಿನಲ್ಲಿ ವಿರಚಿಸಬೇಕೆಂದು ಕೇಳಿಕೊಳ್ಳುವ ಸಂದರ್ಭದಲ್ಲಿ "ನಾನು ಇದುವರೆಗೆ ಬಹುಭಾಷೆಗಳಲ್ಲಿ

ಬಹುವಿಧವಾಗಿ ಭಾರತವನ್ನು ಕೇಳಿದ್ದೇನೆ. ನೋಡಿದ್ದೇನೆ. ಆದರೆ ನಾನು ಚಂದ್ರ ವಂಶದವನಾದ ಕಾರಣ "ಜನನುತಕೃಷ್ಣದ್ವೈಪಾಯನ ಮುನಿ ವೃಷಭಾಭಿಹಿತ ಮಹಾಭಾರತಾರ್ಥ ಸ್ಪಷ್ಟವಾಗುವಂತೆ ಕೇಳಬೇಕೆಂದಿದ್ದೇನೆ. ನೀವು ಅದನ್ನು ತೆಲುಗಿನಲ್ಲಿ ಹೇಳಿರಿ" ಎಂದು ವಿಜ್ಞಾಪಿಸಿಕೊಂಡಿದ್ದಾನೆ.

ನನ್ನಯನಿಗೆ ವೇದವ್ಯಾಸರ ಬಗ್ಗೆ ಹಾಗೂ ಮಹಾಭಾರತದ ಬಗ್ಗೆ ಅತ್ಯಂತ ಗೌರವ. ಭಕ್ತಿ. ಮೇಲಾಗಿ ಅನುವಾದಕ್ಕೆ ಮುಂಚೆ ಮಹಾಭಾರತವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದ.

ಧರ್ಮತತ್ತ್ವಜ್ಞರು ಧರ್ಮಶಾಸ್ತ್ರವೆಂದೂ, ನೀತಿಶಾಸ್ತ್ರಜ್ಞರು ನೀತಿಶಾಸ್ತ್ರವೆಂದೂ, ಪೌರಾಣಿಕರು ಪುರಾಣ ಸಮುಚ್ಚಯವೆಂದೂ. ಕವಿ ವೃಷಭರು ಮಹಾಕಾವ್ಯವೆಂದೂ, ಐತಿಹಾಸಿಕರು ಇತಿಹಾಸವೆಂದೂ, ಅಧ್ಯಾತ್ಮವಿದರು ವೇದಾಂತವೆಂದೂ, ಲಾಕ್ಷಣಿಕರು ಸರ್ವಲಕ್ಷ್ಯ ಸಂಗ್ರಹವೆಂದೂ ಕೊಂಡಾಡುವಂತೆ ವೇದವ್ಯಾಸರು ಮಹಾಭಾರತವನ್ನು ರಚಿಸಿದರೆಂದು ನನ್ನಯನು ಇಡೀ ಭಾರತಕ್ಕೆ ಒಂದು ವಿಶಿಷ್ಟ ರೀತಿಯ ವ್ಯಾಖ್ಯಾನ ಮಾಡಿದ್ದಾನೆ.

ಈ ಹಿನ್ನೆಲೆಯಲ್ಲಿ ನೋಡಿದಾಗ ಕೃಷ್ಣದ್ವೈಪಾಯನ ಮುನಿ ವೃಷಭಾಭಿಹಿತ ಮಹಾಭಾರತ ಬದ್ಧ ನಿರೂಪಿತಾರ್ಥವನ್ನು ಹೇಳಹೊರಟ ನನ್ನಯನ ರಚನಾಸ್ವರೂಪ ಎಂಥದೆಂಬುದನ್ನು ಊಹಿಸಬಹುದು. ವ್ಯಾಸರ ಭಾರತದಂತೆ ತನ್ನ ಭಾರತವೂ "ಸಕಲಗಮ್ಯ ಸುತೀರ್ಥ"ವಾಗಿರಬೇಕೆಂಬುದು ನನ್ನಯನ ಇಚ್ಛೆ. ಶ್ರಿಮತಾಚಾರ್ಯರಿಗೂ ತಮ್ಮ ತಮ್ಮ ರೀತಿಯಲ್ಲಿ ವ್ಯಾಖ್ಯಾನಿಸುವುದಕ್ಕೆ ಎಡೆಮಾಡಿಕೊಟ್ಟ ಮೂಲಭಾರತದಂತೆ ತನ್ನ ಭಾರತವು ಎಲ್ಲರಿಗೂ ಪಠನೀಯವಾಗಿರಬೇಕೆಂಬ ನನ್ನಯನ ಸಂಕಲ್ಪ ಕಾರ್ಯರೂಪಗೊಂಡಿದೆ ಎಂಬುದಕ್ಕೆ ಆತನ ರಚನೆಯೇ ಸಾಕ್ಷಿ. ವ್ಯಾಸರು ಏನನ್ನು ಹೇಗೆ ಹೇಳಿರುವರೋ ಅದನ್ನು ಹಾಗೆಯೇ ಹೇಳುವ ಶಪಥಮಾಡಿರುವ ನನ್ನಯ ಮೂಲಕ್ಕಿಂತ ಭಿನ್ನ, ಅಥವಾ ವ್ಯಾಖ್ಯಾನ ರೂಪವಾದ ಹೆಚ್ಚಿನ ಬದಲಾವಣೆಗಳನ್ನು ಸೇರಿಸುವ ಸಾಹಸ ಮಾಡಲಿಲ್ಲ. ಧರ್ಮದ ಸಂದರ್ಭದಲ್ಲಿ ಹೇಳುತ್ತಿರುವ ಮಾತಿದು. ಈ ಬಂಧನಗಳ ನಡುವೆಯೂ ನನ್ನಯನು ಅದ್ವೈತವನ್ನು ಸ್ಥೂಲವಾಗಿಯಾದರೂ ಸಮರ್ಥವಾದ ರೀತಿಯಲ್ಲಿ ಔಚಿತ್ಯಪೂರ್ಣವಾಗಿ ನಿರೂಪಿಸಿರುವುದು ಮೆಚ್ಚತಕ್ಕ ಅಂಶ.

ನನ್ನಯ ಪ್ರಾರಂಭ ಮಾಡಿ ಬಿಟ್ಟ ಭಾರತದ ಅನುವಾದ ಹಾಗೆಯೇ ಸುಮಾರು ಎರಡು ನೂರು ವರ್ಷಗಳ ಕಾಲ ಉಳಿದು ಹೋಯಿತು. ಅನಂತರ ಬಂದ ತಿಕ್ಕನನು, ನನ್ನಯನು ಪ್ರಾರಂಭ ಮಾಡಿದ ಮಹಾಭಾರತದ ಅನುವಾದವನ್ನು ಕೈಗೆತ್ತಿಕೊಂಡ. ನನ್ನಯ ಎಲ್ಲಿಗೆ ನಿಲ್ಲಿಸಿದ್ದನೋ ಅಲ್ಲಿಂದ ಪ್ರಾರಂಭಿಸದೆ ವಿರಾಟ ಪರ್ವದಿಂದ ಮೊದಲು ಮಾಡಿ ಸಂಪೂರ್ಣ ಮಾಡಿದ. ಅನಂತರ ಬಂದ ಎಱ್ಱನ ಈ ಇಬ್ಬರ ನಡುವಿನ ಕಂದರವನ್ನು ತುಂಬಿ ಇಡೀ ಭಾರತ ತೆಲುಗಿನಲ್ಲಿರುವಂತೆ ಮಾಡಿದ.

ಈ ಇನ್ನೂರು ವರ್ಷಗಳ ಅವಧಿಯ ಅಂತರದಲ್ಲಿ ಹಲವಾರು ಬದಲಾವಣೆಗಳಾದುವು. ನನ್ನಯನ ಕಾಲದಲ್ಲಿಯೇ ಬೇರುಬಿಟ್ಟ ಶೈವ ಮತ್ತು ವೈಷ್ಣವ ಪಂಥಗಳು ಒಂದಕ್ಕೊಂದು ಪ್ರತಿಸ್ಪರ್ಧಿಗಳಂತೆ ಘರ್ಷಣೆಗೆ ಇಳಿದಿದ್ದವು. –ಇಂತಹ ಒಂದು ಸಂದರ್ಭದಲ್ಲಿ ತಿಕ್ಕನ ಭಾರತ ರಚನೆಗೆ ಕೈಹಾಕಿದ ನನ್ನಯ ತಾನು ಬರೆದ ಭಾಗದಲ್ಲಿ ಬ್ರಾಹ್ಮಣ್ಯಧರ್ಮ, ವರ್ಣಾಶ್ರಮ, ಧರ್ಮಸ್ಥಾಪನೆ, ಯಜ್ಞಯಾಗಾದಿ ಕರ್ಮನಿರ್ವಹಣೆ ಮುಂತಾದ ಅಂಶಗಳನ್ನ ಒತ್ತಿ ಹೇಳಿದ್ದಾನೆ. ಆರ್ಷ ಧರ್ಮವನ್ನು ಪುನರುಜ್ಜೀವನಗೊಳಿಸುವುದು ಆತನ ಪ್ರಧಾನೋದ್ದೇಶವಾಗಿತ್ತು. ತಿಕ್ಕನನಿಗೆ ಜನರಲ್ಲಿ ತಪ್ಪು ಕಲ್ಪನೆಯಿಂದಾಗಿ ಬೇರೂರಿರುವ ಹರಿ ಹರ ಭೇದವನ್ನು ಕಳೆಯುವುದು ಮುಖ್ಯವಾಯಿತು. ಶ್ರೀ ಮತ್ತು ಗೌರಿ ಎನಿಸಿಕೊಂಡ ಸ್ತ್ರೀಯ ಹೃದಯವು ಚಿಗುರುವಂತೆ, ಮಂಗಳ ಮೂರ್ತಿಯಾಗಿ, ಹರಿಹರ ರೂಪಧರಿಸಿ, ಭಕ್ತರು ವೈದಿಕ ಮಾರ್ಗದಲ್ಲಿ 'ವಿಷ್ಣು ರೂಪಾಯ ನಮಶ್ಶಿವಾಯ' ಎಂದು ಪ್ರಾರ್ಥಿಸುವುದನ್ನೆ ಮೆಚ್ಚುವ ಪರತತ್ತ್ವವನ್ನು ಸೇವಿಸುತ್ತೇನೆ– ಎಂದೇ ಕಾವ್ಯವನ್ನು ಪ್ರಾರಂಭಿಸುತ್ತಾನೆ.

ಭಗವದ್ಗೀತೆಯನ್ನು ಕೈ ಬೆರಳೆಣಿಕೆಯಷ್ಟು ಪದ್ಯಗಳಲ್ಲಿ ಮುಗಿಸಿದ ತಿಕ್ಕನ ಶಾಂತಿಪರ್ವದಲ್ಲಿ ವೇದಾಂತದ ಚರ್ಚೆ ಬರುವ ಸಂದರ್ಭಗಳನ್ನು ವಿಸ್ತರಿಸಿ ಅಲ್ಲಿ ಅದ್ವೈತವನ್ನು ವಿಶೇಷವಾಗಿ ಪ್ರತಿಪಾದಿಸಿದ್ದಾನೆ.

ನನ್ನಯನಾಗಲೀ, ತಿಕ್ಕನನಾಗಲೀ ಮಹಾಭಾರತದ ಕಥಾಭಾಗದಲ್ಲಿ ಅಂದರೆ ಯುದ್ಧ ಪರ್ಯಂತವಿರುವ ಪರ್ವಗಳಲ್ಲಿ ವೇದಾಂತ ಚರ್ಚೆಗೆ ಕೈಹಾಕಲಿಲ್ಲ. ಅವರ ದೃಷ್ಟಿಯಲ್ಲಿ ಅದು ಮಹಾಕಾವ್ಯ. ಅದು ತನ್ನ ಕಾವ್ಯತ್ವವನ್ನು, ಮೂಲಗ್ರಂಥದ ಉದ್ದೇಶವನ್ನು ಸ್ವಲ್ಪವೂ ಕಳೆದುಕೊಳ್ಳಬಾರದು. ಆದರೆ ವೇದಾಂತವನ್ನು ಹೇಳುವದಕ್ಕೆ ತಿಕ್ಕನ ಶಾಂತಿಪರ್ವ ಮತ್ತು ಅನುಶಾಸನಿಕ ಪರ್ವಾದಿಗಳಲ್ಲಿರುವ ಅವಕಾಶವನ್ನು ಸದುಪಯೋಗ ಮಾಡಿಕೊಂಡಿದ್ದಾನೆ. ಭೀಷ್ಮನು ಧರ್ಮರಾಜನಿಗೆ ಧರ್ಮಬೋಧೆಯನ್ನು ಮಾಡುತ್ತಾ "ಧ್ಯಾನಯೋಗ ನಿಶ್ಚಲವಾದ ಅಂತರಂಗವು ಗುಣಗಳನ್ನೇ ಬಿಟ್ಟು ಶಾಂತವಾದಾಗ ನಿರ್ಗುಣದಲ್ಲಿ ಬೆರೆಯುತ್ತದೆ. ಅದೇ ಪರಮ ಪದವು. ಅದಕ್ಕೆ ಪರವಾದುದಿಲ್ಲ" –ಎಂಬ ಮಾತುಗಳಲ್ಲಿ ಶಂಕರರ ದಟ್ಟವಾದ ಪ್ರಭಾವವನ್ನೆ ಗುರುತಿಸದಿರಲಾರೆವು.

ತಿಕ್ಕನನ ನಂತರ ಬಂದ ಎಜ್ಞನ ತೆಲುಗು ಕವಿತ್ರಯರಲ್ಲಿ ಒಬ್ಬ. ತಿಕ್ಕನನು ಸಾರಿದ ಹರಿಹರಾದ್ವೈತವನ್ನು ಈತನಲ್ಲಿಯೂ ಕಾಣಬಹುದು. ಈತನಿಗೆ 'ಶಂಭುದಾಸ'ನೆಂಬ ಬಿರುದು ಇದೆ. "ಗಿರೀಶವಿದ ಭಕ್ತಿರಸತತ್ಪರಭಾವವಿರುವುದರಿಂದ ಶಂಭುದಾಸ ನೆನೆಸಿಕೊಂಡರೂ ಗೋವಿಂದ ಗುಣಾದರ ಸಂಭೃತ ಸಾಮನಸ್ಯ ಧನ್ಯನು (ನರಸಿಂಹ ಪುರಾಣ ೧-೧೮) ಈತನು ನೃಸಿಂಹ ಪುರಾಣ ಮತ್ತು 'ಹರಿವಂಶ'–ವೆಂಬ ಎರಡು ಕಾವ್ಯಗಳನ್ನೂ ಬರೆದಿದ್ದಾನೆ.

ಅದ್ವೈತ ತತ್ತ್ವವನ್ನು ಎಷ್ಟು ಸುಂದರವಾಗಿ ಸಮರ್ಥವಾಗಿ ಒಬ್ಬ ಕವಿಯಾದವನು ನಿರೂಪಿಸಬಹುದು ಎಂಬುದಕ್ಕೆ ಎಱ್ಱನ ಹರಿವಂಶದಿಂದ ಒಂದು ಉದಾಹರಣೆಯನ್ನು ನೋಡೋಣ.

"ಶ್ರೀಕೃಷ್ಣ, ಕಾಳಿಂದಿ ಮಡುವಿನಲ್ಲಿ ಧುಮುಕಿದ. ಕಾಳಿಂಗನ ಫಣೆಗಳು ಕೃಷ್ಣನನ್ನು ಬಂಧಿಸಿದುವು. ಆಗ ಕೃಷ್ಣ ಅದರ ಬಂಧನದಿಂದ ನಿಜವಾಗಿ ನೋವು ಪಡೆಯದೆ ಹೋದಾಗ್ಯೂ ನೋವಾದವನಂತೆ ನಟಿಸುತ್ತಾನೆ. ಆ ಸಂದರ್ಭದಲ್ಲಿ ಕವಿ "ದ್ವೈತ ಭ್ರಾಂತಿ ನಿವೃತಿ ಹೊಂದಲು ಅಭೇದ ಬ್ರಹ್ಮಬೋಧೆ ಸಂಭೂತವಾಗಲು ಅಶೇಷಬಂಧಗಳನ್ನು ಕಳಚುವ ಸಿದ್ಧಾತ್ಮನಂತೆ ಶ್ರೀಕೃಷ್ಣ ಆ ರೀತಿ ಆತ್ಮತತ್ತ್ವವಿದನಾಗಿ ಆ ಹಾವಿನ ಬಂಧನವು ಒಮ್ಮೆಲೆ ಕಳಚಿ ಹೋಗುವಂತೆ ಸೆಟೆದು ಆ ನೀರಿನ ಮಧ್ಯದಿಂದ ಮೇಲಕ್ಕೆ ಜಿಗಿದ" – ಎಂಬುದಾಗಿ ವರ್ಣಿಸುತ್ತಾನೆ.

ಜೀವನು ಬೇರೆ, ಪರಮಾತ್ಮನು ಬೇರೆ ಎನ್ನುವುದು ದ್ವೈತವಾದ. ಆದರೆ ಇದು ಸತ್ಯವಲ್ಲ. ಅಭ್ಯಾಸ, ಅಧ್ಯಾಸ, ಭ್ರಾಂತಿ. ಅದು ನಿರಸನವಾದಾಗ ತಾನೇ ಬ್ರಹ್ಮವೆಂಬ ಜ್ಞಾನ ಉದಿಸುತ್ತದೆ. ಶ್ರವಣ, ಮನನ, ನಿಧಿ, ಧ್ಯಾಸಗಳಿಂದಲೂ ಇದು ಸಾಧ್ಯ. ಅಜ್ಞಾನ ತೊಲಗಿದಾಗ ಆತ್ಮ ಪರಮಾತ್ಮನಲ್ಲಿ ಐಕ್ಯವಾಗಿ 'ಸೋಹಂ ಬ್ರಹ್ಮಾಸ್ಮಿ' ಎನ್ನುವುದೇ ಸಮಾಧ್ಯವಸ್ಥೆ. ಆಗ ಸಕಲ ಕರ್ಮ ಬಂಧನಗಳೂ ತೊಲಗುತ್ತವೆ. ಸಮಾಧಿಸ್ಥನಾದ ಯೋಗಿಯ ಜೀವ ಬ್ರಹ್ಮೈಕ್ಯ ಸಿದ್ಧಿಯನ್ನು ಪಡೆಯುತ್ತದೆ – ಎಂಬೆಲ್ಲ ಅರ್ಥವನ್ನು ಎಱ್ಱನ ಇಲ್ಲಿ ಧ್ವನಿಸಿದ್ದಾನೆ.

ಶ್ರೀಕೃಷ್ಣನ ಬಳಿಗೆ ಮುನೀಶ್ವರರು ಹೋದಾಗ ಶ್ರೀಕೃಷ್ಣನು ಮುನಿಗಳನ್ನು ಕುರಿತು "ನೀವು ಪರಮ ಬ್ರಹ್ಮ ವಿದ್ಯೈಕ್ಯಬೋಧ ಮಹಿಮೆಯುಳ್ಳವರು" ಅಷ್ಟೇ ಅಲ್ಲ ಪರಿಪೂರ್ಣಾತ್ಮಕರೆಂದೂ ಮೆಚ್ಚಿಕೊಳ್ಳುತ್ತಾನೆ (ಹರಿವಂಶ II-೪-೭೬).

ಈ ರೀತಿ ಅದ್ವೈತವನ್ನು ನಿರೂಪಿಸುವ ಎಱ್ಱನನೇ ಒಂದುಕಡೆ "ದೇವದನುಜ ಮನುಷ್ಯಾದಿ ಜೀವರ ಸಮೂಹಕ್ಕೆ ಸಂಪತ್ತು ಮತ್ತು ಕೈವಲ್ಯವನ್ನು ನೀಡುವ ಪರದೇವತೆ ವಿಷ್ಣುವನ್ನು ಬಿಟ್ಟರೆ ಬೇರಾರಿದ್ದಾರೆ ?" ಎಂಬುದಾಗಿ – ವಿಷ್ಣುವನ್ನು ಹೊಗಳುತ್ತಾನೆ. ಹೀಗೆಂದ ಮಾತ್ರಕ್ಕೆ ಆತನು ಅದ್ವೈತ ವಿರೋಧಿ ಎಂದಾಗಲೀ ಆತನಲ್ಲಿ ವಿರೋಧಾಭಾಸವಿದೆ ಎಂದಾಗಲಿ ಭಾವಿಸುವುದು ಸೂಕ್ತವಲ್ಲ. ಸಾಧನೆಯ ಸಮಯದಲ್ಲಿ ಆಚಾರ್ಯ ಶಂಕರರೇ ಅಂಗೀಕರಿಸಿರುವ ಸಗುಣೋಪಾಸನೆಯನ್ನು ಮೇಲಿನ ಮಾತುಗಳು ನಿರೂಪಿಸುತ್ತವೆ ಎಂಬುದನ್ನು ನಾವು ಗಮನಿಸಬೇಕು.

ಇಡೀ ತೆಲುಗು ಸಾಹಿತ್ಯದಲ್ಲಿ ತನ್ನದೇ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡು ಇಂದಿಗೂ ಜನಸಾಮಾನ್ಯರ ನಾಲಿಗೆಯ ಮೇಲೆ ಜೀವಂತವಾಗಿರುವ ಪೋತನನು ಅನುವಾದಿಸಿರುವ ಭಾಗವತದಲ್ಲಿ ಅದ್ವೈತದ ದಟ್ಟವಾದ ಪ್ರಭಾವವನ್ನು ನಾವು ಗುರುತಿಸಬಹುದು. ಪೋತನ ಹುಟ್ಟುಭಕ್ತ, ಸಾಧಕ, ಮೇಲಾಗಿ ಕವಿ. ತನ್ನೆಲ್ಲ ಅನುಭಾವದ ಅನುಭೂತಿಯನ್ನು ಸಮರ್ಥವಾಗಿ ನಿರೂಪಿಸಬಲ್ಲವ.

ಒಂದು ದಿನ ಹುಣ್ಣಿಮೆಯ ಬೆಳುದಿಂಗಳಲ್ಲಿ, ತನ್ನ ಪೂರ್ವಜನ್ಮ ಸಹಸ್ರ ಸಂಚಿತ ತಪಃ ಫಲದಿಂದಾಗಿ ಶ್ರೀಮನ್ನಾರಾಯಣ ಕಥಾ ಪ್ರಪಂಚ ವಿರಚನಾ ಕುತೂಹಲನಾಗಿ ಮಹೇಶ್ವರನನ್ನು ಸ್ಮರಿಸುತ್ತಾನೆ. ಆದರೆ ಪೋತನನ ಎದುರಿಗೆ ಪ್ರತ್ಯಕ್ಷನಾದವನು ಶ್ರೀರಾಮಚಂದ್ರ. ಅದ್ವೈತ ಭಾವಸಿದ್ಧಿಯನ್ನು ಇದಕ್ಕಿಂತಲೂ ಸಮರ್ಥವಾಗಿ ಸಾಧಿಸಿದ. ಸಾಧಿಸಿದ್ದನ್ನು ಸಮರ್ಥವಾಗಿ ಕಲಾತ್ಮಕವಾಗಿ ನಿರೂಪಿಸಿರುವ ನಿದರ್ಶನ ಬೇರೆಲ್ಲಾದರೂ ಉಂಟೇ ?

ಪೋತನ ಭಕ್ತನೆಂದ ಮಾತ್ರಕ್ಕೆ ಅದನ್ನು ಸೀಮಿತ ವ್ಯಾಪ್ತಿಯಲ್ಲಿ ಗ್ರಹಿಸುವುದು ತಪ್ಪಾದೀತು. ಭಕ್ತನಂತೆ ಭಾವಾವೇಶಕ್ಕೆ ಒಳಗಾಗಬಲ್ಲ. ಶುದ್ಧ ಜ್ಞಾನಿಯಂತೆಯೂ. ಜಿಜ್ಞಾಸುವಿನಂತೆಯೂ ಚಿಂತಿಸಬಲ್ಲ. ಅಷ್ಟೇ ಅಲ್ಲ ಬದುಕಬಲ್ಲ. ಭಾಗವತದಲ್ಲಿ ಆತ್ಮನಾತ್ಮ ಚರ್ಚೆ ಬಂದಾಗಲೆಲ್ಲಾ ಅದ್ವೈತ ತಾನಾಗಿಯೇ ಉಕ್ಕಿ ಹರಿದಿರುವುದನ್ನು ಕಾವ್ಯದ ಉದ್ದಕ್ಕೂ ಕಾಣಬಹುದಾಗಿದೆ.

ರೌಮಹರ್ಷಣಿ ಮುನಿಗಳಿಗೆ ಹೀಗೆ ಹೇಳುತ್ತಾನೆ :

"ತತ್ವಜಿಜ್ಞಾಸೆ ಎಂಬುದು ಧರ್ಮಜಿಜ್ಞಾಸೆ. ಕೆಲವರು ಧರ್ಮವೇ ತತ್ವವೆನ್ನುತ್ತಾರೆ. ತತ್ವಜ್ಞರು ಜ್ಞಾನವೆಂಬ ಹೆಸರಿನಿಂದ ಅದ್ವಯವಾದುದು ತತ್ವವೆಂದು ತಿಳಿಯುತ್ತಾರೆ. ಆ ತತ್ವವನ್ನು ಔಪನಿಷದರು ಬ್ರಹ್ಮವೆಂದೂ. ಹೈರಣ್ಯ ಗರ್ಭರು (ಬ್ರಹ್ಮವಾದಿಗಳು) ಪರಮಾತ್ಮನೆಂದೂ, ಸಾತ್ವತರು ಭಗವಂತನೆಂದೂ ಹೇಳುತ್ತಾರೆ. ವೇದಾಂತದಿಂದ ಗ್ರಹಿಸಲ್ಪಟ್ಟು ಜ್ಞಾನ ವೈರಾಗ್ಯಗಳಿಂದ ಕೂಡಿದ ಭಕ್ತಿಯಿಂದ ತತ್ಪರರಾದ ಹಿರಿಯರು ಕ್ಷೇತ್ರಜ್ಞನಾದ ಆತ್ಮನಲ್ಲಿ ಪರಮಾತ್ಮನನ್ನು ಕಾಣುತ್ತಾರೆ...." (ಭಾ. ೧-೫೬).

ಅರೂಪನಾಗಿ ಚಿದಾತ್ಮಕನಾಗಿರುವ ಜೀವಿಗೆ ಪರಮೇಶ್ವರನ ಮಾಯಾಗುಣಗಳಾದ ಮಹದಾದಿ ರೂಪಗಳಿಂದ ಆತ್ಮಸ್ಥಾನವಾಗಿ ಸ್ಥೂಲ ಶರೀರವು ವಿರಚಿತವಾಗಲು, ಗಗನದಲ್ಲಿ ಪವನಾಶ್ರಿತವಾದ ಮೇಘ ಸಮೂಹವೂ, ಗಾಳಿಯಲ್ಲಿ ಪಾರ್ಥಿವ ಧೂಳಿ ಧೂಸರತ್ವವೂ, ಯಾವ ರೀತಿಯೋ ಹಾಗೆಯೇ ದ್ರಷ್ಟನಾದ ಆತ್ಮನಲ್ಲಿ ದೃಶ್ಯತ್ವವು ಬುದ್ಧಿವಂತರಲ್ಲದವರಿಂದ ಆರೋಪಿಸಲ್ಪಡುತ್ತದೆ. ಈ ಸ್ಥೂಲ ರೂಪಕ್ಕಿಂತಲೂ, ಅದೃಷ್ಟಗುಣವಾಗಿ. ಅಶ್ರುತವಾದ ವಸ್ತುವಾದುದರಿಂದ ವ್ಯಕ್ತವಲ್ಲದೆ, ಸೂಕ್ಷ್ಮವಾಗಿ, ಕರಚರಣಾದಿಗಳಿಲ್ಲದೆಯೇ ಜೀವನಿಗೆ ಮತ್ತೊಂದು ರೂಪ ವಿರಚಿತವಾಗಿರುತ್ತದೆ. ಸೂಕ್ಷ್ಮನಾದ ಜೀವನಿಂದ ಉತ್ಕ್ರಾಂತಿ ಗಮನಾಗಮನಾದಿಗಳಲ್ಲಿ ಪುನರ್ಜನ್ಮ ತೋಚುತ್ತದೆ. ಯಾವಾಗ ಈ ಸ್ಥೂಲ ಸೂಕ್ಷ್ಮಗಳೆರಡು. ವಿದ್ಯೆಯಿಂದಾಗಿ ಆತ್ಮಕ್ಕೆ ಕಲ್ಪಿಸಲ್ಪಟ್ಟಿವೆ ಎಂಬ ಹೇತುವಿನಿಂದ ಸ್ವರೂಪ ಸಮ್ಯಗ್ ಜ್ಞಾನದಿಂದ ಪ್ರತಿಷೇಧಿಸಲ್ಪಡುತ್ತದೆಯೋ ಆಗಲೇ ಜೀವನು ಬ್ರಹ್ಮನಾಗುತ್ತಾನೆ. ಸಮ್ಯಗ್ ಜ್ಞಾನವೇ ದರ್ಶನ. ವಿಶಾರದನಾದ ಈಶ್ವರನದಾಗಿ ಕ್ರೀಡಿಸುವ ಅವಿದ್ಯೆಯೆನಿಸಿಕೊಂಡ ಮಾಯೆ ಯಾವಾಗ ವಿದ್ಯಾರೂಪದಲ್ಲಿ ಪರಿಣಿತವಾಗುತ್ತದೆಯೋ ಆಗ ಜೀವೋಪಾದಿಯಾದ, ಸ್ಥೂಲ ಸೂಕ್ಷ್ಮ ರೂಪವನ್ನು

ದಹಿಸಿ. ಕಾಷ್ಠವಿಲ್ಲದೇ ಬೆಳಗುವ ಅಗ್ನಿಯಂತೆ ತಾನೇ ಉಪರತವಾಗುತ್ತದೆ. ಆಗ ಜೀವನು ಬ್ರಹ್ಮಸ್ವರೂಪನಾಗಿ ಪರಮಾನಂದದಿಂದ ವಿರಾಜಮಾನನಾಗುತ್ತಾನೆ. – ಎಂಬುದಾಗಿ ತತ್ತ್ವಜ್ಞರು ಹೇಳುತ್ತಾರೆ. (ಭಾಗ. ೧-೬೫)

ನಾರದರು ವೇದವ್ಯಾಸರಿಗೆ ತಮ್ಮ ಪೂರ್ವಜನ್ಮ ವೃತ್ತಾಂತವನ್ನು ತಿಳಿಸುತ್ತಾ "....ಹೀಗೆ ಹರಿಸೇವಾರತಿಯಿಂದ, ಪ್ರಪಂಚಾತೀತನಾಗಿ ಬ್ರಹ್ಮರೂಪನಾಗಿ. ನನ್ನಲ್ಲಿ ಸ್ಥೂಲ ಸೂಕ್ಷ್ಮವಾದ ಈ ಶರೀರವು ನಿಜಮಾಯಾ ಕಲ್ಪಿತವೆಂದು ಮಹಾತ್ಮರಾದ ಯೋಗಿ ಜನರಿಂದ ರಜಸ್ತಮೋ ಹಾರಿಣಿಯಾದ ಭಕ್ತಿ ಸಂಭವಿಸಿತು......." ಎಂಬುದಾಗಿ ಹೇಳುತ್ತಾನೆ (ಭಾಗ. ೧-೧೦೬).

ವೈಕುಂಠದ ದ್ವಾರದಲ್ಲಿ ತಮ್ಮನ್ನು ತಡೆದ ಜಯವಿಜಯರೊಂದಿಗೆ ಸನಕ ಸನಂದಾದಿಗಳು ಸುದೀರ್ಘ ಚರ್ಚೆಗೆ ಇಳಿಯುತ್ತಾರೆ. ಆ ಸಂದರ್ಭದಲ್ಲಿ ಅವರು "ಭೂಸುರ ವೇಷಧಾರಿಗಳಾದ ನಮಗೂ. ವೈಕುಂಠ ನಾಯಕನಾದ ಸರ್ವೇಶ್ವರನಿಗೂ ಭೇದವೇ ಇಲ್ಲವಾದ ಕಾರಣ ಶಂಕಿಸುವ ಅಗತ್ಯವಿಲ್ಲ" ಎಂದು ಹೇಳುವ ಮಾತುಗಳು ಆ ಮಾತಿನ. ಭಾವದ ಹಿಂದಿರುವ ತರ್ಕ ಸ್ಪಷ್ಟವಾಗಿ ಅದ್ವೈತವನ್ನೆ ಪ್ರತಿಪಾದಿಸುತ್ತದೆ.

ಈ ರೀತಿಯ ಹಲವಾರು ನಿದರ್ಶನಗಳನ್ನು ನೀಡುತ್ತ ಹೋಗಬಹುದು. ಪೋತನಾಮಾತ್ಯನ ರಚನೆಯ ಉದ್ದಕ್ಕೂ ಶಂಕರಾದ್ವೈತದ ಪ್ರಭಾವವನ್ನು ಕಾಣಬಹುದು. ಇದು ಕೇವಲ ಪ್ರಭಾವವೆನ್ನುವುದಕ್ಕಿಂತಲೂ ಅದ್ವೈತ ಪ್ರತಿಪಾದನೆ ಎಂದರೆ ಹೆಚ್ಚು ಸೂಕ್ತವಾಗುತ್ತದೆ.

ಆ ನಂತರದ ಕಾಲದಲ್ಲಿ ಆಂಧ್ರದಲ್ಲಿ ವೈದಿಕ ಧರ್ಮವೇ ಮೇಲುಗೈಯನ್ನು ಸಾಧಿಸಿತು. ವೈದಿಕದಲ್ಲಿ ದ್ವೈತ, ಅದ್ವೈತ. ವಿಶಿಷ್ಟಾದ್ವೈತ ಸಂಪ್ರದಾಯಗಳು ಹುಟ್ಟಿ ಪ್ರಬಲಗೊಂಡರೂ ಅವು ತಮ್ಮ ಪ್ರಭಾವವನ್ನು ಸಾಹಿತ್ಯದಲ್ಲಿ ಅಷ್ಟಾಗಿ ತೋರಲಿಲ್ಲ.

ಪೋತನ ನಂತರ ನಮಗೆ ಬಹುಮುಖ್ಯವಾದ ಮತ್ತೊಬ್ಬ ಕವಿ ಎಂದರೆ ಕವಿಸಾರ್ವಭೌಮ ಶ್ರೀನಾಥ. ಈತನು ಬರೆದ ಹರವಿಲಾಸವೆಂಬ ಕಾವ್ಯದಲ್ಲಿ ಶಂಕರಾದ್ವೈತದ ಪ್ರಭಾವವಿರುವುದು ಕಂಡುಬರುತ್ತದೆ. ತಾರಕಾಸುರ ಕಾಟವನ್ನು ತಡೆಯಲಾರದೆ ದೇವತೆಗಳು ಬ್ರಹ್ಮದೇವನನ್ನು ಪ್ರಾರ್ಥಿಸುವ ಸಂದರ್ಭದಲ್ಲಿ "ಜಗನ್ನಾಥ, ಜಗಜ್ಜನನ, ಸ್ಥಿತಿ ಸಂಹಾರಕ, ....ಭೂರ್ಭುವಸ್ಸುವಸ್ತ್ರಯಾ ಶುಕಿ ಪಂಜರ, ನಿರಂಜನ... ಸನಾತನ ....ಶಾಶ್ವತ, ವಿಶ್ವತೋಮುಖ. ನಿರ್ವಿಕಲ್ಪ, ನಿರೀಹ, ನಿರಾಕಾರ. ಓಂಕಾರಗಮ್ಯ ಅದಿಗ್ದೇಶ ಕಾಲ ವ್ಯವಚ್ಛೇದನೀಯ, ಆದಿಮಧ್ಯಾಂತಶ್ಶೂನ್ಯ, ಅವ್ಯಯ... ಅದ್ವಿತೀಯ ನಿರಸ್ತ ಸಮಸ್ತೋಪಾಧಿಕ. ಸಚ್ಚಿದಾನಂದ ಸ್ವರೂಪ–" ಎಂದು, ಶ್ರೀನಾಥ ಬಳಸಿರುವ ವಿಶೇಷಣಗಳಿಂದ ಶ್ರೀನಾಥ ಕವಿಗೆ ಶಂಕರಾದ್ವೈತದ ಬಗ್ಗೆ ಇದ್ದ ಒಲವು ತೋರುತ್ತವೆ.

ಶ್ರೀನಾಥನ ನಂತರ ತೆಲುಗು ಸಾಹಿತ್ಯದಲ್ಲಿ ಬಂದ ಬದಲಾವಣೆಯನ್ನು ಗುರುತಿಸಬೇಕು. ಅದುವರೆಗೆ ಬಂದ ತೆಲುಗು ಸಾಹಿತ್ಯ ರಾಜಾಶ್ರಯವನ್ನು

ಅವಲಂಬಿಸಿದ್ದರೂ ಅದು ಎಂದೂ ಧರ್ಮ ಪ್ರತಿಪಾದನೆಯನ್ನು ಬಿಟ್ಟಿರಲಿಲ್ಲ. ಆದರೆ ಶ್ರೀನಾಥನ ನಂತರ ವಿಶೇಷವಾಗಿ ವಿಜಯನಗರದರಸರ ಕಾಲದಲ್ಲಿ ಬಂದ ಸಾಹಿತ್ಯವು ಧರ್ಮಕ್ಕಿಂತಲೂ ಕಾವ್ಯಧರ್ಮಕ್ಕೆ ಹೆಚ್ಚು ಒಲವನ್ನು ತೋರಿ. ಅಷ್ಟಾದಶವರ್ಣನೆಗಳು ಪ್ರಾಧಾನ್ಯ ಪಡೆದವು. ಕಾವ್ಯ ಶೃಂಗಾರ ಅಥವಾ ವೀರರಸ ಪ್ರಧಾನವಾದುದರಿಂದ ಅಲ್ಲಿ ಕವಿಗೆ ತನ್ನ ಆಧ್ಯಾತ್ಮಿಕ ನಿಲುವನ್ನು ಅಭಿವ್ಯಕ್ತಗೊಳಿಸಲು ಸಾಧ್ಯವಾಗದೆ ಹೋಯಿತು. ಹೀಗಿದ್ದ ಮಾತ್ರಕ್ಕೆ ಅವರಿಗೆ ಅಧ್ಯಾತ್ಮಿಕ ಚಿಂತನೆಯೇ ಇರಲಿಲ್ಲವೆಂದು ಭಾವಿಸಲಾಗದು. ಈ ರೀತಿಯ ಪ್ರಬಂಧ ಕಾವ್ಯಗಳ ನಾಂದೀ ಪ್ರಸ್ತಾವನಾ ಪದ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅಲ್ಲಿ ಅವರ ಒಲವು ಕಂಡುಬರುತ್ತದೆ.

ಇನ್ನು ನಮ್ಮ ಗಮನವನ್ನು ತೆಲುಗು ಶತಕ ಸಾಹಿತ್ಯದತ್ತ ಹೊರಳಿಸಿದರೆ ತುಂಬಾ ಕುತೂಹಲಕಾರಿಯಾದ ಅಂಶಗಳು ತಿಳಿದುಬರುತ್ತವೆ. 'ಶತಕ'ವೆಂಬುದು ಕವಿಯು ತನ್ನ ಪ್ರಿಯದೈವದೊಂದಿಗೆ ತುಂಬಾ ಕಳಕಳಿಯಿಂದ ಮಾಡಿಕೊಂಡ ಆತ್ಮನಿವೇದನೆ. ಇಲ್ಲಿ ಕವಿ ತುಂಬಾ ಸ್ವತಂತ್ರ. ಹೀಗಾಗಿ 'ಕಾವ್ಯ'ದಲ್ಲಿ ಕಂಡುಬರುವುದಕ್ಕಿಂತಲೂ ಸ್ಪಷ್ಟವಾಗಿ ನೇರವಾಗಿ ಸಿದ್ಧಾಂತದ ಪ್ರಭಾವ. ಮತ್ತು ಅದರ ಅನುಸಂಧಾನ ವಿಧಾನ-ಅನುಭೂತಿಗಳನ್ನು ಕಾಣಬಹುದು.

ಶ್ರೀ ಕಾಕುಳಾಂಧ್ರ ಮಹಾವಿಷ್ಣು ಶತಕದಲ್ಲಿ "ಕನುಕಟ್ಟು ಕಟ್ಟಿದು ಗಾರಡೀಡುನು ಬೋಲೆ ಮಿಥ್ಯಾ ಪ್ರಪಂಚಂಬು ತಥ್ಯಮುಗನು" (ಮಿಥ್ಯಾ ಪ್ರಪಂಚವನ್ನು ಸತ್ಯವೆಂಬಂತೆ ಗಾರುಡಿಕಾರನಂತೆ ಕಣ್ಣಿಗೆ ಕಟ್ಟುತ್ತವೆ) —ಎನ್ನುತ್ತಾನೆ ಕವಿ.

ನೃಸಿಂಹ ಶತಕವನ್ನು ಬರೆದ ಶೇಷಪ್ಪ ಕವಿ "ಬಾಲ್ಯ, ಯೌವನ, ದುರ್ಬಲ ವೃದ್ಧಾಪ್ಯಗಳೆಂಬ ಮೂರರಲ್ಲಿ ಮುಳುಗುವ ಕೊಳೆಯ ಕೊಂಪೆ ಈ ಶರೀರ. ಭ್ರಾಂತಿಯಿಂದ ಇದನ್ನು ಕಾಪಾಡುವೆನೆಂದರೆ ಕಾಲಮೃತ್ಯುವಿನಿಂದ ಇದು ಕಳೆದು ಹೋಗುತ್ತದೆ. ಇದು ಮಾಯಾ ನಾಟಕ. ಇದನ್ನು ನಂಬಬಾರದಯ್ಯಾ" ಎಂಬುದಾಗಿ ಒಂದೆಡೆ ಹೇಳುತ್ತಾನೆ. ಕಾಣುವುದು ಮಾಯೆ, ದೇಹಾತ್ಮ ಭಾವಭ್ರಾಂತಿ. ಶರೀರ ಅಶಾಶ್ವತವೆಂದು ಹೇಳುವ ಅದ್ವೈತೋಕ್ತಿ ಇಲ್ಲಿದೆ.

ನಮ್ಮ ಪ್ರಾಚೀನರು ಧರ್ಮಾರ್ಥಕಾಮ ಮೋಕ್ಷಗಳಿಗೆ ಸರಿಸಮಾನವಾದ ಪ್ರಾಮುಖ್ಯವನ್ನು ನೀಡಿದರೂ ಭಾರತದೇಶ ಕೇವಲ ಅಧ್ಯಾತ್ಮಿಕ ವಿದ್ಯೆಗೆ ಅಂಟಿಕೊಂಡು ಪ್ರತಿಯೊಬ್ಬನೂ ಪರದಲ್ಲಿ ಚೆನ್ನಾಗಿರುವುದಕ್ಕೆಂದೇ ಬದುಕುತ್ತಿರುವಂತೆ ಭಾವಿಸಿದ ಕಾರಣ ಒಂದು ರೀತಿಯ ತಾತ್ತ್ವಿಕ ನಿರ್ವೇದ ನಮ್ಮ ರಕ್ತದಲ್ಲಿ ಇಂಗಿಹೋಯಿತು. ಇದಕ್ಕೆ ಅರೆಬರೆ ವೇದಾಂತಜ್ಞಾನವೇ ಕಾರಣ. ನಮ್ಮ ಭಾರತೀಯ ದಾರ್ಶನಿಕರು ಪ್ರತಿಪಾದಿಸಿದ ವಿವಿಧ ದರ್ಶನಗಳಲ್ಲಿಯ ಹಲವಾರು ಅಂಶಗಳನ್ನು ಕಲಬೆರಕೆಮಾಡಿ ಬೋಧಿಸಿರುವವರಿಗೇನೂ ಕೊರತೆಯಿಲ್ಲ. ಉಪನಿಷತ್ತಿನಲ್ಲಿ ಹೇಳಿದ ಬ್ರಹ್ಮಪದಾರ್ಥ, ಹಠಯೋಗದಲ್ಲಿಯ ಕುಂಡಲಿನಿ. ಭಗವದ್ಗೀತೆ ಹೇಳುವ ಕರ್ಮವಾದ ಮುಂತಾದುವುಗಳು ಒಂದೇ ಏರಕದಲ್ಲಿ ಬಂದು ಸಾಮಾನ್ಯರಿಗೆ ವೇದಾಂತವಾಯಿತು. ಇದನ್ನೇ ಬೋಧಿಸುವ

ಗುರುಗಳು ಹದಿನಾರು ಮತ್ತು ಹದಿನೇಳನೆಯ ಶತಮಾನಗಳಲ್ಲಿ ಹೆಚ್ಚಾಗಿ ಕಾಣಸಿಗುತ್ತಾರೆ. ಪದ್ಯವನ್ನು ಬರೆಯಲು ಬಲ್ಲ ವೇದಾಂತಿಗಳೆಲ್ಲ ವೇದಾಂತ ಗ್ರಂಥಗಳನ್ನು ಬರೆದರು. ಇದಕ್ಕೂ ಒಂದು ಚಾರಿತ್ರಿಕ ಕಾರಣವಿಲ್ಲದೇ ಇಲ್ಲ. ತಮ್ಮ ದೇಶವನ್ನು ಪರಧರ್ಮಾನುಯಾಯಿಗಳು ಆಳುತ್ತಿರುವಾಗ ತಮ್ಮ ಮತವನ್ನು ಹೇಗಾದರೂ ಉಳಿಸಿಕೊಳ್ಳಬೇಕು– ಎಂದು ಮಾಡಿದ ಪ್ರಯತ್ನಗಳಲ್ಲಿ ಈ ರೀತಿಯ ರಚನೆಯೂ ಒಂದು. ಇಲ್ಲಿ ಅವರ ಸ್ವಧರ್ಮಾಭಿಮಾನವನ್ನ ನಾವು ಗುರುತಿಸಿ ಮೆಚ್ಚಲೇಬೇಕು. ನಿಜ. ಅವರ ವೇದಾಂತ ಕಲಬೆರಕೆಯಾಗಿರಬಹುದು. ಜನಸಾಮಾನ್ಯರೂ ಜಿಜ್ಞಾಸುಗಳಾಗುವಂತೆ ಮಾಡಿದ ಇವರ ಪ್ರಯತ್ನ ಗಮನಾರ್ಹವಾದುದು.

ಈ ಶತಮಾನದಲ್ಲಿ ಬಂದ ವೇದಾಂತ ಕವಿಗಳಲ್ಲಿ ಪರಮಾನಂದ ತೀರ್ಥರು ಬಹುಮುಖ್ಯರು. ಈತನು ಸುಮಾರು ೧೫೮೬ ರ ಸುಮಾರಿನಲ್ಲಿದ್ದವನು. ಈತನು ಹನ್ನೊಂದು ಗ್ರಂಥಗಳನ್ನು ಬರೆದಿದ್ದು ಅವುಗಳಲ್ಲಿ ಅನುಭವದರ್ಪಣಂ, ಉತ್ತರ ಗೀತಾವ್ಯಾಖ್ಯ, ಪರಮಾನಂದಶತಕಂ, ಬ್ರಹ್ಮವಿದ್ಯಾ ಸುಧಾರ್ಣವಂ, ಮುಕ್ತಿಕಾಂತಾ ಪರಿಣಯಂ, ವಿವೇಕ ಚಿಂತಾಮಣಿ ಮತ್ತು ಶಿವಜ್ಞಾನ ಸುಂದರಿ ಮುಂತಾದುವು ಗಮನಾರ್ಹವಾದುವು. ಇದೇ ಅವಧಿಯಲ್ಲಿ ಬಾಳಿದ ಕೊಪ್ಪಕಾವೂರು ಮುಮ್ಮಡಿ ಮಲ್ಲನ್ನ ಮತ್ತೊಬ್ಬ ಪ್ರಮುಖ ವೇದಾಂತ ಕವಿ. ಬಾಲ್ಯದಿಂದಲೂ ವೇದಾಂತದತ್ತ ಒಲವು ಹೊಂದಿದ್ದ ಮುಮ್ಮಡಿ ಮಲ್ಲನ್ನ ಬಾಲ್ಯದಲ್ಲಿಯೇ 'ತತ್ವ ಚಂದ್ರೋದಯಂ' —ಎಂಬ ದ್ವಿಪದಿ ಕಾವ್ಯವನ್ನು ರಚಿಸಿದ್ದಾನೆ. ಈ ಗ್ರಂಥದ ವಿಷಯ ಒತ್ತಟ್ಟಿಗಿರಲಿ ಅದರ ನಿರೂಪಣಾ ತಂತ್ರವೇ ತುಂಬಾ ಆಸಕ್ತಿಕರವಾಗಿದೆ. ರುಕ್ಮಿಣಿ ದೇವಿಯ ಕೋರಿಕೆಯ ಮೇರೆಗೆ ಲೋಕಾನುಗ್ರಹಾಕಾಂಕ್ಷೆಯಿಂದ ಶ್ರೀಕೃಷ್ಣನು ಅದ್ವೈತ ಮಾರ್ಗವನ್ನು ಉಪದೇಶಿಸಿದಂತಿದೆ. ಮುಮ್ಮಡಿ ಮಲ್ಲನ್ನ ತನ್ನ ಈ ಗ್ರಂಥವನ್ನು ಶ್ರೀರಾಮನಿಗೆ ಅಂಕಿತ ಮಾಡಿದ್ದಾನೆ. ಇದಲ್ಲದೆ 'ಶ್ರೀರಾಮ ಸ್ತವರಾಜಂ' ಎಂಬ ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿ ಭಗವಾನ್ ವ್ಯಾಸರು ಧರ್ಮರಾಯನಿಗೆ ಶ್ರೀರಾಮ ನಾಮಮಂತ್ರ ಪ್ರಭಾವವನ್ನು. ವೇದಾಂತ ವಿಷಯಗಳನ್ನು ಪ್ರಬೋಧಿಸಿದಂತೆ ನಿರೂಪಣೆಯಿದೆ. ಇದನ್ನು ಮಲ್ಲನ್ನ ಶ್ರೀಕೃಷ್ಣನಿಗೆ ಅಂಕಿತ ನೀಡಿದ್ದಾನೆ. ಮುಮ್ಮಡಿ ಮಲ್ಲನ್ನ ತುಂಬಾ ಪ್ರಭಾವಶಾಲಿಯಾದ ವ್ಯಕ್ತಿಯಾಗಿದ್ದು ಅದ್ವೈತವನ್ನು ಪ್ರಚಾರ ಮಾಡಿದ. ಈತನ ಶಿಷ್ಯರಾದ ಡಿಲ್ಲಿ ವೆಂಕಿಜಕವಿ, ಮಾರೇಪಲ್ಲಿ ವೆಂಕಟಯೋಗಿ ಕವಿ ಮುಂತಾದವರು ತಾವೇ ಗುರುವಿನ ಮಾರ್ಗವನ್ನು ಅನುಸರಿಸಿ ಅದ್ವೈತವನ್ನು ಪ್ರಚಾರ ಮಾಡುವ ವೇದಾಂತ ಕೃತಿಗಳನ್ನೆ ರಚಿಸಿದರು.

ಶತಕಗಳಲ್ಲದೇ ಅದ್ವೈತಕ್ಕೆ ಸಂಬಂಧಪಟ್ಟಂತೆ ಸಾಧಕರು ತತ್ತ್ವಪದಗಳಲ್ಲಿ ತಮ್ಮ ಅನುಭಾವದ ಅನುಭೂತಿಯನ್ನು ಸಾರಿರುವುದೂ ಉಂಟು. ಹಾಗೆಯೇ ಅದ್ವೈತವನ್ನು ವಿವರಿಸಿ ಬೋಧಿಸಿರುವುದುಂಟು. ಈ ರೀತಿಯ ತತ್ವಪದಗಳ ಬಗ್ಗೆ

ನಾವು ಅಷ್ಟಾಗಿ ಗಮನಹರಿಸಿಲ್ಲ. ಅದನ್ನು ಕೇವಲ ಜಾನಪದವೆಂದು ಬದಿಗಿರಿಸಿದ್ದೇವೆ. ಈ ರೀತಿಯ ಸಂಕುಚಿತ ದೃಷ್ಟಿ ಹೋಗಬೇಕು. ಇವರಲ್ಲಿ ನಿಜಕ್ಕೂ ಮೂಲಭೂತವಾಗಿ ತತ್ವಗಳನ್ನು ಕುರಿತು ಚಿಂತಿಸಿದವರಿದ್ದಾರೆ. ತಮ್ಮ ಸ್ವಂತ ಆಲೋಚನೆಗಳನ್ನು ದಾಖಲಿಸಿದವರಿದ್ದಾರೆ. ಈ ದೃಷ್ಟಿಯಿಂದ ಸುಮಾರು ಕ್ರಿ. ಶ. ೧೭೫೦–೧೮೦೦ ರಲ್ಲಿದ್ದ ಸದಾನಂದಯೋಗಿ ನಮ್ಮ ಗಮನ ಸೆಳೆಯುತ್ತಾನೆ. ಈತ 'ನವ್ಯತರಭೋಗಿ ಶ್ರೀಸದಾನಂದಯೋಗಿ' –ಎಂಬ ಮಕುಟದಿಂದ ಸುಮಾರು ತೊಂಬತ್ತು ಗೀತೆಗಳನ್ನು ರಚಿಸಿದ್ದಾನೆ. ಇದರಲ್ಲಿ ಸಕಲ ತತ್ವಾರ್ಥ ಸಂಗತಿಗಳನ್ನು ಸಂಗ್ರಹಿಸಿ ನಿರೂಪಿಸಿದ್ದಾನೆ. ಈತನು ಸಿದ್ಧಾಂತ ಜ್ಞಾನಕ್ಕಿಂತ ಅನುಭಾವದ ಅನುಭವ ಮುಖ್ಯವಲ್ಲವೇ ಎಂದು ಪ್ರಶ್ನಿಸುತ್ತಾನೆ. "ವೇದಶಾಸ್ತ್ರ ಪುರಾಣಾದಿ ವಿದ್ಯೆಗಳನೆಲ್ಲ ಓದಿ ಪಾಂಡಿತ್ಯ ಹೊಂದಿದ ಜನರಿಗೆಲ್ಲ ಅನುಭವಜ್ಞಾನವೆಲ್ಲಿದೆ ? ಅರಸಿ ನೋಡಲು" ಎಂಬುದಾಗಿ ಕೇಳುತ್ತಾನೆ. "ಯಾವ ಮತವನ್ನು ಅವಲಂಬಿಸಿದರೇನು ? ಮುಕ್ತಿಪಡೆಯುವವರಿಗೆ ಒಂದು ಮುದ್ರಪದ, ಅವನು ಸಂಕಲ್ಪರಹಿತನಾದರೆ ಸಾಕು ?" –ಎಂದು ತನ್ನ ಧೋರಣೆಯನ್ನು ಸಾರಿ ಹೇಳಿದ್ದಾನೆ. ಇವನು ಇನ್ನೂ ಮುಂದುವರಿದು ಪರಮಯೋಗಿಯಾದವನು ನಿತ್ಯ ನೈಮಿತ್ತಿಕಾದಿಗಳನ್ನು ಮಾಡದೇ ಹೋದರೆ ತಪ್ಪೇನು ? ಅದನ್ನು ಮಾಡದೆ ಹೋದರೆ ಪಾತಕವುಂಟಾಗುವುದೆಂದು ಹೆದರುವನೆ ?" ಇವನು ಎಷ್ಟು ಆಳವಾಗಿ ಯೋಚಿಸುತ್ತಾನೆಂದರೆ "ಅಯ್ಯಾ ಹೆಂಡತಿ ಮಕ್ಕಳನ್ನು ಬಿಟ್ಟಮಾತ್ರಕ್ಕೆ ಮೋಕ್ಷವೆಂಬುದು ನಿನ್ನ ಬಳಿಗೆ ಬರುತ್ತದೆಯೆ ?" ಎಂದು ಪ್ರಶ್ನಿಸಿದ ಸದಾನಂದಯೋಗಿ "ಅಯ್ಯಾ ಬಂಧ, ಮುಕ್ತ ಎಂಬ ಎರಡೂ ಭ್ರಮೆಯೇ" –ಎಂದೂ ಸಾರುತ್ತಾನೆ. ಈ ರೀತಿ ನಮ್ಮ ಗಮನ ಸೆಳೆಯುವ ಅನೇಕರಿದ್ದಾರೆ.

ಅಪಾರವಾದ ಆಂಧ್ರಸಾಹಿತ್ಯದಲ್ಲಿ ಅದ್ವೈತದ ಅಸ್ತಿತ್ವ ಮತ್ತು ಪ್ರಭಾವದ ಬಗ್ಗೆ ಇದು ಕೇವಲ ಒಂದು ಪಕ್ಷಿನೋಟವಷ್ಟೇ. ಈ ಬಗ್ಗೆ ವಿವರವಾದ ಅಧ್ಯಯನದ ಅಗತ್ಯವಿದೆ. ಆ ದಿಸೆಯಲ್ಲಿ ಒಂದು ಸಣ್ಣ ಪ್ರಯತ್ನವಿದು.

# ಮಲಯಾಳ ಸಾಹಿತ್ಯದ ಮೇಲೆ ಶಂಕರರ ಅದ್ವೈತ ಸಿದ್ಧಾಂತದ ಪ್ರಭಾವ



ಡಾ. ಶ್ರೀಕೃಷ್ಣ ಭಟ್ ಅರ್ತಿಕಜೆ

ಮಲಯಾಳವು ದ್ರಾವಿಡ ಭಾಷೆಗೆ ಸೇರಿದ ಸಮೃದ್ಧವಾದ ಒಂದು ಭಾಷೆ. ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ತಮಿಳು ಹಾಗೂ ಮಲಯಾಳ ಒಂದೇ ಉಪಪಂಗಡಕ್ಕೆ ಸೇರಿದ ಭಾಷೆಗಳು. ಮಲಯಾಳವು ತಮಿಳು ಹಾಗೂ ಸಂಸ್ಕೃತ ಭಾಷೆಗಳಿಂದ ತುಂಬ ಪ್ರಭಾವಿತವಾಗಿದೆ. ಸಂಸ್ಕೃತ ಮಲಯಾಳ ಮಿಶ್ರಿತ ಶೈಲಿಯನ್ನು ಮಣಿಪ್ರವಾಳ ಶೈಲಿ ಎನ್ನುತ್ತಾರೆ. ಮಲಯಾಳ ಭಾಷೆಯು ಸುಮಾರು ಕ್ರಿ. ಶ. ೮-೯ ನೆಯ ಶತಮಾನದಲ್ಲಿ ಪ್ರತ್ಯೇಕ ಸ್ವತಂತ್ರ ಭಾಷೆಯಾಯಿತು. ಈ ಕಾಲದಲ್ಲೇ ಮಲಯಾಳದಲ್ಲಿ ಶಾಸನಸಾಹಿತ್ಯ ಆರಂಭವಾಯಿತು. ಅನಂತರ ಬೆಳೆದು ಬಂದ ಕಾವ್ಯ ಪ್ರಕಾರವನ್ನು 'ಪಾಟ್ಟು' ಎಂದು ಕರೆಯುತ್ತಾರೆ. ಇದುವರೆಗೆ ದೊರಕಿದ ಪಾಟ್ಟು ಕೃತಿಗಳಲ್ಲಿ ಅತ್ಯಂತ ಪ್ರಾಚೀನವಾದದ್ದು 'ರಾಮಚರಿತ ಪಾಟ್ಟು'. ಇದನ್ನು ರಚಿಸಿದವರು ಚೀರಾಮನ್, ಇದರ ಕಾಲ ಹನ್ನೆರಡನೆಯ ಶತಮಾನ. ಸಂಸ್ಕೃತ ವೃತ್ತಗಳಿಗಿಂತ ಭಿನ್ನವಾದ ವೃತ್ತಗಳಲ್ಲಿ ರಚಿತವಾದ ಇದರ ಶೈಲಿ ತಮಿಳು ಮಲಯಾಳ ಮಿಶ್ರಿತ ಭಾಷಾ ಶೈಲಿಯಾಗಿದೆ. ಇದರಲ್ಲಿ ಸಂಸ್ಕೃತದ ಅಂಶ ಕಡಿಮೆಯಾಗಿತ್ತು. ಎದುಕ (ಪದಾನುಪ್ರಾಸ) ಮತ್ತು ಮೋನ (ಪ್ರತಿಪಾದದ ಆದ್ಯಕ್ಷರ ಸಜಾತೀಯವಾಗಿರುವುದು) ಎಂಬವು ಪಾಟ್ಟಿನ ಸಾಂಕೇತಿಕ ಲಕ್ಷಣಗಳಾಗಿವೆ.

ಈ ಕಾಲದ ಅನಂತರ ಮಣಿಪ್ರವಾಳ ಶೈಲಿಯ ಸಾಹಿತ್ಯ ಆರಂಭವಾಯಿತು. ಸಂಸ್ಕೃತ ಪದ ಮತ್ತು ಮಲಯಾಳ ಪದಗಳ ಸಮ್ಮಿಶ್ರ ಶೈಲಿಯೇ ಮಣಿ ಪ್ರವಾಳ ಶೈಲಿ. ಮಣಿಪ್ರವಾಳವೆಂದರೆ ಮಣಿಯನ್ನೂ (ಮಾಣಿಕ್ಯ) ಪ್ರವಾಳವನ್ನೂ (ಹವಳ) ಒಂದುಗೂಡಿಸಿ ಪೋಣಿಸಿದ ಮಾಲೆ ಅಥವಾ ಹಾಗಿರುವ ಸಾಹಿತ್ಯವೆಂದರ್ಥ. ಇಲ್ಲಿ ಮಾಣಿಕ್ಯವು ಮಲಯಾಳವನ್ನೂ ಹವಳವು ಸಂಸ್ಕೃತವನ್ನೂ ಸೂಚಿಸುತ್ತವೆ. ಒಟ್ಟಿನಲ್ಲಿ ಎರಡು ಭಾಷೆಗಳ ಪದಗಳ ಸಮ್ಮಿಶ್ರ ಶೈಲಿಯೇ ಮಣಿಪ್ರವಾಳ. ಮಣಿಪ್ರವಾಳವು

ಮಲಯಾಳದಲ್ಲಿ ಮಾತ್ರ ಇರುವ ಭಾಷಾ ಸಂಯೋಗವಲ್ಲ. ತಮಿಳು, ತೆಲುಗು, ಕನ್ನಡ ಮುಂತಾದ ದ್ರಾವಿಡ ಭಾಷೆಗಳಲ್ಲಿ ಈ ರೀತಿಯ ಸಮ್ಮಿಶ್ರಣ ಉಂಟಾಗಿತ್ತು. ಆದರೆ ಮಲಯಾಳ ಭಾಷೆಯಂತೆ ಮತ್ತಾವ ಭಾಷೆಯಲ್ಲಿಯೂ ಅದೊಂದು ಸಾಹಿತ್ಯ ಪ್ರಕಾರವಾಗಿ ಬೆಳೆದು ಬರಲಿಲ್ಲ. ಮಣಿಪ್ರವಾಳದಲ್ಲಿ ಸಂಸ್ಕೃತ ವೃತ್ತಗಳನ್ನೇ ಮುಖ್ಯವಾಗಿ ಉಪಯೋಗಿಸಲಾಯಿತು. ವಸ್ತುವು ಸ್ವತಂತ್ರ ಸಾಮಾಜಿಕವಾದದ್ದರಿಂದ ಧರ್ಮ ಹಾಗೂ ತತ್ತ್ವಕ್ಕೆ ಇಲ್ಲಿ ಎಡೆಯಿಲ್ಲ.

ಹದಿನಾಲ್ಕು ಹದಿನೈದನೆಯ ಶತಮಾನದ ಕಾಲದಲ್ಲಿ 'ಕಣ್ಣಶ್ಶನ್ ಪಾಟ್ಟುಗಳ್' ಎನ್ನುವ ಕೃತಿಗಳು ರಚಿತವಾದುವು. ಕಣ್ಣಶ್ಶನ್ ಕವಿಗಳು ಪಾಟ್ಟನ್ನು ಹೆಚ್ಚು ಕಡಿಮೆ ಮಣಿ ಪ್ರವಾಳ ಶೈಲಿಯಲ್ಲಿ ರಚಿಸಿದರೆಂದು ಹೇಳಬಹುದು. ಅದರಿಂದಾಗಿ 'ಪಾಟ್ಟು' ತಮಿಳಿನ ಧಾಟಿಯನ್ನು ಬಿಟ್ಟು ಸಂಸ್ಕೃತಾತ್ಮಕವಾದ ಒಂದು ಕಾವ್ಯ ಪ್ರಕಾರವಾಗಿ ರೂಪುಗೊಂಡಿತು. ಅದುವರೆಗಿನ ಮಣಿಪ್ರವಾಳ ಕಾವ್ಯಗಳಿಂದ ಬೇರೆಯಾದ ಕಾವ್ಯ ಕ್ಷೇತ್ರವನ್ನು ಅಂದರೆ ಪುರಾಣಗಳನ್ನು ಕಣ್ಣಶ್ಶನ್ ಕವಿಗಳು ಆಶ್ರಯಿಸಿದರು. ಸಾಮಾಜಿಕ ಹಿನ್ನೆಲೆಯುಳ್ಳ ನವೀನ ವಿಷಯಗಳಿಗಿಂತ ಅಂದಿನ ಸ್ಥಿತಿಯಲ್ಲಿ ಕಾವ್ಯರಚನೆಗೆ ಅಗತ್ಯವಿರುವುದು ಪುರಾಣ ಕಥೆಗಳೆಂದು ಅವರಿಗೆ ತೋರಿರಬೇಕು. ಹಿಂದಿನ ಮಣಿಪ್ರವಾಳ ಕವಿಗಳಿಗಿಂತ ಕಣ್ಣಶ್ಶ ಕವಿಗಳು ಹೆಚ್ಚು ಪ್ರಾಜ್ಞರೂ ತತ್ತ್ವಚಿಂತಕರೂ ಆಗಿದ್ದರು. ಅವರ ಜೀವನ ದೃಷ್ಟಿಯು ಹೆಚ್ಚು ಸ್ಪಷ್ಟವಾಗಿತ್ತು. ಭಾರತೀಯ ಪುರಾಣೇತಿಹಾಸಗಳಲ್ಲಿ ಅವರು ತಮ್ಮ ವಿಶಿಷ್ಟ ರೀತಿಗೆ ಒಂದು ವಿಶಾಲರಂಗವನ್ನು ಕಂಡುಕೊಂಡರು. ಅದರ ಫಲವಾಗಿ ಮಹಾಭಾರತ, ಭಾಗವತ, ವಾಲ್ಮೀಕಿ ರಾಮಾಯಣ ಮುಂತಾದ ಮಹತ್ತರವಾದ ಪುರಾಣ ಗ್ರಂಥಗಳನ್ನೆಲ್ಲ ಆಧಾರವಾಗಿಟ್ಟುಕೊಂಡು ಹಲವು ಪ್ರೌಢ ಕೃತಿಗಳನ್ನು ಮಲಯಾಳದಲ್ಲಿ ರಚಿಸಲು ಅವರಿಗೆ ಸಾಧ್ಯವಾಯಿತು. ಕಣ್ಣಶ್ಶನ್ ಕೃತಿಗಳನ್ನು ರಚಿಸಿದ ಪ್ರಮುಖ ಕವಿತ್ರಯರಾದ ಮಾಧವ ಪಣಿಕ್ಕರ್, ಶಂಕರ ಪಣಿಕ್ಕರ್ ಹಾಗೂ ರಾಮ ಪಣಿಕ್ಕರ್ ಒಂದೇ ಕುಟುಂಬಕ್ಕೆ ಸೇರಿದವರಾಗಿದ್ದರು. ಕಣ್ಣಶ್ಶನ್ ಕೃತಿಗಳು ದ್ರಾವಿಡ ಛಂದಸ್ಸಿನಲ್ಲಿದ್ದರೂ ಶೈಲಿ ಸಂಸ್ಕೃತ ಭೂಯಿಷ್ಠವಾಗಿತ್ತು.

ಮಾಧವ ಪಣಿಕ್ಕರರ ಭಗವದ್‌ಗೀತೆ, ಶಂಕರ ಪಣಿಕ್ಕರರ ಭಾರತ ಮಾಲೆ, ರಾಮ ಪಣಿಕ್ಕರರ ರಾಮಾಯಣ, ಭಾರತ, ಭಾಗವತ, ಶಿವರಾತ್ರಿ ಮಹಾತ್ಮ್ಯ ಎಂಬವುಗಳು ಕಣ್ಣಶ್ಶ ಕೃತಿಗಳಲ್ಲಿ ಪ್ರಮುಖವಾದವುಗಳು. ಭಾರತೀಯ ಭಾಷೆಗಳಲ್ಲಿ ಬಂದ ಭಗವದ್ಗೀತೆಯ ಮೊದಲ ವ್ಯಾಖ್ಯಾನಗಳಲ್ಲಿ ಮಾಧವ ಪಣಿಕ್ಕರರ ಭಾಷಾಂತರವೂ ಒಂದಾಗಿದ್ದು ಮಲಯಾಳದಲ್ಲಿ ಬಂದ ಭಗವದ್ಗೀತೆಯ ಮೊದಲ ಪೂರ್ಣ ಅನುವಾದವಾಗಿದೆ. ಶಂಕರಾಚಾರ್ಯರು ಗೀತೆಗೆ ಬರೆದ ಭಾಷ್ಯದಲ್ಲಿ ಮಾಧವ ಪಣಿಕ್ಕರರಿಗೆ ಹೆಚ್ಚಾದ ಪಾಂಡಿತ್ಯವಿತ್ತು. ಸ್ವಚಿಂತನೆಯಿಂದ ಗೀತೆಯ ಅಂತರಾಳಕ್ಕಿಳಿದು ಮಾಡಿದ ಈ ಭಾಷಾಂತರದಲ್ಲಿ ಏಳುನೂರು ಶ್ಲೋಕಗಳಿಂದ ಕೂಡಿದ ಮೂಲ ಗೀತೆಯನ್ನು ಮುನ್ನೂರ ಇಪ್ಪತ್ತೆಂಟು ದ್ವಿಪದಿಗಳಲ್ಲಿ ಸಂಕ್ಷೇಪಿಸಿದ್ದರೂ ಮೂಲದ ಸಾರಾಂಶವನ್ನು ಸ್ವಲ್ಪವೂ ಬಿಡದಂತೆ ಪ್ರತಿಪಾದಿಸಿರುವುದು ಇದರ ವೈಶಿಷ್ಟ್ಯ. ಕೆಲವೆಡೆ ಪ್ರಾಚೀನ ಭಾಷ್ಯಗಳ

ಪ್ರಭಾವವಾಗಿರುವುದು ಕಂಡುಬರುತ್ತದೆ. ಶಂಕರ ಪಣಿಕ್ಕರರ ಭಾರತಮಾಲಾ ಎಂಬುದು ಮಹಾಭಾರತದ ಸಂಕ್ಷಿಪ್ತ ರೂಪದ ಅನುವಾದವಾಗಿದ್ದು ಅದು ಮಲಯಾಳದಲ್ಲಿ ರಚಿತವಾದ ಮೊದಲ ಭಾರತ ಕೃತಿಯಾಗಿದೆ. ಕೃತಿಗಳ ಸಂಖ್ಯೆಯಲ್ಲಿ ಮಾತ್ರವಲ್ಲ ಆಂತರಿಕವಾದ ಸಾಹಿತ್ಯಿಕ ಮೇಲ್ಮೆಯಲ್ಲೂ ರಾಮ ಪಣಿಕ್ಕರ್‌ಗೆ ಉನ್ನತ ಸ್ಥಾನವಿದೆ. ಅವರ ಕೃತಿಗಳಲ್ಲಿ ಶುದ್ಧ ತತ್ವಕ್ಕಿಂತ ವೀರ ಮತ್ತು ಭಕ್ತಿ ಮುಖ್ಯವಾಗಿರುವುದು ಕಂಡುಬರುತ್ತದೆ. ಇವರ ರಾಮಾಯಣವು ಒಂದು ಉತ್ತಮ ಕೃತಿಯಾಗಿದ್ದು ಇದರಲ್ಲಿ ಕವಿಯ ಮನೋಧರ್ಮ ವಿಲಾಸವೂ ನಿತ್ಯ ನವೀನವಾಗಿವೆ. ಮೂಲಕೃತಿಯ ವಸ್ತುವಿನೊಡನೆ ಕವಿಯ ಸ್ವಂತ ಮನೋಧರ್ಮಗಳಿಂದೊಡಗೂಡಿದ ಹಾಗೂ ಬೆಡಗುಗೊಳಿಸುವ ಅನೇಕ ಭಾಗಗಳು ಅವುಗಳಲ್ಲಿವೆ. ಆ ಬಳಿಕ ಬಂದ ಮಲಯಾಳದ ಮಹಾಕವಿ ಎಳುತ್ತಚ್ಚನ್ ಮೇಲೂ ಈ ರಾಮಾಯಣ ಕಾವ್ಯ ಪ್ರಭಾವ ಬೀರಿರುವುದು ಇದರ ವೈಶಿಷ್ಟ್ಯವಾಗಿದೆ.

ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಚೆರುಶ್ಶೇರಿ ನಂಬೂದಿರಿಯಿಂದ ರಚಿತವಾದ ಕೃಷ್ಣಗಾಥ ಅಥವಾ ಕೃಷ್ಣಪ್ಪಾಟ್ಟು ಭಾಗವತ ಪುರಾಣದ ದಶಮ ಸ್ಕಂಧದ ಕಥೆಯನ್ನು ಹೊಂದಿದ್ದು ಶುದ್ಧ ಮಲಯಾಳ ಭಾಷೆಯಲ್ಲಿ 'ಮಂಜರಿ' ಎಂಬ ದ್ರಾವಿಡ ಛಂದಸ್ಸಿನಲ್ಲಿ ರಚಿತವಾಗಿದೆ. ಈ ಕೃತಿಯಲ್ಲಿ ಚೆರುಶ್ಶೇರಿ ನಂಬೂದಿರಿ ಸಾಧ್ಯವಾದ ಮಟ್ಟಿಗೆ ವ್ಯವಹಾರ ಭಾಷೆಗೆ ಸಮೀಪವಿರುವ ಶೈಲಿಯನ್ನು ಬಳಸಿರುವುದು ಕಂಡುಬರುತ್ತದೆ. ಇದರಲ್ಲಿ ಭಕ್ತಿಯೇ ಮುಖ್ಯ ಭಾವವಾಗಿದೆ. ಎಳುತ್ತಚ್ಚನ್‌ಗಿಂತ ಹಿಂದೆ ಪೌರಾಣಿಕ ಕಥೆಗಳನ್ನು ಬರೆದ ಕವಿಗಳಲ್ಲಿ ಹೆಚ್ಚು ಸ್ಪಷ್ಟವಾದ ವ್ಯಕ್ತಿತ್ವವನ್ನು ಪ್ರದರ್ಶಿಸಿದ ಕವಿ ಚೆರುಶ್ಶೇರಿ ನಂಬೂದಿರಿ. ಆಧುನಿಕತೆಯ ಲಕ್ಷಣಗಳು ಮಲಯಾಳ ಕಾವ್ಯದಲ್ಲಿ ಮೊದಲು ಒಡಮೂಡಿದುದು ಈ ಕವಿಯ ಕೃತಿಗಳಲ್ಲಿ ಎನ್ನಬಹುದು. ಸರಳವೂ ಲಲಿತವೂ ಆದ ರಚನಾ ವೈಭವವೇ ಕೃಷ್ಣಗಾಥದ ಬಹುದೊಡ್ಡ ಮಹತ್ವ.

'ಎಳುತ್ತಚ್ಚನ್' ಎಂಬುದಾಗಿ ಜನಪ್ರಿಯರಾದ ತಂಕಾಟ್ ರಾಮಾನುಜನ್ ಎಳುತ್ತಚ್ಚನ್ ಮಲಯಾಳ ಭಾಷೆ ಮತ್ತು ಸಾಹಿತ್ಯದ ಪಿತಾಮಹನೆಂದು ಪ್ರಸಿದ್ಧರಾದವರು. ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಇವರು ಆಧುನಿಕ ಮಲಯಾಳ ಸಾಹಿತ್ಯದ ಮಾರ್ಗದರ್ಶಕರಾದರು. ಇವರು ಸಂಸ್ಕೃತದ ವಿದ್ವಾಂಸರೂ ಕವಿಗಳೂ ಆದ ಮೇಲ್‌ಪುತ್ತೂರ್ ನಾರಾಯಣ ಭಟ್ಟ ಮತ್ತು ಜನಪ್ರಿಯ ಮಲಯಾಳ ಕವಿ ಪೂಂದಾನಂ ಅವರ ಸಮಕಾಲೀನರಾಗಿದ್ದರು. ಎಳುತ್ತಚ್ಚನ್ ಮಲಯಾಳ ಮಾತ್ರವಲ್ಲದೆ ತಮಿಳು ಹಾಗೂ ಸಂಸ್ಕೃತ ಭಾಷೆಗಳಲ್ಲಿ ವಿದ್ವಾಂಸರಾಗಿದ್ದರು. ಪರಿವರ್ತನಾತ್ಮಕವೂ ರಚನಾತ್ಮಕವೂ ಆದ ಇವರ ಕೃತಿಗಳು ಆಂತರಿಕವಾಗಿಯೂ ಬಾಹ್ಯವಾಗಿಯೂ ಮಲಯಾಳ ಸಾಹಿತ್ಯ ಸ್ವರೂಪವನ್ನು ನವೀನಗೊಳಿಸಿದುವು. ಅಂದು ಸಾಂಸ್ಕೃತಿಕ ಕ್ಷೇತ್ರದಲ್ಲಿ ಒಬ್ಬ ಮಾರ್ಗದರ್ಶಿಯ ಹಾಗೂ ಪ್ರತಿಭಾಶಾಲಿಯ ಅವಶ್ಯಕತೆ ಇತರ ಯಾವುದೇ ಕಾಲಕ್ಕಿಂತಲೂ ಹೆಚ್ಚಾಗಿ ಕೇರಳದಲ್ಲುಂಟಾಗಿತ್ತು. ಅಂತಹ ಅವಶ್ಯಕತೆಯನ್ನು ಪೂರೈಸಬಲ್ಲ ಒಬ್ಬ ಮಹಿಮಾಶಾಲಿಯಾಗಿ ಎಳುತ್ತಚ್ಚನ್ ಮುಂದೆ ಬಂದರು. ಆಳವಾದ ಪಾಂಡಿತ್ಯ, ವೇದ ಪುರಾಣೇತಿಹಾಸಗಳ ಜ್ಞಾನ, ಆತ್ಮಾನುಭೂತಿ ಎಲ್ಲಕ್ಕಿಂತಲೂ ಮಿಗಿಲಾಗಿ ಒಬ್ಬ ಆಚಾರ್ಯ

ಪುರುಷನಲ್ಲಿರಬೇಕಾದ ತತ್ತ್ವಸಿದ್ಧಾಂತಗಳು ಆ ಕವಿಯಲ್ಲಿದ್ದವು. ಅದಕ್ಕಿಂತ ಹಿಂದೆ ಯಾವ ಕಾಲದಲ್ಲೂ ಅಷ್ಟೊಂದು ಪ್ರತಿಭಾಶಾಲಿಯಾದ ಒಬ್ಬ ಕವಿ ಮಲಯಾಳ ಸಾಹಿತ್ಯದ ಭವಿಷ್ಯವನ್ನು ರೂಪಿಸಲು ಮುಂದೆ ಬರಲಿಲ್ಲವೆಂದು ಹೇಳಬಹುದು. ಅಂತರಂಗದಲ್ಲಿ ತುಂಬಿಕೊಂಡಿದ್ದ ಆಸ್ತಿಕ ಜ್ಞಾನವೂ ಪರಾಶಕ್ತಿಯ ಭಕ್ತಿ ವಿಶ್ವಾಸಗಳ ಪ್ರತಿಬಿಂಬವೂ ಇದ್ದ ಒಂದು ಕಾವ್ಯಮಾರ್ಗವನ್ನು ಎಳುತ್ತಚ್ಛನ್ ಸ್ವೀಕರಿಸಿದರು. ಆ ದೃಷ್ಟಿಯಲ್ಲಿ ಎಳುತ್ತಚ್ಛನ್ ಕೃತಿಗಳು ತುಂಬ ಆತ್ಮಪ್ರತಿಬಿಂಬಕಗಳೂ ಮನಃಪೂರ್ವಕ ಹೊರಹೊಮ್ಮಿದವುಗಳೂ ಆಗಿದ್ದು ಮನುಷ್ಯ ಹೃದಯದ ಮತ್ತು ಮನಸ್ಸಿನ ಅಂತರಾಳದಿಂದ ಮೂಡಿಬಂದ ಉತ್ಕೃಷ್ಟ ಭಾವನೆಗಳೂ ಚಿಂತನೆಗಳೂ ಅವುಗಳಲ್ಲಿ ಪ್ರಕಾಶಗೊಂಡಿದೆ. ಎಳುತ್ತಚ್ಛನ್ ಅದ್ವೈತ ತತ್ತ್ವಶಾಸ್ತ್ರಜ್ಞರೂ ವಿಷ್ಣುವಿನ ಪರಮ ಭಕ್ತರೂ ಆಗಿದ್ದರಲ್ಲದೆ ವಿಚಾರಶೀಲ ಉದಾತ್ತ ರೀತಿಯ ಬರಹಗಾರರಾಗಿದ್ದರು. ಇವರ ಅಧ್ಯಾತ್ಮ ರಾಮಾಯಣ ಹಾಗೂ ಭಗವದ್ಗೀತೆಯ ಅನುವಾದಗಳು ಹಾಗೂ ಮಹಾಭಾರತದ ನವೀನ ಆವೃತ್ತಿಗಳಲ್ಲಿ ವಿವಿಧ ಮಲಯಾಳ ಛಂದಸ್ಸುಗಳನ್ನು ಬಳಸಲಾಗಿದೆ. ಈ ಕೃತಿಗಳಲ್ಲಿ ವಿವಿಧ ಮಲಯಾಳ ಛಂದಸ್ಸುಗಳನ್ನು ಬಳಸಲಾಗಿದೆ. ಈ ಕೃತಿಗಳಲ್ಲಿ ಕಥೆಗಳು ಗಿಳಿಯು ಹೇಳಿದಂತೆ ನಿರೂಪಿತವಾಗಿರುವುದರಿಂದ ಇವುಗಳಿಗೆ 'ಕಿಳಿಪ್ಪಾಟು' ಎಂಬ ಹೆಸರು ಬಂದಿದೆ. ಐವತ್ತಾರು ಪದ್ಯಗಳನ್ನೊಳಗೊಂಡ ಹರಿನಾಮಕೀರ್ತನೆಯೆಂಬ ಇವರ ಇನ್ನೊಂದು ಕೃತಿಯು ಪೂರ್ತಿಯಾಗಿ ಭಕ್ತಿ ಹಾಗೂ ಅದ್ವೈತ ತತ್ತ್ವಗಳಿಂದ ಕೂಡಿದೆ. ಆಧ್ಯಾತ್ಮಿಕ ಹಾಗೂ ತಾತ್ತ್ವಿಕ ಮೌಲ್ಯಗಳಿಂದ ತುಂಬಿದ ಈ ಕೃತಿಯು ಆಧ್ಯಾತ್ಮಿಕ ಶಾಂತಿಯನ್ನು ನೀಡುವಲ್ಲಿ ಮಹತ್ವದ ಪಾತ್ರ ವಹಿಸಿದೆ.

ಎಳುತ್ತಚ್ಛನ್ ಅವರ ಅಧ್ಯಾತ್ಮ ರಾಮಾಯಣದಲ್ಲಿ ಆಧ್ಯಾತ್ಮಿಕ ತತ್ತ್ವಗಳ ಪ್ರತಿಪಾದನೆ ಹಾಗೂ ತತ್ತ್ವಚಿಂತನಾತ್ಮಕವಾದ ಅಂಶಗಳು ಕಂಡುಬರುತ್ತವೆ. ಇದರಲ್ಲಿ ರಾಮನನ್ನು ವಿಷ್ಣುವಿನ ಅವತಾರವೆಂದೂ ಅವರು ನಿರೂಪಿಸಿದ್ದಾರೆ. ಅಧ್ಯಾತ್ಮರಾಮಾಯಣದಲ್ಲಿ ರಾಮನನ್ನು ಹಾಗೂ ಮಹಾಭಾರತದಲ್ಲಿ ಕೃಷ್ಣನನ್ನು ದೇವರೆಂದೂ ಪರಬ್ರಹ್ಮನೆಂದೂ ಚಿತ್ರಿಸಿ ಅವರ ವಿವಿಧ ನಾಮಗಳ ಸ್ಮರಣೆಯನ್ನು ಮಾಡಿದ್ದಾರೆ. ಈ ರೀತಿ ಆಧ್ಯಾತ್ಮಿಕ ವಿಚಾರ ಹಾಗೂ ತತ್ತ್ವಚಿಂತನೆಯನ್ನು ಕುರಿತು ವಿವರಿಸುವಾಗ ಎಳುತ್ತಚ್ಛರನ್ನರ ವಾಗ್ವೈಭವ ಸಹಜವಾದ ಪ್ರೌಢಿಮೆಯ ಮೂಲಕ ಮತ್ತು ಶಕ್ತಿಯ ಮೂಲಕ ಹೆಚ್ಚು ಪ್ರಕಟಗೊಳ್ಳುತ್ತದೆ. ಮಹಾಭಾರತದಲ್ಲೂ ಅಧ್ಯಾತ್ಮ ರಾಮಾಯಣದಲ್ಲೂ ಈ ರೀತಿಯ ಪ್ರತಿಪಾದನೆಗಳು ಹೆಚ್ಚಾಗಿವೆ. ಎಳುತ್ತಚ್ಛನ್ ಕಾಲ ಸಾಮಾನ್ಯವಾಗಿ ಭಕ್ತಿಯ ಮತ್ತು ತತ್ತ್ವ ಚಿಂತನೆಯ ಕಾಲವಾಗಿತ್ತೆಂದು ಹೇಳಬಹುದು. ಎಳುತ್ತಚ್ಛನ್ ಅವರ ಕಿರುಕಾವ್ಯ ಹರಿನಾಮ ಕೀರ್ತನೆಯಲ್ಲಿ ತಾತ್ತ್ವಿಕ ಒಳನೋಟ ಹಾಗೂ ಸೌಂದರ್ಯ ತತ್ತ್ವಗಳು ವಿಶಿಷ್ಟ ರೀತಿಯಲ್ಲಿ ಪ್ರತಿಪಾದಿತವಾಗಿವೆ. ನಿರಂತರವಾಗಿ ಹರಿನಾಮವನ್ನು ಉಚ್ಚರಿಸುವುದೇ ಜೀವನದ ಎಲ್ಲ ಸಮಸ್ಯೆಗಳಿಗೆ ಪರಿಹಾರ ಎಂಬುದಾಗಿ ಹರಿನಾಮ ಸ್ಮರಣೆಯ ಮಹತ್ವವನ್ನು ತಿಳಿಸಲಾಗಿದೆ. "ಓ ಹರಿಯೇ ಸಚ್ಚಿದಾನಂದ ಸ್ವರೂಪಿಯೇ, ಗೋಪಿಕಾವಲ್ಲಭನೇ 'ನಾನು' ಎಂಬ ಭಾವನೆಯಿಂದ ನನ್ನನ್ನು ಮುಕ್ತಗೊಳಿಸು. . ಅಂತಹ ಯೋಚನೆಗಳು ಬಂದಾಗ ನಾನೇ ಎಲ್ಲವೂ

ಅಹಂಕಾರವೆಂಬುದಿಲ್ಲ ಅಥವಾ ಅಹಂಕಾರವೆಂಬುದು ಸಾರ್ವತ್ರಿಕವಾದುದು ಎಂದು ನ ಾನು ಭಾವಿಸುವಂತೆ ಮಾಡು" ಎಂಬ ಮಾತುಗಳಲ್ಲಿ ಭಕ್ತ ಹಾಗೂ ಪರಮಾತ್ಮರೊಳಗಿನ ಸಂಬಂಧವೇನೆಂಬುದು ನಿರೂಪಿತವಾಗಿದೆ.

'ಚಿಂತಾರತ್ನಂ' ಎಂಬ ತಾತ್ವಿಕ ಕೃತಿಯನ್ನು ಎಳುತ್ತಚ್ಛನ್ ಅವರೇ ಬರೆದರೆಂದು ನಂಬಲಾಗಿದೆ. ಇದು ಕಿಳಿಪ್ಪಾಟ್ಟು ಶೈಲಿಯಲ್ಲಿದ್ದು ಗುರುವೊಬ್ಬರು ಸ್ತ್ರೀಯೊಬ್ಬಳಿಗೆ ಅದ್ವೈತ ವೇದಾಂತ ತತ್ವಗಳನ್ನು ಸರಳವಾಗಿ ಮತ್ತು ಸ್ಪಷ್ಟವಾಗಿ ವಿವರಿಸುವ ರೀತಿಯಲ್ಲಿದೆ. ಇದು ಒಂದು ಸ್ವತಂತ್ರ ಕೃತಿಯಾಗಿದ್ದು ಅದ್ವೈತ ತತ್ವಗಳಿಗೆ ನಿಷ್ಠವಾಗಿದೆ. ಕೃತಿಯಲ್ಲಿ ಎಳುತ್ತಚ್ಛನ್ ತಮ್ಮ ಹೆಸರನ್ನು ಹೇಳಿಕೊಂಡಿಲ್ಲ. ಆದರೆ ತಮ್ಮ ಗುರು ಕೃಷ್ಣಾಚಾರ್ಯರ ಹೆಸರನ್ನು ಉಲ್ಲೇಖಿಸಿದ್ದಾರೆ. ಈ ಕಾವ್ಯವನ್ನು ಮಹಿಳೆಯರಿಗಾಗಿಯೇ ಬರೆಯಲಾಗಿದೆಯೆಂದೂ ಅವರು ಹೇಳಿದ್ದಾರೆ. ಮುಕ್ತಿಗೆ ಜ್ಞಾನವೊಂದೇ ದಾರಿ. ಅದ್ವೈತದ ಸತ್ಯವನ್ನು ಮನದಟ್ಟು ಮಾಡಿಸಲು ಕವಿ ಅನೇಕ ಸಾದೃಶ್ಯಗಳನ್ನು. ಕಥೆಗಳನ್ನು ಬಳಸಿದ್ದಾರೆ. ಮಾಯೆಯೆಂಬುದು ಸಂಸಾರ ವೃಕ್ಷದ ಬೀಜ. ಮಾಯೆಯು ವಿದ್ಯೆ ಹಾಗೂ ಅವಿದ್ಯೆಯ ರೂಪದಲ್ಲಿ ಗೋಚರಿಸಿದರೂ ಬ್ರಹ್ಮನ ಮೇಲೆ ಆಕೆ ಪ್ರಭಾವ ಬೀರಲಾರಳು. ಸೂರ್ಯ ಹಾಗೂ ಚಂದ್ರರನ್ನು ಗ್ರಾಸಮಾಡಲು ಪ್ರಯತ್ನಿಸಿದರೂ ಅವರ ಮೇಲೆ ತನ್ನ ಪ್ರಭಾವ ಬೀರಲು ರಾಹುವಿಗೆ ಸಾಧ್ಯವಾಗುವುದಿಲ್ಲ. ರಾಹುವಿನಿಂದ ಬಿಡುಗಡೆಗೊಂಡ ಬಳಿಕ ಸೂರ್ಯ ಚಂದ್ರರು ಪ್ರಕಾಶಿಸುವಂತೆ ಅಜ್ಞಾನವು ದೂರವಾದಾಗ ಅದ್ವೈತ ಜ್ಞಾನವುಂಟಾಗಿ ಅದು ಪರಮಸುಖಕ್ಕೆ ದಾರಿಮಾಡಿಕೊಡುತ್ತದೆ ಎಂದು ಕವಿ ಈ ಕೃತಿಯಲ್ಲಿ ನಿರೂಪಿಸಿದ್ದಾನೆ.

ಗುರುವಾಯೂರು ದೇವರ ಪರಮ ಭಕ್ತರೂ ಮಲಯಾಳದ ಶ್ರೇಷ್ಠಕವಿಗಳಾದ ಮೇಲ್‌ಪುತ್ತೂರು ನಾರಾಯಣ ಭಟ್ಟರ ಸಮಕಾಲೀನರೂ ಆದ ಪೂಂತಾನಂ ನಂಬೂದಿರಿ ಎಂಬವರು 'ಪಾನ' ಎಂಬ ಛಂದಸ್ಸಿನಲ್ಲಿ ಸರಳವೂ ಸುಂದರವೂ ವಿಶಿಷ್ಟವೂ ಆದ ಮಲಯಾಳ ಶೈಲಿಯಲ್ಲಿ 'ಜ್ಞಾನಪ್ಪಾನ' ಎಂಬ ಕೃತಿಯನ್ನು ರಚಿಸಿದರು. ಭಕ್ತಿ ಮತ್ತು ತತ್ವಚಿಂತನೆಯಿಂದೊಡಗೂಡಿದ ಸುಲಲಿತವಾದ ಪೂಂತಾನಂ ಕಾವ್ಯ ಅನುಕರಣೀಯವಾಗಿದೆ. ಆಳವಾದ ತಾತ್ವಿಕ ಒಳ ನೋಟವನ್ನು ಹೊಂದಿದವರೂ ಗುರುವಾಯೂರಪ್ಪನ ಪರಮಭಕ್ತರೂ ಆದ ಈ ಕವಿ ತನ್ನ ಕೃತಿಯಲ್ಲಿ ಕರ್ಮತತ್ವ. ಜನನ-ಮರಣ ಜೀವನ ಚಕ್ರದ ಸಂಸಾರ ತತ್ವ, ನಿಷ್ಕಾಮ ಕರ್ಮದ ಮಹತ್ವ, ದೇವರ ನಾಮೋಚ್ಚಾರಣೆಯ ಹಿರಿಮೆ ಮುಂತಾದ ತಾತ್ವಿಕ ಸಮಸ್ಯೆಗಳನ್ನು ನಿರೂಪಿಸಿದ್ದಾರೆ. ಈ ಕಾವ್ಯವು ಸಾಮಾನ್ಯವಾಗಿ ಸ್ತ್ರೀ-ಪುರುಷರೆಲ್ಲರಿಗೂ ಮನಶ್ಶಾಂತಿಯನ್ನು ನೀಡುವಂತಿದೆ. ಮಾತ್ರವಲ್ಲದೆ ಇದು ಜೀವನದ ಅಸ್ಥಿರತೆ. ಪರಸ್ಪರ ಪ್ರೀತಿ ಹಾಗೂ ಸಹಕಾರದ ಅಗತ್ಯವನ್ನು ತಿಳಿಸುತ್ತದೆ. ಉದಾಹರಣೆಗೆ ಕಾವ್ಯದ ಕೆಲವು ಪದ್ಯಗಳನ್ನು ಗಮನಿಸಬಹುದು.

"ಬಾಲಕೃಷ್ಣನೆ ನಿನ್ನ ಮನದಲ್ಲಿ ನಲಿವಾಗ
ಬೇರೆ ಮಕ್ಕಳ ಬಯಕೆ ನಿನಗೆ ಏಕೆ ?"

"ನಿನ್ನೆಯ ವರೆಗೆ ಏನಾಗಿತ್ತೆಂದು ತಿಳಿಯದು ನಮಗೆ
ನಾಳೆ ನಡೆಯುವುದೇನೆಂದು ಅರಿಯೆವು ನಾವು"

"ಒಟ್ಟಿಗೇ ಜನಿಸಿಲ್ಲ ನಾವು ಈ ಜಗದಲ್ಲಿ
ಒಂದಾಗಿ ಇರೆವು ನಾವು ಮರಣದಲ್ಲೂ"

ಈ ಅಲ್ಪ ಬಿಡುವಿನ ವೇಳೆ ನಾವು ಸಂಧಿಸುವಾಗ
ಏತಕೆ ಪರಸ್ಪರ ಜಗಳ ನಮ್ಮೊಳಗೆ"

"ಭವಿಷ್ಯದ ಬಗೆಗೆ ಗಾಳಿಗೋಪುರ ಕಟ್ಟುವೆವು ನಾವು
ಆದರಯ್ಯೋ ! ಮೃತ್ಯು ಥಟ್ಟನೆ ಸೆಳೆದೊಯ್ಯುವುದು ನಮ್ಮನ್ನು"

"ಅರಮನೆಯಲ್ಲಿ ಸುಖದ ಸುಪ್ಪತ್ತಿಗೆಯಲ್ಲಿ ಬಾಳುತ್ತಿದ್ದವನನ್ನು
ಕಸದ ಹೊರೆ ಹೊರುವಂತೆ ಮಾಡಿಸುವೆ ನೀನು !"

"ದಿನವೆರಡು ಮೂರರಲೆ ಅತಿ ಒಡವ ಮನುಜನನು
ಅಂದಣದ ಮೇಲಿರಿಸಿ ಹೊತ್ತು ಸಾಗುವರು !"

"ಸ್ಮರಿಸು ನಿರಂತರ ನೀನು ವಿಷ್ಣುವಿನ ನಾಮ
ನಿನ್ನ ಚಿಂತೆಗಳೆಲ್ಲ ಅತಿ ಬೇಗ ಮಾಯ."

ಪಾನಂ ಛಂದಸ್ಸಿನಲ್ಲಿರುವ ಸಂತಾನ ಗೋಪಾಲಂ ಎಂಬುದು ಪೂಂದಾನಂ ಅವರು ರಚಿಸಿದ ಕೃತಿಯೆಂದು ಹೇಳಲಾಗಿದೆ. ಇದು ಕೂಡ ಒಂದು ಜನಪ್ರಿಯ ಕೃತಿ. ಅವರು ಕೃಷ್ಣನನ್ನು ಕುರಿತ ಕೆಲವು ಭಕ್ತಿಗೀತೆಗಳನ್ನು ಬರೆದಿದ್ದಾರೆಂದು ನಂಬಲಾಗಿದೆ.

ಜನಪ್ರಿಯ ತುಳ್ಳಲ್ ನೃತ್ಯದ ಸಂಸ್ಥಾಪಕರಾದ ಕುಂಜನ್ ನಂಬ್ಯಾರ್ ಜನಸಾಮಾನ್ಯರ ಕವಿಯೂ ಹಾಸ್ಯಲೇಖಕರೂ ಪ್ರಭಾವಶಾಲೀ ಸಮಾಜೋದ್ಧಾರಕರೂ ಆಗಿದ್ದರು. ಕುಂಜನ್ ನಂಬಿಯಾರರ ತುಳ್ಳಲ್ ಸಾಹಿತ್ಯದಲ್ಲಿ ತಾತ್ತ್ವಿಕ ವಿವೇಚನೆಯಿದೆ. ಜೀವನದ ಸಮಸ್ಯೆಗಳು, ದೈವ ಭಕ್ತಿಯ ಮಹತ್ವ, ಮನುಷ್ಯನ ವ್ಯರ್ಥಾಭಿಮಾನದ ಚಾಂಚಲ್ಯ ಮುಂತಾದುವು ಕುಂಜನ್ ನಂಬಿಯಾರರ ಕೃತಿಗಳಲ್ಲಿ ವಾಸ್ತವಿಕವಾಗಿ ಹಾಗೂ ಪ್ರಭಾವಪೂರ್ಣವಾಗಿ ಅಭಿವ್ಯಕ್ತವಾಗಿವೆ. ಸಂಸ್ಕೃತ ವೃತ್ತಗಳಲ್ಲಿ ವಿಶಿಷ್ಟವಾದ ಶೈಲಿಯಲ್ಲಿ ರಚಿತವಾದ ಅವರ ಶ್ರೀಕೃಷ್ಣ ಚರಿತವೆಂಬ ಮಹಾಕಾವ್ಯದಲ್ಲಿ ಶ್ರೀಕೃಷ್ಣನ ಜೀವನ ಚಿತ್ರಣವಿದೆ. ಕಿಳಿಪ್ಪಾಟ್ಟು ಶೈಲಿಯಲ್ಲಿರುವ ಅವರ ಶಿವಪುರಾಣದ ಕೃತಿಯಲ್ಲಿ ಭಕ್ತಿಯ ಆವೇಶದ ಚಿತ್ರಣಗಳಿವೆ.

ಕಥಕ್ಕಳಿ ಸಾಹಿತ್ಯವನ್ನು ರಚಿಸಿದವರಲ್ಲಿ ಕುಂಜನ್ ನಂಬ್ಯಾರರ ಸಮಕಾಲೀನರಾದ ಉಣ್ಣಾಯಿ ವಾರಿಯಾರ್ ಪ್ರಮುಖರಾಗಿದ್ದಾರೆ. ಇತರ ಕಥಕಳಿ ಸಾಹಿತ್ಯ ಕೃತಿಗಳಿಗಿಂತ ಭಿನ್ನವಾದ ಇವರ ನಳಚರಿತವು ಪಾತ್ರಚಿತ್ರಣಗಳ, ಆಳವಾದ ತಾತ್ತ್ವಿಕ ಹಾಗೂ ಮನಶ್ಶಾಸ್ತ್ರೀಯ ವಿಚಾರಗಳ ಕಾವ್ಯದ ಲಯ ಹಾಗೂ ಸಂಗೀತದ ದೃಷ್ಟಿಗಳಿಂದ

ವಿಶಿಷ್ಟವಾಗಿದೆ. ನಳಚರಿತದಲ್ಲಿ ಬರುವ ಬಾಹುಕನ ಸ್ವಗತ ಮಾತುಗಳಲ್ಲಿ "ನಾನು–ನನ್ನದು ಎಂಬ ಭಾವನೆ ಎಲ್ಲರಲ್ಲೂ ಇದೆ. ಅದಕ್ಕೆ ಕಾರಣ ಮಾಯೆ. ಈ ಜಗತ್ತಿನಲ್ಲಿ ಸಾಯುವ ಕಾಲ ಬಂದರೂ ಮಾಯೆಯ ಬಲೆಯಿಂದ ಬಿಡಿಸಿಕೊಳ್ಳುವುದು ಬಹಳ ಕಷ್ಟ. ಯೋಗಿಗಳಿಗೂ ಮಮತ್ವವನ್ನು ಅಥವಾ ಅಹಂಭಾವದ ಭಾವನೆಯನ್ನು ದೂರ ಮಾಡಲು ಅಸಾಧ್ಯವಾಗಿದೆ. ದೇವರ ಆಶ್ರಯವನ್ನು ಪಡೆಯುವುದೇ ಅದಕ್ಕಿರುವ ದಾರಿಯಾಗಿದೆ." ಎಂಬ ತಾತ್ತ್ವಿಕ ಚಿಂತನೆಗಳನ್ನು ಕಾಣಬಹುದು.

ಶ್ರೀ ನಾರಾಯಣ ಗುರು (೧೮೫೪–೧೯೨೮) ಕೇರಳದ ಒಬ್ಬ ಶ್ರೇಷ್ಠ ವೇದಾಂತ ತತ್ತ್ವಜ್ಞ, ಅದ್ವೈತ ತತ್ತ್ವಪ್ರಚಾರಕ ಹಾಗೂ ಸಮಾಜಸುಧಾರಕರಾಗಿದ್ದರು. ಇವರು ಈಳವ ಜನಾಂಗಕ್ಕೆ ಸೇರಿದವರು. ಇವರ ಜನಾಂಗದವರನ್ನು ಸಮಾಜದಲ್ಲಿ ಅಸ್ಪೃಶ್ಯರೆಂದೂ ಕೀಳು ವರ್ಗದವರೆಂದೂ ಪರಿಗಣಿಸಲಾಗಿತ್ತು. ಇವರ ಕುಟುಂಬದವರು ಶಿವನನ್ನೂ ಇತರ ದೇವರನ್ನೂ ಉಪಾಸನೆ ಮಾಡುತ್ತಿದ್ದರು. ಬಹಳ ಸಮಯದ ವರೆಗೆ ನಾಣು ಎಂಬುದಾಗಿ ಕರೆಯಲ್ಪಡುತ್ತಿದ್ದ ನಾರಾಯಣ ಗುರು ಅವರು ಸಂಸ್ಕೃತ, ಮಲಯಾಳ ಹಾಗೂ ತಮಿಳು ಭಾಷೆಗಳಲ್ಲಿ ತಮ್ಮ ಆರಂಭದ ಶಿಕ್ಷಣ ಪಡೆದರು. ಬಾಲ್ಯದಿಂದಲೂ ಅವರಿಗೆ ಅಧ್ಯಾತ್ಮದಲ್ಲಿ ಆಸಕ್ತಿಯಿತ್ತು. ಹದಿನೈದನೆಯ ವಯಸ್ಸಿನಲ್ಲಿ ತಾಯಿಯನ್ನೂ ಮೂವತ್ತನೆಯ ವಯಸ್ಸಿನಲ್ಲಿ ತಂದೆಯನ್ನೂ ಕಳೆದುಕೊಂಡರು. ೧೮೮೨ ರಲ್ಲಿ ಇವರ ಮದುವೆ ನಡೆಯಿತು. ಆದರೆ ಅಲ್ಪ ಸಮಯದಲ್ಲೇ ಅವರು ಭೌತಿಕ ಜೀವನದ ಬಂಧನವನ್ನು ತೊರೆದರು. ತೈಕ್ಕಾಡ್ ಅಯ್ಯಾವು ಎಂಬವರಿಂದ ಯೋಗಾಭ್ಯಾಸವನ್ನು ಕಲಿತು ನಾರಾಯಣ ಗುರು ನಾಗರ್‌ಕೋಯಿಲ್‌ನ ಮರುತ್ವಾನ್ ಮಲಬೋದ ಏಕಾಂತ ಸ್ಥಳದಲ್ಲಿ ತಪಸ್ಸು ಮಾಡಿದರು. ಜ್ಞಾನೋದಯವಾದ ಬಳಿಕ ಅವರು ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಗಳನ್ನು ಮಾಡಲು ತೊಡಗುವ ಮೊದಲು ಸ್ವಲ್ಪಕಾಲ ಸನ್ಯಾಸಿಯಾಗಿ ಅಲೆದಾಡಿದರು. ಆಗ ಹಿಂದೂ ದೇವಸ್ಥಾನಗಳಲ್ಲಿ ಕೆಳಜಾತಿಯವರಿಗೆ ಪ್ರವೇಶವಿಲ್ಲದ್ದರಿಂದ ನಾರಾಯಣಗುರು ಎಲ್ಲರಿಗೂ ಪ್ರವೇಶ ನೀಡುವ ಶಿವ ಮುಂತಾದ ಹಿಂದೂ ದೇವಸ್ಥಾನಗಳನ್ನು ಸ್ಥಾಪಿಸಿದರು. ಅಲ್ಲಿ ಅರ್ಚಕರೂ ಕೆಳಜಾತಿಯವರೇ ಆಗಿದ್ದರು. ಆದರೆ ಅವರು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಪ್ರಾಣಿಬಲಿ ಹಾಗೂ ಮದ್ಯಪಾನವನ್ನು ನಿಷೇಧಿಸಿದರು. ಎಲ್ಲ ಜಾತಿ ಜನಾಂಗದವರಿಗೂ ಪ್ರವೇಶ ನೀಡುವ ಸಂಸ್ಕೃತ ಶಾಲೆಗಳನ್ನು ಸ್ಥಾಪಿಸಿದರು. ಈ ರೀತಿಯಲ್ಲಿ ನಾರಾಯಣಗುರು ತಮ್ಮ ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಗಳನ್ನು ಆರಂಭಿಸಿದರು.

೧೮೮೮ ರಲ್ಲಿ ತಿರುವನಂತಪುರದ ಸಮೀಪದ ಅರುವಿಪ್ಪುರಂ ಎಂಬಲ್ಲಿ ಶಿವ ದೇವಸ್ಥಾನವೊಂದನ್ನು ಸ್ಥಾಪಿಸಿದುದು ಮಹತ್ತರವಾದ ಸಾಮಾಜಿಕ ಬದಲಾವಣೆಗೆ ಕಾರಣವಾಯಿತು. ಇದು ಪರಂಪರಾಗತವಾಗಿ ನಡೆದು ಬಂದ ಸಂಪ್ರದಾಯ ಬದ್ಧತೆಯ ವಿರುದ್ಧ ಬಹಿರಂಗವಾಗಿ ನಡೆಸಿದ ಅಹಿಂಸಾತ್ಮಕವಾದ ಹಾಗೂ ಮಹತ್ವದ ಬಂಡಾಯವೆನ್ನಬಹುದು. ಆ ದೇವಸ್ಥಾನದ ಗೋಡೆಯಲ್ಲಿ ಅವರು–

ಯಾವುದೇ ಜಾತಿಭೇದವಿಲ್ಲದೆ
ಯಾವುದೇ ಮತ ದ್ವೇಷವಿಲ್ಲದೆ
ಎಲ್ಲರೂ ಬಾಳುವರು ಸೋದರರಂತೆ
ಇಲ್ಲಿ ಈ ಆದರ್ಶಮಯ ಸ್ಥಳದಲ್ಲಿ

ಎಂದು ಬರೆದರು. ಈ ದೇವಸ್ಥಾನದ ಸಮೀಪದಲ್ಲೇ ಅವರು ಒಂದು ಮಠವನ್ನು ಸ್ಥಾಪಿಸಿದರು. ಮುಂದೆ ಅದು 'ಶ್ರೀ ನಾರಾಯಣಗುರು ಧರ್ಮ ಪರಿಪಾಲಿನ ಯೋಗಂ' ಎಂಬ ಸಂಸ್ಥೆಯಾಗಿ ಅಭಿವೃದ್ಧಿ ಹೊಂದಿತು.

೧೯೦೪ ರಲ್ಲಿ ನಾರಾಯಣಗುರು ವರ್ಕಲ ಎಂಬಲ್ಲಿ ಶಿವಗಿರಿ ಪರ್ವತದ ಮೇಲೆ ಶಿವಗಿರಿ ಮಠವನ್ನು ಸ್ಥಾಪಿಸಿದರು. ಶಿವಗಿರಿಯಲ್ಲಿ ಅವರು ೧೯೨೨ ರಲ್ಲಿ ಜ್ಞಾನದ ಅಧಿದೇವತೆಯಾದ ಶಾರದೆಯ ವಿಗ್ರಹವನ್ನು ಸ್ಥಾಪಿಸಿದರು. ೧೯೧೩ ರಲ್ಲಿ ಶಂಕರಾಚಾರ್ಯರ ಜನ್ಮಸ್ಥಾನವಾದ ಕಾಲಟಿಯ ಸಮೀಪ ಅದ್ವೈತ ಆಶ್ರಮವನ್ನು ಸ್ಥಾಪಿಸಿದರು. ಮರುವರ್ಷವೇ ಅಲ್ಲಿ ಒಂದು ಸಂಸ್ಕೃತ ಶಾಲೆಯನ್ನು ಆರಂಭಿಸಿದರು. ಇಲ್ಲಿಯೂ ಪ್ರವೇಶ ಎಲ್ಲರಿಗೂ ಮುಕ್ತವಾಗಿತ್ತು. ಅವರು ಕೇರಳ ರಾಜ್ಯದ ನಾನಾಕಡೆ ಹಾಗೂ ಹೊರ ರಾಜ್ಯಗಳಲ್ಲಿ ಸಮಾಜೋದ್ಧಾರ ಹಾಗೂ ಧಾರ್ಮಿಕ ಸುಧಾರಣೆಗಾಗಿ ಸುಮಾರು ಅರುವತ್ತಕ್ಕೂ ಹೆಚ್ಚು ದೇವಸ್ಥಾನಗಳನ್ನು ಸ್ಥಾಪಿಸಿದರು. ತಮ್ಮ ಜೀವನದ ಕೊನೆಯ ಕಾಲದಲ್ಲಿ ಅವರು ಅದ್ವೈತ ತತ್ತ್ವವನ್ನು ಹೆಚ್ಚು ಹಚ್ಚಿಕೊಂಡಿದ್ದರು. ಅವರು ಸಂಸ್ಕೃತದಲ್ಲಿ ರಚಿಸಿದ ದರ್ಶನಮಾಲಾ ಒಂದು ಶುದ್ಧ ತಾತ್ತ್ವಿಕ ಕೃತಿ. ಅದರಲ್ಲಿ ಜಾತಿ ಹಾಗೂ ಧರ್ಮವನ್ನು ಕುರಿತ ಚರ್ಚೆಯಿಲ್ಲ. ೧೯೨೮ ರಲ್ಲಿ ಮರಣ ಹೊಂದಿದ ಅವರ ಪಾರ್ಥಿವ ಶರೀರವನ್ನು ಶಿವಗಿರಿ ಪರ್ವತದ ಮಹಾಸಮಾಧಿ ಮಂದಿರದಲ್ಲಿರಿಸಲಾಗಿದೆ.

ಸಮಾಜದಲ್ಲಿರುವ ಕೆಳವರ್ಗದ ಶೋಷಿತ ಜನರನ್ನು ಮೇಲೆತ್ತುವುದು. ತಮ್ಮ ಅನುಯಾಯಿಗಳಿಗೆ ಎಲ್ಲ ಮತಗಳ ಐಕ್ಯ ಹಾಗೂ ಸೌಹಾರ್ದತೆಯ ಅಗತ್ಯವನ್ನು ಬೋಧಿಸುವುದು. ಮನುಜ ಜನಾಂಗದ ವಿಶ್ವ ಸಹೋದರತ್ವವನ್ನು ತಿಳಿಸುವುದು. ಪ್ರೀತಿ ಹಾಗೂ ಕರುಣೆಯ ಅವಶ್ಯಕತೆಯನ್ನು ಮನದಟ್ಟು ಮಾಡುವುದು ನಾರಾಯಣ ಗುರು ಅವರ ಸಿದ್ಧಾಂತಗಳ ಮುಖ್ಯ ಉದ್ದೇಶವಾಗಿತ್ತು. ಅವರ ಬೋಧನೆಯ ಕೆಲವಂಶಗಳು ಉತ್ತಮ ನುಡಿಗಳಾಗಿವೆ. ಉದಾಹರಣೆಗೆ :-

"ಒಂದು ಮತ ಒಂದು ಧರ್ಮ ಮನುಜಗೊಬ್ಬನೆ ದೇವರು"

(ಜಾತಿಮೀಮಾಂಸೆ)

"ಯಾವುದೇ ಮತ ಅದು ಉತ್ತಮ ಮನುಜ ಉತ್ತಮನಾದರೆ."

ಮಲಯಾಳದಲ್ಲಿ ರಚಿಸಿದ ಆತ್ಮೋಪದೇಶ ಶತಕದಲ್ಲಿ ಅವರು ಹೀಗೆ ಸಾರುತ್ತಾರೆ;

ನಂಬಿಕೆಗಳು ಹಲವು. ಆದರವುಗಳ ಸಾರ ಒಂದೇ.
ಇದನು ತಿಳಿಯದೆ ಈ ಜಗದ ಜನರು
ಆಗಿಹರು ಕುರುಡರು ಆನೆಯನು ನೋಡಿದಂತೆ
ಹಲವು ರೀತಿಯ ತರ್ಕಗಳ ಬಳಸುವರು ಅಜ್ಞಾನಿಗಳು
ಜ್ಞಾನೋದಯ ಹೊಂದದೆ ನಿರಾಶರಾಗುವರು
ಇದನು ಅರಿತಾ ಮೇಲೆ

ಮನುಜಕುಲದ ಸೇವೆಯೇ ಆತ್ಮಸೇವೆಯೆಂದು ಮನಗಾಣಬೇಕು.

ಈ ಮನುಜ ಆ ಮನುಜ ಎಂದಿಲ್ಲಿ ನಾವು ಭಾವಿಸುವುದೆಲ್ಲ ತನ್ನಾತ್ಮನದೆ ಮುಖ್ಯ ಆಕೃತಿಯೆಂದು ತಿಳಿಸುವುದು ಪ್ರತಿಬಿಂಬ.

ಆತ್ಮಸಂತೋಷಕ್ಕೆಂದು ಮಾಡಿದ ಕಾರ್ಯಗಳೆಲ್ಲ ಪರರು ಸಂತೋಷವನು ಒಡನೆ ಪಡೆಯುವಂತಿರಬೇಕು.

ಸಂಸ್ಕೃತದ ಕೃತಿಯಾದ ದರ್ಶನ ಮಾಲಾದ ಕೊನೆಯ ಪದ್ಯ ಈ ರೀತಿ ಇದೆ :

ಬ್ರಹ್ಮನಿದ್ದಾನೆಂಬುದರಲ್ಲಿ ಸಂದೇಹವೇನಿಲ್ಲ
ಅವನು ಒಬ್ಬನೆ ಎರಡಿಲ್ಲ ಮತ್ತೇನೂ ಅಲ್ಲ
ಇದನು ತಿಳಿದಾತ ಪಡೆಯುವನು
ದ್ವಂದ್ವದಿಂ ಮುಕ್ತಿಯನು ಮರಳಿ ಸೇರುವನಲ್ಲಿಗೆ.

ದರ್ಶನ ಮಾಲಾ ಕೃತಿಯಲ್ಲಿ ಶಂಕರರಂತಹ ಅದ್ವೈತಿಗಳಿಗೆ ಒಪ್ಪಿಗೆಯಾಗದ ಅವರ ತತ್ತ್ವಕ್ಕೆ ಭಿನ್ನವಾದ ಯಾವುದೇ ವಿಚಾರಗಳಿಲ್ಲವೆನ್ನುವುದು ಗಮನಾರ್ಹ. ನಾರಾಯಣಗುರು ಅವರ ಮೇಲೆ ಶಂಕರಾಚಾರ್ಯರ ಪ್ರಭಾವ ದಟ್ಟವಾಗಿ ಆಗಿರುವುದು ಕಂಡುಬರುತ್ತದೆ.

೧೯೦೩ ರಲ್ಲಿ "ಶ್ರೀ ನಾರಾಯಣ ಧರ್ಮ ಪರಿಪಾಲನ ಸಭೆ" ಎಂಬ ಸಂಸ್ಥೆಯು ಆರಂಭವಾದಾಗ ಮಹಾಕವಿ ಕುಮಾರನ್ ಆಶಾನ್ ಅದರ ಮೊದಲ ಕಾರ್ಯದರ್ಶಿಯಾದರು. ಈ ಸಂಸ್ಥೆಯನ್ನು ಆರಂಭಿಸುವಲ್ಲಿ ನೇತೃತ್ವ ವಹಿಸಿದ ಸ್ವಾಮಿ ವಿವೇಕಾನಂದರ ಉಪಾಸಕರಾದ ಡಾ. ಪಲ್ಪು ಎಂಬವರು ಕುಮಾರನ್ ಆಶಾನ್ ಅವರಿಗೆ ಬೆಂಗಳೂರು ಹಾಗೂ ಕಲ್ಕತ್ತಗಳಲ್ಲಿ ಸಂಸ್ಕೃತ ಕಲಿಯಲು ಸಹಾಯ ಮಾಡಿದರು. ನಾರಾಯಣ ಗುರುವಿನ ತತ್ತ್ವಗಳನ್ನು ಪ್ರಚಾರ ಮಾಡಲು ಆಶಾನ್ ವಿವೇಕೋದಯಂ ಎಂಬ ಮಲಯಾಳ ಮಾಸಪತ್ರಿಕೆಯನ್ನು ಆರಂಭಿಸಿದರು. ನಾರಾಯಣ ಗುರುವಿನ ಸಂಪರ್ಕದಿಂದ ಆಶಾನ್ ಭಕ್ತಿಗೀತೆಗಳನ್ನು ಆಧ್ಯಾತ್ಮಿಕ ಗೀತೆಗಳನ್ನು ರಚಿಸಿದರು.

ಕುಂಜನ್ ಪಿಳ್ಳೆ ಎಂದೂ ವಿದ್ಯಾಧಿರಾಜ ಎಂದೂ ಹೆಸರು ಪಡೆದ ಚಟ್ಟಾಂಬಿ ಸ್ವಾಮಿಗಳು (೧೮೫೩–೧೯೨೪) ಒಬ್ಬ ಶ್ರೇಷ್ಠ ಅದ್ವೈತ ತತ್ತ್ವಜ್ಞರೂ ಸಮಾಜ ಸುಧಾರಕರೂ ಆಗಿದ್ದರು. ಅವರು ತಮಿಳು ಹಾಗೂ ಮಲಯಾಳ ಎರಡನ್ನೂ ಕಲಿತರು.

ಕೊಲ್ಲೂರು ದೇವಿಯ ಭಕ್ತರಾದ ಅವರು ಕೊಲ್ಲೂರು ಮಠದಲ್ಲಿ ಗುರುವೊಬ್ಬರಿಂದ ಸಂಸ್ಕೃತವನ್ನು ಕಲಿತರು. ಸನ್ಯಾಸಿಯೊಬ್ಬರ ಮೂಲಕ ಅವರು ವೇದಾಂತ ದೀಕ್ಷೆಯನ್ನು ಕೈಗೊಂಡರು. ತಾನು ಆಧ್ಯಾತ್ಮಿಕವಾಗಿ ಬದಲಾಗಿರುವುದಾಗಿ ಅವರು ಭಾವಿಸಿದರು. ೧೮೭೫ ರಲ್ಲಿ ಅವರು ಅನೇಕ ಧಾರ್ಮಿಕ ಉಪನ್ಯಾಸಗಳನ್ನು ನೀಡಿದರು. ಅಯ್ಯಾವು ಎಂಬವರಿಂದ ಹಠಯೋಗವನ್ನೂ ವೇದಾಂತವನ್ನೂ ಕಲಿತರು. ತಮಿಳು ಅಧ್ಯಾಪಕರೊಬ್ಬರ ಸಹಾಯದಿಂದ ಅವರು ತಮಿಳು ತತ್ತ್ವಶಾಸ್ತ್ರದ ಕೃತಿಗಳನ್ನು ಅಭ್ಯಾಸ ಮಾಡಿದರು. ಮುಂದೆ ಅಪ್ರತಿಮ ವಾಗ್ಮಿಯಾದ ಅವರು ಧಾರ್ಮಿಕೋಪನ್ಯಾಸಗಳನ್ನು ನೀಡತೊಡಗಿದರು. ಕಲ್ಲುವೀಡು ಕೃಷ್ಣನ್ ಪಿಳ್ಳೈ ಎಂಬವರಿಂದ ತಂತ್ರಶಾಸ್ತ್ರವನ್ನೂ ಕಲಿತರು. ಚಟ್ಟಾಂಬಿ ಸ್ವಾಮಿಗಳ ಅಭಿಪ್ರಾಯದಂತೆ– ಬ್ರಹ್ಮಸಾಕ್ಷಾತ್ಕಾರ ಅಥವಾ ಬ್ರಹ್ಮನನ್ನು ಕುರಿತ ಅನುಭವ ಪ್ರಜ್ಞೆಯ ತುರೀಯ ಸ್ಥಿತಿಯಲ್ಲಿ ಮಾತ್ರ ಆಗಲು ಸಾಧ್ಯ. ಸುಷುಪ್ತಿಯಲ್ಲಿ ಅಥವಾ ಗಾಢನಿದ್ರೆಯಲ್ಲಿ ಅದು ಸಾಧ್ಯವಿಲ್ಲ. ಮಾಯಾ ಶಕ್ತಿಯು ಬ್ರಹ್ಮನಲ್ಲಿಯೇ ಅಡಕವಾಗಿದೆ. ಈಶ್ವರನೇ ಬ್ರಹ್ಮ. ಅವನೂ ಮಾಯೆಯ ನಿಬಂಧನೆಗೆ ಒಳಪಟ್ಟವನು.

ಚಟ್ಟಾಂಬಿ ಸ್ವಾಮಿಗಳು ಅದ್ವೈತ ತತ್ತ್ವಕ್ಕೆ ಸಂಬಂಧಿಸಿದ ಅನೇಕ ಕೃತಿಗಳನ್ನು ಮಲಯಾಳದಲ್ಲಿ ರಚಿಸಿದ್ದಾರೆ. ಅವರು ರಚಿಸಿದ 'ಅದ್ವೈತ ಚೂಡಾಮಣಿ'ಯು ಅದ್ವೈತ ತತ್ತ್ವಗಳನ್ನೊಳಗೊಂಡ ಪ್ರಶ್ನೋತ್ತರ ರೂಪದಲ್ಲಿರುವ ಒಂದು ಕೃತಿ. ಈ ಕೃತಿಯಲ್ಲಿ ಅಧ್ಯಾರೋಪ ಮತ್ತು ಅಪವಾದ, ಜಗನ್ಮಿಥ್ಯತ್ವ, ಬ್ರಹ್ಮಸಾಕ್ಷಾತ್ಕಾರ, ತತ್ತ್ವಮಸ್ಯಾದಿ ಮಹಾ ವಾಕ್ಯೋಪದೇಶ, ಚತುರ್ವೇದ ಮಹಾ ವಾಕ್ಯಗಳು ಮತ್ತು ಶ್ರುತಿಸಾರ ಮಹಾ ವಾಕ್ಯಗಳು– ಮುಂತಾದ ವಿಷಯಗಳು ಈ ಕೃತಿಯಲ್ಲಿ ನಿರೂಪಿತವಾಗಿವೆ. ಪ್ರಜ್ಞೆಯ ನಾಲ್ಕನೆಯ ಹಂತವಾದ ತುರೀಯಾವಸ್ಥೆಯಲ್ಲಿ ಮಾತ್ರವೇ ಸಚ್ಚಿದಾನಂದಾನುಭವ ಆಗಲು ಸಾಧ್ಯವೆಂದು ಲೇಖಕರು ಹೇಳುತ್ತಾರೆ. 'ನಿಜಾನಂದ ವಿಲಾಸಂ' ಎಂಬುದು ತಮಿಳು ವೇದಾಂತ ಕೃತಿಯ ಅನುವಾದ. ಒಂಬತ್ತು ಅಧ್ಯಾಯಗಳಿರುವ ಈ ಕೃತಿಯು ತುರೀಯಾವಸ್ಥೆಯ ಮಹತ್ವವನ್ನು ಒತ್ತಿ ಹೇಳುತ್ತದೆ. 'ಮನೋನಾಶಂ' ಎಂಬುದು ಚಟ್ಟಾಂಬಿ ಸ್ವಾಮಿಗಳ ಇನ್ನೊಂದು ಕೃತಿ. ಈ ಕೃತಿಯಲ್ಲಿ ಅದ್ವೈತ ಸ್ಥಿತಿಯನ್ನು ತಲುಪಬೇಕಾದರೆ ಮಾನಸಿಕ ಚಟುವಟಿಕೆಗಳನ್ನೆಲ್ಲ ನಿಲ್ಲಿಸಬೇಕೆಂಬುದರ ಮಹತ್ವವನ್ನು ತಿಳಿಸಲಾಗಿದೆ. ಪ್ರಪಂಚವೆಂಬುದು ಮನಸ್ಸಿನ ಸೃಷ್ಟಿ. ಭ್ರಾಂತಿಮಯವಾದ ಪ್ರಪಂಚದಿಂದ ದೂರವಿರಲು ಮಾನಸಿಕ ಚಟುವಟಿಕೆಗಳ ನಿಲ್ಲಿಸುವಿಕೆಯೇ ಯೋಗ್ಯ ಸಾಧನವಾಗಿದೆ ಎಂಬುದು ಈ ಕೃತಿಯ ಮುಖ್ಯಾಂಶವಾಗಿದೆ. 'ಚಿದಾಕಾಶಲಯಂ' ಎಂಬ ಅವರ ಇನ್ನೊಂದು ಕೃತಿ ವೇದಾಂತದ ಜನಪ್ರಿಯ ಗ್ರಂಥವಾಗಿದ್ದು ಇದು ಚಿತ್ಪದತ್ವವನ್ನು ತಲುಪಲು ಅಗತ್ಯವಾದ ಮಾರ್ಗಗಳನ್ನು ಸೂಚಿಸುತ್ತದೆ. 'ಸರ್ವಮತಸಾಮರಸ್ಯಂ' ಎಂಬ ಕೃತಿಯು ಬೇರೆ ಬೇರೆ ಮತಧರ್ಮಗಳ ಮೂಲ ತತ್ತ್ವಗಳಲ್ಲಿ ಸಾಮರಸ್ಯವನ್ನುಂಟುಮಾಡುತ್ತದೆ.

'ಮೋಕ್ಷ ಪ್ರದೀಪ ಖಂಡನ'ವೆಂಬ ಕೃತಿಯಲ್ಲಿ ಆಲತ್ತೂರು ಬ್ರಹ್ಮಾನಂದ ಸ್ವಾಮಿಗಳು 'ಮೋಕ್ಷ ಪ್ರದೀಪ'ವೆನ್ನುವ ಗ್ರಂಥದಲ್ಲಿ ಪ್ರತಿಪಾದಿಸಿದ ಜ್ಞಾನ ಮಾರ್ಗಕ್ಕಿಂತ ಯೋಗ ವಿಧಾನವೇ ಶ್ರೇಷ್ಠವೆನ್ನುವ ಅಭಿಪ್ರಾಯವನ್ನು ಖಂಡಿಸಿ ಮೋಕ್ಷಕ್ಕೆ ಜ್ಞಾನ ಮಾರ್ಗವೇ ಶ್ರೇಷ್ಠವಾದುದು ಎಂಬ ವಿಚಾರವನ್ನು ನೆಲೆಗೊಳಿಸಲಾಗಿದೆ.

ಆಲತ್ತೂರಿನ (ಪಾಲ್ಘಾಟ್) ಶಿವಯೋಗಿಯು ಸಂಸ್ಕೃತದಲ್ಲಿ ರಚಿಸಿದ 'ಆನಂದದರ್ಶ' ಎನ್ನುವ ಪದ್ಯದಲ್ಲಿ ಆನಂದಕ್ಕೆ ಮಹತ್ವವನ್ನು ಕೊಡುವುದರ ಮೂಲಕ ಅದ್ವೈತಕ್ಕೆ ಹೊಸ ಮಾರ್ಗವನ್ನು ತೋರಿಸಿಕೊಡಲಾಗಿದೆ. ಅವರ ಮಲಯಾಳ ಕೃತಿಗಳು ಗದ್ಯದಲ್ಲಿವೆ. 'ವಿಗ್ರಹಾರಾಧನ ಖಂಡನಂ' ಎಂಬುದರಲ್ಲಿ ದೇವಸ್ಥಾನದಲ್ಲಿ ಮಾಡುವ ವಿಗ್ರಹಾರಾಧನೆಯ ಖಂಡನೆಯಿದೆ. ಅವರ 'ಆನಂದ ವಿಮರ್ಶನ'ವು ಧರ್ಮದಲ್ಲಿ ಆನಂದದ ಮಹತ್ವವೇನೆಂಬುದನ್ನೂ 'ಮೋಕ್ಷಪ್ರದೀಪ'ವು ಜ್ಞಾನಮಾರ್ಗಕ್ಕಿಂತ ಯೋಗಸಾಧನೆಯೇ ಮೇಲೆಂಬುದನ್ನೂ ಬೋಧಿಸುತ್ತವೆ.

ಕೊಟುಮ ನಲ್ಲೂರ್ ಕುಞ್ಞಿಕುಟ್ಟನ್ ತಂಪುರಾನ್ ಮೂಲದ ಛಂದಸ್ಸಿನಲ್ಲೇ ಮಲಯಾಳಕ್ಕೆ ಅನುವಾದಿಸಿದ ಮಹಾಭಾರತವು ಒಂದು ಮುಖ್ಯ ಗ್ರಂಥವಾಗಿದೆ. ಇದು ವಲ್ಲತ್ತೋಳ್ ನಾರಾಯಣ ಮೆನನ್ ಅವರಿಗೆ ವಾಲ್ಮೀಕಿ ರಾಮಾಯಣವನ್ನೂ ಇತರ ಅನೇಕ ಪುರಾಣಗಳನ್ನೂ ಮಲಯಾಳಕ್ಕೆ ಅನುವಾದಿಸಲು ಪ್ರೇರಣೆ ನೀಡಿತು. ವಿವಿಧ ಪುರಾಣಗಳ ಹಾಗೂ ಇತಿಹಾಸ ಮಹಾಕಾವ್ಯಗಳ ವಸ್ತುಗಳನ್ನು ಮಲಯಾಳದ ಕೃತಿಗಳಲ್ಲಿ ಉಪಯೋಗಿಸಲಾಗಿದೆ. ಅಂತಹ ಕಿರು ಕಾವ್ಯಗಳು ಮಹಾಕಾವ್ಯಗಳಿಗಿಂತ ಹೆಚ್ಚು ಜನಪ್ರಿಯವಾಗಿವೆ. ವಿ. ಸಿ. ಬಾಲಕೃಷ್ಣ ಪಣಿಕ್ಕರ್ ಅವರ 'ಒರು ವಿಲಾಪಂ' ಹಾಗೂ ಕುಮಾರನ್ ಆಶಾನ್ ಅವರ 'ನಳಿನಿ' ಕೃತಿಗಳು ಮಲಯಾಳದಲ್ಲಿ ರಮ್ಯ ಸಂಪ್ರದಾಯವನ್ನು ಆರಂಭಿಸಿದುವು. ವಸ್ತು ಹಾಗೂ ಭಾವಾವೇಶದ ದೃಷ್ಟಿಗಳಿಂದ ಕಾವ್ಯವನ್ನು ನೋಡುವ ವಿಧಾನವು ಮಲಯಾಳ ಸಾಹಿತ್ಯದಲ್ಲಿ ಪ್ರಚಲಿತವಾಯಿತು.

'ಒರು ವಿಲಾಪಂ' ಎಂಬುದು ಒಂದು ಶೋಕಗೀತೆಯಾದರೂ ತಾತ್ವಿಕ ಹಾಗೂ ವೇದಾಂತದ ವಿಚಾರಗಳು ಅಲ್ಲಲ್ಲಿ ಸಂಕ್ಷಿಪ್ತವಾಗಿ ಪ್ರತಿಪಾದಿತವಾಗಿವೆ. ಸತ್ತುಹೋದ ಮಡದಿಯ ಹಿರಿಮೆಯನ್ನು ಸ್ಮರಿಸುತ್ತಾ ಆಕೆಯ ಅನಿರೀಕ್ಷಿತ ಮರಣದ ಕಾರಣಗಳನ್ನು ತಿಳಿಯಲಾರದೆ ಕವಿಯು ತತ್ವಶಾಸ್ತ್ರ ಹಾಗೂ ಆಧ್ಯಾತ್ಮ ವಿದ್ಯೆಯ ಮೂಲಕ ಸಮಾಧಾನ ಪಡೆಯಲು ಪ್ರಯತ್ನಿಸುವುದನ್ನು ಈ ಗೀತೆಯಲ್ಲಿ ಕಾಣಬಹುದು. ಜೀವನ ಹಾಗೂ ಪ್ರಪಂಚದ ರಹಸ್ಯವನ್ನು ಕುರಿತ ಆತನ ಚಿಂತನೆಗಳು ಜೀವನ ಮರಣಗಳ ಚಕ್ರವನ್ನು ತನ್ನಿಚ್ಛೆಯಂತೆ ನಡೆಸುವ ಉನ್ನತ ಶಕ್ತಿಯ ಗೂಢವಾದ ಮತ್ತು ಅಸ್ಥಿರವಾದ ಪ್ರಕಟಣೆಯ ಕುರಿತು ಅರಿವನ್ನು ಮೂಡಿಸಿದವು. ಕವಿ ಹೇಳುತ್ತಾನೆ–

ನಿಷ್ಕರುಣೆಯಿಂದ ಭಗ್ನವಾದ ಮತ್ತು ಅರ್ಧಜೀವವಾದ, ಜೀವನದ ಹೆಬ್ಬಯಕೆಗಳ ಬಲೆಯಲ್ಲಿ ಸಿಲುಕಿದ, ಎಡೆಬಿಡದೆ ಸಂಕಟಗಳ ಪ್ರಲೋಭನೆಗೆ ಒಳಗಾದ ನಾನು ಮೃತ್ಯುದೇವತೆಯ ಬಾಗಿಲನ್ನು ತಟ್ಟುತ್ತೇನೆ.

ಆತನ ಪ್ರಿಯತಮೆಯ ಕಣ್ಣರೆಪ್ಪೆಗಳು ವಿಧಿಯಿಂದಾಗಿ ಮುಚ್ಚಿವೆ. ಆತನ ಮೇಲಿರುವ ಪ್ರೀತಿಯನ್ನು ಪ್ರಕಟಿಸುವ ಅವು ಇನ್ನೆಂದಿಗೂ ತೆರೆಯಲಾರವು.

ಇಲ್ಲಿ ಮಾನವನ ಅದೃಷ್ಟವನ್ನು ಕುರಿತ ತೀಕ್ಷ್ಣ ದೃಷ್ಟಿಯ ಒಳನೋಟವು ಉತ್ಕೃಷ್ಟವಾದ ರೀತಿಯಲ್ಲಿ ಪ್ರತಿಪಾದಿತವಾಗಿದೆ. 'ವಿಶ್ವರೂಪಂ' ಎಂಬುದು ಕೂಡ ಮುಖ್ಯವಾದುದು. ಅದರಲ್ಲಿ ತಾತ್ವಿಕ ವಿಚಾರಗಳು ಸಾಂಕೇತಿಕವಾದ ಹಾಗೂ ವಿಚಾರ ಪ್ರಚೋದಕವಾದ ರೀತಿಯಲ್ಲಿ ನಿರೂಪಿತವಾಗಿವೆ.

ಕುಮಾರನ್ ಆಶಾನ್ ಅವರ 'ವೀಣಪೂವು' (ಬಿದ್ದ ಹೂ) ಎನ್ನುವುದೂ ಒಂದು ಪ್ರೇಮಗೀತೆಯಾಗಿದೆ. ಇದು ಕವಿಯ ಅಪೂರ್ವವಾದ ವ್ಯಕ್ತಿತ್ವವನ್ನು ನಮ್ಮ ಮುಂದೆ ತೆರೆದಿಡುತ್ತದೆ. ವೀಣಪೂವು ಬರಿಯ ಹೂವು ಮಾತ್ರವಲ್ಲ. ಅದು ಪೂರ್ಣ ಜೀವನದ ಸಂಕೇತವಾಗಿದೆ. ಇದರಲ್ಲಿ ಜನನ ಮರಣಗಳ ವಿಚಾರ ಹಾಗೂ ಪ್ರಪಂಚದ ಸಮಸ್ಯೆಗಳು ನಿರೂಪಿತವಾಗಿವೆಯಲ್ಲದೆ ಕುಮಾರನ್ ಆಶಾನ್ ಅವರ ಕವಿ ಹೃದಯ ಎದ್ದು ತೋರುತ್ತದೆ. ಅವರ ಜೀವನ ತತ್ವದ ನಿರೂಪಣೆ ಅತ್ಯುತ್ತಮವಾಗಿ ಕಂಡುಬರುವುದು ಈ ಕವನದಲ್ಲಿಯೇ ಎನ್ನಬಹುದು. ದುಃಖದ, ದುರಂತದ ಘಟನೆಗಳ ನಡುವೆ ಆಶಾನ್ ಆಶಾವಾದಿಯಾಗಿ ಶ್ರದ್ಧೆ ಪ್ರೇಮಗಳ ನಿಷ್ಠೆಯುಳ್ಳವರಾಗಿ ಕಂಡುಬರುತ್ತಾರೆ. ನಾರಾಯಣ ಗುರುವಿನ ಸಂಬಂಧ ಹೊಂದಿದ್ದ ಆಶಾನ್ ನಾರಾಯಣ ಗುರುವಿನ 'ಶ್ರೀ ನಾರಾಯಣ ಧರ್ಮ ಪರಿಪಾಲನ ಯೋಗಂ'ನ ಕಾರ್ಯದರ್ಶಿಯಾಗಿದ್ದರಲ್ಲದೆ 'ವಿವೇಕೋದಯಂ' ಎಂಬ ಪತ್ರಿಕೆಯ ಸಂಪಾದಕರೂ ಆಗಿದ್ದರು. ವೀಣಪೂವಿನ ವೈಚಾರಿಕ ವಸ್ತು ವೇದಾಂತ ತತ್ವ ಹಾಗೂ ಪ್ರೇಮ ಕಲ್ಪನೆಗಳ ಮಿಶ್ರಣ. ಜೀವನದ ಚಂಚಲತೆ ಹಾಗೂ ಮರಣದ ಖಚಿತತೆಯ ಚಿತ್ರಣ. ಜೀವನವೆಂಬುದು ಎಷ್ಟೆಂದರೂ ಒಂದು ಕನಸು. ಇಲ್ಲಿ ಬಿದ್ದು ಹೋದ ಹೂವು ದೇವಲೋಕದ ಕಲ್ಪವೃಕ್ಷದಲ್ಲಿ ಮತ್ತೆ ಕಾಣಿಸಿಕೊಳ್ಳಲಾರದೆಂದು ಹೇಳಲು ಸಾಧ್ಯವೇ ?

ಆಶಾನ್ ಅವರ 'ನಳಿನಿ' ಮತ್ತು 'ಲೀಲಾ' ಎಂಬವು ಎರಡೂ ಪರಿಶುದ್ಧ ಪ್ರೇಮ ಕವನಗಳು. ಆಶಾನ್ ಅವರ ಕವಿತೆಗಳಲ್ಲಿ ರೋಮ್ಯಾಂಟಿಕ್ ಭಾವ ಮತ್ತು ಸಾಂಪ್ರದಾಯಿಕ ಭಾವಗಳು ಸಮರಸವಾಗಿ ಮಿಳಿತವಾಗಿದ್ದವು. ಪ್ರೇಮಿಗಳಾದ ನಳಿನಿ ಮತ್ತು ದಿವಾಕರನ್ ಹಿಮಾಲಯದಲ್ಲಿ ಕೊನೆಯ ಭೇಟಿಯಾಗುವ ಸಂದರ್ಭದಿಂದ ನಳಿನಿ ಕವನ ಆರಂಭವಾಗುತ್ತದೆ. ಕವನ ಮುಂದುವರಿದಂತೆ ಹಿಂದಿನ ಕಥೆ ಅನಾವರಣಗೊಳ್ಳುತ್ತದೆ. ಅವನ ಸಾನ್ನಿಧ್ಯದ ಬಗ್ಗೆ ನಳಿನಿ ಕನಿಕರಪಡುತ್ತಾಳೆ. ತನ್ನ ಬಗೆಗಿನ ಆತನ ಪ್ರೇಮ ಐಹಿಕವಲ್ಲವೆಂದು ಅರ್ಥಮಾಡಿಕೊಳ್ಳುತ್ತಾಳೆ. ಅವನ ಆಲಿಂಗನದ ಆಧ್ಯಾತ್ಮಿಕಾನುಭವದಲ್ಲಿ ಅವಳು ಕೊನೆಯುಸಿರೆಳೆಯುತ್ತಾಳೆ. ಲೀಲಾ ಎನ್ನುವ ಇನ್ನೊಂದು ಕವನವೂ ರಚನೆಯಲ್ಲಿ ಇದರಂತೆಯೇ ಇದೆ. ದೀರ್ಘವಾದ ಹುಡುಕಾಟದ ಬಳಿಕ ಪ್ರೇಮಿಗಳು ಪರಸ್ಪರ ಸಂಧಿಸುತ್ತಾರೆ. ಕ್ಷಣಕಾಲ ಭೇಟಿಯಾದ ಅವರು ನದಿಗೆ ಹಾರಿ ಒಂದಾಗುತ್ತಾರೆ. ಜನಸಾಮಾನ್ಯರಿಗೆ ಸಹಜವಾದ ಪ್ರಣಯ ಭಾವವನ್ನು 'ಲೀಲಾ' ವಿಶದೀಕರಿಸುತ್ತದೆ. ಐಹಿಕ ಜೀವನದ ಅಂತ್ಯವು ಹೆಚ್ಚು

ವೈಭವಯುತವಾದ ಇನ್ನೊಂದು ಜೀವನದ ಆದಿ. ಕುಮಾರನ್ ಆಶಾನ್ ಅವರಿಗೆ ಆತ್ಮನ ಅಮೃತತ್ವದಲ್ಲಿ ನಂಬಿಕೆ ಇತ್ತು. ಅವರ ನಳಿನಿ ಹಾಗೂ ಲೀಲಾ ಪ್ರೇಮ ಕವನಗಳಾದರೂ ಅವುಗಳಲ್ಲಿ ಅದ್ವೈತ ತತ್ವದ ಪ್ರಭಾವವಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಆಶಾನ್ ಅವರು ತಮ್ಮ ತಾತ್ವಿಕ ವಿಚಾರಗಳಿಂದ ಪ್ರಸಿದ್ಧರು. ತಮ್ಮ ಸಾಹಿತ್ಯಿಕ ಗುರುವಾದ ಎ. ಆರ್. ರಾಜರಾಜ ವರ್ಮ ಅವರ ಮರಣ ಕಾಲದಲ್ಲಿ ಬರೆದ 'ಪ್ರರೋದನಂ' ಕವನವು ಜೀವನ ಮತ್ತು ಮರಣವನ್ನು ಕುರಿತ ರಹಸ್ಯಗಳಿಂದ ತುಂಬಿದೆಯಲ್ಲದೆ ಅವೆರಡರೊಳಗಿನ ಸಂಬಂಧವನ್ನು ಸುಂದರವಾಗಿ ನಿರೂಪಿಸುತ್ತದೆ. ಅವರ 'ಕರುಣ' ಮತ್ತು 'ಚಂಡಾಲ ಭಿಕ್ಷುಕಿ' ಎಂಬ ಕವನಗಳಲ್ಲಿ ಬೌದ್ಧ ಧರ್ಮದ ಪ್ರಭಾವವನ್ನು ಕಾಣಬಹುದು. 'ಚಿಂತಾವಿಷ್ಟಯಾಯ ಸೀತ' ಕವನದ ಮೇಲೆ ಕಾಳಿದಾಸನ ಪ್ರಭಾವವಾಗಿದೆ.

ವಳ್ಳತ್ತೋಳ್ ಅವರು ಪುರಾಣಗಳಿಂದ ವಸ್ತುಗಳನ್ನಾಯ್ದುಕೊಂಡು ಕವನಗಳನ್ನು ರಚಿಸಿದ್ದಾರೆ. ಅವರು ಮುಖ್ಯವಾಗಿ ಸಮಾಜದಲ್ಲಿನ ಅಸಮಾನತೆಯ ವಿರುದ್ಧ ಹಾಗೂ ರಾಷ್ಟ್ರೀಯತೆಯನ್ನು ಕುರಿತು ಮಾತ್ರವಲ್ಲದೆ ಮಾನವ ಜೀವನದ ವಿವಿಧ ಮುಖಗಳನ್ನು ಕುರಿತು ಕವಿತೆಗಳನ್ನು ಬರೆದಿದ್ದಾರೆ. ವೇದಾಂತ ತತ್ವಗಳು ಅವರ ಕವನಗಳಲ್ಲಿ ಮಾರ್ಮಿಕವಾಗಿ ಮತ್ತು ಪರಿಣಾಮಕಾರಿಯಾಗಿ ಮೂಡಿಬಂದಿವೆ.

ಆಧುನಿಕ ಮಲಯಾಳ ಸಾಹಿತ್ಯದ ಅನೇಕ ಬರಹಗಾರರ ಕೃತಿಗಳಲ್ಲಿ ಅದ್ವೈತ ತತ್ವದ ಪ್ರಭಾವವನ್ನು ಕಾಣಬಹುದು. ಓ. ವಿ. ವಿಜಯನ್ ಎಂಬವರ 'ಕಸಾಕ್ಕಿಂಡೆ ಇತಿಹಾಸಂ' ಎಂಬ ಕಾದಂಬರಿಯಲ್ಲಿ ಕರ್ಮಬಂಧ, ಪುನರ್ಜನ್ಮವನ್ನು ಕುರಿತ ವಿಚಾರಗಳಿವೆ. ಅಂತೆಯೇ ಅವರ ಗುರು ಸಾಗರನ್, ಮಧುರಂ ಗಾಯತಿ. ತಲಮುರಗಳ್ ಮುಂತಾದ ಕಾದಂಬರಿಗಳಲ್ಲೂ ಅದ್ವೈತದ ಪ್ರಭಾವವಿರುವುದನ್ನು ಗುರುತಿಸಬಹುದು. ವಿಷ್ಣುನಾರಾಯಣ ನಂಬೂದಿರಿ, ಅಕ್ಕಿತಂ ಅಚ್ಯುತನ್ ನಂಬೂದಿರಿ, ಎನ್. ಎನ್. ಕಕ್ಕಾಡ್ ಮೊದಲಾದವರ ಕವಿತೆಗಳಲ್ಲಿಯೂ ಅದ್ವೈತ ತತ್ವದ ಪ್ರಭಾವವಿದೆ.

ಕೊಲ್ಲಂಗೋಡ್ ಪಿ. ಗೋಪಾಲನ್ ನಾಯರ್ ಅವರು ೧೯೧೧ ರಲ್ಲಿ ಭಾಗವತದ ವಿವರವಾದ ಮಲಯಾಳ ವ್ಯಾಖ್ಯಾನವನ್ನು, ೧೯೩೫ ರಲ್ಲಿ ಅಧ್ಯಾತ್ಮ ರಾಮಾಯಣದ ವ್ಯಾಖ್ಯಾನವನ್ನು, ೧೯೪೭ ರಲ್ಲಿ ಪಂಚದಶಿಯ ವ್ಯಾಖ್ಯಾನವನ್ನೂ ೧೯೫೭ ರಲ್ಲಿ ಬ್ರಹ್ಮಸೂತ್ರ ವ್ಯಾಖ್ಯಾನದ ಶಂಕರ ಭಾಷ್ಯವನ್ನು ಪ್ರಕಟಿಸಿದರು. ೧೯೦೮ ರಲ್ಲಿ ಅವರು ದತ್ತಾತ್ರೇಯಾವಧೂತ ಗೀತದ ಮಲಯಾಳ ಕಾವ್ಯಾನುವಾದವನ್ನೂ ೧೯೨೮ ರಲ್ಲಿ ಶಿವಗೀತಾದ ಮಲಯಾಳ ಕಾವ್ಯಾನುವಾದವನ್ನೂ ೧೯೪೭ ರಲ್ಲಿ ಬದರೀಶಾಷ್ಟೋತ್ತರ ಹಾಗೂ ಭಗವದ್ಗೀತೆಯ ವ್ಯಾಖ್ಯಾನಗಳನ್ನೂ ೧೯೫೧ ರಲ್ಲಿ ದಕ್ಷಿಣಾಮೂರ್ತಿಸ್ತವದ ವ್ಯಾಖ್ಯಾನವನ್ನೂ ೧೯೬೦ ರಲ್ಲಿ ಸನತ್ಕುಮಾರಾಷ್ಟೋತ್ತರವನ್ನೂ ಪ್ರಕಟಿಸಿದರು. ೧೯೧೫ ರಲ್ಲಿ ಅವರು

ಗುರುವಾಯೂರು ದೇವಸ್ಥಾನದಲ್ಲಿ ಸಂಪ್ರದಾಯಬದ್ಧ ಪಂಡಿತರ ದೃಷ್ಟಿಕೋನಗಳಿಗೆ ವಿರುದ್ಧವಾಗಿ ಭಗವದ್ಗೀತೆಯ ಪಠನವನ್ನು ಆರಂಭಿಸಿದರು. ೧೯೭೨ ರಲ್ಲಿ ಅವರ 'ಹರಿಮೀಡೇ ಸ್ತೋತ್ರ' ಪ್ರಕಟವಾಯಿತು. ೧೯೭೫ ರಲ್ಲಿ ಅವರು ತಪೋವನಂ ಸ್ವಾಮಿಯ ಜೀವನ ಚರಿತ್ರೆಯನ್ನು ಬರೆದರು. ೧೯೭೧ ರಲ್ಲಿ ಕೊಚ್ಚಿಯ ರಾಜರು ಅವರಿಗೆ 'ಸಾಹಿತ್ಯ ಕೇಸರಿ' ಎಂಬ ಬಿರುದನ್ನು ನೀಡಿ ಗೌರವಿಸಿದರು. ಗೋಪಾಲನ್ ನಾಯರ್ ಅವರು ಸರಳ ಸುಂದರ ಮಲಯಾಳದಲ್ಲಿ ಅನೇಕ ತತ್ತ್ವಶಾಸ್ತ್ರದ ಹಾಗೂ ಧಾರ್ಮಿಕ ಗ್ರಂಥಗಳಿಗೆ ವ್ಯಾಖ್ಯಾನವನ್ನು ರಚಿಸಿದರು. ಕಲ್ಲಿಕೋಟೆಯ ಮಹಾವಿಕ್ರಮ ಪಿಟ್ಟೆನ್ ತಂಪುರಾನ್ ಅವರಿಂದಲೂ ಗೌರವಿಸಲ್ಪಟ್ಟ ಗೋಪಾಲನ್ ನಾಯರ್ ಪಿಟ್ಟೆನ್ ತಂಪುರಾನ್ ಅಧ್ಯಕ್ಷರಾಗಿದ್ದ 'ಸಹೃದಯ ಸಮಾಜಂ'ನ ಸಕ್ರಿಯ ಸದಸ್ಯರೂ ಆಗಿದ್ದರು.

ವಡಕ್ಕಾಂಚೇರಿಯ ಪರ್ಲಿಕ್ಕಾಟ್‌ನ ಜ್ಞಾನಾನಂದಾಶ್ರಮದ ಜ್ಞಾನಾನಂದ ಸ್ವಾಮಿಗಳು ಶಂಕರಾಚಾರ್ಯರ ಮುಖ್ಯ ಉಪನಿಷತ್ತು ಹಾಗೂ ಸ್ತೋತ್ರ ಕೃತಿಗಳ ಮಲಯಾಳ ಅನುವಾದವನ್ನು ಪ್ರಕಟಿಸಿದರು. ಶ್ರೀ ನಾರಾಯಣ ಗುರು ಅವರು ಮಲಯಾಳದಲ್ಲಿ ಕುಂಡಲಿನಿಪಾಟ್ಟು, ಆತ್ಮೋಪದೇಶ ಶತಕ, ಅದ್ವೈತ ದೀಪಿಕ, ಅನುಭೂತಿದಶಕ, ಸದಾಶಿವ ದರ್ಶನಂ, ಶಿವಶತಕಂ, ವೈರಾಗ್ಯ ದಶಕಂ ಹಾಗೂ ಚಿದ್‌ಜಡಚಿಂತನಂ ಎಂಬ ಕೃತಿಗಳನ್ನು ರಚಿಸಿದರು. ಅವರ ದರ್ಶನ ಮಾಲಾ ಕೃತಿಯು ಸಂಸ್ಕೃತದಲ್ಲಿದೆ. ನಾರಾಯಣ ಗುರು ಅವರ ಅಭಿಪ್ರಾಯದಂತೆ ಅವರ ಆತ್ಮೋಪದೇಶ ಶತಕವು ಪರಿಪಕ್ವವಾದ ಹಾಗೂ ಉತ್ಕೃಷ್ಟವಾದ ಒಂದು ಅದ್ವೈತ ತತ್ತ್ವದ ಕೃತಿ.

ತ್ರಿಚೂರಿನ ಶ್ರೀರಾಮಕೃಷ್ಣಾಶ್ರಮವು ಮೃಡಾನಂದ ಸ್ವಾಮಿಗಳು ಮಲಯಾಳಂಗೆ ಅನುವಾದಿಸಿದ ಹತ್ತು ಪ್ರಮುಖ ಉಪನಿಷತ್ತುಗಳನ್ನೂ 'ವಿವೇಕಾನಂದ ಸರ್ವಸ್ವಂ' ಕೃತಿಯ ಅನುವಾದವನ್ನೂ ಪ್ರಕಟಿಸಿದೆ. ಕೋಟ್ಟಯಂನ ವಳೂರು ಎಂಬಲ್ಲಿರುವ ತೀರ್ಥಪಾದಾಶ್ರಮದವರು ತೀರ್ಥ ಪಾದಸ್ವಾಮಿಗಳ ಜೀವನ ಹಾಗೂ ಕೃತಿಗಳನ್ನುಕುರಿತ ಗ್ರಂಥವನ್ನೂ ಬ್ರಹ್ಮದರ್ಶನಂ, ಬ್ರಹ್ಮವಿದ್ಯಾ, ಭಗವದ್ದರ್ಶನಂ, ಆಧ್ಯಾತ್ಮಭಾಗವತಂನ ಮಲಯಾಳ ಅನುವಾದವನ್ನೂ ಚಟ್ಟಾಂಬಿ ಸ್ವಾಮಿಗಳ ಅದ್ವೈತ ಚಿಂತಾ ಪದ್ಧತಿಯನ್ನೂ ಪ್ರಕಟಿಸಿದ್ದಾರೆ. ಅದ್ವೈತ ಚಿಂತಾ ಪದ್ಧತಿಯಲ್ಲಿ ಅದ್ವೈತ ಹಾಗೂ ಶೈವತತ್ತ್ವ ಸಾಮರಸ್ಯವನ್ನು ಕುರಿತ ತೀರ್ಥಪಾದ ಮತ ಎಂಬ ಹೊಸ ಮಾರ್ಗವನ್ನು ಪ್ರತಿಪಾದಿಸಲಾಗಿದೆ. ಈ ರೀತಿ ಮಲಯಾಳ ಸಾಹಿತ್ಯದ ಮೇಲೆ ಶಂಕರಾಚಾರ್ಯರ ಅದ್ವೈತ ಸಿದ್ಧಾಂತದ ಪ್ರಭಾವ ದಟ್ಟವಾಗಿ ಆಗಿರುವುದು ಕಂಡುಬರುತ್ತದೆ.

# ಕನ್ನಡ "ಅನುಭವಾಮೃತ"ದಲ್ಲಿ ಅದ್ವೈತದರ್ಶನ

ಡಾ. ಜಿ. ಎಂ. ಹೆಗಡೆ

ಭಾರತೀಯ ಆಧ್ಯಾತ್ಮಪ್ರಪಂಚದ ಮಹಾಚೇತನವಾಗಿ ಬೆಳಗಿದ ಶಂಕರಾಚಾರ್ಯರು ಅದ್ವೈತದರ್ಶನದ ಅಮರ ಸಂದೇಶವನ್ನು ನೀಡಿದ ವಿಭೂತಿಪುರುಷರು. ಆತ್ಮೋನ್ನತಿ, ದಾರ್ಶನಿಕ ಅಭೀಪ್ಸೆ, ಲೋಕಕಲ್ಯಾಣವೇ ಪರಮಾದರ್ಶವಾಗಿರುವ ಶಂಕರಾಚಾರ್ಯರು ಭಾರತೀಯ ವೇದಾಂತಕ್ಕೆ ಅನುಪಮ ಕೊಡುಗೆ ನೀಡಿದ್ದಾರೆ. ಅದ್ವೈತ ಸಂಪ್ರದಾಯವನ್ನು ಆಚರಣೆ ಮತ್ತು ಅನುಷ್ಠಾನಗಳಲ್ಲಿ ತಂದು ಭಾರತೀಯರ ಆಧ್ಯಾತ್ಮಿಕ ಜೀವನವನ್ನು ಉನ್ನಯನಗೊಳಿಸುವದು ಅವರ ಧ್ಯೇಯವಾಗಿತ್ತು. ಆದ್ದರಿಂದಲೇ ಶಂಕರಾಚಾರ್ಯರು ಭಾರತದ ಬೇರೆ ಬೇರೆ ಭಾಗಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಪುರಿ, ದ್ವಾರಕಾ, ಬದರಿ, ಕಂಚಿ. ಶೃಂಗೇರಿ, ಸ್ವರ್ಣವಲ್ಲಿ ಮೊದಲಾದ ಕೇಂದ್ರಗಳಲ್ಲಿ ಅದ್ವೈತಪೀಠಗಳು ನೆಲೆಗೊಂಡು ಆದಿಶಂಕರರ ವೇದಾಂತ ಸಂಪ್ರದಾಯವು ನಿರಂತರವಾಗಿ ಮುನ್ನಡೆದುಕೊಂಡು ಬಂದಿದೆ.

ಶಂಕರಾಚಾರ್ಯರ ವೇದಾಂತದರ್ಶನವನ್ನು ಸಾಹಿತ್ಯ ಮತ್ತು ತತ್ವಗ್ರಂಥಗಳ ಮೂಲಕ ಪ್ರಚುರಪಡಿಸುವಲ್ಲಿ ಕರ್ನಾಟಕದ ಕೊಡುಗೆ ಅನುಪಮವಾದದ್ದು. ಆದಿಶಂಕರರ ಶಿಷ್ಯರೂ, ಉದ್ದಾಮ ಪಂಡಿತರೂ ಆಗಿದ್ದ ಶೃಂಗೇರಿಮಠದ ಪ್ರಥಮ ಪೀಠಾಧಿಪತಿಗಳಾದ ಸುರೇಶ್ವರರು "ಬೃಹದಾರಣ್ಯಕ ಉಪನಿಷದ್ಭಾಷ್ಯ"ವನ್ನು ಹಾಗೂ "ನೈಷ್ಕರ್ಮಸಿದ್ಧಿ"ಯಂಥ ಪ್ರಮಾಣಗ್ರಂಥವನ್ನು ಕುರಿತು ಬೃಹತ್ ಪ್ರಮಾಣದ "ವಾರ್ತ್ತಿಕ" ಗ್ರಂಥವನ್ನು ರಚಿಸಿದ್ದಾರೆ. ಸುರೇಶ್ವರರ ನಂತರ ಬಂದ ಗುರುಪರಂಪರೆಯ ಸ್ವಾಮಿಗಳು ಮತ್ತು ಶಿಷ್ಯವರ್ಗ ಅದ್ವೈತ ವಾಙ್ಮಯಕ್ಕೆ ಸಂಬಂಧಿಸಿದ ಹಲವು ಗ್ರಂಥ ರಚಿಸಿದ್ದಾರೆ. ಪದ್ಮಪಾದರು "ಪಂಚಪಾದಿಕಾ" ಗ್ರಂಥದಿಂದ "ವಿವರಣಾ" ಪಂಥವೆಂಬ ಹೊಸ ಸಂಪ್ರದಾಯದ ಪ್ರವರ್ತಕರಾದರು. ವಿಜಯನಗರ ಸ್ಥಾಪನೆಯ ಬಹುದೊಡ್ಡ ಪ್ರೇರಕಶಕ್ತಿಯಾಗಿದ್ದ ವಿದ್ಯಾರಣ್ಯರು "ಪಂಚದಶಿ" ಮತ್ತು "ಜೀವನ್ಮುಕ್ತಿ ವಿವೇಕ"ವೆಂಬ ಲೋಕಪ್ರಿಯ ಗ್ರಂಥಗಳನ್ನು ರಚಿಸಿದ್ದಾರೆ. ವಿಜಯನಗರ ಅರಸರು ಭಾರತೀಯ

ಸಂಸ್ಕೃತಿಯ ಸಂವರ್ಧನೆಗೆ ನೀಡಿದ ಕೊಡುಗೆ ಮಹತ್ತರವಾದುದು. ಋಗ್ವೇದವನ್ನು ಕುರಿತ "ಸಾಯಣಭಾಷ್ಯ" ಮ್ಯಾಕ್ಸಮುಲ್ಲರ ರಂಥ ಪಾಶ್ಚಾತ್ಯ ವಿದ್ವಾಂಸರ ಮೂಲಕ ೧೯ ನೆಯ ಶತಮಾನದಲ್ಲಿ ಮತ್ತೆ ಪ್ರಕಟಗೊಳ್ಳುವಂತಾಗಿ ಅಂತರಾಷ್ಟ್ರೀಯ ವಿದ್ವಾಂಸರ ಗಮನ ಸೆಳೆದಿದೆ. ಸಾಯಣರ ಮೊಮ್ಮಗ ಬರೆದ "ಸರ್ವದರ್ಶನ ಸಂಗ್ರಹ" ಭಾರತೀಯ ತತ್ವವಿಚಾರದ ಅದ್ಭುತ ಸಂಗ್ರಹವಾಗಿದೆ. ವಿಜಯನಗರದ ನಂತರ ಕೆಳದಿ, ಸ್ವಾದಿ ಅರಸರು ಅದ್ವೈತ ಪರಂಪರೆಗೆ ಉತ್ತೇಜನ ನೀಡಿದರು. ಅಪ್ಪಯ್ಯ ದೀಕ್ಷಿತರು (೧೬. ಶ. ದ ಕೊನೆ) ಬರೆದ "ಸಿದ್ಧಾಂತಲೇಶ ಸಂಗ್ರಹ" ಅದ್ವೈತ ಸಿದ್ಧಾಂತದ ಹಲವಾರು ವಿಚಾರ ಪಂಥದ ಕೈಪಿಡಿಯಾಗಿದೆ. ಅಪ್ಪಯ್ಯ ದೀಕ್ಷಿತರು ಶ್ರೀಕಂಠಕೃತ "ಶಿವಾದ್ವೈತ ಭಾಷ್ಯ"ಕ್ಕೆ ಟೀಕಾಗ್ರಂಥವನ್ನು ರಚಿಸಿದ್ದಾರೆ.

ಅದ್ವೈತ ವಾಙ್ಮಯ ಪರಂಪರೆ ಕರ್ನಾಟಕದಲ್ಲಿ ಅವ್ಯಾಹತವಾಗಿ ಹರಿದು ಬಂದಿದೆ. ಅದ್ವೈತದರ್ಶನ ಭಾರತೀಯ ಸಾಹಿತ್ಯದಲ್ಲಿ ಸೃಜನಾತ್ಮಕ ಚಿಂತನಧಾರೆಯಾಗಿ ಹರಿದು ಬಂದಿರುವದು ಮಹತ್ವದ ವಿಚಾರವಾಗಿದೆ. ಸಾವಿರ ವರ್ಷದ ಕನ್ನಡ ಸಾಹಿತ್ಯ ಜೈನ, ವೀರಶೈವ, ಬ್ರಾಹ್ಮಣ ಕವಿಗಳ ಸಾಹಿತ್ಯದಿಂದ ಶ್ರೀಮಂತವಾಗಿದೆ. ಕನ್ನಡದಲ್ಲಿ ಅದ್ವೈತ ದರ್ಶನದಿಂದ ಸ್ಫೂರ್ತಿಪಡೆದ ಸ್ಮಾರ್ತಬ್ರಾಹ್ಮಣ ಕವಿಗಳ ದೊಡ್ಡ ಪರಂಪರೆಯೇ ಬೆಳೆದು ಬಂದಿದೆ. ನಾಗವರ್ಮ, ದುರ್ಗಸಿಂಹ, ಮಹಾಲಿಂಗ ರಂಗ ಮೊದಲಾದ ಸ್ಮಾರ್ತಬ್ರಾಹ್ಮಣ ಕವಿಗಳು ತಮ್ಮ ಕೃತಿಗಳಿಂದ ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧರಾಗಿದ್ದಾರೆ.

ನಾಗವರ್ಮಾಚಾರ್ಯ (ಕ್ರಿ. ಶ. ೧೦೭೧) ತನ್ನ "ಚಂದ್ರಚೂಡಾಮಣಿ ಶತಕ"ದಲ್ಲಿ ಬರೆದ

ನೆರೆಯಿಂದಂ ತೆರೆಯಿಂದಮಾವಸೆರೆಯಿಂದಂ ಮುಪ್ಪಿನೊಳ್ ಚೆಲ್ವುಗೆ
ಟ್ಟಿರುತುಂ ವ್ಯಾಧಿಯೊಳಾಗಳುಂ ನವೆಯುತುಂ ತಳ್ಪಿರ್ದದಾರಿದ್ರ್ಯದೊಳ್
ಪೊರಳುತ್ತಿರ್ದುಮದೆಂತು ಮಿಂತು ಮಳಿಪೆಂತುಂ ಪೋಗದಾಕುತ್ತಮಂ
ಹರಿಪೊಂದೌಷಧಿಯಂ ಸಮಂತು ದಯೆಗೆಮ್ ಶ್ರೀ ಚಂದ್ರಚೂಡಾಮಣಿ.

ಪದ್ಯದ ಸಾಲುಗಳಿಗೆ ಶಂಕರಾಚಾರ್ಯರ "ಶಿವಾಪರಾಧ ಕ್ಷಮಾಪನ ಸ್ತೋತ್ರ" ಪ್ರೇರಕವಾಗಿರಬೇಕು. ಕನ್ನಡದ ಶತಕ ಸಾಹಿತ್ಯಕ್ಕೆ ಶಂಕರಾಚಾರ್ಯರ ಸ್ತೋತ್ರಗಳು ಸ್ಫೂರ್ತಿ ನೀಡಿವೆ. ಭಕ್ತಿ, ಜ್ಞಾನ, ವೈರಾಗ್ಯಗಳ ತ್ರಿವೇಣಿಸಂಗಮವಾದ ಶಂಕರಾಚಾರ್ಯರ ಸ್ತೋತ್ರಗಳ ಭಾವಗಂಗೆಯ ಪ್ರವಾಹ ಭಾರತೀಯ ಕವಿಗಳನ್ನು ನಿರಂತರವಾಗಿ ಪ್ರಭಾವಿಸಿವೆ. ಕನ್ನಡದ ಅದ್ವೈತಾನಂದರ (ಕ್ರಿ. ಶ. ಸು. ೧೭೦೦) ಕೇಶವಶತಕ, ನಿರಂಜನಾರ್ಯರ (ಕ್ರಿ. ಶ. ೧೭೫೦) "ನಂಜುಂಡಶತಕ" ಅಥವಾ "ನೀತಿಶಾಸ್ತ್ರ"ದ ಪದ್ಯಗಳಲ್ಲಿ ಅದ್ವೈತದರ್ಶನದ ಚಿಂತನೆಯಿದೆ. ನಿಜಗುಣ ಶಿವಯೋಗಿಗಳ "ವಿವೇಕ ಚಿಂತಾಮಣಿ"ಯೂ ಇಲ್ಲಿ ಉಲ್ಲೇಖನೀಯವಾದದ್ದು.

ಹದಿನೇಳನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ಮಹಾಲಿಂಗರಂಗ ಕವಿಯ "ಅನುಭವಾಮೃತ"ವು ಕನ್ನಡದಲ್ಲಿ ಬಂದ ಅದ್ವೈತದರ್ಶನದ ಅನುಪಮ ಕಾವ್ಯವಾಗಿದೆ.

ಅದ್ವೈತವೇದಾಂತ ದರ್ಶನವನ್ನು ಕಾವ್ಯದ ಮೂಲಕ ಸಾಕಾರಗೊಳಿಸುವ "ಅನುಭವಾಮೃತ"ವು ಸಾಧಕರಿಗೂ, ಮುಮುಕ್ಷುಗಳಿಗೂ ಮಾರ್ಗದರ್ಶಿಯಾಗಿದೆ. ಮಹಾಲಿಂಗರಂಗ ಕವಿ ಆಧ್ಯಾತ್ಮಿಕ ಪರಂಪರೆಯನ್ನು ತನ್ನದಾಗಿಸಿಕೊಂಡ ವಿಶಿಷ್ಟ ಕವಿ. ಗುರು ಸಹಜಾನಂದರ ಮಾರ್ಗದರ್ಶನದಲ್ಲಿ ಮಲ್ಲಿಕಾರ್ಜುನನನ್ನು ಆರಾಧ್ಯದೇವತೆಯಾಗಿ ಆರಾಧಿಸಿ ತತ್ವದರ್ಶನವನ್ನು ಪಡೆದ ಕವಿ ಮಹಾಲಿಂಗರಂಗ ಅದ್ವೈತವನ್ನು ಅನುಷ್ಠಾನ ಮಾಡಿಕೊಂಡಿದ್ದಾನೆ. "ಅನುಭವಾಮೃತ" ವಿದ್ವಜ್ಜನರ ಮನ್ನಣೆಗೆ ಪಾತ್ರವಾಗಿರುವಂತೆ ಸಾಮಾನ್ಯರಿಗೂ ಅದ್ವೈತ ದರ್ಶನವನ್ನು ನೀಡುವ ಕಾವ್ಯಕೃತಿಯಾಗಿದೆ. ಕನ್ನಡ ನಾಡು ನುಡಿಯ ಅಭಿಮಾನದ ಪದ್ಯಗಳಲ್ಲಿ

> ಸುಲಿದ ಬಾಳೆಯ ಹಣ್ಣಿನಂದದಿ
> ಕಳೆದ ಸಿಗುರಿನ ಕಬ್ಬಿನಂದದಿ
> ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ
> ಲಲಿತವಹ ಕನ್ನಡದ ನುಡಿಯಲಿ
> ತಿಳಿದು ತನ್ನೊಳು ತನ್ನ ಮೋಕ್ಷವ
> ಗಳಿಸಿಕೊಂಡರೆ ಸಾಲದೆ ಸಂಸ್ಕೃತದಲಿನ್ನೇನು

ಮಹಾಲಿಂಗರಂಗನ ಈ ಪದ್ಯ ಜನಪ್ರಿಯವಾದುದು. ಅದ್ವೈತದರ್ಶನವನ್ನು ಲಲಿತವಾದ ಕನ್ನಡದಲ್ಲಿ ನಿರೂಪಿಸುವ "ಅನುಭಾಮೃತ"ದಂತಹ ಕಾವ್ಯ ಕನ್ನಡವಷ್ಟೇ ಏಕೆ ಭಾರತೀಯ ಸಾಹಿತ್ಯದಲ್ಲೂ ವಿರಳ. ಆದ್ದರಿಂದಲೇ ಇದನ್ನು ಶ್ರೀಮತ್ಪರಮಹಂಸ ಬಾಲಕೃಷ್ಣ ಬ್ರಹ್ಮಾನಂದ ರಾಜಯೋಗಿಗಳು ಸಂಸ್ಕೃತಕ್ಕೆ ಅನುವಾದಿಸಿದ್ದಾರೆ. ಸಂಸ್ಕೃತ ಸಾಹಿತ್ಯದಿಂದ ಕನ್ನಡ ಸಾಹಿತ್ಯಕ್ಕೆ ಅನೇಕ ಕೃತಿಗಳು ಬಂದಿವೆ. (ಉದಾ : ನಾಗವರ್ಮನ "ಕರ್ನಾಟಕ ಕಾದಂಬರಿ", ದುರ್ಗಸಿಂಹನ "ಪಂಚತಂತ್ರ" ಮೊದಲಾದವು) ಆದರೆ ಕನ್ನಡ ಸಾಹಿತ್ಯದಿಂದ ಸಂಸ್ಕೃತಕ್ಕೆ ಹೋದ ಮಹತ್ವದ ಕೃತಿ "ಅನುಭವಾಮೃತ" ಎಂಬುದು ಹೆಮ್ಮೆಯ ಸಂಗತಿ.

ಅದ್ವೈತದರ್ಶನದ ಅಮೂಲ್ಯ ಕಾವ್ಯವಾದ "ಅನುಭವಾಮೃತ"ದಲ್ಲಿ ಹನ್ನೊಂದು ಅಧ್ಯಾಯಗಳಿವೆ. ೧. ಅಧಿಕಾರ ನಿರ್ಣಯ (೫೪); ೨. ವೈರಾಗ್ಯ ಪ್ರಕರಣ (೧೦೭); ೩. ತ್ವಪದ ನಿರ್ಣಯ (೧೫೦); ೪. ತತ್‌ಪದ ಶೋಧನೆ (೭೨); ೫. ಅಸಿ ಪದದ ಶೋಧನೆ (೬೧); ೬. ಸಪ್ತಭೂಮಿಕಾನಿರ್ಣಯ (೯೨); ೭. ಪರಮಾತ್ಮಪದ ನಿರ್ಣಯ (೨೪); ೮. ಮಾಯಾಮಿಥ್ಯಾತ್ವ (೩೮); ೯. ಜೀವತ್ರಯ ವಿಚಾರ (೪೯); ೧೦. ಯೋಗೀಶ್ವರ ಚರಿತ್ರೆ (೧೨೬); ೧೧. ನಿರ್ಗುಣಾರಾಧನೆ (೨೯) ಹೀಗೆ ೮೦೨ ಭಾಮಿನಿ ಷಟ್ಪದಿಯ ಪದ್ಯಗಳಲ್ಲಿ ತುಂಬ ಸರಳವಾಗಿ ಎಳೆ ಎಳೆಯಾಗಿ ಅದ್ವೈತದರ್ಶನವನ್ನು ಮಹಾಲಿಂಗರಂಗ ವಿವೇಚಿಸಿದ್ದಾನೆ.

ಭಾರತೀಯ ಸಂಪ್ರದಾಯದಂತೆ ಸಂವಾದರೂಪದಲ್ಲಿ "ಅನುಭವಾಮೃತ" ಕಾವ್ಯ ಅದ್ವೈತದರ್ಶನದ ನಿರೂಪಣೆಗೆ ತೊಡಗುತ್ತದೆ. ವೇದವ್ಯಾಸ ಮುನಿಗಳ ಪುತ್ರನಾದ ಶುಕಯೋಗೀಂದ್ರನು ಪರಬ್ರಹ್ಮ ಎಂಬುದು ಹೇಗಿರುವುದು ? ಅದನ್ನು ತಿಳಿದುಕೊಳ್ಳುವ

ಮಾರ್ಗ ಯಾವುದು ? ಅಪ್ಪಣೆ ಕೊಡಿಸಬೇಕೆಂದು ಪ್ರಾರ್ಥಿಸಿದಾಗ ವೇದವ್ಯಾಸರು ನಸುನಕ್ಕು ಹೇಳುತ್ತಾರೆ.

ಕಂದ ಕೇಳ್ಳೆ ಬ್ರಹ್ಮವೆನಲದ
ರಿಂದಧಿಕವೇನಿಲವದು ತ
ನ್ನಿಂದ ತಾನೇ ತೋರುತಿರ್ಪುದು ಸ್ವಪ್ರಕಾಶವದು.
ಒಂದದದ್ವಯವ ಪ್ರತರ್ಕ್ಯವ
ದೆಂದು ಪೇಳ್ವರು ತಿಳಿಯಲಾಪರಿ
ಯೆಂದೆನಲು ಶ್ರುತಿಗುರುಗಳಿಂದಲಿ ಸ್ವಾನುಭವವೇದ್ಯ (೧-೧೪)

ಶುಕನೇ ಬ್ರಹ್ಮವೆನ್ನುವದು ಏಕಮೇವಾದ್ವಿತೀಯವಾದುದು. ಅದಕ್ಕಿಂತ ದೊಡ್ಡದು ಲೋಕದಲ್ಲಿ ಯಾವುದೂ ಇಲ್ಲ. ಅದು ಸ್ವಯಂಪ್ರಕಾಶವುಳ್ಳದ್ದು. ಅದನ್ನು ತರ್ಕದಿಂದ ಊಹಿಸಿ ತಿಳಿಯಲು ಸಾಧ್ಯವಿಲ್ಲ. ಬ್ರಹ್ಮವು ಶ್ರುತಿವಾಕ್ಯ. ಗುರುವಿನ ಮೂಲಕ ಉಪದೇಶ ಪಡೆದು ಮನನ ಮಾಡಿ ದೃಢಪಡಿಸಿಕೊಳ್ಳಬೇಕು. ಬ್ರಹ್ಮಜ್ಞಾನವಾಗುವದಕ್ಕೆ ಸಹಜಾನಂದವೇ ಫಲ. ಬ್ರಹ್ಮಜ್ಞಾನ ತಿಳಿದುಕೊಳ್ಳುವವರು ಪಡೆಯಬೇಕಾದ ಯೋಗ್ಯತೆಯ ವಿಚಾರವೂ ಅಷ್ಟೇ ಮುಖ್ಯವಾದದ್ದು.

ಸತ್ಯ ಶೌಚಾಚಾರ ನಿರತರು
ಚಿತ್ತದಲಿ ನಿರ್ಮಲರು ನಿಸ್ಪೃಹ
ವೃತ್ತಿಯಲಿ ವರ್ತಿಸುವ ರಾಶಾಪಾಶವರ್ಜಿತರು
ಉತ್ತಮೋತ್ತಮರಾದ ಗುರುಪದ
ಭಕ್ತಿಯುಕ್ತರು ಭವದ ಬೇರನು
ಕಿತ್ತು ಬಿಸುಡುವ ಶಾಂತರೇ ತತ್ವಾಧಿಕಾರಿಗಳು (೧-೨೦)

"ಅನ್ನಮದ, ಅರ್ಥಮದ, ಯೌವನಮದ, ಕುಲಮದ, ಶೀಲಮದ, ವಿದ್ಯಾಮದ, ಸ್ತ್ರೀಮದ, ಅಧಿಕಾರಮದ, ಎಂಬ ಅಷ್ಟಮದಗಳೆಂಬ ಪಾಶವನ್ನು ಹರಿದು, ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕಗಳೆಂಬ ತಾಪತ್ರಯದ ಕೋಟಲೆಯನ್ನು ಪರಿಹರಿಸಿ, ಮನಸ್ಸಿನ ದುಷ್ಟತನ ಬಿಡಿಸಿ ಕಾಮ, ಕ್ರೋಧ, ಮದ, ಲೋಭ, ಮೋಹ, ಮತ್ಸರಗಳೆಂಬ ಅರಿಷಡ್ವೈರಿಗಳನ್ನು ಗೆದ್ದು ಗುರುಹಿರಿಯರಲ್ಲಿ ಭಕ್ತಿಯಿಟ್ಟು ಬ್ರಹ್ಮಜ್ಞಾನದ ಮಾರ್ಗವನ್ನು ತಿಳಿಯಲು ಯತ್ನಿಸಬೇಕು" (೧-೨೨). ಹೀಗೆ ಬ್ರಹ್ಮಜ್ಞಾನ ಹೊಂದಲು ತಕ್ಕ ಯೋಗ್ಯತೆಯನ್ನು, ಹೇಳಿ ಮಹಾಲಿಂಗರಂಗ ಕವಿ ಮುಮುಕ್ಷು ಎಂದರೆ ಮೋಕ್ಷಾಪೇಕ್ಷೆಯುಳ್ಳವನ ಲಕ್ಷಣವನ್ನು ಎಂಟು ಪದ್ಯಗಳಲ್ಲಿ ವಿವರಿಸುತ್ತಾನೆ.

ತನಯ ಕೇಳಧ್ಯಾತ್ಮ ವಾಸನೆ
ಯನವರತ ಶಾಸ್ತ್ರಾರ್ಥ ಚಿಂತನೆ
ಘನವಿವೇಕ ವಿರಕ್ತಿ ಸದ್ಗುಣವೃತ್ತಿ ಸತ್ಸಂಗ

ಅನಘ ಗುರುಶುಶ್ರೂಷೆ ಮೊದಲಾ
ದಿನಿತು ಸದ್ವರ್ತನೆಯೊಳೊಂದಿಹ
ಮನುಜನೇ ತತ್ವಾಧಿಕಾರಿ ಮುಮುಕ್ಷುವೆನಿಸುವನು (೧-೩೦)

ಹೀಗೆ ಬ್ರಹ್ಮಜ್ಞಾನ ಪಡೆಯಲು ಬೇಕಾದ ಅರ್ಹತೆಯನ್ನು ತಿಳಿಸಿ ಎರಡನೆಯ ಅಧ್ಯಾಯದಲ್ಲಿ ವೈರಾಗ್ಯ ವಿವರಣೆಯನ್ನು ವೇದವ್ಯಾಸರು ಆರಂಭಿಸುತ್ತಾರೆ. ಈ ಸಂಸಾರಧರ್ಮದಲ್ಲಿ ಸಿಲುಕಿದ ಮನುಷ್ಯನಿಗೆ ಬಿಡುಗಡೆ ಎಂಬುದೆ ಇಲ್ಲ. ಸಂಸಾರ ಕ್ಷಣಿಕವಾದುದು ಎಂಬ ಅರಿವೇ ಜೀವಿಗೆ ಬರುವದಿಲ್ಲ. ಬ್ರಹ್ಮಪಟ್ಟದಂತೆ ಸ್ಥಿರ, ಸೂರ್ಯಚಂದ್ರರಿರುವವರೆಗೆ ಸಂಸಾರಸುಖ ಇರುವದೆಂದು ಜನ ತಿಳಿದು ಮೋಸಹೋಗುತ್ತಾರೆ. ಇಂದ್ರ, ನಹುಷ, ರಾವಣ. ಕೀಚಕ, ಮೊದಲಾದವರು ಪರಸ್ತ್ರೀವ್ಯಾಮೋಹಕ್ಕೆ ಗುರಿಯಾಗಿ ಸರ್ವನಾಶ ಹೊಂದಿದ ಉದಾಹರಣೆ ನಮ್ಮ ಮುಂದಿದೆ. ಹೀಗಿರುವಾಗ ಇಂದ್ರಿಯಸುಖಕ್ಕಾಗಿ ಮನುಷ್ಯ ಆಸೆಪಟ್ಟು ಹಾಳಾಗುವದು ಸರಿಯಲ್ಲ. ಅಜ್ಞಾನಿಗಳಾದವರು ಬ್ರಹ್ಮವಿದ್ಯೆಯನ್ನು ತಿಳಿಯಲಾರದೆ ಹಳಿಯುತ್ತಾರೆ. ವೇದದಲ್ಲಿ "ನಾನ್ಯಃ ಪಂಥಾ ಅಯನಾಯ ವಿದ್ಯತೇ" ಅಂದರೆ ಬ್ರಹ್ಮವಿದ್ಯೆ ಬಿಟ್ಟರೆ ಅಮೃತತ್ವಕ್ಕೆ ಬೇರೆ ಮಾರ್ಗವಿಲ್ಲ ಎಂದು ಹೇಳಿರುವಾಗ ಭೋಗಮೂಲವಾದ ಸಂಸಾರದ ಸುಖವನ್ನು ಬಿಟ್ಟು ಮೋಕ್ಷಮಾರ್ಗ ಸಾಧನೆಗೆ ವೈರಾಗ್ಯಭಾವವನ್ನು ತಳೆಯಬೇಕು.

ಅದ್ವೈತದರ್ಶನದ ಮಹಾವಾಕ್ಯಗಳಾದ "ಅಹಂ ಬ್ರಹ್ಮಾಸ್ಮಿ", "ತತ್ವಮಸಿ"ಗಳನ್ನು 'ಅನುಭವಾಮೃತ'ದಲ್ಲಿ ಎಳೆಎಳೆಯಾಗಿ ಬಿಡಿಸಿ ವಿವೇಚಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ತ್ವಂಪದಾರ್ಥ ಶೋಧನೆಯ ವಿಚಾರ ಮಂಡಿತವಾಗಿದೆ. ಮನುಷ್ಯ ತನ್ನ ಜೀವಿತದ ಪರಮಗಂತವ್ಯವನ್ನು ಸಾಧಿಸುವದಕ್ಕೆ ನಿಜವಾದ ವಿದ್ಯೆಯಾದ ಬ್ರಹ್ಮವಿದ್ಯೆಯ ಕುರಿತು ಚಿಂತಿಸಬೇಕು. ಶುಕನು ಕೇಳಿದ ಜೀವ ಪರಮಾತ್ಮರ ಸ್ವರೂಪ, ವಾಚ್ಯಾರ್ಥ, ಲಕ್ಷ್ಯಾರ್ಥ, ಸಚ್ಚಿದಾನಂದ ಬ್ರಹ್ಮಕ್ಕೆ ಜೀವಾತ್ಮ ಪರಮಾತ್ಮರೆಂಬ ದ್ವೈತ ಭ್ರಾಂತಿಯಾಗಿ ಕಾಣುವದಕ್ಕೆ ಕಾರಣವನ್ನು ಕೇಳಿದ್ದಕ್ಕೆ ವ್ಯಾಸಮಹರ್ಷಿ ಕೊಟ್ಟ ಉತ್ತರ ಮಾರ್ಮಿಕವಾದುದು.

"ಅಹಂಕಾರ ಭಾವವಿರುವವನು ಜೀವನೆನಿಸಿಕೊಳ್ಳುತ್ತಾನೆ. ಈಶ್ವರನು ಮಾಯಾವಿಲಾಸಿಯಾಗಿದ್ದಾನೆ. "ತ್ವಂ" ಪದಕ್ಕೆ ಜೀವನೆಂದೂ "ತತ್"ಪದಕ್ಕೆ ಈಶ್ವರನೆಂದೂ ವಾಚ್ಯಾರ್ಥ, ಜೀವಾತ್ಮ ಪರಮಾತ್ಮರಲ್ಲಿರುವ ಅಹಂಕಾರ ಮಾಯಾಶಕ್ತಿಗಳನ್ನು ಕಳೆದರೆ ಉಳಿಯುವದು ಒಂದೇ ಚೈತನ್ಯ, "ತತ್" ಮತ್ತು "ತ್ವಂ" ಎಂಬ ಎರಡು ಪದಗಳಿಗೆ ಲಕ್ಷ್ಯಾರ್ಥವು ಒಂದೇ ಎನ್ನುವದೇ ಐಕ್ಯಾರ್ಥವಾಗಿದೆ." (೩-೨೦)

"ತತ್ವಮಸಿ" ಎಂಬ ವಾಕ್ಯದಲ್ಲಿ ವಾಚ್ಯಾರ್ಥದಲ್ಲಿ ವಿರೋಧವು ತೋರುತ್ತದೆ. (ಜೀವನು ದುಃಖಿ, ಅಲ್ಪಶಕ್ತ, ಪ್ರತ್ಯಕ್ಷ; ಈಶ್ವರನು ಸರ್ವಶಕ್ತ, ಪರೋಕ್ಷ; ಸುಖಸ್ವರೂಪ) ಆದುದರಿಂದ ಲಕ್ಷ್ಯಾರ್ಥವನ್ನು ಸರಿಯಾಗಿ ಶೋಧಿಸಿ ಮಿಥ್ಯವಾದುದನ್ನು ಬಿಟ್ಟು ಸತ್ಯವಾದುದನ್ನೆ ಉಳಿಸಿಕೊಂಡರೆ ಜೀವಾತ್ಮ ಪರಮಾತ್ಮರ ಐಕ್ಯವು ಸಿದ್ಧಿಸುತ್ತದೆ. (೩-೨೨)

"ಅಂದು ತುಂಗಾತೀರದಲ್ಲಿ ವಟುವಾಗಿದ್ದವನೇ ಇಂದು ಗಂಗಾತೀರದಲ್ಲಿ ಯತಿಯಾಗಿದ್ದಾನೆ" ಎಂದು ಹೇಳುವಾಗ ಅವನ ದೇಹವನ್ನು ಮಾತ್ರ ಲಕ್ಷಿಸಿ ಹೇಳಿದೆ. ಅಂದು ಇಂದು ಎಂಬ ಕಾಲವಿರೋಧವೂ ವಟು ಯತಿ ಎಂಬ ಆಶ್ರಮ ವಿರೋಧವೂ ಲೆಕ್ಕಕ್ಕಿಲ್ಲ. ಅಂತೆಯೇ 'ತತ್ವಮಸಿ' ಎಂಬ ವಾಕ್ಯದಲ್ಲಿ ಜೀವಾತ್ಮ ಪರಮಾತ್ಮರಲ್ಲಿ ಕಾಣುವ ವಿರೋಧಾಂಶಗಳನ್ನು ಕಳೆದಾದ ಮೇಲೆ ಎರಡಿಲ್ಲದ ಅಖಂಡ ಆತ್ಮಸುಖವು ಲಕ್ಷ್ಯಾರ್ಥವಾಗುತ್ತದೆ. (೩-೨೩)

"ಹಂಸವು ನೀರನ್ನು ಬಿಟ್ಟು ಕ್ಷೀರವನ್ನೇ ಕುಡಿಯುವಂತೆ ತತ್ ಮತ್ತು ತ್ವಂ ಪದಗಳ ಶೋಧನೆಯನ್ನು ಮಾಡಿ ವಿರೋಧಾಂಶಗಳನ್ನು ಬಿಟ್ಟು ಎರಡೂ ಪದಗಳ ಲಕ್ಷ್ಯಾರ್ಥವನ್ನು ಅರಿತರೆ ಐಕ್ಯವು ಸಿದ್ಧಿಸಿ ನಿತ್ಯಾನಂದವುಂಟಾಗುತ್ತದೆ." (೩-೨೪)

ತ್ವಂ ಪದಾರ್ಥ ಶೋಧನೆಯ ವಿಚಾರ ಹೇಳುವಾಗ ದೃಕ್-ದೃಶ್ಯ; ಕ್ಷೇತ್ರ-ಕ್ಷೇತ್ರಜ್ಞ; ಜಡ-ಜೀವ; ಭೋಗ-ಭೋಕ್ತೃ; ಕ್ಷರ-ಅಕ್ಷರ ಸ್ವರೂಪದ ವಿವೇಚನೆಯ ಮೂಲಕ ವಿದಿತಪಡಿಸಲಾಗುತ್ತದೆ. ಚೈತನ್ಯ ಸ್ವರೂಪನಾದ ಆತ್ಮನು ನಿತ್ಯಜ್ಞಾನಿರೂಪಿಯಾಗಿದ್ದಾನೆ. "ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಗಳನ್ನು ಆತ್ಮ ಬೆಳಗುತ್ತಾನೆ. ಶ್ರುತಿವಾಕ್ಯದಂತೆ "ಹೃದಯದಲ್ಲಿ ತೋರುವ ಸನಾತನನಾದ ಪ್ರತ್ಯಗಾತ್ಮನನ್ನೇ ಸಚ್ಚಿದಾನಂದ ರೂಪನಾದ ನಿರ್ಗುಣಬ್ರಹ್ಮ ಎಂದು ಜ್ಞಾನಿಗಳು ಹೇಳುತ್ತಾರೆ. ನಾಲ್ಕನೆಯ ಅಧ್ಯಾಯದಲ್ಲಿ ತತ್ಪದಾರ್ಥ ಶೋಧನೆಯ ವಿವೇಚನೆ ಬರುತ್ತದೆ. ಮಾಯೆ ಹೇಗಿದೆ ? ಜೀವಜಗತ್ತುಗಳು ಆದದ್ದು ಹೇಗೆ ? ಎಂಬ ಶುಕನ ಪ್ರಶ್ನೆಗೆ ವೇದವ್ಯಾಸರು ಸಮರ್ಪಕವಾದ ಉತ್ತರ ನೀಡುತ್ತಾರೆ. "ಮಾಯೆಯೆನ್ನುವದು ಇಂದ್ರಜಾಲ, ಬಿಸಿಲ್ಗುದುರೆ ಮತ್ತು ಹಗ್ಗದ ಹಾವಿನಂತೆ ಹುಸಿ ತೋರಿಕೆಯಾಗಿದೆ. ಮಾಯೆಗೆ ಆವರಣ, ವಿಕ್ಷೇಪಗಳೆಂಬ ಎರಡು ಶಕ್ತಿಗಳಿವೆ. ಆವರಣ ಶಕ್ತಿಯಿಂದ ಮಾಯೆಯು ಅಖಂಡ ಬ್ರಹ್ಮವನ್ನು ಮರೆಮಾಡಿದೆ. ವಿಕ್ಷೇಪಶಕ್ತಿಯು ಈ ಜಗತ್ತನ್ನೂ ಜೀವರನ್ನೂ ಕಾಣುವಂತೆ ಮಾಡುತ್ತಿದೆ.'' (೪-೮). ಇಲ್ಲಿ ಆತ್ಮವನ್ನು ತಿಳಿಯಬೇಕೆ ಹೊರತು ಸೃಷ್ಟಿ ಹೀಗೆ ಆಯಿತು ಎಂಬುದಲ್ಲ, ಆತ್ಮ ತಿಳಿಯುವದೇ ಮುಖ್ಯ. ಮಾಯಾ ಭ್ರಾಂತಿಯನ್ನು ಕಳೆದುಕೊಂಡಾಗ ಮಾತ್ರ ಪರಬ್ರಹ್ಮ ಸಾಕ್ಷಾತ್ಕಾರವಾಗುತ್ತದೆ.

"ಹಸುವಿನ ಹಾಲು ಒಂದೇ. ಅದಕ್ಕೆ ದ್ರುವತ್ವ, ಮಧುರತ್ವ, ಶುಭ್ರತ್ವಗಳಿವೆ. ಹಾಗೆಯೇ ಒಂದೇ ಪರಬ್ರಹ್ಮವು ಇರವು, ಅರಿವು, ಆನಂದ (ಸಚ್ಚಿದಾನಂದ)ಗಳ ಸ್ವಭಾವವನ್ನು ಹೊಂದಿದೆ. ವ್ಯಾಪ್ತಿ ಇಷ್ಟೆಂದು ನಿರ್ಧರಿಸಲು ಸಾಧ್ಯವಿಲ್ಲದ ಮಹಾಕಾಶವನ್ನು ಒಳಗೊಂಡ ಅನಂತವೇ ಪರಬ್ರಹ್ಮ." (೪-೫೭) "ಅನಾದಿಯೆಂದೂ, ನಿತ್ಯವೆಂದೂ ಪ್ರಶಾಂತವೆಂದೂ, ಚಿಂತೆ ಇಲ್ಲದ್ದೆಂದೂ, ಯಾವುದನ್ನು ಕುರಿತು ಉಪನಿಷತ್ತುಗಳು ಹೇಳುತ್ತಿವೆಯೋ, ಯಾವುದನ್ನು ಯೋಗಿಗಳು ಹೃದಯದಲ್ಲಿ ಧರಿಸಿಕೊಂಡು ಹೇಳಲು ಸಾಧ್ಯವಾಗದೆ ಸುಮ್ಮನಿರುವರೋ ಅಂತಹ ಅತೀಂದ್ರಿಯವಾದ ಚಿದ್ಘನವೇ ಪರಬ್ರಹ್ಮ.'' (೪-೬೮) ಹೀಗೆ ಪರಬ್ರಹ್ಮಸ್ವರೂಪವನ್ನು ಬಹುವಿಧವಾಗಿ ವರ್ಣಿಸುವ ಮಹಾಲಿಂಗರಂಗ ಕವಿಯ ಪದ್ಯದ ಸಾಲುಗಳು ಹೀಗಿವೆ :

ರಾಲಂಬ ನಿರ್ಗುಣ
ಾತಂಕ ನಿರ್ಮಲ
ನಿಶ್ಚಲ ನಿರಂಜನ ನಿರ್ವಿಕಾರ ನಿಜ ।
ಾನಂದ ಪಾವನ
ಪರಿಪೂರ್ಣ ಪರ ಚಿ
ಯವಾದ ಪರಮಾರ್ಥವೇ ಪರಬ್ರಹ್ಮ ॥

ದ ಐದನೆಯ ಅಧ್ಯಾಯ "ಅಸಿ" ಪದದ ವಿವೇಚನೆಯನ್ನು ಕನು "ಅಸಿ" ಪದವೆಂದರೇನು ? ಜೀವ ಈಶ್ವರರ ಐಕ್ಯವು ಖಂಡವಸ್ತು ಎಂಬುದು ಹೇಗಿದೆ ? ಎಂದು ಕೇಳಿದ್ದಕ್ಕೆ ವೇದವ್ಯಾಸರು "ತತ್ ಎಂಬ ಪದವು ಎಲ್ಲಿಯೋ ದೂರದಲ್ಲಿರುವ ವಸ್ತುವನ್ನು, ಎದುರಿನಲ್ಲಿರುವ ನೀನು ಎಂಬುದನ್ನೂ ಸೂಚಿಸುತ್ತವೆ. ಈ ್ನ ಕಳೆದರೆ ಸತ್ಯವೂ, ಅಖಂಡವೂ, ಅದ್ವಯವೂ, ವೂ ಆದ ಜ್ಞಾನವೊಂದೇ ಉಳಿಯುತ್ತದೆ. ಎಂಬುದೇ "ಅಸಿ" ಪದದ ಯಾವುದಾದರೂ ಗುರುತಿರುವ ಆಕಳುಗಳ ಹಾಲನ್ನು ತಂದಿಟ್ಟಾಗ ಆ ಭೇದ ಕಾಣುವದಿಲ್ಲವೋ ಅದೇ ರೀತಿಯಲ್ಲಿ ಎರಡಿಲ್ಲದ ಒಂದೇ ಪದದ ಅರ್ಥ. ಹೀಗೆ "ಅಸಿ" ಪದವು ಅಖಂಡವಾದ ಮತ್ತು ತರಸದಿಂದ ತುಂಬಿ ತುಳುಕಾಡುವ ಸಮುದ್ರದಂತೆ (೫-೫೮) ಎಂದು

ಕ್ಷಾತ್ಕಾರ ಮಾಡಿಕೊಳ್ಳಲು ಸಾಧನೆಯ ಸಪ್ತಭೂಮಿಕೆಗಳನ್ನು ಧ ರೀತಿಗಳನ್ನು ಆರನೆಯ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ನೆಗೆ ಶುಭೇಚ್ಛೆ, ಆತ್ಮವಿಚಾರ, ನಿಸ್ಸಂಗ, ವಾಸನಾಕ್ಷಯ, ಆನಂದಿನಿ, ಯಾತೀತ ಎಂಬ ಏಳು ಮೆಟ್ಟಿಲುಗಳಿವೆ. ಮೊದಲನೆಯದಾಗಿ ಸುಖದ ಯಬೇಕು. ನಾನು ಸಚ್ಚಿದಾನಂದ ಸ್ವರೂಪನಾಗಿದ್ದೇನೆ. ಆತ್ಮನಿಗಿಂತ ನೂ ಇಲ್ಲ. ಇಂದ್ರಿಯಗಳಿಗೆ ಕಾಣಿಸುವ ಸಂಗವು ನನಗಿಲ್ಲ. ಸೂರ್ಯನು ೀಕದಲ್ಲಿ ಚಟುವಟಿಕೆಯುಂಟಾಗುವಂತೆ ಎಲ್ಲ ಇಂದ್ರಿಯಗಳ, ವ್ಯಾಪಾರಗಳಿಗೂ ನಾನೇ ಕಾರಣನಾಗಿದ್ದೇನೆ ಎಂದು ಸಾಧಕ ಾಯೆಯಿಂದ ಹುಟ್ಟಿದ ಹದಿನಾರು ವಿಕಾರಗಳನ್ನು ಪಡೆಯುವ ಕಲ್ಪನೆಗಳ ಗೂ ನನಗೂ ಯಾವ ಸಂಬಂಧವಿಲ್ಲ ಎಂದು ಸಾಧಕ ಚಿಂತಿಸುತ್ತಾನೆ. ವನ್ನು ನಿಜವೆಂದು ತಿಳಿಯದೆ ಭ್ರಾಂತಿಯನ್ನು ಕಳೆದುಕೊಂಡಿರುವದೇ ಬ ಭೂಮಿಕೆ. "ಜೀವಾತ್ಮ ಪರಮಾತ್ಮರ ಐಕ್ಯವನ್ನು ಸಾಧಿಸಿದವನಿಗೆ ಲ್ಲ. ಬ್ರಹ್ಮಸ್ವರೂಪವೇ ಅವನ ದೇಹ. ವಾಸನಾಕ್ಷಯವನ್ನು ಸಾಧಿಸಿದ ಒಳಗೂ ಆನಂದಾನುಭವವೇ ತುಂಬಿ ತುಳುಕುತ್ತದೆ. ಇದೇ ಆನಂದಿನಿ

ಎಂಬ ಐದನೆಯ ಭೂಮಿಕೆ.'' (೬-೩೪) ಆನಂದಿನಿಯಾದ ಮೇಲೆ ತುರ್ಯಾವಸ್ಥೆ. ತುರ್ಯಾವಸ್ಥೆಯಲ್ಲಿ ಆನಂದ ತಾನೇ ತಾನಾಗಿರುತ್ತದೆ. ಇದನ್ನು ಉನ್ಮನೀ ಅವಸ್ಥೆ ಎಂದೂ ಕರೆಯುತ್ತಾರೆ. ತುರ್ಯಾವಸ್ಥೆಯಲ್ಲಿ ದ್ವೈತ, ಅದ್ವೈತವೆನ್ನುವ ಮಾತೇ ಇಲ್ಲ. ಅಲ್ಲಿ ಅರಿವೆಂಬ ಜ್ಯೋತಿಯೊಂದೇ ಇರುತ್ತದೆ. ತುರ್ಯಾತೀತವೆಂಬ ಕೊನೆಯ ಭೂಮಿಕೆಯು ಕಾರ್ಯಕಾರಣಗಳನ್ನು ಮೀರಿದ ನಿರ್ವಿಕಲ್ಪಸ್ಥಿತಿ. ಇದನ್ನು ವಿದೇಹ ಮುಕ್ತಿಯ ಸಾರ ಎಂದು ಹೇಳುತ್ತಾರೆ. ವ್ಯಾಸಮಹರ್ಷಿ ಶುಕನಿಗೆ ವೇದಾಂತ ಸಮ್ಮತವಾದ ಶ್ರವಣ, ಮನನ, ನಿಧಿಧ್ಯಾಸಗಳೆಂಬ ಸಾಧನೆಯನ್ನು ಸಪ್ತಭೂಮಿಕೆಗಳ ನಂತರ ತಿಳಿಯಪಡಿಸುತ್ತಾನೆ. ಅದರಿಂದ ಅಧ್ಯಾತ್ಮಯೋಗವನ್ನು ಅವಲಂಬಿಸಲು ಕರೆಕೊಡುತ್ತಾನೆ.

ತತ್ವರಹಸ್ಯವನ್ನು ಈ ರೀತಿ ತಿಳಿಸಿದ ನಂತರ ಪರಮಾತ್ಮಪದವನ್ನು ಏಳನೆಯ ಅಧ್ಯಾಯದಲ್ಲಿ ವಿವರಿಸುತ್ತಾರೆ. ವೇದಗಳಿಗೆ ಹೇಳಲು ಅಸಾಧ್ಯವಾದ ಸಗುಣ ನಿರ್ಗುಣವೆನ್ನಿಸಿಕೊಳ್ಳದ ಬರಿಯ ಅರಿವಿನ ಆಕಾಶವೇ ಪರಮಾತ್ಮಪದವಾಗಿದೆ. ಸದ್ಗುರು ಕೃಪಾಕಟಾಕ್ಷದಿಂದ ಸ್ವಸ್ವರೂಪದ ಜ್ಞಾನವನ್ನು ಮಾಡಿಕೊಂಡು ಅದನ್ನು ದೃಢಪಡಿಸಿಕೊಂಡಾಗ ಬ್ರಹ್ಮಾನಂದವು ತಾನೇ ತಾನಾಗಿರುವ ಸ್ಥಿತಿಯನ್ನು ಪರಮಾತ್ಮಪದ ಎಂದು ತಿಳಿಯಬೇಕು. ಅದು ನಿತ್ಯಜ್ಞಾನಾನಂದಮಯವಾದುದು. ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ದೇಹಗಳನ್ನು, ಎಚ್ಚರ ಕನಸು ನಿದ್ದೆಗಳೆಂಬ ಮೂರವಸ್ಥೆಗಳನ್ನು, ತ್ರಿಪುಟಿಯನ್ನು. ತಂದೆ ತಾಯಿ ದೇಹಗಳೆಂಬ ಮೂರು ವರ್ಗಗಳನ್ನು, ದೇಹ ಮಾತು ಮನಸ್ಸುಗಳೆಂಬ ಮೂರು ಕರಣಗಳನ್ನು, ಭೂತ ವರ್ತಮಾನ ಭವಿಷ್ಯತ್ತುಗಳೆಂಬ ಮೂರು ಕಾಲಗಳನ್ನು, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನು ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳೆಂಬ ಮೂರು ಶಕ್ತಿಗಳನ್ನು, ದೇವಯಾನ ಪಿತೃಯಾನ, ಜನನ ಮರಣಗಳೆಂಬ ಮೂರು ಗತಿಗಳನ್ನು ಮೀರಿರುವ ಸತ್ಯಜ್ಞಾನಾನಂದಮಯವಾದ ಆ ನಾಲ್ಕನೆಯದು ಪರಮಾತ್ಮಪದವಾಗಿದೆ.'' (೭-೨೨)

''ಅನುಭವಾಮೃತ''ದ ಎಂಟನೆಯ ಅಧ್ಯಾಯ ಮಾಯಾಮಿಥ್ಯಾತ್ವ ಪ್ರಕರಣಕ್ಕೆ ಸಂಬಂಧಿಸಿದೆ. ಬ್ರಹ್ಮ ಮಾಯೆಗಳೆರಡೂ ಒಂದರೊಡನೊಂದು ಜೊತೆಯಲ್ಲಿರುವದು ಹೇಗೆ ? ಎಂದು ಶುಕ ಕೇಳಿದ ಪ್ರಶ್ನೆಗೆ ವೇದವ್ಯಾಸರು ಹೀಗೆ ಹೇಳುತ್ತಾರೆ: ಸತ್ಯವಾದ ಅದ್ವಯವಸ್ತುವಿನಲ್ಲಿ ಮಾಯೆಯೆನ್ನುವದು ಮಿಥ್ಯೆ. ಬ್ರಹ್ಮವೆಲ್ಲಿ ? ಮಾಯೆಯೆಲ್ಲಿ ? ''ಭತ್ತದ ರಾಶಿಯಲ್ಲಿರುವ ಜೊಳ್ಳುಕಾಳು ಭತ್ತದಂತೆ ಕಾಣುತ್ತದೆ. ಕಣ್ಣು ಮಬ್ಬಾಗಿದ್ದಾಗ ಹಗಲಿನ ಬೆಳಕಿಗೆ ಮಂಜುಕವಿದಂತೆ ತೋರುತ್ತದೆ. ಒಳಗೆಲ್ಲಾ ಪೊಳ್ಳಾಗಿದ್ದರೂ ನೀರಗುಳ್ಳೆ ದೊಡ್ಡದಾಗಿ ಕಾಣುತ್ತದೆ. ಹಾಗೆ ಮಾಯೆಯು ಹುಸಿಯಾದರೂ ಬ್ರಹ್ಮನಲ್ಲಿ ಅದು ನಿಜವಾಗಿ ಇದ್ದಂತೆ ತೋರುತ್ತದೆ.'' (೮-೧೦). ''ಮರವನ್ನು ಕೆತ್ತಿದಾಗ ಆನೆಯ ಆಕಾರವು ಕಾಣಿಸಿಕೊಂಡೀತೇ ಹೊರತು ನಿಜವಾದ ಆನೆಯೇನೂ ಅಲ್ಲಿಲ್ಲ. ಹಾಗೆಯೇ ಬ್ರಹ್ಮವೇ ಜಗತ್ತಿನಾಕಾರದಲ್ಲಿ ತೋರುತ್ತಿದೆಯೇ ಹೊರತು ಜಗತ್ತೆಂಬುದು ಬೇರೆ ಇಲ್ಲ.'' (೮-೧೩)

ಕಾಮಿನಿಮಯವಾಗಿಹುದು ಜಗ
ಕಾಮುಕಗೆ ಮಿಗಿಲಾಗಿ ಲುಬ್ಧಗೆ
ಪ್ರೇಮದಿಂ ಧನಮಯವು ಸರ್ವವು ತಿಳಿಯೆ ಬ್ರಹ್ಮವನು
ಸಾಮರಸ್ಯವು ಸಕಲವೆಲ್ಲವು
ನಾಮರೂಪಿನ ಭ್ರಮೆ ಅಳಿಯೆ ನಿ
ಸ್ಸೀಮ ನಿಜಸುಖಧಾಮ ನಿರುಪಾಧಿಕ ಪರಬ್ರಹ್ಮ (೮-೨೪)

ಕಾಮುಕನಿಗೆ ಜಗತ್ತೆಲ್ಲವೂ ಕಾಮಿನಿಯರಿಂದ ತುಂಬಿದಂತೆ ಕಾಣುತ್ತದೆ. ಕಡುಲೋಭಿಗೆ ಜಗತ್ತೆಲ್ಲವೂ ಧನಮಯವಾಗಿ ತೋರುತ್ತದೆ. ಬ್ರಹ್ಮಜ್ಞಾನಿಗೆ ಜಗತ್ತೆಲ್ಲವೂ ಒಂದೇ ಆಗಿರುವದು ಅನುಭವಕ್ಕೆ ಬರುತ್ತದೆ. ಆತ್ಮಜ್ಞಾನವಾದಾಗ ಭ್ರಮೆ, ಉಪಾಧಿ ನಾಶವಾಗಿ ಅನಂತಸುಖಮಯವಾದ ಬ್ರಹ್ಮವೊಂದೇ ಎಲ್ಲೆಲ್ಲಿಯೂ ಇರುವದು ಅನುಭವಸಿದ್ಧವಾಗುತ್ತದೆ.

ಮಾಯೆಯೆನಿಸೆ ಯಥಾರ್ಥವಪ್ಪುದು
ಮಾಯೆಯೆನಿಸಿಂತಾವಳೊಬ್ಬಳು
ಈ ಎರಡು ವರ್ಣದಲಿ ಮಾಯೆಯದಿಲ್ಲವೆಂಬರ್ಥ.
ಮಾಯೆಯೆಂಬೀ ಶಬ್ದ ತಾನೇ
ಮಾಯೆಯದು ಪುಸಿಯೆಂದು ನುಡಿಯಲು
ಮಾಯೆಗೆಂತು ಪ್ರತಿಷ್ಠೆ ಸರ್ವಂಬ್ರಹ್ಮಮಯವೆಂದ (೮-೩೨)

"ಮಾಯೆ" ಎಂಬ ಶಬ್ದದಲ್ಲಿ "ಯೆ" ಎಂದರೆ ಇಂಥವಳೊಬ್ಬಳೆಂದೂ "ಮಾ" ಎಂದರೆ ಇಲ್ಲವೆಂದೂ ಅರ್ಥವಾಗುತ್ತದೆ. ಆದುದರಿಂದ ಮಾಯೆ ಎನ್ನುವ ಶಬ್ದಕ್ಕೆ ತಾನಿಲ್ಲವೆಂದು ಅರ್ಥವಾಗುತ್ತದೆ. ತನ್ನ ಅರ್ಥವೇ ತಾನಿಲ್ಲವೆಂದಾಗಿರುವಾಗ ಮಾಯೆ ಇರುವದಾದರೂ ಹೇಗೆ ? ಎಲ್ಲವೂ ಬ್ರಹ್ಮಮಯವಾಗಿದೆ. ಹೀಗೆ ಮಾಯಾಸಂಬಂಧವಾದುದೆಲ್ಲವೂ ಭ್ರಾಂತಿಕಲ್ಪಿತವೆಂದು ಅದ್ವಯ ಬ್ರಹ್ಮವು ಅಖಂಡಾನಂದಮಯವೆಂದು ವ್ಯಾಸರು ಶುಕನಿಗೆ ತಿಳಿಯಪಡಿಸುತ್ತಾರೆ.

ಜೀವತ್ರಯ ವಿಚಾರದ ಪ್ರಸ್ತಾಪ ಒಂಬತ್ತನೆಯ ಅಧ್ಯಾಯದಲ್ಲಿ ಬರುತ್ತದೆ. ತನ್ನ ನಿಜಸ್ವರೂಪವನ್ನು ಮರೆತು, ದೇಹವೇ ತಾನೆಂದು ಭಾವಿಸುವ ಅಹಂಕಾರವು ನಿಜವಾಗಿ ಆತ್ಮನ ಧರ್ಮವಲ್ಲ. ಹಾಗೆಯೇ ಅದು ದೇಹಧರ್ಮವೂ ಅಲ್ಲ. "ಒಂದೇ ಅಹಂಕಾರವೇ ಬೇರೆ ಬೇರೆ ಅವಸ್ಥೆಗಳಲ್ಲಿ ಆವರಣಶಕ್ತಿಯ ದೆಸೆಯಿಂದ ಮೂರು ಭೇದಗಳನ್ನು ತಾಳಿದೆ. ಎಚ್ಚರದಲ್ಲಿ ವ್ಯಾವಹಾರಿಕ ಜೀವನೆಂದೂ, ಸ್ವಪ್ನದಲ್ಲಿ ಪ್ರಾತಿಭಾಸಿಕ ಜೀವನೆಂದೂ, ಸುಷುಪ್ತಿಯಲ್ಲಿ ಪಾರಮಾರ್ಥಿಕಜೀವನೆಂದೂ ಅದಕ್ಕೆ ಹೆಸರು" (೯-೨೪). "ಮಾಯಾವರಣದ ದೆಸೆಯಿಂದ ವ್ಯಾವಹಾರಿಕ ಜೀವನು ಸುಳ್ಳಾದ ಜಗತ್ತನ್ನು ನಿಜವೆಂದು ಭಾವಿಸುತ್ತಿದ್ದಾನೆ. ಪಾರಮಾರ್ಥಿಕ ಜೀವನು ಜೀವಾತ್ಮ ಪರಮಾತ್ಮರ ಐಕ್ಯವನ್ನು ಸಾಧಿಸಿ ಪರಮಾನಂದವನ್ನು ಹೊಂದುತ್ತಾನೆ. (೯-೩೭).

ಜೀವನ್ಮುಕ್ತರ, ಸಹಜಸ್ವರೂಪಿಗಳ ವಿಚಾರವನ್ನು ಹತ್ತನೆಯ ಅಧ್ಯಾಯದಲ್ಲಿ ತುಂಬ ಮಾರ್ಮಿಕವಾಗಿ ವರ್ಣಿಸಲಾಗಿದೆ. ಪರಬ್ರಹ್ಮನಿಗೆ ಮಾಯೆಯು ಸಂಗವಿಲ್ಲ. ಋಗ್ವೇದದಲ್ಲಿ "ಪ್ರಜ್ಞಾನಂ ಬ್ರಹ್ಮ" (ಪರಬ್ರಹ್ಮವು ಬುದ್ಧಿಯ ಆಚೆಗಿದೆ) ಅಥರ್ವವೇದದಲ್ಲಿ "ಅಯಮಾತ್ಮಾ ಬ್ರಹ್ಮ" (ಸತ್ಯಜ್ಞಾನಾನಂದ ಮಯನಾದ ಆತ್ಮನೇ ಪರಬ್ರಹ್ಮ) ಸಾಮವೇದದ ಛಾಂದೋಗ್ಯೋಪನಿಷತ್ತು ಗುರುವಿನ ಬೋಧೆಯಾದ "ತತ್ವಮಸಿ" ಎಂದೂ, ಯಜುರ್ವೇದದಲ್ಲಿ "ಅಹಂ ಬ್ರಹ್ಮಾಸ್ಮಿ" (ಬುದ್ಧಿಗೆ ಸಾಕ್ಷಿಯಾಗಿ ಬೆಳಗುವ ನಾನೇ ಪರಬ್ರಹ್ಮನಾಗಿದ್ದೇನೆ) ಎಂದು ಹೇಳಲ್ಪಟ್ಟಿದೆ." (೧೦-೪೯-೫೦) ಪರಬ್ರಹ್ಮನು ಅನಂತನೂ ಪರಂಜ್ಯೋತಿಸ್ವರೂಪನೂ, ಸರ್ವಾತ್ಮನೂ ಆಗಿದ್ದಾನೆ.

ಗಾಯತ್ರಿಮಂತ್ರದ ಅರ್ಥವನ್ನು ಗುರುಮುಖದಿಂದ ತಿಳಿದು ಮನನ ಮಾಡಿ ದಿವ್ಯಜ್ಞಾನ ಹೊಂದಿದರೆ ಮುಕ್ತಿ ದೊರಕುವದಿಲ್ಲವೆ ? ಸನ್ಯಾಸವೆಂಬ ಆಶ್ರಮವನ್ನು ಸ್ವೀಕರಿಸಿದ್ದರಿಂದ ಫಲವೇನು ? ಎಂಬ ಪ್ರಶ್ನೆಗೆ ವ್ಯಾಸರು ಕೊಡುವ ಉತ್ತರವಿದು "ನಿಸ್ಸಂಗವು ಅಳವಟ್ಟು, ಅಹಂಕಾರ ನಿರಸನವಾಗಿ ತಾನೇ ಬ್ರಹ್ಮನಾದವನ ಸ್ಥಿತಿ ಸನ್ಯಾಸ, ಯಾರು ಗೃಹಸ್ಥಧರ್ಮದಲ್ಲಿಯೆ ವ್ಯವಹರಿಸುತ್ತಿದ್ದರೂ ಶಮ, ದಯೆ, ಶಾಂತಿ, ವೈರಾಗ್ಯ, ಸದ್ಭಾವಗಳನ್ನು ಅಳವಡಿಸಿಕೊಂಡು ಜೀವಾತ್ಮ ಪರಮಾತ್ಮರ ಐಕ್ಯಭಾವದಲ್ಲಿರುವನೋ ಅವನೇ ಸನ್ಯಾಸಿ, ಅವನೇ ಜೀವನ್ಮುಕ್ತ." (೧೦-೯೯) ವಿಷಯಸುಖಗಳ ಬಯಕೆಯಿಲ್ಲದ ಮಹಾನುಭಾವನೇ ಯೋಗಿ. ಮಾಗಿದ ಹಣ್ಣು ಮತ್ತೆ ಕಸುಗಾಯಿಯಾಗುತ್ತದೆಯೇ ? ಆತ್ಮಜ್ಞಾನಿಯಾದ ಯೋಗಿಯ ನಿಶ್ಚಲ ಚಿತ್ತವು ಕಲುಷಿತಗೊಳ್ಳುವದಿಲ್ಲ. ಅರಿಷಡ್ವರ್ಗಗಳನ್ನು ಗೆದ್ದು ಸಚ್ಚಿದಾನಂದದಲ್ಲಿಯೇ ಯೋಗಿಯು ನಿಂತಿರುತ್ತಾನೆ. ಬೆಣ್ಣೆಯನ್ನು ಕಾಸಿ ಬಂದ ತುಪ್ಪವು ಮತ್ತೆ ಹಾಲಾಗುವದೇ ? ಸುಟ್ಟ ಮೇಲೆ ಕೆಂಡವು ಮತ್ತೆ ಕಟ್ಟಿಗೆಯಾಗುವದೇ ? ಹಾಗೆಯೇ ಪಾರಮಾರ್ಥಿಕವಾದ ನಿಜವು ಮಾಯೆಗೆ ಒಳಗಾಗುವದಿಲ್ಲ." (೧೦-೧೧೧) ಹುರಿದ ಬೀಜವು ಮತ್ತೆ ಮೊಳಕೆಯಾಗದಿರುವಂತೆ ಪರಬ್ರಹ್ಮ ವಸ್ತುವನ್ನು ಅರಿತ ಯೋಗಿಗೆ ಪುನರ್ಜನ್ಮವಿಲ್ಲ. ಜೀವನ್ಮುಕ್ತನು ಬಾಹ್ಯವನ್ನು ಮರೆತು ವ್ಯವಹರಿಸುತ್ತಾ ಸುಟ್ಟ ಬಟ್ಟೆಯಂತಿರುತ್ತಾನೆ. (೧೦-೧೧೪) ಯಾವ ಕಲ್ಪನೆಯೂ ಇಲ್ಲದ ಸ್ವಭಾವಸಿದ್ಧವಾದ ಕೇವಲಾನಂದ ಸ್ವರೂಪನಾದ ಜೀವನ್ಮುಕ್ತನು ಯಾಕೆ ದೇವನಲ್ಲ ? ಎಂಬ ಪ್ರಶ್ನೆಗೆ ಅನುಭವಾಮೃತದಲ್ಲಿ ಮಾರ್ಮಿಕವಾದ ಉತ್ತರವಿದೆ.

ದೇಹವೇ ದೇವಾಲಯವು ದಿಟ  
ದೇಹಿಯೆನಿಸುವ ಜೀವ ದೇವನು  
ಮೋಹವೆ ನಿರ್ಮಾಲ್ಯವಂತದ ನೇತಿಗಳಿದುಳಿದು  
ಊಹಿಸಲು ಬಾರದ ಸ್ವಯಂಪ್ರಭೆ  
ಸೋಹವೆಂಬುದೆ ಪೂಜೆ ತನುವಿನ  
ಗಾಹಿನಾಹಾರಗಳೆ ಉಪಚಾರ ಕೇಳೆಂದ (೧೦-೧೨೦)

ದೇಹವೇ ದೇವಾಲಯ. ದೇಹಿಯಾದ ಜೀವನೇ ದೇವರು. ಮೋಹವೆಂಬ ನಿರ್ಮಾಲ್ಯವನ್ನು ತೆಗೆದು ಸ್ವಯಂ ಜ್ಯೋತಿಸ್ವರೂಪನಾದ (ಪರಬ್ರಹ್ಮವೇ) ನಾನೆನ್ನುವದೇ ಪೂಜೆ, ದೇಹವು

ಪ್ರಾರಬ್ಧವಶದಿಂದ ಮಾಡುತ್ತಿರುವ ಕರ್ಮಗಳೇ ಉಪಚಾರಗಳು. ಹೀಗೆ ದೇಹವೇ ದೇವಾಲಯವೆಂದು ಸ್ವಯಂಪ್ರಕಾಶನಾದ ಆತ್ಮಾರಾಧನೆಯು ಭಾರತೀಯ ಸಂಸ್ಕೃತಿ ಪರಂಪರೆಯಲ್ಲಿ ಅತ್ಯಂತ ಪ್ರಗತಿಪರವಾದ, ವೈಚಾರಿಕವಾದ, ನೂತನ ಹೆಜ್ಜೆಯಾಗಿದೆ. (ಅದ್ವೈತಿಗಳು ಇಂದಿಗೂ "ದೇಹೋ ದೇವಾಲಯ ಪ್ರೋಕ್ತೋ ದೇವೋ ಜೀವಃ ಸದಾಶಿವಃ" ಎಂದು ನಿತ್ಯಕರ್ಮದಲ್ಲಿ ಪಠಿಸುವದನ್ನು ಕಾಣಬಹುದು.)

ಪರಬ್ರಹ್ಮವು ನಿತ್ಯವೂ, ನಿರ್ಗುಣವೂ, ಉಪಾಧಿರಹಿತವೂ ಆಗಿದೆ. ಅದಕ್ಕೆ ಪೂಜೆ, ಉಪಚಾರ ಮಾಡುವದು ಹೇಗೆ ? ಎಂಬ ಪ್ರಶ್ನೆಗೆ ಶ್ರವಣದಿಂದ ನಿಶ್ಚಯಿಸಿದ ವಸ್ತುವನ್ನು ಮನನ ಮಾಡಲೆಂದು ಉಪಚಾರ ಸಹಿತವಾದ ನಿರ್ಗುಣಾರಾಧನೆಯನ್ನು ಜ್ಞಾನಿಗಳು ಆಚರಿಸುತ್ತಾರೆ. ಈ ನಿರ್ಗುಣಾರಾಧನೆಯ ನಿರ್ಣಯ ವಿಚಾರದೊಂದಿಗೆ "ಅನುಭವಾಮೃತ" ಕಾವ್ಯದ ಅದ್ವೈತ ತತ್ವಮೀಮಾಂಸೆ ಮುಕ್ತಾಯವಾಗುತ್ತದೆ.

ಮಹಾಲಿಂಗರಂಗ "ಅನುಭವಾಮೃತ"ದುದ್ದಕ್ಕೂ ದೃಷ್ಟಾಂತಪ್ರಾಚರ್ಯದ ಮೂಲಕ ತಿಳಿಯಾದ ಕನ್ನಡದಲ್ಲಿ ವೇದಾಂತದ ಪರಮಸತ್ಯವನ್ನೂ, ಮಹೋನ್ನತ ವಿಚಾರಗಳನ್ನೂ ವಿದಿತಪಡಿಸಿದ್ದಾನೆ. ಮಹಾಲಿಂಗರಂಗನ ಸಮಕಾಲೀನನಾದ ಚಿದಾನಂದಾವಧೂತನ "ಜ್ಞಾನಸಿಂಧು" ಅದ್ವೈತ ವೇದಾಂತವನ್ನು ಭಾಮಿನಿ ಷಟ್ಪದಿಯಲ್ಲಿ ವಿಸ್ತಾರವಾಗಿ ನಿರೂಪಿಸುವ ಇನ್ನೊಂದು ಮಹತ್ವದ ಕೃತಿಯಾಗಿದೆ. ಅದ್ವೈತ ಪರಂಪರೆ ಶೃಂಗೇರಿ, ಸ್ವರ್ಣವಲ್ಲಿ, ರಾಮಚಂದ್ರಾಪುರಮಠ, ಕೂಡಲಿ ಮೊದಲಾದ ಪೀಠಸ್ಥ ಯತಿಗಳಿಂದಲೂ ಸದಾಶಿವಬ್ರಹ್ಮೇಂದ್ರ, ಶ್ರೀಧರಸ್ವಾಮಿಗಳಂಥ ಸಂತರಿಂದಲೂ ರಮಣ ಮಹರ್ಷಿಗಳಂಥ ಜೀವನ್ಮುಕ್ತ ವಿಭೂತಿ ಪುರುಷರಿಂದಲೂ ನಿಂಬಾಳದ ಆರ್. ಡಿ. ರಾನಡೆಯವರಂಥ ಸಾಧಕರಿಂದಲೂ ಮುಂದುವರಿದಿದೆ. ಹೊಳೆನರಸೀಪುರದ ಆಧ್ಯಾತ್ಮ ಪ್ರಕಾಶನ ಕಾರ್ಯಾಲಯದ ಶ್ರೀ ಸಚ್ಚಿದಾನೇಂದ್ರ ಸರಸ್ವತಿಯವರು ಶಂಕರರ ಎಲ್ಲ ಗ್ರಂಥಗಳನ್ನು ಕನ್ನಡದಲ್ಲಿ ಅನುವಾದಿಸಿ ಅನುಪಮ ಕಾರ್ಯ ಮಾಡಿದ್ದಾರೆ. ಅದ್ವೈತ ವೇದಾಂತವನ್ನು ಕುರಿತು ಕನ್ನಡದಲ್ಲಿ ಅನೇಕ ಗ್ರಂಥಗಳು ಪ್ರಕಟವಾಗಿವೆ. ಒಟ್ಟಿನಲ್ಲಿ ಅದ್ವೈತ ದರ್ಶನವು ಕನ್ನಡ ಸಾಹಿತ್ಯ, ಸಂಸ್ಕೃತಿ, ಧಾರ್ಮಿಕ ಅನುಷ್ಠಾನ ಆಚರಣೆಯ ಮಹೋನ್ನತಿಯಾಗಿ ಕಂಗೊಳಿಸುತ್ತಿದೆ.

* ಈ ಪ್ರಬಂಧದಲ್ಲಿ ಮಹಾಲಿಂಗರಂಗ ಕವಿಯ "ಅನುಭವಾಮೃತ"ದ (೧೯೫೫ ರ ಮುದ್ರಿತ ಪ್ರತಿ) ಕೊಪ್ಪಾಂಡೂರು ರಾಮಸ್ವಾಮಿಯ್ಯಂಗಾರರು ಬರೆದ ಟೀಕೆ ಹಾಗೂ ಅದ್ವೈತವೇದಾಂತದ ವಿದ್ವಾಂಸರಾದ ಅ. ರಾ. ಸೇ. ಅವರ "ಅನುಭವಾಮೃತ ಸುಧಾರಸ" ಗ್ರಂಥದಿಂದ ತಾತ್ಪರ್ಯ ವಿಚಾರಗಳನ್ನು ಉದ್ಧರಿಸಲಾಗಿದ್ದು ಅದಕ್ಕಾಗಿ ಈ ಗ್ರಂಥಗಳ ಲೇಖಕರಿಗೆ ಕೃತಜ್ಞತೆಗಳು ಸಲ್ಲುತ್ತವೆ.

# ಅದ್ವೈತ ಪೀಠ ಪರಂಪರೆ ಮತ್ತು ಸ್ವರ್ಣವಲ್ಲೀಮಠ

ಡಾ. ಎ. ಕೆ. ಶಾಸ್ತ್ರಿ

## ಪ್ರಸ್ತಾವನೆ :

ಸುಮಾರು ಹನ್ನೊಂದು ಶತಮಾನಗಳ ಚರಿತ್ರೆಯಿರುವ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿರುವ ಶ್ರೀ ಸ್ವರ್ಣವಲ್ಲೀ[೧] (ಸ್ವರ್ನವಲ್ಲೀ) ಮಠ ಒಂದು ಪ್ರಸಿದ್ಧ ಧಾರ್ಮಿಕ ಕೇಂದ್ರ. ಆದಿಶಂಕರರು ಪ್ರತ್ಯಕ್ಷವಾಗಿ ಮತ್ತು ತಮ್ಮ ಪ್ರಧಾನ ಶಿಷ್ಯರ ಮೂಲಕ ಪರೋಕ್ಷವಾಗಿ, ದೇಶದ ಅನೇಕ ಸ್ಥಳಗಳಲ್ಲಿ ಅದ್ವೈತ ಪೀಠಗಳನ್ನು ಸ್ಥಾಪಿಸಲು ಕಾರಣರಾದರು. ಅಂಥ ಅದ್ವೈತ ಪೀಠಗಳ ಪರಂಪರೆಯು ಇಂದಿಗೂ ಸಾಗಿ ಬಂದಿದೆ. ಸ್ವರ್ಣವಲ್ಲೀ ಮಠ, ಅಂಥ ಮಠಗಳಲ್ಲಿ ಒಂದು. ಶಿರಸಿಯಿಂದ ಯಲ್ಲಾಪುರಕ್ಕೆ ಹೋಗುವ ಮಾರ್ಗದ ಎಡಬದಿಯಲ್ಲಿ, ಶಿರಸಿಯಿಂದ ಸುಮಾರು ೧೬ ಕಿ. ಮೀ. ಅಂತರದಲ್ಲಿ, ಶಾಲ್ಮಲಾ ನದಿಯ ದಂಡೆಯ ಮೇಲೆ, ಸುಂದರವಾದ ಪ್ರಕೃತಿಯ ಮಡಿಲಲ್ಲಿ ಸ್ವರ್ಣವಲ್ಲೀ ಮಠ ನೆಲೆಸಿದೆ.[೨]

ಸೋದೆ(ಸ್ವಾದಿ)ಯ ಇಮ್ಮಡಿ ಅರಸಪ್ಪ ನಾಯಕನು ಹೊನ್ನೆಹಳ್ಳಿ ಗ್ರಾಮದಲ್ಲಿ ಸ್ವರ್ಣವಲ್ಲೀ ಮಠವನ್ನು ನಿರ್ಮಿಸಿ, ಸಹಸ್ರಲಿಂಗ ಮಠದ ಶ್ರೀ ಚಂದ್ರಶೇಖರ ಸರಸ್ವತೀ ಶ್ರೀಪಾದಂಗಳಿಗೆ ಶಾಲಿವಾಹನ ಶಕ ೧೪೭೮ (ಕ್ರಿ. ಶ. ೧೫೫೬) ರಲ್ಲಿ ನೀಡಿದ ಧರ್ಮಸಾಧನ[೩](ಶಾಸನ)ದ ಕಾಲದಿಂದ ಪ್ರಸಿದ್ಧಿಗೆ ಬಂದರೂ ಸ್ವರ್ಣವಲ್ಲೀ ಪ್ರದೇಶದ ಪೂರ್ವ ಚರಿತ್ರೆ ಮಾತ್ರ ಅತ್ಯಂತ ಪುರಾತನವಾದುದು. ಸ್ವರ್ಣವಲ್ಲಿಗೆ ಮಠ ಸ್ಥಳಾಂತರಗೊಳ್ಳುವ ಪೂರ್ವದಲ್ಲಿ, ಸ್ವರ್ಣವಲ್ಲಿಗೆ ತೀರ ಹತ್ತಿರವಿರುವ ಸಹಸ್ರಲಿಂಗದಲ್ಲಿ ಮಠವಿತ್ತು.[೪] ಮಠದ ಕುರುಹುಗಳು ಇಂದಿಗೂ ಗೋಚರಿಸಿವೆ. ಪ್ರಾಗೈತಿಹಾಸ ಕಾಲಕ್ಕೆ ಸೇರಿರಬಹುದೆನ್ನಲಾದ ಬಂಡೆಯ ಮೇಲಿನ ರೇಖಾಚಿತ್ರಗಳು ಮತ್ತು ಮಡಕೆ ತುಣುಕುಗಳೂ ಈ ಸ್ಥಳದಲ್ಲಿ ಲಭಿಸಿವೆ.[೫]

ಇತಿಹಾಸ ಕಾಲದಲ್ಲಿ ಈ ಪ್ರದೇಶ ಬೇರೆ ಬೇರೆ ಅರಸು ಮನೆತನಗಳ ಆಧಿಪತ್ಯಕ್ಕೆ ಒಳಪಟ್ಟಿತ್ತು. ಕ್ರಿ. ಶ. ಪೂರ್ವ ಮೂರರಿಂದ ಒಂದನೆಯ ಶತಮಾನದ ಅವಧಿಯಲ್ಲಿ ಮೌರ್ಯರು ಮತ್ತು ಕ್ರಿ. ಶ. ಒಂದು ಮತ್ತು ಎರಡನೆಯ ಶತಮಾನಗಳಲ್ಲಿ ಸಾತವಾಹನರು (ಶಾತವಾಹನರು) ಈ ಪ್ರದೇಶವನ್ನು ತಮ್ಮ ನಿಯಂತ್ರಣಕ್ಕೊಳಪಡಿಸಿದರು. ಕ್ರಿ. ಶ. ಎರಡನೆಯ ಶತಮಾನದಿಂದ ಮೂರನೆಯ ಶತಮಾನದವರೆಗೆ ಸಾತವಾಹನರ ಶಾಖೆಯವರಾದ ಚುಟು ವಂಶಜರು ಆಳಿದ ನಂತರ, ಈ ಪ್ರದೇಶವು ಕಂಚಿಯ ಪಲ್ಲವರಿಂದ ಆಳಲ್ಪಟ್ಟಿತು. ನಂತರ ಪ್ರಾರಂಭವಾದದ್ದು ಬನವಾಸಿ ಕದಂಬರ ಚಕ್ರಾಧಿಪತ್ಯ. ಬನವಾಸಿ ಕನ್ನಡಿಗರ ಪ್ರಥಮ ರಾಜಧಾನಿ. ಆರನೆಯ ಶತಮಾನದವರೆಗೂ ಸಮಸ್ತ ಉತ್ತರ ಕನ್ನಡ ಪ್ರದೇಶ ಕದಂಬರ ಆಧಿಪತ್ಯಕ್ಕೆ ಒಳಪಟ್ಟಿತ್ತು. ಬಾದಾಮಿ ಚಾಲುಕ್ಯರು ಬನವಾಸಿ ಕದಂಬರನ್ನು ಸೋಲಿಸಿ ಈ ನಾಡನ್ನು ತಮ್ಮ ಆಧೀನದಲ್ಲಿರಿಸಿಕೊಂಡರು. ಮಂಗಳೂರಿನ ಆಳುಪರನ್ನು ಪರಾಭವಗೊಳಿಸಿದ ಇಮ್ಮಡಿ ಪುಲಕೇಶಿಯು ಬನವಾಸಿ ಮಂಡಲವನ್ನು ಆಳಲು ಆಳುಪರನ್ನು ನಿಯಮಿಸಿದನು. ಮುಂದೆ, ಉತ್ತರ ಕನ್ನಡ ಜಿಲ್ಲೆಯ ಬಹುಭಾಗವನ್ನು ವ್ಯಾಪಿಸಿದ್ದ ಬನವಾಸಿ ೧೨೦೦೦ ಪ್ರಾಂತ್ಯವನ್ನು ರಾಷ್ಟ್ರಕೂಟರು ವಶಪಡಿಸಿಕೊಂಡು ತಮ್ಮ ಆಡಳಿತವನ್ನು ವಿಸ್ತರಿಸಿದರು. ಹತ್ತು, ಹನ್ನೊಂದು ಮತ್ತು ಹನ್ನೆರಡನೇ ಶತಮಾನಗಳ, ಶಿರಸಿ ತಾಲೂಕಿನಲ್ಲಿ ದೊರೆತ ಹಾನಗಲ್ಲಿನ ಕದಂಬರ ಮತ್ತು ಕಲ್ಯಾಣ ಚಾಲುಕ್ಯರ ಶಾಸನಗಳು ಅವರ ಪ್ರಭುತ್ವವನ್ನು ಸೂಚಿಸುತ್ತವೆ. ನಂತರ ವಿಜಯನಗರ ಸಮ್ರಾಟರ ಮಾಂಡಲಿಕರಾದ ಸೋದೆಯ ನಾಯಕರು ಸು. ಕ್ರಿ. ಶ. ೧೪೦೦ - ೧೭೬೩ ರ ವರೆಗೆ, ಅಂದರೆ, ಮೈಸೂರಿನ ಹೈದರಲಿಯು ಸೋದೆಯನ್ನು ವಶಪಡಿಸಿಕೊಳ್ಳುವವರೆಗೆ, ತಮ್ಮ ಅರಸೊತ್ತಿಗೆಯನ್ನು ನಡೆಸಿದರು. ಹದಿನೇಳು ಮತ್ತು ಹದಿನೆಂಟನೇ ಶತಮಾನಗಳಲ್ಲಿ ವಿಜಾಪುರದ ಸುಲ್ತಾನರು, ಮರಾಠರು ಮತ್ತು ಮೊಘಲರು ಉತ್ತರ ಕನ್ನಡವನ್ನು ಆಗಾಗ ಕೊಳ್ಳೆ ಹೊಡೆದು, ಈ ಪ್ರದೇಶದ ಕೆಲವು ಭಾಗಗಳನ್ನು ತಮ್ಮ ಅಂಕಿತದಲ್ಲಿರಿಸಿಕೊಂಡರು. ಕ್ರಿ. ಶ. ೧೭೯೯ ರಲ್ಲಿ ಜರುಗಿದ ನಾಲ್ಕನೇ ಆಂಗ್ಲ-ಮೈಸೂರು ಕದನದಲ್ಲಿ ಟೀಪು ಸುಲ್ತಾನನು ಮರಣ ಹೊಂದಿದ ನಂತರ, ಜಿಲ್ಲೆಯನ್ನು ಮದ್ರಾಸ ಪ್ರಾಂತ್ಯಕ್ಕೆ ಸೇರಿಸಲಾಯಿತು; ನಂತರ ೧೮೬೨ ರಲ್ಲಿ ಮುಂಬಯಿ ಪ್ರಾಂತ್ಯಕ್ಕೆ ಸೇರಿಸಲಾಯಿತು. ಭಾಷಾವಾರು ಪ್ರಾಂತ್ಯ ರಚನೆಯನ್ವಯ, ೧೯೫೬ ರಲ್ಲಿ ನಾರ್ಥ್ ಕೆನರಾ ಜಿಲ್ಲೆ ಮೈಸೂರು ರಾಜ್ಯದಲ್ಲಿ ವಿಲೀನಗೊಂಡಿತು. ೧೯೭೭ ರಲ್ಲಿ 'ನಾರ್ಥ ಕೆನರಾ' ಎಂಬ ಹೆಸರಿನ ಬದಲಿಗೆ 'ಉತ್ತರ ಕನ್ನಡ' ಎಂದು ಹೆಸರಿಸಲಾಯಿತು. ಇವೆಲ್ಲ ಉತ್ತರ ಕನ್ನಡ ಜಿಲ್ಲೆಯ ಗತಕಾಲದ ರಾಜಕೀಯ ಗುರುತುಗಳು. ಹೀಗಾಗಿ, ಶ್ರೀಮಠ ಉಜ್ಜಯಿನಿಯಿಂದ ಗೋಕರ್ಣಕ್ಕೆ ಸ್ಥಳಾಂತರಗೊಂಡಾಗಿನಿಂದ, ಮಠದ ಚರಿತ್ರೆಯು ಉತ್ತರ ಕನ್ನಡ ಜಿಲ್ಲೆಯ ಐತಿಹಾಸಿಕ ಬೆಳವಣಿಗೆಯೊಂದಿಗೆ ಬೆಸೆದುಕೊಂಡು ಬಂದಿದೆ.[೬]

ಕ್ರಿ. ಶ. ೯ನೇ ಶತಮಾನದ ಆದಿಯಲ್ಲಿ ಆದಿಶಂಕರಾಚಾರ್ಯರಿಂದ ಅನುಗ್ರಹಿಸಲ್ಪಟ್ಟು, ಅವರ ಸಮ್ಮುಖದಲ್ಲಿಯೇ ಆಚಾರ್ಯರ ಪ್ರಧಾನ ಶಿಷ್ಯರಲ್ಲೊಬ್ಬರಾದ ಶ್ರೀ ಭಾಸ್ಕರೇಂದ್ರ ಸರಸ್ವತಿಗಳಿಂದ ಯತ್ಯಾಶ್ರಮವನ್ನು ಪಡೆದು, ಕಾಶಿಯ ದಶಾಶ್ವಮೇಧ ಘಾಟಿನಲ್ಲಿ ಸ್ಥಾಪಿಸಲ್ಪಟ್ಟ ಶ್ರೀಮಠಕ್ಕೆ ವಿಶ್ವವಂದ್ಯ ಸರಸ್ವತಿಗಳು ಪ್ರಥಮ ಸ್ವಾಮಿಗಳು. ಶ್ರೀಮಠ, ಬೇರೆ ಬೇರೆ ಕಾಲದಲ್ಲಿ, ಕ್ರಮವಾಗಿ, ಕಾಶಿಯಿಂದ ಉಜ್ಜಯಿನಿ, ಉಜ್ಜಯಿನಿಯಿಂದ ಗೋಕರ್ಣ, ಗೋಕರ್ಣದಿಂದ ಕಡತೋಕೆ, ಕಡತೋಕೆಯಿಂದ ಸಹಸ್ರಲಿಂಗ ಮತ್ತು ಸಹಸ್ರಲಿಂಗದಿಂದ ಇಂದಿನ ಸ್ವರ್ಣವಲ್ಲಿಗೆ ಸ್ಥಳಾಂತರಗೊಂಡಿತು. ಶ್ರೀ ವಿಶ್ವವಂದ್ಯ ಸರಸ್ವತಿಗಳಿಂದ ಪ್ರಾರಂಭಿಸಿ, ಗುರುಪರಂಪರೆಯಲ್ಲಿ ೫೪ ನೆಯವರಾದ, ಪ್ರಸ್ತುತ ಪೀಠದಲ್ಲಿರುವ ಶ್ರೀ ಗಂಗಾಧರೇಂದ್ರ ಸರಸ್ವತಿಗಳವರೆಗಿನ ಗುರುಪರಂಪರೆಯು ಅವಿಚ್ಛಿನ್ನವಾಗಿ ಸಾಗಿಬಂದಿದೆ.

ಕಾಶಿಯ ರಾಜ, ಉಜ್ಜಯಿನಿಯ ವಿಕ್ರಮಾದಿತ್ಯ, ವಿಜಯನಗರದ ಸಮ್ರಾಟರು, ಚಂದಾವರದ ಚಂದ್ರಸೇನ, ಸುಧಾಪುರದ ನರಸಿಂಹ ಭೂಪಾಲ, ಮಲೆಮತ್ಪುರ (ಮಂಜುಗುಣಿ)ದ ಅರಸು, ಸೋದೆಯ ಇಮ್ಮಡಿ ಅರಸಪ್ಪ, ರಘುನಾಥ, ಮಧುಲಿಂಗ ಮತ್ತು ಸದಾಶಿವ ನಾಯಕರು ಮತ್ತು ಕೆಳದಿಯ ವೆಂಕಟಪ್ಪ ಮತ್ತು ಬಸಪ್ಪನಾಯಕರು ಸ್ವರ್ಣವಲ್ಲೀ ಮಠಕ್ಕೆ ಭೂದಾನ ಮಾಡಿ, ಗುರುಗಳನ್ನು ಸತ್ಕರಿಸಿ, ಯೋಗ್ಯ ಬಿರುದಾವಳಿಗಳನ್ನು ನೀಡಿ, ಮಠದಲ್ಲಿ ಧರ್ಮವು ಸದಾ ಸಾಂಗವಾಗಿ ನಡೆಯುವಂತೆ ಮಾಡಲು ಕಾರಣರಾದರು. ಆಳರಸರಿಂದ ಮತ್ತು ಜನರಿಂದ ಮನ್ನಣೆ ಪಡೆದು ಸಮಸ್ತ ಗೋಕರ್ಣ ಮಂಡಲಕ್ಕೆ ಗುರುಪೀಠವಾಗುವದರ ಜೊತೆಗೆ, ಮಹಾ ಸಂಸ್ಥಾನವಾಗಿ ಬೆಳೆದು ಬಂದಿತು. ನಂತರ ಅಧಿಕಾರಕ್ಕೆ ಬಂದ ಟೀಪು ಸುಲ್ತಾನ ಮತ್ತು ಬ್ರಿಟಿಷ್‌ರು ಪಾರಂಪರ್ಯವಾಗಿ ಬಂದ ಮಠದ ಸಂಪ್ರದಾಯಗಳನ್ನು ಗೌರವಿಸಿದರು. ಪ್ರಜಾಪ್ರಭುತ್ವದ ಇಂದಿನ ಪ್ರಭುವರ್ಗದವರಿಂದಲೂ ಶ್ರೀಮಠ ಗೌರವಿಸಲ್ಪಡುತ್ತಿದೆ.[೭]

## ಆಕರ ಸಾಮಗ್ರಿಗಳ ಕಿರು ಪರಿಚಯ :

ಸ್ವರ್ಣವಲ್ಲೀ ಮಠದಲ್ಲಿರುವ ಸುಮಾರು ೩೦,೦೦೦ ಕಾಗದಪತ್ರಗಳು,[೮] ಮಂತ್ರಭಾಗ ಮತ್ತು ಧಾರ್ಮಿಕ ವಿಷಯಗಳನ್ನೊಳಗೊಂಡ ಸಹಸ್ರಾರು ತಾಡೋಲೆಗಳು, ಕೀರ್ದಿ ಪುಸ್ತಕಗಳು, ಶಿಲಾ ಮತ್ತು ತಾಮ್ರ ಶಾಸನಗಳು ಮತ್ತು ಅವುಗಳ ಪ್ರತಿಗಳು, ಗೋಕರ್ಣ, ಮಂಜುಗುಣಿ, ಮತ್ತಿನ್ನಿತರ ಪ್ರದೇಶಗಳಲ್ಲಿ ಲಭ್ಯವಿರುವ ದಾಖಲೆಗಳು, ಸ್ವರ್ಣವಲ್ಲೀ ಸಂಸ್ಥಾನದ ಸೀಮೆಗಳಲ್ಲಿರುವ ದೇವಾಲಯಗಳು ಮತ್ತು ಪ್ರಾಚ್ಯಾವಶೇಷಗಳು ಸ್ವರ್ಣವಲ್ಲೀ ಸಂಸ್ಥಾನದ ಚರಿತ್ರೆಯ ಮೇಲೆ ಬೆಳಕು ಬೀರುವ ಆಕರ ಸಾಮಗ್ರಿಗಳು. ಇವುಗಳ ಹೊರತಾಗಿ, ಶ್ರೀ ಬೃಹದ್ಗಂಗಾಧರೇಂದ್ರ ಸರಸ್ವತಿಗಳು (ಸು. ಕ್ರಿ. ಶ. ೧೬೪೮-೧೬೫೩) ರಚಿಸಿದ, ಗುರುಪರಂಪರೆಯ ವೃತ್ತಾಂತವನ್ನು ಅರುಹುವ 'ಜ್ಞಾನ ದೀಪಿಕಾ' ಎಂಬ ಕೃತಿಯು ಈ ದಿಶೆಯಲ್ಲಿ ಅತ್ಯಂತ ಉಪಯುಕ್ತ.

ಸಾಮಾನ್ಯವಾಗಿ, ಶ್ರೀಮಠದಲ್ಲಿ ಲಭ್ಯವಿರುವ ದಾಖಲೆಗಳೆಲ್ಲ ಕನ್ನಡದಲ್ಲಿದ್ದು, ಕೆಲವೇ ಮಾತ್ರ ಸಂಸ್ಕೃತ ಮತ್ತು ಇಂಗ್ಲಿಷ್‌ನಲ್ಲಿವೆ. ದಾಖಲೆಗಳು ಗತಕಾಲದ ಚರಿತ್ರೆಯ ಮೇಲೆ ಬೆಳಕು ಬೀರುವದರ ಜೊತೆಗೆ. ಕನ್ನಡ ಭಾಷೆ ಮತ್ತು ಲಿಪಿ, ಕಳೆದ ನಾಲ್ಕು ಶತಮಾನಗಳಲ್ಲಿ ಕ್ರಮಿಸಿದ ಮಾರ್ಗವನ್ನು ಸೂಚಿಸುತ್ತವೆ. ವಿಜಯನಗರ ಪೂರ್ವ, ವಿಜಯನಗರ ಮತ್ತು ಸ್ವಾದಿ ಅರಸರ ಕಾಲದ ತಾಮ್ರ ಮತ್ತು ಶಿಲಾಶಾಸನಗಳ ಪ್ರತಿಗಳನ್ನು ಈ ಸಂಗ್ರಹದಲ್ಲಿ ಗುರುತಿಸಬಹುದಾಗಿದೆ. ಅನೇಕ ಶಾಸನಗಳು ಇಂದು ನಶಿಸಿರುವುದರಿಂದ, ಇಲ್ಲವೆ, ಉತ್ಖನನವಿಲ್ಲದೆ ಪ್ರಕಾಶನವಾಗದೇ ಇರುವದರಿಂದ, ಪ್ರಸ್ತುತದಲ್ಲಿ ಉಲ್ಲೇಖಿಸಿದ ಶಾಸನಗಳ ಪ್ರತಿಗಳಿಗೆ ಹೆಚ್ಚಿನ ಐತಿಹಾಸಿಕ ಮೌಲ್ಯ ಪ್ರಾಪ್ತವಾಗುತ್ತದೆ. ಸಂಬಂಧಿಸಿದ ಸಮಕಾಲೀನ ಶಾಸನಗಳೊಂದಿಗೆ ತುಲನಾತ್ಮಕ ವಸ್ತುನಿಷ್ಠ ಅಧ್ಯಯನ ಮಾಡಿದಾಗ, ಸ್ವರ್ಣವಲ್ಲೀ ಸಂಗ್ರಹದಲ್ಲಿಯ ಶಾಸನಗಳ ಪ್ರತಿಗಳು ಮತ್ತು ಚಾರಿತ್ರಿಕ ದಾಖಲೆಗಳು ಪ್ರಮಾಣಬದ್ಧವಾದವುಗಳೆಂದು ಖಚಿತವಾಗಿ ಹೇಳಬಹುದು.[೯] ಲಿಪಿ, ವಾಕ್ಯರಚನೆ, ಭಾಷೆ, ಎಲ್ಲವೂ ಸಾಮಾನ್ಯವಾಗಿ ಸುಂದರವಾಗಿವೆ. ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಲಿಪಿಕಾರರು ಕನ್ನಡ ಮೋಡಿಯಲ್ಲಿ ಬರೆದಿದ್ದರಿಂದ, ಸಾಮಾನ್ಯವಾಗಿ, ದಾಖಲೆಗಳನ್ನು ಓದುವದು ಕಠಿಣ. ಆದರೂ, ವಿಶೇಷ ಆಸಕ್ತಿ, ಪರಿಶ್ರಮ, ತಾಳ್ಮೆ ಮತ್ತು ಅನುಭವಗಳಿಂದಾಗಿ ಓದಲು ಸಾಧ್ಯ. ಕಾಲಕ್ಕೆ ತಕ್ಕಂತೆ ನಡುಗನ್ನಡ, ಹೊಸಗನ್ನಡ, ಸಂಸ್ಕೃತ, ಪಾರ್ಶಿ ಮತ್ತು ಇಂಗ್ಲಿಷ್ ಪದಗಳನ್ನು ಬಳಸಲಾಗಿದೆ. ಪ್ರಾಚೀನ ದಾಖಲೆಗಳಿಗೆ ಹೋಲಿಸಲಾಗಿ, ತೀರ ಇತ್ತೀಚಿನ ಕಾಗದಪತ್ರಗಳು ಕೇವಲ ತಾಳಿಕೆಯನ್ನಷ್ಟೇ ಅಲ್ಲದೆ, ಬಹುಮಟ್ಟಿಗೆ ಐತಿಹಾಸಿಕ ಮೌಲ್ಯವನ್ನೂ ಕಳೆದುಕೊಂಡಿವೆ ಎಂದೇ ಹೇಳಬೇಕಾಗುತ್ತದೆ. ಇತ್ತೀಚಿನ ದಾಖಲೆಗಳಲ್ಲಿ ಭಾಷೆಯ ಸೊಗಸಿಲ್ಲ, ಲಿಪಿಯ ಸೌಂದರ್ಯವಿಲ್ಲ ಮತ್ತು ವಿಷಯ ನಿರೂಪಣೆಯಲ್ಲಿ ಸರಿಯಾದ ಕ್ರಮವಿಲ್ಲ. ಅಂದಿನ ಕನ್ನಡದ ಸೊಗಡಿನ ಪದಗಳ ಬಳಕೆ ಇತ್ತೀಚೆಗೆ ಕಡಿಮೆಯಾಗಿದೆಯೆಂದೇ ಹೇಳಬೇಕು.

## ಕಾಶಿಯಲ್ಲಿ ಶ್ರೀಮಠ ಸ್ಥಾಪನೆ :

ಕಾಶಿಯ ದಶಾಶ್ವಮೇಧ ಘಾಟದಲ್ಲಿ ಶ್ರೀಮಠದ ಸ್ಥಾಪನೆ, ಕಾಶಿಯಿಂದ ಉಜ್ಜಯಿನಿ, ಉಜ್ಜಯಿನಿಯಿಂದ ಗೋಕರ್ಣ, ಗೋಕರ್ಣದಿಂದ ಕಡತೋಕೆ, ಕಡತೋಕೆಯಿಂದ ಸಹಸ್ರಲಿಂಗ ಮತ್ತು ಸಹಸ್ರಲಿಂಗದಿಂದ ಇಂದಿನ ಸ್ವರ್ಣವಲ್ಲಿಗೆ, ಮಠ ಬೇರೆ ಬೇರೆ ಕಾಲದಲ್ಲಿ ಹೇಗೆ ಸ್ಥಳಾಂತರಗೊಂಡಿತೆಂಬುದರ ಸಂಗತಿಯು, ಶ್ರೀಮಠದ ಗುರುಪರಂಪರೆಯಲ್ಲಿ ೩೮ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ರಚಿಸಿದ 'ಜ್ಞಾನ ದೀಪಿಕಾ' ಎಂಬ ಸಂಸ್ಕೃತದಲ್ಲಿಯ ಕೃತಿಯಿಂದ ವಿದಿತವಾಗುತ್ತದೆ. ಕಾಶಿಯಲ್ಲಿ ಮಠ ಸ್ಥಾಪನೆ ಮತ್ತು ಪ್ರಥಮ ಸ್ವಾಮಿಗಳಾದ ವಿಶ್ವವಂದ್ಯ ಸರಸ್ವತಿಗಳ ಹಿನ್ನೆಲೆಯನ್ನು ಜ್ಞಾನ ದೀಪಿಕೆಯ ಮೊದಲಿನ ನಾಲ್ಕು ಅಧ್ಯಾಯಗಳಲ್ಲಿ ವಿವರಿಸಲಾಗಿದೆ.

ಪೂರ್ವದಲ್ಲಿ, ಭರತಖಂಡದ ಉತ್ತರದಲ್ಲಿ ಅನೇಕ ಬ್ರಾಹ್ಮಣ ಮಂಡಲಗಳಿಂದ ಶೋಭಿಸುವ ಅಹಿಚ್ಛತ್ರ[೧೦] (ಅಹಿಕ್ಷೇತ್ರ) ವೆಂಬುದು ಪ್ರಸಿದ್ಧ. ಅಲ್ಲಿಯ ಹವ್ಯಕ

ಬ್ರಾಹ್ಮಣ ಕುಟುಂಬದ ವಿಶ್ವಪತಿ ಮತ್ತು ಸರಸ್ವತೀ ಎಂಬ ದಂಪತಿಗಳಿಗೆ ಬ್ರಹ್ಮಶಾಪದಿಂದ ಸಾಕ್ಷಾತ್ ಈಶ್ವರನೇ ಪುತ್ರನಾಗಿ ಜನಿಸಿದನಂತೆ. ಶುಕ್ಲಪಕ್ಷದ ಚಂದ್ರನಂತೆ ಪ್ರವರ್ಧಿಸುತ್ತಿದ್ದ ಗುಣನಿಧಿಯೆಂಬ ಈ ಬಾಲಕನು ಸಕಲ ವಿದ್ಯೆಗಳನ್ನೂ ಕಲಿತು ಲೋಕದುಃಖದ ಕಾರಣವನ್ನು ಕಂಡು ತೀವ್ರವಾಗಿ ಆಲೋಚಿಸತೊಡಗಿದನು. ಭೌತಿಕವಾದ ದ್ರವ್ಯ, ಧನಧಾನ್ಯ, ಸೇವಕರು, ಪತ್ನಿ, ಪುತ್ರರು, ಮುಗಿಲೆತ್ತರದ ಸೌಧ ಮತ್ತು ಬಾಂಧವರು ಎಲ್ಲ ದುಃಖ ಕಾರಣಗಳೇ ಆದುದರಿಂದ ಎಲ್ಲವೂ ವ್ಯರ್ಥ ಎಂದು ಮನಗಂಡು ಸತ್ಯಶೋಧನೆಗಾಗಿ ಶ್ರೀಕ್ಷೇತ್ರ ಗೋಕರ್ಣದತ್ತ ಪ್ರಯಾಣಿಸಿದನು. ಶ್ರೀಮಹಾಬಲ ದರ್ಶನದಿಂದ ಕೃತಾರ್ಥನಾಗಿ, ಗೋಕರ್ಣದಿಂದ ವಾರಣಾಸಿಗೆ ವಿಶ್ವನಾಥ ದರ್ಶನೋತ್ಸುಕನಾಗಿ ಹೊರಟನು. ಆದಿಶಂಕರಾಚಾರ್ಯರು ಭಾಸ್ಕರೇಂದ್ರ ಸರಸ್ವತೀ ಮತ್ತು ಇನ್ನಿತರ ಶಿಷ್ಯರೊಂದಿಗೆ ವಾರಣಾಸಿಯ ದಶಾಶ್ವಮೇಧ ಘಾಟಿನಲ್ಲಿ ತಂಗಿದ್ದರು. ಗುಣನಿಧಿಯು ಆಚಾರ್ಯರಿಗೆ ತನ್ನ ಪೂರ್ವ ಚರಿತ್ರೆಯನ್ನು ನಿವೇದಿಸಿ, "ಪೂಜ್ಯರೇ, ಬ್ರಹ್ಮಕಲಾವೃತವಾದ ತಮ್ಮ ಪೂರ್ಣಕೃಪೆ ನನ್ನಲ್ಲಿ ಸದಾ ಇರಲೆಂದು ಕೈಮುಗಿವೆನು. ಗುರುಗಳ ಅನುಗ್ರಹವಿಲ್ಲದೆ ಎಲ್ಲವೂ ನಶ್ವರವೆಂದು ದೃಢವಾಗಿ ನಂಬಿರುವೆ. ಆದ್ದರಿಂದ ಯಾವುದು ಎಲ್ಲವನ್ನೂ ಮೀರಿ, ಎಲ್ಲವನ್ನೂ ವ್ಯಾಪಿಸಿದೆಯೋ ಅದನ್ನು ಅನುಗ್ರಹಿಸಿದರೆ ಧನ್ಯ" ಎಂದು ಅರುಹಿದನು. "ಭಾಸ್ಕರೇಂದ್ರ ಸರಸ್ವತಿಯವರೇ, ಗುರುಭಕ್ತಿಯುಳ್ಳವನೂ ತೇಜಸ್ವಿಯೂ ಪರಿಶುದ್ಧನೂ ಆದ ಈ ಬಾಲಕನು ಬ್ರಹ್ಮವಿದ್ಯೆಯನ್ನು ಹೊಂದಲು ಅಧಿಕಾರಿಯು– ಯೋಗ್ಯನು. ಇವನು ನಮ್ಮಿಂದ ಅನುಗ್ರಹಿಸಿ ಆಶೀರ್ವದಿಸಲ್ಪಟ್ಟವನೆಂದು ತಿಳಿಯುವದು," ಎಂಬುದಾಗಿ ಆಚಾರ್ಯರು ಅಪ್ಪಣೆ ಕೊಡಿಸಿದರು. ಭಾಸ್ಕರೇಂದ್ರರು ವಟುವನ್ನೀಕ್ಷಿಸಿ, ಸಮಸ್ತವಾದ ಚರಾಚರಾತ್ಮಕ ಪ್ರಪಂಚಕ್ಕೆ ಸಂಪ್ರದಾಯ ಪ್ರವರ್ತಕನಾಗಲು ಯೋಗ್ಯನೆಂದು ತಿಳಿದು, ಪ್ರೇಷೋಚ್ಚಾರಣ ಪೂರ್ವಕವಾಗಿ ಭವತಾರಕವಾದ ಬ್ರಹ್ಮವಿದ್ಯೆಯನ್ನು ಉಪದೇಶಿಸಿದರು. ಯೋಗಪಟ್ಟ, ಸಂಪ್ರದಾಯ, ಸನ್ಯಾಸಲಕ್ಷಣವಾದ ದಂಡ, ಕಮಂಡಲಗಳು, ದೇವತಾ ತೀರ್ಥವೇ ಆದಿ, ವರಾಹಮೂರ್ತಿ, ವರಾಹಕ್ಷೇತ್ರ ಸಂಭವೆಯಾದ ತುಂಗಭದ್ರಾ ತೀರ್ಥ, ಭೂರಿವಾಲ(ರ) ಯೋಗಪಟ್ಟ, ವಿಶ್ವವಂದ್ಯ–ಸರಸ್ವತೀ ಎಂಬ ನಾಮಧೇಯವನ್ನೂ ಕೊಟ್ಟರು. ಆ ಸಮಯದಲ್ಲಿ, ಆದಿಶಂಕರರ ಪ್ರಧಾನ ಶಿಷ್ಯರಲ್ಲೊಬ್ಬರಾದ ಸುರೇಶ್ವರಾಚಾರ್ಯರೂ ವಿಶ್ವವಂದ್ಯರನ್ನು ಅನುಗ್ರಹಿಸಿದರೆಂದು ಮಂಜುಗುಣಿಯ ದಾಖಲೆಯೊಂದು ತಿಳಿಸುತ್ತದೆ.[೧೧] ವಿಶ್ವವಂದ್ಯರು ತಮ್ಮಲ್ಲಿದ್ದ ಬಂಗಾರದ ರತ್ನಗರ್ಭ ವಿನಾಯಕನನ್ನು ಆದಿಶಂಕರರಿಗೆ ಅರ್ಪಿಸಿದರು. ಆಚಾರ್ಯರು ವಿಶ್ವವಂದ್ಯರಿಗೆ ಲಕ್ಷ್ಮೀಯುಕ್ತ ನರಸಿಂಹಮೂರ್ತಿಯನ್ನೂ (ನೃಸಿಂಹ ಸಾಲಿಗ್ರಾಮ), ಚಂದ್ರಮೌಳೀಶ್ವರ ಲಿಂಗವನ್ನೂ ಕೊಟ್ಟರಲ್ಲದೆ, ದಶಾಶ್ವಮೇಧ ಘಾಟಿನಲ್ಲಿ ಮಠವನ್ನೂ ಕಟ್ಟಿಸಿಕೊಟ್ಟರು.

ಸು. ಕ್ರಿ. ಶ. ೧೮೮೦ ರ, ಜ್ಞಾನದೀಪಿಕೆಯ ವೃತ್ತಾಂತವನ್ನೇ ಸಮರ್ಥಿಸುವ ಸ್ವರ್ಣವಲ್ಲೀ ಮಠದ ಉತ್ಪತ್ತಿ ಮತ್ತು ಗುರುಪರಂಪರೆಯನ್ನು ತಿಳಿಸುವ ದಾಖಲೆಯೊಂದರಲ್ಲಿ, "..........ಪೂರ್ವದಲ್ಲಿ ಅಹಿಕ್ಷೇತ್ರದಲ್ಲಿ ಹೈವದ್ರಾವಿಡ

ಬ್ರಾಹ್ಮಣನಾದ ವಿಶ್ವಪತ್ತಿ ದಿಕ್ಷಿತ್ತರ ಮಗನಾದ ಗುಣನಿಧಿಯೆಂಬುವನು ವಿರಕ್ತನಾಗಿ ಗೋಕರ್ಣ ಮಹಾಕ್ಷೇತ್ರದಲ್ಲಿ ದೇವತ್ತಾನುಗ್ರಹ ಸಂಪಾದಿಸಿಕೊಂಡು ಶ್ರೀಮತ್ ಕಾಶಿಕ್ಷೇತ್ರಕೆ ಹೋಗಿ ಅಲ್ಲಿ ಶ್ರೀ ಶಂಕರಾಚಾರ್ಯರಿಗೆ ಹೇಳಿಕೊಳ್ಳಲಾಗಿ ಅವರ ಅನುಗ್ರಹದಿಂದಾ ತ್ತಂಮ ಶಿಷ್ಯರಾದ ಹಸ್ತಮಲ್ಕರೆಂಬ ಭಾಸ್ಕರೇಂದ್ರ ಸರಸ್ವತ್ತಿಗಳವರ್ರಿಂದಾ ಯತ್ತ್ಯಾಶ್ರಮವನ್ನು ಕೊಡಿಶಿ–ವರಾಹದೆವರ್ರು ತ್ತುಂಗಭದ್ರಾತ್ತಿರ್ಥ ಭೂರ್‍ರಿವಾಳ ಸಾಂಪ್ರದಾಯಪೂರ್ವಕ ವಿಶ್ವವಂದ್ಯ ಸರಸ್ವತಿಗಳೆಂತಾ–ಯೊಗಪಟ್ಟಾ ಮಾಡಿ–ಶ್ರೀ ನರಸಿಂಹದೆವರ ವಿಗ್ರಹ ಚಂದ್ರಮೌಳಿಶ್ವರ ದೆವರ ಲ್ಲಿಂಗ ಸಹಾ ಕೊಟ್ಟು–ನಿನು ಗೊಕರ್ಣ ಮಂಡಲ್ಲಕೆ ಹೈವದ್ರಾವಿಡ ಬ್ರಾಹ್ಮಣ್ಯಕೆ ಧರ್ಮಶಾಸ್ತ್ರ ಮಾರ್ಗದಲ್ಲಿ ವರ್ತಿಶಿ ಗುರ್ರುವಾಗಿ ಯಿರ್ರು ಯೆಂದು ಅಪ್ಪಣೆ ಕೊಟ್ಟಿ ಬಳಿಕಾ–ಕಾಶಿರ್‍ರಾಜನಿಂದ ನಿರ್ಮಿಶಿದ ದಶಾಶ್ವಮೇಧ ಘಾಟಿನಲ್ಲಿ ಯಿರ್ರುವ ಮಠದಲ್ಲು–ಕೆಲ್ಲಉ ದಿವ್ಸ ಯಿದ್ದು–ನಾರಾಯಣೇಂದ್ರ ಸರಸ್ವತ್ತಿಗಳೆಂಬ ಶಿಷ್ಯರ ಮಾಡಿದರ್ರು.........''[೧೨] ಎಂಬುದಾಗಿ ಉಲ್ಲೇಖಿಸಲಾಗಿದೆ.

ಈ ರೀತಿಯಾಗಿ, ಸು. ಕ್ರಿ. ಶ. ೯ ನೆಯ ಶತಮಾನದ ಆದಿಯಲ್ಲಿ, ಕಾಶಿಯ ದಶಾಶ್ವಮೇಧ ಘಾಟಿನಲ್ಲಿ ಸ್ಥಾಪಿಸಲ್ಪಟ್ಟ ಮಠವೇ ಇಂದಿನ ಸ್ವರ್ಣವಲ್ಲಿಯ ಮೂಲ ಮಠ; ಮತ್ತು ವಿಶ್ವವಂದ್ಯ ಸರಸ್ವತಿಗಳೇ ಪ್ರಥಮ ಗುರುಗಳು.

## ಉಜ್ಜಯಿನಿಯಲ್ಲಿ ಶ್ರೀಮಠ :

ಶ್ರೀಮಠದ ಗುರುಪರಂಪರೆಯಲ್ಲಿ ದ್ವಿತೀಯರಾದ ಶ್ರೀ ನಾರಾಯಣೇಂದ್ರ ಸರಸ್ವತಿಗಳು ಶ್ರೀ ವಿಶ್ವವಂದ್ಯ ಸರಸ್ವತಿಗಳ ಕರಕಮಲ ಸಂಜಾತರು. ಶಿಷ್ಯನನ್ನಾಗಿ ನಾರಾಯಣೇಂದ್ರ ಸರಸ್ವತಿಗಳ ನೇಮಕ, ವಿಶ್ವವಂದ್ಯರು ಬ್ರಹ್ಮೀಭೂತರಾದ ಸಮಾಚಾರ, ಶಿಷ್ಯರೊಂದಿಗೆ ಶ್ರೀ ನಾರಾಯಣೇಂದ್ರ ಸರಸ್ವತಿಗಳ ಉಜ್ಜಯಿನೀ ಪ್ರಯಾಣ, ಯತೀಶ್ವರರಿಗೆ ಉಜ್ಜಯಿನಿಯ ವಿಕ್ರಮಾರ್ಕರಸನಿಂದ ಕಾಣಿಕೆ ಮತ್ತು ಮಾನಮರ್ಯಾದೆಗಳ ಸಮರ್ಪಣೆ, ಶ್ರೀಗಳಿಂದ ಉಜ್ಜಯಿನೀ ಮಠ ಪ್ರವೇಶ, ಉಜ್ಜಯನೀ ಮಠದ ಗುರುಪರಂಪರೆಯಲ್ಲಿ ಕೈವಲ್ಯೇಂದ್ರ, ಪ್ರಕಾಶೇಂದ್ರ, ಸರ್ವಜ್ಞೇಂದ್ರ ಹೀಗೆ ೧೭ ಗುರುಗಳ ಪೀಠಾಧಿಪತ್ಯ ಮತ್ತು ಕಾಶೀಮಠದ ಪ್ರಥಮ ಗುರುಗಳನ್ನೂ ಸೇರಿಸಿ. ಒಟ್ಟೂ ೧೮ ಗುರುಗಳು ಆಗಿಹೋದ ಸಮಾಚಾರವೆಲ್ಲ ಜ್ಞಾನದೀಪಿಕೆಯ ನಾಲ್ಕನೆಯ ಅಧ್ಯಾಯದಲ್ಲಿ ನಿರೂಪಿತವಾಗಿದೆ.

ಉಜ್ಜಯಿನಿಯ ದೊರೆ ವಿಕ್ರಮಾರ್ಕನು ವಿಶ್ವವಂದ್ಯರ ಅನುಚರರಾದ ನಾರಾಯಣೇಂದ್ರ ಸರಸ್ವತಿಗಳಿಗೆ ವಿಕ್ರಮಾರ್ಕ ಶಕ ೯೬೧ (ಕ್ರಿ. ಶ. ೯೦೪), ಕ್ರೋಧನ ಸಂವತ್ಸರದ ಚೈತ್ರ ಶುಕ್ಲ ಅಷ್ಟಮಿಯಂದು ನೀಡಿದ ತಾಮ್ರಶಾಸನವು ಸ್ವರ್ಣವಲ್ಲೀ ಮಠದ ಆಕರ ಸಾಮಗ್ರಿಗಳಲ್ಲಿಯೇ ಅತ್ಯಂತ ಪುರಾತನವಾದುದು. ಸಂಸ್ಕೃತ ಭಾಷೆಯ, ದೇವನಾಗರಿ ಲಿಪಿಯ ಈ ತಾಮ್ರಶಾಸನದ ಹಸ್ತಪ್ರತಿಯೂ ಶ್ರೀಮಠದ ಪತ್ರಾಗಾರದಲ್ಲಿ ಲಭಿಸಿದೆ.[೧೩] "ಶ್ರೀ ನಾರಾಯಣೇಂದ್ರ ಸರಸ್ವತಿಗಳಿಗೆ ಸಾಮಂತ ರಾಜರೆಲ್ಲ ಕಾಣಿಕೆ

ಸಲ್ಲಿಸತಕ್ಕದ್ದು. ಕಾಳಿಕಾ ದೇವಾಲಯದ ಬಳಿಯಲ್ಲಿರುವ ಈ ಮಠದ ಪ್ರದೇಶಕ್ಕೆ ಮೇಧಾಪುರವೆಂದು ಹೆಸರು. ಇಂಥ ಮಹಾತ್ಮರಿಗೆ ಅವಕಾಶ ಕೊಡದಿದ್ದರೆ ತನಗೆ ನರಕ ಪ್ರಾಪ್ತಿಯಾಗುವುದು ಖಂಡಿತ. ಆದುದರಿಂದ ಇವರನ್ನು ಕರೆಸಬೇಕು. ಕಿರೀಟ, ಶ್ವೇತಛತ್ರ, ಮೇಸೆ. ತಿರ್ಯಗಾಂದೋಲಿಕ. ಉಭಯ ಚಾಮರ. ಮಕರತೋರಣ. ವ್ಯಾಖ್ಯಾನ ಸಿಂಹಾಸನ, ಹಗಲು ದೀವಟಿಗೆಗಳು, ಸಿಂಹದ ಮುಖ, ಸೂರ್ಯಚಂದ್ರ ಚಿತ್ರಿತ ಪತಾಕಾದಿ ಚಿಹ್ನೆಗಳು. ತಾಳ, ಶಂಖ, ಚಕ್ರಾದಿ ವಾದ್ಯ ವಿಶೇಷಗಳು. ಸಕಲ ಬಿರುದಾವಳಿಗಳನ್ನೂ ಕೊಡುವುದೆಂತ ತಾಮ್ರಶಾಸನ ಕೊಟ್ಟಿದ್ದೇನೆ. ಅಂತೆಯೇ ರಾಜಸಭೆಯಲ್ಲಿ ಘೋಷಿಸಿದ್ದೇನೆ. ಈ ಎಲ್ಲ ಬಗೆಯ ಸೌಕರ್ಯಗಳನ್ನು ಹೊಂದಿ, ಬಿರುದಾವಳಿಗಳೊಂದಿಗೆ ಶ್ರೀಗಳವರು ಧರ್ಮಮಾರ್ಗವನ್ನುಪದೇಶಿಸುತ್ತ ಮನ ಒಪ್ಪಿದ ಕಡೆ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಬಹುದು. ಈ ಶಾಸನವನ್ನು ನನ್ನ ವಂಶದವರೆಲ್ಲರೂ ಗೌರವಿಸಬೇಕು. ಯಾರು ಇದಕ್ಕೆ ವಿಘ್ನ ಮಾಡುತ್ತಾರೋ ಅವರ ಆಸ್ತಿಗಳನ್ನು ಮುಟ್ಟುಗೋಲು ಹಾಕತಕ್ಕದ್ದು. ದೇವತೆಗಳು, ಹಗಲು-ರಾತ್ರಿಗಳೇ ಇದಕ್ಕೆ ಸಾಕ್ಷಿ. ಇದು ತಾಮ್ರಶಾಸನ,"[೧೫] ಎಂಬುದೇ ಈ ಧರ್ಮಶಾಸನದ ಪಾಠ.

## ಗೋಕರ್ಣ, ಕಡತೋಕೆ ಮತ್ತು ಸಹಸ್ರಲಿಂಗಗಳಲ್ಲಿ ಶ್ರೀಮಠ :

ಗುರುಪರಂಪರೆಯಲ್ಲಿ ೧೯ ನೆಯವರಾದ ವಿಶ್ವನಾಥೇಂದ್ರ ಸರಸ್ವತಿಗಳು[೧೬] ಗಂಗಾಧರೇಂದ್ರ ಸರಸ್ವತಿಗಳನ್ನು ಶಿಷ್ಯರನ್ನಾಗಿ ಮಾಡಿಕೊಂಡು, ಗೋಕರ್ಣ ಯಾತ್ರಾಪೇಕ್ಷಿಗಳಾಗಿ. ರಾಜದತ್ತ ಸಮಸ್ತ ಬಿರುದುಗಳ ಸಮೇತ. ರಾಜಾನುಮತಿಯಿಂದ ಹೊರಟು, ಗೋದಾವರಿ ಮೂಲ ಸಪ್ತಶೃಂಗ ತ್ರಿಯಂಬಕ ಕ್ಷೇತ್ರಕ್ಕೆ ಬಂದರೆಂದು ದಾಖಲೆಯೊಂದರಿಂದ ತಿಳಿದುಬರುತ್ತದೆ.[೧೭] ವಿಶ್ವನಾಥೇಂದ್ರರು ಅಲ್ಲಿಯೇ ಬ್ರಹ್ಮೀಭೂತರಾದ ನಂತರ, ಪೀಠದಲ್ಲಿ ೨೦ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು[೧೮] ಗೋರಾಷ್ಟ್ರ ಬ್ರಾಹ್ಮಣರಿಂದ ಆಮಂತ್ರಣ ಪಡೆದು, ಬನವಾಸಿಪುರವನ್ನು ರಾಜಮರ್ಯಾದೆಯೊಂದಿಗೆ ಪ್ರವೇಶಿಸಿ, ಅಘನಾಶಿನೀ ನದಿಯನ್ನು ದಾಟಿ, ಗೋಕರ್ಣ ಕ್ಷೇತ್ರಕ್ಕೆ ಬಂದು. ಮಠ ಸ್ಥಾಪಿಸಿದರು. ಇದೇ ಸಮಯದಲ್ಲಿ ಶ್ರೀಗಳವರ ತಪಸ್ಸಿನಿಂದ ಪ್ರಭಾವಿತನಾದ ವಿಕ್ರಮಾರ್ಕನ ಮಗಳ ಮಗ, ಚಂದಾವರದ ಚಂದ್ರಸೇನರಸನು ನೃಸಿಂಹ, ಚಂದ್ರಮೌಳೀಶ್ವರ ಮತ್ತು ಶ್ರೀಗಳ ಸಮ್ಮುಖದಲ್ಲಿ ಶ್ರೀಮಠಕ್ಕೆ ಅಂಸಳ್ಳಿ, ಬಾದಳ್ಳಿ, ಆಗಸೆ, ಮಾಡಗೇರಿ ಈ ನಾಲ್ಕು ಗ್ರಾಮಗಳನ್ನು ಆರಾಧ್ಯ ದೇವತೆಗಳ ನಿತ್ಯ ನೈವೇದ್ಯ ಪೂಜೆಗಳಿಗಾಗಿ, ಹಿರಣ್ಯ ಸಹಿತವಾಗಿ, ಸಂಕಲ್ಪ ಮಾಡಿ. ದಾನವಾಗಿ ಕೊಟ್ಟನು. ನಾಲ್ಕು ಗ್ರಾಮಗಳ ನಾಲ್ಕು ದಿಕ್ಕಿನಲ್ಲೂ ಗಡಿಕಲ್ಲುಗಳನ್ನು ಶಿಲ್ಪಿಗಳಿಂದ ಸ್ಥಾಪಿಸಿದನು. ಇನ್ನು ಮುಂದೆ, ಸರಸ್ವತೀ, ಭಾರತೀ. ತೀರ್ಥ. ಆಶ್ರಮ. ಆನಂದ. ಪ್ರಕಾಶ. ಅರಣ್ಯ ಪದಗಳೇ ಪಟ್ಟನಾಮವಾಗಿ ಬರಬೇಕೆಂದು ಗುರ್ವಾಜ್ಞೆಯಂತೆ ಘೋಷಿಸಲ್ಪಟ್ಟು, ಸರಸ್ವತೀ ಸಂಪ್ರದಾಯ ಪ್ರವರ್ತಕ ಮಠ ಈ ರೀತಿಯಾಗಿ ಮುಂದುವರಿಯಿತು.

ಚಂದ್ರಸೇನನಿಂದ ಶ್ರೀ ಗಂಗಾಧರೇಂದ್ರ ಸರಸ್ವತಿಗಳ ಮಹಾತ್ಮ್ಯವನ್ನರಿತ ವಿಕ್ರಮಾರ್ಕನು ಸುಧಾಪುರದ ನೃಸಿಂಹ ವೀರಭೂಪಾಲನಿಗೆ[೧೯] ಪತ್ರ ಬರೆಸಿದನು. ಸಾರಾಂಶ

ಇಂತಿದೆ : "ನಿಮ್ಮ ರಾಜ್ಯದಲ್ಲಿ ಸಾಕಷ್ಟು ಹುಲ್ಲುಗಾವಲು, ತರುಲತಾದಿಗಳಿಂದ ಕಂಗೊಳಿಸುವ ತಪ್ಪಲು ಪ್ರದೇಶ. ಉತ್ತಮ ತೋಟಗಳಿಂದ ಆವೃತವಾದ, ಸದಾ ಹರಿಯುವ ನದಿಗಳಿರುವ, ಕೃಷಿಕರು ಮತ್ತು ಬ್ರಾಹ್ಮಣರಿರುವ ೩೦ ಗ್ರಾಮಗಳನ್ನು ವತ್ತಿಯಾಗಿ ಗುರು ಪಾದಾರವಿಂದದಲ್ಲಿ ನಮ್ಮ ಆದೇಶದಂತೆ ಅರ್ಪಿಸಬೇಕು. ಶ್ರೀಗಳನ್ನು ಆಶ್ರಯಿಸಿರುವ ಉಳಿದ ಯತಿಗಳಿಗೆ, ಅವರು ಅಪೇಕ್ಷಿಪಟ್ಟ ಸ್ಥಳದಲ್ಲಿ ವಸತಿಯನ್ನು ಶಿಲ್ಪಿಗಳಿಂದ ನಿರ್ಮಿಸಿಕೊಡಬೇಕು. ಅವರಿಗೆ ಇಷ್ಟವಾದ ಸ್ಥಳದಲ್ಲಿ ಅವರು ವಾಸಿಸಲಿ. ಅವರ ಉಪಹಾರಕ್ಕಾಗಿ ಆಹಾರಧಾನ್ಯ, ಪೂಜೆಗಾಗಿ ತುಪ್ಪ, ಎಣ್ಣೆ, ನೈವೇದ್ಯಕ್ಕೆ ಹಾಲು, ಬೆಲ್ಲ, ಫಲಗಳು, ಧಾನ್ಯಗಳೂ, ವಸ್ತ್ರ, ಪಾತ್ರೆಗಳೂ ಒದಗಿಸಲ್ಪಡಲಿ. ಪ್ರತ್ಯೇಕಶಃ ನೂರರಂತೆ ಗೋವುಗಳನ್ನೂ, ಧವಸ-ಧಾನ್ಯಗಳನ್ನೂ ವರ್ಷವಿಡೀ ಸಾಕಾಗುವಷ್ಟು ಕಳಿಸಬೇಕು."

ಗೋಕರ್ಣ ಮಠ ಸ್ಥಾಪಕರೂ, ಗುರು ಪರಂಪರೆಯಲ್ಲಿ ೨೦ ನೆಯವರೂ ಆದ ಶ್ರೀ ಗಂಗಾಧರೇಂದ್ರರು ಬ್ರಹ್ಮೀಭೂತರಾದ ನಂತರ, ಗೋಕರ್ಣ ಮಠಕ್ಕೆ, ಕ್ರಮವಾಗಿ, ವಿಶ್ವವಂದ್ಯ, ಗಂಗಾಧರೇಂದ್ರ, ವಿಶ್ವನಾಥ, ರಾಮಚಂದ್ರ ಮತ್ತು ೨೫ ನೆಯವರಾಗಿ ಶ್ರೀ ಮಾಧವೇಂದ್ರ ಸರಸ್ವತಿಗಳು ಗುರುಗಳಾದರು. ಸುಮಾರು ೧೨ ನೆಯ ಶತಮಾನದ ಆದಿಯಿಂದ ೧೩ ನೇ ಶತಮಾನದ ಮಧ್ಯದ ವರೆಗೆ ಗೋಕರ್ಣ ಮಠವು ಅಸ್ತಿತ್ವದಲ್ಲಿದ್ದಂತೆ ತೋರುತ್ತದೆ.

ಸುಮಾರು ೧೩ ನೇ ಶತಮಾನದ ಮಧ್ಯದಲ್ಲಿ ಕಡತೋಕೆಗೆ ಸ್ಥಳಾಂತರಗೊಂಡ ಶ್ರೀಮಠ, ೧೪ ನೇ ಶತಮಾನದ ಮಧ್ಯದ ವರೆಗೂ ಅಲ್ಲೇ ಇದ್ದಂತೆ ಕಂಡುಬರುತ್ತದೆ. ಶ್ರೀ ಮಾಧವೇಂದ್ರರ ಶಿಷ್ಯರಾದ ವಿಶ್ವವಂದ್ಯರು ಕಡತೋಕೆ ಮಠದಲ್ಲಿ ವಾಸಿಸಿದರು. ವಿಶ್ವವಂದ್ಯರ ನಂತರ ಕಡತೋಕೆಯಲ್ಲಿ ಇನ್ನಿಬ್ಬರು ಸ್ವಾಮಿಗಳಾದರೂ, ಅವರ ಹೆಸರು ಏನೆಂಬುದು ತಿಳಿದುಬರುವದಿಲ್ಲ. ಈ ಮಧ್ಯಂತರದಲ್ಲಿ ಬನವಾಸಿ ಅರಸನು[೧೯] ಶ್ರೀಗಳವರನ್ನು ಕಂಡು, ವಿಕ್ರಮಾರ್ಕನ ಆದೇಶದಂತೆ, ೧೬ ಮಠಗಳನ್ನು ೧೬ ಸೀಮೆಗಳಲ್ಲಿ ನಿರ್ಮಿಸಿ, "ನಿಮ್ಮ ಶಿಷ್ಯರ ಇರುವಿಕೆಗಾಗಿ ಸುಧಾಪುರದಲ್ಲಿ ಸಕಲ ವ್ಯವಸ್ಥೆಯೂ ಆಗಿದೆ," ಎಂದು ತಿಳಿಸಿದ್ದನು.

ಪುತ್ರ ಸಂತತಿ ಇಲ್ಲದವರು ಶ್ರೀಮಠಕ್ಕೆ ಹರಕೆ ಹೊತ್ತು ಗಂಡು ಸಂತತಿಯನ್ನು ಪಡೆದು ಕೃತಾರ್ಥರಾಗಿ ಸೇವೆ ಸಲ್ಲಿಸುತ್ತಿದ್ದ ಸಂಗತಿ ಆಗಲೇ ಪ್ರಸಿದ್ಧವಾಗಿತ್ತು. ಅಪುತ್ರಕನಾದ ಸುಧಾಪುರದ ನೃಸಿಂಹ ಭೂಪಾಲನು ಪೀಠದಲ್ಲಿ ೨೯ ನೆಯವರಾದ ವಿಶ್ವವಂದ್ಯ ಸರಸ್ವತಿಗಳಿಗೆ ತನ್ನ ಮನೋಭಿಲಾಷೆಯನ್ನು ತಿಳಿಸಿ, "ಸುಧಾಪುರದ ಸಮೀಪದಲ್ಲಿ ಶಾಲ್ಮಲಾ ನದಿಯ ದಡದಲ್ಲಿ ಸಹಸ್ರಲಿಂಗವೆಂಬ ಪುಣ್ಯಸ್ಥಳವಿದೆ. ಅಲ್ಲಿ ಮಠವನ್ನು ತಮ್ಮ ವಾಸಕ್ಕೋಸ್ಕರ ಸಿದ್ಧಮಾಡಲಾಗಿದೆ. ಅಪೇಕ್ಷೆಯನ್ನು ಅನುಗ್ರಹಿಸಬೇಕು," ಎಂದು ಪ್ರಾರ್ಥಿಸಿಕೊಂಡನು. ಶ್ರೀಗಳು ತಮ್ಮ ಪರಿವಾರ ಸಮೇತ ಕಡತೋಕೆಯಿಂದ ಸಹಸ್ರಲಿಂಗದ ಕಡೆಗೆ ಪ್ರಯಾಣಿಸಿದರು. ದಾರಿಯಲ್ಲಿ ಆನೆಗುಂದಿಯ ಅರಸನು ಶ್ರೀಗಳ ದರ್ಶನ ಪಡೆದು ಎರಡು ಗ್ರಾಮಗಳನ್ನು ಅರ್ಪಿಸಿದನು. ವಿಶ್ವವಂದ್ಯರು ಸಹ್ಯಾದ್ರಿಯ ಸೌಂದರ್ಯವನ್ನು ನೋಡುತ್ತ ಮಹಾವಿಷ್ಣುವಿನ ವಾಸವಾದ

ಮಂಜುಗುಣಿ[೨೦] ಕ್ಷೇತ್ರಕ್ಕೆ ದಯಮಾಡಿಸಿದರು. ಚಂದಾವರದ ಚಂದ್ರಸೇನ, ಸುಧಾಪುರದ ನೃಸಿಂಹ ಭೂಪಾಲ ಮತ್ತು ಬನವಾಸಿಯ ಭೂಪಾಲ ಕೂಡ ಅಲ್ಲೇ ತಂಗಿದರು. ಸ್ವರ್ಣವಲ್ಲೀ ಮಠದ ಚಾರಿತ್ರಿಕ ದಾಖಲೆಯೂ, ವಿಶ್ವವಂದ್ಯ ಸರಸ್ವತಿಗಳು ಶಾಲ್ಮಲಾ ತೀರದ ಸಹಸ್ರಲಿಂಗಕ್ಕೆ ಬಂದು, ತಮ್ಮ ಶಿಷ್ಯರಿಗೂ ಮಠ ನಿರ್ಮಾಣ ಮಾಡಿಸಿ ವಿಶ್ವನಾಥ ಸರಸ್ವತಿಗಳನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರೆಂದು, 'ಜ್ಞಾನದೀಪಿಕಾ' ದಲ್ಲಿ ವರ್ಣಿಸಲಾದ ವಿಷಯವನ್ನೇ ಪುಷ್ಟೀಕರಿಸುತ್ತದೆ. ದಾಖಲೆಯ ಪಾಠ ಇಂತಿದೆ : "....ಪುನಹಾ ವಿಶ್ವವಂದ್ಯ ಸರಸ್ವತಿಯವರ್ರು ಯಿವರ್ರಿಗೆ ಗೊರಾಷ್ಟ್ರಾಧಿಪತ್ತಿ ಅರಸು ಹೊಗಿ– ಮಹಾರಾಜಾಜ್ಞೆಯಿಂದಾ ತ್ತಮಗೆ ಶಾಲ್ಮಲ್ಲಾ ತಿರ ಸಹಸ್ರಲಿಂಗ ಸ್ಥಳದಲ್ಲಿ ಪ್ರಧಾನ ಸಂಸ್ಥಾನ–ಮತ್ತು ತ್ತಂಮ ಹೊಂದಿದ ಚಿಲ್ರಿ ಶಿಷ್ಯರ್ರುಗಳಿಗೆ ಪ್ರತ್ಯೇಕ ಮಠಗಳ ನಿರ್ಮಾಣ ಮಾಡಿಶಿ–ಗ್ರಾಮಗಳ ಬಿಟ್ಟುಕೊಟ್ಟು–ಮತ್ತಿನೆ ದಯಮಾಡಿ ಬಂದು ವಾಸಮಾಡಬೆಕೆಂತ್ತಾ. ಹೆಳಿಕೊಂಡ ನಂತ್ರಾ–ಯಿ ವಿಶ್ವವಂದ್ಯ ಸರಸ್ವತ್ತಿಗಳು ಕಡತೊಕೆ ಮಠದಿಂದಾ ಹೊರಟು ಬಂದು ಆ ಸಹಸ್ರಲ್ಲಿಂಗ ಮಠದಲ್ಲಿ ಶ್ರೀ ಲಕ್ಷ್ಮೀನರಸಿಂಹ ಚಂದ್ರಮೌಳಿಶ್ವರ ಶಾರದಾ ಅಂಮನವರ್ರು ಮುಂತ್ತಾದ ದೇವರ ಆರಾಧಿಸುತ್ತಾ–ಚಿಲ್ರಿ ಶೆರ್ರಿದ ಶಿಷ್ಯರ್ರಿಗೆ ಆಯಾಯ ಕಾಲ್ಲ ಮಠದಲ್ಲಿ ಯಿಟ್ಟು ಅನುಗ್ರಹಿಸುತ್ತಾ ವಾಸಮಾಡಿದರ್ರು–ಯಿವರ ಶಿಷ್ಯರು ವಿಶ್ವನಾಥ ಸರಸ್ವತಿಗಳು...."[೨೧]

ಪೀಠದಲ್ಲಿ ೩೦ ನೆಯವರಾದ ವಿಶ್ವನಾಥ ಸರಸ್ವತಿಗಳ ಕಾಲದಲ್ಲಿ, ಒಮ್ಮೆಂದೊಮ್ಮೆಲೇ ಕಳ್ಳರು ಶ್ರೀಮಠದ ಮೇಲೆ ದಾಳಿ ಮಾಡಿ ಸರ್ವಸ್ವವನ್ನೂ ದೋಚಿಕೊಂಡು ಹೋದರು. ವಿಷಯ ತಿಳಿದ ಅರಸನು, "ಗುರುಗಳೇ, ಆಳರಸರೇ ಈ ತಪ್ಪಿಗೆ ಕಾರಣರು. ನಮ್ಮ ಅಲಕ್ಷ್ಯದಿಂದಾಗಿ ಹೀಗಾದುದೆಂದು ತಪ್ಪನ್ನು ಒಪ್ಪಿದ್ದೇನೆ. ಇನ್ನುಮೇಲೆ ಹೀಗಾಗದಂತೆ ೨೦೦ ರಕ್ಷಕ ಭಟರನ್ನು ೪ ದ್ವಾರಗಳಲ್ಲೂ ಎಚ್ಚರದಿಂದ ಕಾಯುವಂತೆ ನಿಯಮಿಸಿದ್ದೇನೆ. ಇನ್ನುಳಿದ ೧೫ ಮಠಗಳಲ್ಲಿ ಪ್ರತಿ ಮಠದಲ್ಲೂ ೧೦೦ ರಕ್ಷಕ ಭಟರನ್ನು ನಿಯಮಿಸಿದ್ದೇನೆ. ತಮ್ಮ ಅನುಷ್ಠಾನಗಳಿಗೆ ಇನ್ನು ಭಯವಿಲ್ಲ." ಎಂದು ಭರವಸೆಯಿತ್ತನು.

ವಿಶ್ವನಾಥ ಸರಸ್ವತಿಗಳ ನಂತರ ಸಹಸ್ರಲಿಂಗ ಮಠದಲ್ಲಿ ಪೀಠವನ್ನೇರಿದವರು. ಕ್ರಮವಾಗಿ, ಪ್ರಕಾಶೇಂದ್ರ, ಪ್ರತ್ಯಗ್ಬ್ರಹ್ಮೇಂದ್ರ, ಸರ್ವಜ್ಞೇಂದ್ರ ಮತ್ತು ಗುರುಪರಂಪರೆಯಲ್ಲಿ ೩೩ ನೆಯವರಾದ ಚಂದ್ರಶೇಖರ ಸರಸ್ವತೀ.

ಶ್ರೀಮಠವು ಉಜ್ಜಯಿನಿಯಿಂದ ಗೋಕರ್ಣಕ್ಕೆ, ಗೋಕರ್ಣದಿಂದ ಕಡತೋಕೆಗೆ ಮತ್ತು ಕಡತೋಕೆಯಿಂದ ಸಹಸ್ರಲಿಂಗಕ್ಕೆ ಎಂದು ಸ್ಥಳಾಂತರಗೊಂಡಿತೆಂದು ಹೇಳಲಿಕ್ಕಾಗಲೀ ಅಥವಾ ಈ ಸ್ಥಳಗಳಲ್ಲಿ ವಿರಾಜಿಸಿದ ಗುರುಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳಲಿಕ್ಕಾಗಲೀ ಸಾಧ್ಯವಿಲ್ಲ. ಆದರೂ, ಪೂರ್ವೋಲ್ಲೇಖಿತ ಉಜ್ಜಯಿನಿ ವಿಕ್ರಮಾರ್ಕನ ಕ್ರಿ. ಶ. ೯೦೫ ರ ಶಾಸನ, ಮುಂದೆ ಉಲ್ಲೇಖಿಸುವ ಸೋದೆಯ ಇಮ್ಮಡಿ ಅರಸಪ್ಪ ನಾಯಕನ ಕ್ರಿ. ಶ. ೧೫೫೭ ರ ಶಾಸನ ಮತ್ತು ಮಧ್ಯಂತರದ ಅನೇಕ ಐತಿಹಾಸಿಕ ಘಟನೆಗಳನ್ನು ಜ್ಞಾಪಿಸಿಕೊಂಡಲ್ಲಿ, ಈ ಮೂರು ಸ್ಥಳಗಳಲ್ಲಿ ಶ್ರೀಮಠವಿದ್ದ ಕಾಲವನ್ನು

ಊಹಿಸಬಹುದು. ಹತ್ತನೆಯ ಶತಮಾನದ ಆದಿಯಿಂದ ಹನ್ನೆರಡನೆಯ ಶತಮಾನದ ಆದಿಯವರೆಗೆ ಉಜ್ಜಯಿನಿ, ಹನ್ನೆರಡನೆಯ ಶತಮಾನದ ಆದಿಯಿಂದ ಹದಿಮೂರನೆಯ ಶತಮಾನದ ಮಧ್ಯಭಾಗದವರೆಗೆ ಗೋಕರ್ಣ, ಹದಿಮೂರನೆಯ ಶತಮಾನದ ಮಧ್ಯದಿಂದ ಹದಿನಾಲ್ಕನೆಯ ಶತಮಾನದ ಮಧ್ಯದವರೆಗೆ ಕಡತೋಕೆ ಮತ್ತು ಹದಿನಾಲ್ಕನೆಯ ಶತಮಾನದ ಮಧ್ಯದಿಂದ ಕ್ರಿ. ಶ. ೧೫೫೬ ರ ವರೆಗೆ ಸಹಸ್ರಲಿಂಗ, ಈ ಸ್ಥಳಗಳಲ್ಲಿ ಶ್ರೀಮಠವು ಅಸ್ತಿತ್ವದಲ್ಲಿತ್ತೆಂದು ಸಾಮಾನ್ಯವಾಗಿ ಊಹಿಸಬಹುದು.[೨೨]

## ವಿಜಯನಗರ ಮತ್ತು ಸ್ವಾದಿ ಅರಸರ ಕಾಲ :

ಹೊಯ್ಸಳರ ಉತ್ತರಾಧಿಕಾರಿಗಳಾಗಿ ಕರ್ನಾಟಕದಲ್ಲಿ ಆಡಳಿತ ಸೂತ್ರ ಹಿಡಿದವರು ವಿಜಯನಗರದ ಸಮ್ರಾಟರು. ಕ್ರಿ. ಶ. ೧೩೩೬ ರಲ್ಲಿ ಆದ ವಿಜಯನಗರದ ಸ್ಥಾಪನೆ, ಕೇವಲ ಕರ್ನಾಟಕದ ಇತಿಹಾಸದಲ್ಲಷ್ಟೇ ಅಲ್ಲ, ಭಾರತದ ಚರಿತ್ರೆಯಲ್ಲಿಯೇ ಒಂದು ಅವಿಸ್ಮರಣೀಯ ಘಟನೆಯಾಗಿದೆ. ಕ್ರಿ. ಶ. ೧೫೬೫ ರಲ್ಲಿ ಜರುಗಿದ ತಾಳಿಕೋಟೆ (ರಕ್ಕಸತಂಗಡಿ)ಯ ಕದನದಿಂದಾಗಿ ಸಾಮ್ರಾಜ್ಯವು ಕುಸಿಯಿತಾದರೂ, ಮುಂದೆ ಒಂದು ಶತಮಾನ ಹಾಗೂ ಹೀಗೂ ಉಳಿದುಕೊಂಡಿದ್ದು ಐತಿಹಾಸಿಕ ಸತ್ಯ. ದಕ್ಷಿಣ ಭಾರತದ ಬಹುಭಾಗವೇ ವಿಜಯನಗರ ಸಾಮ್ರಾಜ್ಯದ ಛತ್ರದಡಿಯಲ್ಲಿದ್ದಾಗ, ಉತ್ತರಕನ್ನಡ ಜಿಲ್ಲೆಯೂ ಆ ಸಾಮ್ರಾಜ್ಯದ ಆಧೀನದಲ್ಲಿತ್ತೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಕ್ರಿ. ಶ. ೧೩೪೭ ರಲ್ಲಿ ಹರಿಹರ ಚಕ್ರವರ್ತಿಯ ಸಹೋದರ ಮಾರಪ್ಪನು ಉತ್ತರಕನ್ನಡದ ಮೇಲೆ ದಾಳಿಯಿಟ್ಟು ಚಂದಾವರದ ಕದಂಬರನ್ನು ಸೋಲಿಸಿ ಬನವಾಸಿ ೧೨,೦೦೦ ಪ್ರದೇಶವನ್ನು ಆಳುತ್ತಿದ್ದನೆಂದು ಶಾಸನದಿಂದ ತಿಳಿದುಬರುತ್ತದೆ.[೨೩] ಮೊದಲನೆಯ ಬುಕ್ಕನ ಸಾಮಂತನಾದ ಮಾಧವಾಂಕನು ಬನವಾಸಿ ೧೨,೦೦೦ ದ ಆಡಳಿತ ನಡೆಸುತ್ತಿದ್ದನೆಂದು, ಮಧುಕೇಶ್ವರ ದೇವಾಲಯದ ಹೊರ ಆವರಣದಲ್ಲಿರುವ ತಿರುಮಲ ದೇವಸ್ಥಾನದಲ್ಲಿಯ ಕಂಬದ ಮೇಲಿನ, ಮೊದಲನೆಯ ಬುಕ್ಕನ ಕ್ರಿ. ಶ. ೧೩೬೮ ರ ಶಾಸನದಿಂದ ತಿಳಿದುಬರುತ್ತದೆ.[೨೪]

ಸ್ವರ್ಣವಲ್ಲೀ ಮಹಾಸಂಸ್ಥಾನದ ಪ್ರದೇಶವು, ಹಿಂದೊಮ್ಮೆ, ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿತ್ತೆಂಬುದು ಐತಿಹಾಸಿಕ ಸತ್ಯ. ವಿಜಯನಗರಕ್ಕೆ ಸಂಬಂಧಿಸಿದ ಕೆಲವೇ ಚಾರಿತ್ರಿಕ ದಾಖಲೆಗಳು[೨೫] ಸ್ವರ್ಣವಲ್ಲೀ ಮಠದಲ್ಲಿ ಲಭ್ಯವಾಗಿವೆ. ಈ ದಾಖಲೆಗಳು ಮುಖ್ಯವಾಗಿ, ವೀರಬುಕ್ಕರಾಯ ಮಹಾರಾಯ, ವೀರಪ್ರತಾಪ ಕೃಷ್ಣರಾಯ ಮಹಾರಾಯ ಮತ್ತು ವೀರಪ್ರತಾಪ ಸದಾಶಿವ ಮಹಾರಾಯರ ಕಾಲಗಳಿಗೆ ಸೇರಿದವುಗಳು. ಇವೆಲ್ಲ ಭೂದಾನಕ್ಕೆ ಸಂಬಂಧಿಸಿದ ಶಿಲಾಶಾಸನದ ಪ್ರತಿಗಳಾಗಿವೆ.[೨೬] ಉದಾಹರಣೆಗಾಗಿ, ಶ್ರೀಕೃಷ್ಣರಾಯ ಮಹಾರಾಯರು ವಿಜಯನಗರ ಸಾಮ್ರಾಜ್ಯವನ್ನು ಆಳುತ್ತಿದ್ದ ಕಾಲದಲ್ಲಿ, ಮಾದನ ರಾಯಪ್ಪ ಒಡೆಯರ ಕುಮಾರ, ಚಿಕ್ಕಯಲ್ಲಪ್ಪ ನಾಯಕರ ನಿರೂಪದಿಂದಲು, ಪ್ರಧಾನ ಹೊನ್ನರಸಯ್ಯಗಳು ಕೋಟೆಮನೆ ಶಂಕರ ಸರಸ್ವತೀ ಒಡೆಯರ ಮಠಕ್ಕೆ,[೨೭] ನರಸಿಂಹ ದೇವರ ಅಮೃತಪಡಿಗೆಂದು ಕ್ರಿ. ಶ. ೧೫೧೭ ರಲ್ಲಿ ಭೂದಾನ ಪಟ್ಟೆಯನ್ನು ಬರೆಸಿಕೊಟ್ಟರು.[೨೮]

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಶ್ರೀಮಠವು ಸಹಸ್ರಲಿಂಗದಲ್ಲಿ ಅಸ್ತಿತ್ವದಲ್ಲಿತ್ತೆಂಬುದನ್ನು ಗಮನದಲ್ಲಿಡಬೇಕು. ಈ ಅವಧಿಯಲ್ಲಿ, ಗುರುಪರಂಪರೆಯಲ್ಲಿ ಕ್ರಮವಾಗಿ. ವಿಶ್ವವಂದ್ಯ, ವಿಶ್ವನಾಥ, ಪ್ರಕಾಶೇಂದ್ರ, ಪ್ರತ್ಯಗ್ಬ್ರಹ್ಮೇಂದ್ರ ಮತ್ತು ಸರ್ವಜ್ಞೇಂದ್ರ ಸರಸ್ವತಿಗಳು ಪೀಠದಲ್ಲಿದ್ದರೆಂಬುದನ್ನು ಮೊದಲೇ ಅರಿತಾಗಿದೆ. ಪರಂಪರೆಯಲ್ಲಿ ೩೪ ನೆಯವರಾದ ಚಂದ್ರಶೇಖರ ಸರಸ್ವತಿಗಳ ಕಾಲದಲ್ಲಿ (ಸು. ಕ್ರಿ. ಶ. ೧೫೫೬-೧೫೯೭) ಶ್ರೀಮಠ ಸ್ವರ್ಣವಲ್ಲಿಗೆ ಸ್ಥಳಾಂತರಗೊಂಡಿತು. ಅಂದಿನ ವಿಜಯನಗರ ಸಮ್ರಾಟ, ತುಳುವ ಮನೆತನದ ಸದಾಶಿವರಾಯ.

## ಸ್ವರ್ಣವಲ್ಲೀ ಮಠದೊಂದಿಗೆ ಸ್ವಾದಿ ಮತ್ತು ಕೆಳದಿ ಅರಸರು ಇರಿಸಿಕೊಂಡ ಸಂಬಂಧ :

ಸ್ವಾದಿ[೨೯]ಯನ್ನು ಪೂರ್ವದಲ್ಲಿ, ಸುಧಾಪುರ (ಅಮೃತಪುರ), ಸೋವದೆ, ಸೋದೆ, ಸೋಮದಾಪುರ, ಸೋಂದಾ ಎಂಬೆಲ್ಲ ಹೆಸರುಗಳಿಂದ ಉಲ್ಲೇಖಿಸಲಾಗಿದೆ. ಸೋಂದಾ ಕೆರೆ, ಶಾಲ್ಮಲಾ ನದಿ, ದೇವಾಲಯಗಳು, ಧರ್ಮ ಸಮನ್ವಯತೆಯ ಸಂಕೇತವಾಗಿದ್ದ ವಿವಿಧ ಮತ-ಧರ್ಮಗಳು ಮತ್ತು ಪ್ರಕೃತಿ ಸೌಂದರ್ಯ, ಇವೆಲ್ಲವುಗಳಿಂದಾಗಿ ಈ ಸ್ಥಳ ಹೆಸರಿಗೆ ತಕ್ಕಂತೆ ಸುಧಾಪುರವೇ ಆಗಿತ್ತು.

ಸ್ವಾದಿ ರಾಜ್ಯದ ಉಚ್ಛ್ರಾಯ ಕಾಲ ಹದಿನಾರನೆಯ ಶತಮಾನದ ಮಧ್ಯದಿಂದ ಹದಿನೆಂಟನೆಯ ಶತಮಾನದವರೆಗಿದ್ದರೂ. ಆ ರಾಜ್ಯಕ್ಕೆ ಎಂಟನೆಯ ಶತಮಾನದಿಂದಲೇ ಪೂರ್ವ ಚರಿತ್ರೆ ಉಂಟೆಂಬುದಕ್ಕೆ ಸಾಹಿತ್ಯಕ ಕೃತಿಗಳು ಮತ್ತು ಶಾಸನಗಳೇ ಆಧಾರ. ವಿಜಯನಗರ ಸ್ಥಾಪಿತವಾದ (ಕ್ರಿ. ಶ. ೧೩೩೬) ಪ್ರಾರಂಭಿಕ ವರ್ಷಗಳಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿಯ ಪಾಳೆಯಗಾರರು ವಿಜಯನಗರದ ಅರಸೊತ್ತಿಗೆಯನ್ನು ಪ್ರತಿಭಟಿಸಿದರೂ, ಕೊನೆಯಲ್ಲಿ, ಹಾಡುವಳ್ಳಿ ಸೋದೆ, ಬಿಳಗಿ, ಗೇರಸೊಪ್ಪೆ ಮುಂತಾದ ಸ್ಥಳಗಳಲ್ಲಿಯ ಪಾಳೆಯಗಾರರು ವಿಜಯನಗರದ ಸಾರ್ವಭೌಮತ್ವವನ್ನು ಒಪ್ಪಿಕೊಂಡರು. ಕೆಳದಿನೃಪರು ಸುಮಾರು ಎರಡೂವರೆ ಶತಮಾನಗಳ ಕಾಲ (ಕ್ರಿ. ಶ. ೧೪೯೯-೧೭೬೩) ಕರ್ನಾಟಕದ ಮಧ್ಯಪಶ್ಚಿಮ ಭಾಗದ ಒಡೆಯರಾಗಿದ್ದರು.

ಸಹಸ್ರಲಿಂಗದಲ್ಲಿ ಶ್ರೀಮಠ ಇದ್ದಾಗಿನಿಂದಲೇ ಸುಧಾಪುರದ ಅರಸರು ಶ್ರೀಮಠದ ಗುರುಗಳನ್ನು ಗೌರವಿಸುತ್ತಿದ್ದರೆಂಬುದನ್ನು ಮೊದಲೇ ಅರಿತಾಗಿದೆ. ಸ್ವರ್ಣವಲ್ಲಿಗೆ ಸಂಬಂಧಿಸಿದ ಸುಮಾರು ೪೫ ದಾಖಲೆಗಳು[೩೦] ಸ್ವಾದಿ ಅರಸರ ಕಾಲಕ್ಕೆ ಸೇರಿದವುಗಳು.

ತಮ್ಮ ವಂಶಸ್ಥರಿಗೆಲ್ಲ ಶಿವಸಾಯುಜ್ಯ ಮೋಕ್ಷಪದವು ಸ್ಥಿರವಾಗಬೇಕೆಂದು, ಇಮ್ಮಡಿ ಅರಸಪ್ಪ ನಾಯಕನು, ಗುರುಪರಂಪರೆಯಲ್ಲಿ ೩೪ ನೆಯವರಾದ ಶ್ರೀ ಚಂದ್ರಶೇಖರ ಸರಸ್ವತಿಗಳಿಗೆ, ಶಾ. ಶ. ೧೪೭೮ (ಕ್ರಿ. ಶ. ೧೫೫೬) ರಲ್ಲಿ, ಶಾಲ್ಮಲೀ ತೀರದ ವಿಶಾಲವಾದ ಪ್ರದೇಶದಲ್ಲಿ ಮಠ, ಚಂದ್ರಶಾಲೆ, ಶ್ರೀ ಲಕ್ಷ್ಮೀ ನರಸಿಂಹ, ಚಂದ್ರಮೌಳೀಶ್ವರ ದೇವಾಲಯ, ಶಾರದಾ, ಗಣಪತಿ, ವ್ಯಾಸಾದಿಗಳಿರುವ ಬೇರೆ ಬೇರೆ

ಗುಡಿಗಳನ್ನು ಕಟ್ಟಿಸಿ, "ಶ್ರೀ ಸ್ವರ್ಣವಲ್ಲಿ ಮಠ" ಎಂದು ನಾಮಧೇಯವಿಟ್ಟು, ಪೂಜೆ, ವಿನಿಯೋಗ ನಿತ್ಯದಲ್ಲಿ ನಡೆಯಲೆಂದು, ಸೋದಾ ಗ್ರಾಮಕ್ಕೆ "ಹೊನ್ನೆಹಳ್ಳಿ ಗ್ರಾಮ" ಎಂದು ಹೆಸರಿಸಿ, ೫೭ ಗ್ರಾಮಗಳನ್ನು ಶ್ರೀಮಠಕ್ಕೆ ಉಂಬಳಿಯಾಗಿ ನೀಡಿದನೆಂದು ಶಾಸನದ ಪಾಠವು ತಿಳಿಸುತ್ತದೆ.[೩೧]

ವಿಜಯನಗರದಲ್ಲಿ ಸದಾಶಿವ ಮಹಾರಾಯರು ಆಳುತ್ತಿದ್ದ ಕಾಲದಲ್ಲಿ ಬನವಾಸಿಯ ಚೆನ್ನೈಯಣೊಡೆಯರು ಹೊನ್ನೆಹಳ್ಳಿ ಹಿರೆ ಸರ್ವಜ್ಞೇಂದ್ರ ಸರಸ್ವತಿಗಳಿಗೆ, ಮಧುಲಿಂಗದೇವರು ಪ್ರಸನ್ನವಾಗಲೆಂದು, ಬನವಾಸಿ ಕ್ಷೇತ್ರದಲ್ಲಿಯ ೧೭ ಖಂಡುಗ ಭೂಮಿಯನ್ನು ಶಾ. ಶ. ೧೪೯೧ (ಕ್ರಿ. ಶ. ೧೫೬೯) ರಲ್ಲಿ ದಾನವಾಗಿ ಬರಕೊಟ್ಟ ಪಟ್ಟೆ;[೩೨] ಚಂದಾವರದ ಹೋಬಳಿಯೊಳಗಿನ ಅಗಸೆ ಮಾಡಗೆರಿ ಗ್ರಾಮದೊಳಗಿನ ಸ್ಥಳವನ್ನು ಪ್ರಾಕು ಮರ್ಯಾದೆಗೆ ಆಗುಮಾಡಿಕೊಂಡು, ೩೪೯ ವರಹ ಮತ್ತು ೯ ಹಣಗಳನ್ನು ಕಾಲಂಪ್ರತಿ ಅರಮನೆಗೆ ಸಲ್ಲಿಸುತ್ತ, ಧರ್ಮ ನಡೆಸುವಂತೆ, ಹೊನ್ನೆಹಳ್ಳಿ ರಾಮಚಂದ್ರ ಸರಸ್ವತಿಗಳಿಗೆ ಕೆಳದಿ ವೆಂಕಟಪ್ಪನಾಯಕರು ಬರಕೊಟ್ಟ ಪಟ್ಟೆ;[೩೩] ಅಡಕಳ್ಳಿ ಮಠದ ಧರ್ಮಸ್ವಾಸ್ಥಿ ಮತ್ತು ಅದಕ್ಕೆ ಸಂಬಂಧಿಸಿದ ಕಾಲುಮಠಗಳನ್ನು, ಶಾ. ಶ. ೧೫೭೬ (ಕ್ರಿ. ಶ. ೧೬೫೪) ರಲ್ಲಿ ಸೋದೆಯ ಮಹಾಪ್ರಭು ಮಧುಲಿಂಗ ನಾಯಕರು ಹೊನ್ನೆಹಳ್ಳಿ ರಾಮಚಂದ್ರ ಸರಸ್ವತಿಗಳಿಗೆ ಪಾಲಿಸಿದ ಪಟ್ಟೆ;[೩೪] ಚಂದಾವರ ಸೀಮೆಯೊಳಗಿನ ಅಂವಸವಳಿ ಬಾದೊಳಿ ಗ್ರಾಮವನ್ನು ಶಾ. ಶ. ೧೫೮೧ (ಕ್ರಿ. ಶ. ೧೬೫೯) ರಲ್ಲಿ ಕೆಳದಿ ಸಂಸ್ಥಾನದ ಬಸಪ್ಪ ನಾಯಕರು ಸರ್ವಜ್ಞೇಂದ್ರ ಸರಸ್ವತಿಗಳಿಗೆ ಬರೆಸಿಕೊಟ್ಟ ಧರ್ಮಶಾಸನದ ಪಟ್ಟೆ;[೩೫] ಯಲ್ಲಾಪುರ ಸೀಮೆಯೊಳಗಿನ ತಟಿಗಾರು ಕೊಮಡಿ ಧರ್ಮಸ್ವದ ಸ್ವಾಸ್ಥಿಯನ್ನು ಸು. ಶಾ. ಶ. ೧೬೦೦ (ಸು. ಕ್ರಿ. ಶ. ೧೬೭೮) ರಲ್ಲಿ ಶ್ರೀ ರಾಮಚಂದ್ರ ಸರಸ್ವತಿಗಳಿಗೆ ಸೋದೆಯ ಸದಾಶಿವ ನಾಯಕರು ಪಾಲಿಸಿದ ರಾಯಸ,[೩೬] ಹೊನ್ನೆಹಳ್ಳಿಯ ಪ್ರತ್ಯಕ್‌ಬ್ರಹ್ಮೇಂದ್ರ ಸರಸ್ವತಿಗಳು ಶಾ. ಶ. ೧೬೪೮ (ಕ್ರಿ. ಶ. ೧೭೨೬) ರಲ್ಲಿ, ಭಂಡಾರದ ಭರಮಣ್ಣಗೆ ಬಿಳಿಗೆ ಸೀಮೆಯೊಳಗಿನ, ಸಂಪಗೋಡ ಗ್ರಾಮದೊಳಗಿನ ಕಂಚಿಮನೆ ಗ್ರಾಮದಲ್ಲಿಯ ಭೂಮಿಯನ್ನು ಪಾಲಿಸಿದ್ದಕ್ಕೆ ಸಂಬಂಧಿಸಿ ರಾಯಸ;[೩೭] ಇತ್ಯಾದಿ ದಾಖಲೆಗಳು ಸ್ವರ್ಣವಲ್ಲೀ ಮಠದೊಂದಿಗೆ ಸ್ವಾದಿ ಮತ್ತು ಕೆಳದಿ ನೃಪರು ಇರಿಸಿಕೊಂಡ ಸಂಬಂಧವನ್ನು ಸೂಚಿಸುತ್ತವೆ. ವಿಜಯನಗರ, ಸ್ವಾದಿ ಮತ್ತು ಕೆಳದಿ ಅರಸರ ಕಾಲದಲ್ಲಿ ಸ್ವರ್ಣವಲ್ಲೀ ಮಠಕ್ಕೆ ಸಾಕಷ್ಟು ಭೂಮಿಯು ಪ್ರಾಪ್ತವಾಗಿದ್ದರಿಂದ, ಅದೊಂದು ಮಹಾಸಂಸ್ಥಾನವಾಗಿ ರೂಪುಗೊಂಡಿತು.

ಹೆಚ್ಚಿನ ಸಿದ್ಧಿಪುರುಷರೂ, ಪದವಾಕ್ಯಪ್ರಮಾಣಜ್ಞರೂ, ತಪಃಪ್ರಭಾವವುಳ್ಳವರೂ, ಆಸೇತು ಹಿಮಾಚಲ ವ್ಯಾಪ್ತ ಕೀರ್ತಿಶಾಲಿಗಳೂ ಗುರುಪರಂಪರೆಯಲ್ಲಿ ೩೮ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು (ಸು. ಕ್ರಿ. ಶ. ೧೬೪೮ – ೧೬೫೩) ಸ್ವಾದಿಯ ಮಧುಲಿಂಗ ನಾಯಕ ಮತ್ತು ಕೆಳದಿಯ ಶಿವಪ್ಪ ನಾಯಕರ ಸಮಕಾಲೀನರಾಗಿದ್ದರು.

ಶ್ರೀ ಗಂಗಾಧರೇಂದ್ರ ಸರಸ್ವತಿಗಳ ಕಾಲದಲ್ಲಿ 'ತಾರಕಬ್ರಹ್ಮ' - 'ಪ್ರಕಾಶಬ್ರಹ್ಮ' ವಾದವು. ಗಂಗಾಧರೇಂದ್ರರಿಗೂ, ಸ್ವಪ್ರಕಾಶ ಸರಸ್ವತಿಗಳಿಗೂ ಕಾಶಿಯ ಮಹಾವಿದ್ವತ್

ಸಭೆಯಲ್ಲಿ ಉಂಟಾಯಿತು. ಅವರನ್ನು ಜಯಿಸುವ ಸಲುವಾಗಿಯೇ ಶ್ರೀ ಗಂಗಾಧರೇಂದ್ರರು 'ಸ್ವಾರಾಜ್ಯಸಿದ್ಧಿ' ಎಂಬ ಗ್ರಂಥವನ್ನು ರಚಿಸಿದರು. ಇದರಿಂದಾಗಿ, ಸ್ವಪ್ರಕಾಶಸರಸ್ವತಿಗಳು ಪರಾಜಿತರಾದರು. ಬೃಹದ್ಗಂಗಾಧರೇಂದ್ರ ಸರಸ್ವತಿಗಳೆಂದೇ ಪ್ರಸಿದ್ಧರಾದ ಇವರು ಗುರುಪರಂಪರೆಯ ಪುಣ್ಯಪ್ರದವಾದ ವಿವರಗಳನ್ನು ತಮ್ಮ ಶಿಷ್ಯ ಸರ್ವಜ್ಞೇಂದ್ರರಿಗೆ ಹೇಳಿದರೆಂದು ತಿಳಿಯುತ್ತದೆ. ಈ ಸರ್ವಜ್ಞೇಂದ್ರರು ತಮ್ಮ ಶಿಷ್ಯರಾದ ಮತ್ತು ಪರಂಪರೆಯಲ್ಲಿ ೪೦ ನೆಯವರಾದ ರಾಮಚಂದ್ರ ಸರಸ್ವತಿಗಳಿಗೆ ಮಠದ ಪೂರ್ವ ಚರಿತ್ರೆಯನ್ನೆಲ್ಲ ನಿವೇದಿಸಿದರು. ಈ ವೃತ್ತಾಂತವೇ 'ಜ್ಞಾನದೀಪಿಕಾ'. ಬೃಹದ್ಗಂಗಾಧರೇಂದ್ರರು ಜ್ಞಾನದೀಪಿಕೆಯ ಹೊರತಾಗಿ, 'ವೇದಾಂತ ಸಿದ್ಧಾಂತ ಸೂಕ್ತಿಮಂಜರಿ', 'ಸಿದ್ಧಾಂತ ಚಂದ್ರಿಕೋದ್ಧಾರ' (ರಮಾನಂದ– ಸರಸ್ವತಿಯವರ 'ಸಿದ್ಧಾಂತ ಚಂದ್ರಿಕಾ'ದ ಮೇಲಿನ ಭಾಷ್ಯ) 'ಕೈವಲ್ಯಕಲ್ಪದ್ರುಮ' ಮತ್ತು 'ಪ್ರಣವಕಲ್ಪಪ್ರಕಾಶ'. 'ಸ್ವಾರಾಜ್ಯಸಿದ್ಧಿ'ಯು ಉಪನಿಷತ್ತುಗಳ ಸಾರಾಂಶ ಮತ್ತು ಬ್ರಹ್ಮಸೂತ್ರ ಹಾಗೂ ಶಾಂಕರ ಭಾಷ್ಯದ ಸಂಕ್ಷಿಪ್ತ ಪದ್ಯಮಯ ವಿವರಣೆಯಾಗಿದೆ.

ಶಾ. ಶ. ೧೫೭೪ (೧೫೭೩), ಖರ ಸಂವತ್ಸರದ ಆಶ್ವಿಜ ಶು. ೭ (೧೧-೯-೧೬೫೧) ಗುರುವಾರದಂದು ಕೋಣೆಸರುಹಿನ ಗಂಗೆ ತಿಮ್ಮಪ್ಪ ಸಂಕಪ್ಪನವರು, ತಾವು ಮೂಲವಾಗಿ ಆಳುತ್ತಲಿದ್ದ ಹೊನ್ನೆಹಳ್ಳಿಯ ಗ್ರಾಮದೊಳಗಿನ ಭೂಮಿಯನ್ನು ಗಂಗಾಧರೇಂದ್ರ ಸರಸ್ವತಿಗಳು ಆರಾಧಿಸುವ ಶ್ರೀ ನರಸಿಂಹದೇವರ ಅಮೃತಪಡಿಗೆಂದು ಬರಕೊಟ್ಟ ಧರ್ಮಸಾಧನವು ಬೆಳಕಿಗೆ ಬಂದಿದೆ.[೩೮]

## ಹೈದರಲಿ ಮತ್ತು ಟೀಪು ಸುಲ್ತಾನರ ಕಾಲ :

ಅಪ್ರತಿಮ ಸಾಹಸಿಯಾದ ಹೈದರಲಿ (ಕ್ರಿ. ಶ. ೧೭೨೨–೧೭೮೨) ಕ್ರಿ. ಶ. ೧೭೬೧ ರಲ್ಲಿ ಮೈಸೂರಿನಲ್ಲಿ ತನ್ನ ಅಧಿಕಾರ ಸ್ಥಾಪಿಸಿದನು. ಬಿದನೂರು, ತುಳುನಾಡು, ಗುತ್ತಿ, ಸವಣೂರು, ಹೊನ್ನಾವರ, ಮಂಗಳೂರು ಪ್ರದೇಶಗಳನ್ನು ಹೈದರ ವಶಪಡಿಸಿಕೊಂಡನು. ಆತನ ಸೈನ್ಯ ೧೭೬೩ ರಲ್ಲಿ ಸೋದೆ ರಾಜ್ಯವನ್ನೂ ವಶಪಡಿಸಿಕೊಂಡಿತು. ಅಂದಿನ ಸೋದೆ ಅರಸು, ಮುಮ್ಮಡಿ ಸದಾಶಿವರಾಯನು ಪೋರ್ತುಗೀಜರ ಆಶ್ರಯ ಪಡೆದು, ಗೋವೆಯ ಬಾಂದೇವಾಡಿ(ಬಾಂದೋರಾ)ಯಲ್ಲಿ ನೆಲೆಸಿದನು. ಗುರುಪರಂಪರೆಯಲ್ಲಿ ೪೭ ನೆಯವರಾದ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು (ಸು. ಕ್ರಿ. ಶ. ೧೭೫೮–೧೭೭೮) ಆಗ ಪೀಠದಲ್ಲಿದ್ದರು. ಹೈದರನ ದಾಳಿಯಿಂದಾಗಿ ಸ್ವರ್ಣವಲ್ಲೀ ಸಂಸ್ಥಾನದ ಸೀಮೆಗಳಲ್ಲಿಯ ಕೃಷಿಕರ ಆಸ್ತಿಪಾಸ್ತಿಗಳಿಗೆ ಧಕ್ಕೆಯುಂಟಾಗಿದ್ದನ್ನು ಟೀಪುನ ಕಾಲದ ಚಾರಿತ್ರಿಕ ದಾಖಲೆಗಳಿಂದ ಅರಿಯಬಹುದಾಗಿದೆ. ಇದೇ ಸಮಯದಲ್ಲಿ ಮರಾಠಾ ಪೇಶ್ವೆ ಬಾಳಾಜಿ ಬಾಜಿರಾಯ(ಕ್ರಿ. ಶ. ೧೭೪೦–೧೭೬೧)ನ ದಂಡೂ ಈ ಪ್ರದೇಶವನ್ನು ಕೊಳ್ಳೆಹೊಡೆಯಿತೆಂದು ಮಂಜುಗುಣಿ ದಾಖಲೆ (ನಂ. ೩)ಯೊಂದರಿಂದ ತಿಳಿದುಬರುತ್ತದೆ. ಆದರೆ ಪ್ರತ್ಯಕ್ಷವಾಗಿ ಸ್ವರ್ಣವಲ್ಲೀ ಮಠಕ್ಕೆ ಹಾನಿಯುಂಟಾದ ಬಗ್ಗೆ ಪುರಾವೆಗಳಿಲ್ಲ. ಹೈದರಲಿಯು ಶೃಂಗೇರಿ ಜಗದ್ಗುರುಗಳಾದ ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತೀ, ಸಪ್ತಮ ಶ್ರೀ ನರಸಿಂಹ ಭಾರತೀ ಮತ್ತು

ತೃತೀಯ ಸಚ್ಚಿದಾನಂದ ಭಾರತಿಗಳನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದನೆಂದು ಶೃಂಗೇರಿ ಮಠದ ಚಾರಿತ್ರಿಕ ದಾಖಲೆಗಳು ಖಚಿತಪಡಿಸುತ್ತವೆ.[39] ಗೆದ್ದ ಸ್ಥಳಗಳಲ್ಲೆಲ್ಲ ಧರ್ಮವನ್ನು ಕಾಪಾಡಿಕೊಂಡು ಬರುವಂತೆ ತೃತೀಯ ಶ್ರೀ ಸಚ್ಚಿದಾನಂದ ಭಾರತಿಗಳು ಹೈದರಲಿಗೆ ಕಳುಹಿದ ಆಶೀರ್ವಾದ ಪತ್ರಿಕೆಯು ಶೃಂಗೇರಿ ಮಠದ ಕಡತದಲ್ಲಿ ಲಭ್ಯವಾಗಿದೆ.[40] ಈ ಹಿನ್ನೆಲೆ ಮತ್ತು ಟೀಪು ಸುಲ್ತಾನನ ಕಾಲದ ಸ್ವರ್ಣವಲ್ಲೀ ಮಠದ ದಾಖಲೆಗಳನ್ನು ಪರಿಶೀಲಿಸಿದಾಗ, ಹೈದರಲಿಯು, ಬಹುಶಃ ಸ್ವರ್ಣವಲ್ಲೀ ಮಠದ ಗುರುಗಳನ್ನೂ ಗೌರವಿಸುತ್ತಿದ್ದನೆಂದು ಕಂಡುಬರುತ್ತದೆ. ಎರಡನೆಯ ಆ್ಯಂಗ್ಲೋ-ಮೈಸೂರು ಯುದ್ಧ ನಡೆಯುತ್ತಿದ್ದಾಗ, ೧೭೮೨ ರಲ್ಲಿ ಕ್ಯಾನ್ಸರ ರೋಗಕ್ಕೆ ಬಲಿಯಾಗಿ ಹೈದರ ಮಡಿದ ನಂತರ, ಆತನ ಮಗ ಟೀಪುಸುಲ್ತಾನ (೧೭೮೨–೯೯), ಪರಿಸ್ಥಿತಿಯ ಅರಿವು ಮಾಡಿಕೊಂಡು ಆಂಗ್ಲರೊಂದಿಗೆ ಒಪ್ಪಂದ ಮಾಡಿಕೊಂಡನು.

ಉತ್ತರಕನ್ನಡ, ದಕ್ಷಿಣಕನ್ನಡ ಮತ್ತು ಮಲಬಾರ ಪ್ರದೇಶಗಳಲ್ಲಿ ಟೀಪು ತನ್ನ ಆಡಳಿತ ಮುಂದುವರೆಸಿದನು. ಟೀಪುನ ಕಾಲದ ಒಟ್ಟು ೮ ದಾಖಲೆಗಳು[41] ಸ್ವರ್ಣವಲ್ಲೀ ಮಠದಲ್ಲಿ ಲಭಿಸಿವೆ. ಸ್ವರ್ಣವಲ್ಲೀ ಸಂಸ್ಥಾನದ ಸಂರಕ್ಷಣೆಗಾಗಿ ಟೀಪುನ ಸರಕಾರವು ಸ್ವರ್ಣವಲ್ಲೀ ಮಠಕ್ಕೆ ಶಿರಸಿ ಮತ್ತು ಯಲ್ಲಾಪುರಗಳಲ್ಲಿರುವ ಒಟ್ಟೂ ೧೦೮ (೭೫+೩೩) ಗ್ರಾಮಗಳನ್ನು (ಪೂರ್ವದಿಂದಲೂ ಮಾನ್ಯವಾಗಿ ಬಂದ) ಇನಾಮು ಗ್ರಾಮಗಳನ್ನಾಗಿ ಬಿಟ್ಟಿತೆಂಬುದು ಇಂಗ್ಲಿಷ್‌ನಲ್ಲಿರುವ ಎರಡು (ಮೇಲ್ಕಾಣಿಸಿದ ೮ ದಾಖಲೆಗಳ ಹೊರತಾಗಿ) ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಸ್ವರ್ಣವಲ್ಲೀ ಮಠದೊಂದಿಗೆ ಟೀಪು ಇರಿಸಿಕೊಂಡ ನೇರ ಸಂಬಂಧ ಕುರಿತು ದಾಖಲೆಗಳಲ್ಲಿ ಪ್ರಸ್ತಾಪವಿರದಿದ್ದರೂ, ಸ್ವಾದಿ ರಾಜ್ಯದಲ್ಲಿ ಟೀಪುನ ಆಡಳಿತ ವ್ಯವಸ್ಥೆ ಮತ್ತು ಸ್ವರ್ಣವಲ್ಲೀ ಸಂಸ್ಥಾನದ ಸೀಮೆಗಳಲ್ಲಿಯ ಆಗುಹೋಗುಗಳನ್ನು ಕುರಿತು ಮಾಹಿತಿ ದೊರೆಯುತ್ತದೆ. ಪರಂಪರೆಯಲ್ಲಿ ೪೮ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು (ಸು. ಕ್ರಿ. ಶ. ೧೭೭೮ – ೧೮೧೬) ಟೀಪೂನ ಸಮಕಾಲೀನರು.

ಸೋಂದೆ ಇಮ್ಮಡಿ ಸದಾಶಿವರಾಜರು ಬರೆಸಿಕೊಟ್ಟ ತಾಮ್ರಶಾಸನವು ದಂಡಿನ ಆವಾಂತ್ರದೊಳಗೆ ಹೋಯಿತು. ಎಂಬುದನ್ನು ಪ್ರಸ್ತಾಪಿಸಿ, ಕಂಪ್ಲಿ ವೆಂಕಪ್ಪ ಹೆಗಡೆ, ಹಾಸಣಗೆ ರಾಮಚಂದ್ರ ಹೆಗಡೆ ಮುಂತಾದವರು ಸೋಂದೆ ತಾಲೂಕಿನ ಆಮಿಲ್, ಇಸ್ಮಾಯಿಲ್ ಖಾನ್ ಖುರೋಶಿ ಶಿರಸ್ತೆದಾರರಿಗೆ ಬರೆಸಿಕೊಟ್ಟ ಭೋಗವಟೆ ಪತ್ರ;[42] ಹೊನ್ನೆಹಳ್ಳಿ ಮಠದ ಮುಸಕಿ ಗ್ರಾಮದಿಂದ ಸರಕಾರಕ್ಕೆ ಸಲ್ಲುವ ಸಿಸ್ತಿನ ಮೆಣಸು ಕುರಿತು, ಮುಂಡುಗೋಡು ಆಮಿಲ್, ಶೇಖ ಅಬ್ದುಲ್ ಖಾದರರ ಕಾಗದ[43] ಮುಂತಾದವುಗಳು ಹೈದರ ಮತ್ತು ಟೀಪು ಸುಲ್ತಾನರ ಆಡಳಿತವು ಸ್ವರ್ಣವಲ್ಲೀ ಪ್ರದೇಶದಲ್ಲಿ ಜಾರಿಯಲ್ಲಿತ್ತೆಂದು ಸ್ಪಷ್ಟಪಡಿಸುತ್ತವೆ. ಸ್ವಾದಿ ಅರಸರ ಕಾಲದಲ್ಲಿ ನೀಡಲಾದ ಧರ್ಮಸಾಧನಗಳು ದಂಡಿನಿಂದಾಗಿ ಅವಾಂತರವಾಗಿ ಹೋಗಿದ್ದರಿಂದ, ಅವುಗಳನ್ನು ಪುನಃ ದಯಪಾಲಿಸಬೇಕಾಗಿ ಸ್ಥಳಿಕರು ವಿನಂತಿಸಿಕೊಂಡಿದ್ದನ್ನು ಗಮನಿಸಬಹುದಾಗಿದೆ.

ಮುಸಲ್ಮಾನ ಅಧಿಕಾರಿಗಳು ಹಿಂದೂ ಸ್ವಾಮಿಗಳು ಕಳುಹಿದ ಫಲಮಂತ್ರಾಕ್ಷತೆ ಸ್ವೀಕರಿಸುತ್ತಿದ್ದರೆಂದು ದಾಖಲೆಗಳಿಂದ ಸ್ಪಷ್ಟವಾಗುತ್ತದೆ.

**ಕಂಪನಿ ಸರಕಾರದ ಕಾಲ :**

ಕ್ರಿ. ಶ. ೧೭೯೯ ರಲ್ಲಿ ಟೀಪುಸುಲ್ತಾನನ ಮರಣವಾದ ನಂತರ ಉತ್ತರಕನ್ನಡ ಜಿಲ್ಲೆಯಲ್ಲಿ ಕಂಪನಿ ಸರಕಾರದ ಆಡಳಿತ ಪ್ರಾರಂಭವಾಯಿತು. ಕ್ರಿ. ಶ. ೧೮೦೦ ರ ಸುಮಾರಿಗೆ ಸೋದಾ. ಸ್ವರ್ಣವಲ್ಲಿ, ಶಿರಸಿ. ಬನವಾಸಿ ಮುಂತಾದ ಪ್ರದೇಶಗಳ ರಾಜಕೀಯ. ಆರ್ಥಿಕ. ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನರಿಯಲು ಡಾ॥ ಫ್ರಾನ್ಸಿಸ್ ಬುಕಾನನ್[೪೪]ನ ವೃತ್ತಾಂತ ಅತ್ಯಂತ ಉಪಯುಕ್ತವಾದುದು. ಬುಕಾನನ್ ಸ್ವರ್ಣವಲ್ಲಿಗೂ ಬಂದಿದ್ದನೆಂಬುದು ಗಮನಾರ್ಹವಾದ ಅಂಶ. ಗುರುಪರಂಪರೆಯಲ್ಲಿ ೪೮ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ಆಗ ಪೀಠದಲ್ಲಿ ವಿರಾಜಮಾನರಾಗಿದ್ದರು. ಕ್ರಿ. ಶ. ೧೮೫೮ ರ ವರೆಗೂ. ಅಂದರೆ. ಸಿಪಾಯಿ ದಂಗೆ ಮುಗಿದು, ಕಂಪನಿ ಸರಕಾರ ಕೊನೆಗೊಂಡು. ವಿಕ್ಟೋರಿಯಾ ಮಹಾರಾಣಿಯ ನೇರ ಆಡಳಿತ ಪ್ರಾರಂಭವಾಗುವವರೆಗೂ, ಸೋಂದಾ ತಾಲೂಕಾ ಸ್ಥಳವಾಗಿದ್ದು, ೧೮೫೯ ರಲ್ಲಿ ಶಿರಸಿಗೆ ತಾಲೂಕಾ ಸ್ಥಳವನ್ನು ಸ್ಥಳಾಂತರಿಸಲಾಯಿತು.

ಸ್ವರ್ಣವಲ್ಲಿಗೆ ಸಂಬಂಧಿಸಿದ ಕಂಪನಿ ಸರಕಾರ ಕಾಲದ ದಾಖಲೆಗಳನ್ನು ಲೇಖಕರು ದಾಖಲೆಗಳಿಗೆ ಸಂಬಂಧಿಸಿದ ಗ್ರಂಥದಲ್ಲಿ[೪೫] ಉಲ್ಲೇಖಿಸಿದ್ದಾರೆ. ಜಮಾಬಂದಿ ಕುರಿತು. ಹೊನ್ನೆಹಳ್ಳಿ ಮಠ ಪೈಕಿ. ಕಕ್ಕೋಡ ಗ್ರಾಮದ ಸಂಗಯ್ಯಗೆ ಅಲೆಕ್ಝಾಂಡರ್ ರೀಡ್ ಸಾಹೇಬರ ಕಾಗದ:[೪೬] ಕ್ರೋಧನ ಸಂವತ್ಸರದ ಜಮಾಬಂದಿಗೆ ಸಂಬಂಧಿಸಿ. ಹೊನ್ನೆಹಳ್ಳಿ ಮಠದ ಪಾರುಪತ್ಯಗಾರ ನರಸಿಂಭಟ್ಟರಿಗೆ ಅಲೆಕ್ಝಾಂಡರ್ ವಿಲ್ಸನ್ ಸಾಹೇಬರ ಪಟ್ಟೆ:[೪೭] ಸವಣೂರು. ಮೈಸೂರು ಜಿಲ್ಲೆಗಳಲ್ಲಿ ಹೊನ್ನೆಹಳ್ಳಿ ಮಠದ ಶ್ರೀ ಗಂಗಾಧರ ಸರಸ್ವತಿಗಳು ಸಂಚಾರ ಮಾಡುವದರಿಂದ. ಅವರನ್ನು ಅಟಕಾಯಿಸದೆ ಬಿಡುವಂತೆ ಕನಡಾ ಜಿಲ್ಲಾ ಮೆಜಿಸ್ಟ್ರೇಟ್‌ರಿಂದ ರಹದಾರಿ:[೪೮] ಹೈದರಿ ೨೯೫ ವರಹ. ೨ ಹಣವನ್ನು ತಹಶೀಲ್ದಾರನ ಮಾರಿಫತ್ತಿಗೆ ಸಂದಾಯ ಮಾಡಿ. ರಶೀದಿ ತೆಗೆದುಕೊಳ್ಳುವಂತೆ, ಹೊನ್ನೆಹಳ್ಳಿ ಮಠದ ನರಸಿಂಹ ಭಟ್ಟರಿಗೆ ಕನಡಾ ಜಿಲ್ಲಾ ಕಲೆಕ್ಟರ ಥಾಮಸ್ ಹ್ಯಾರಿಸ್ ಸಾಹೇಬರ ಬೇರೀಜು ಪಟ್ಟಿ:[೪೯] ಹೊನ್ನೆಹಳ್ಳಿ ಮಠದ ಸ್ವಾಮಿಗಳು ಶಿಷ್ಯವರ್ಗದ ವಿಚಾರಣೆಗಾಗಿ ದೇಶ ಸಂಚಾರ ಮಾಡುವದರಿಂದ. ಅವರಿಗೆ ಹರಕತ್ತು, ಏನೊಂದು ಉಪದ್ರ ಕೊಡದೆ ಬಿಡಬೇಕಾಗಿ. ಕನಡಾ ಜಿಲ್ಲಾ ಸಬ್ ಕಲೆಕ್ಟರ. ಜ್ಯೋಂಟ್ ಮೆಜಿಸ್ಟ್ರೇಟ್. ಆ್ಯಶಿಂಗಟನ್ ಸಾಹೇಬರು. ಮಾಮಲೆದಾರ. ಶಿರಸ್ತೆದಾರ. ಪೇಶ್ಕಾರ, ಮಣೆಗಾರ. ಶಾನಭೋಗ. ಪೋಲಿಸ್ ಧಫೆದಾರ, ಪ್ಯಾದೆ. ವಗೈರೆರಿಗೆ ಹೊರಡಿಸಿದ ರಹದಾರಿ:[೫೦] ಗವರ್ನರ್ ಇನ್‌ಕೌನ್ಸಿಲ್‌ರ ಅಪ್ಪಣೆ ಪ್ರಕಾರ. ದತ್ತುಪುತ್ರನ ದಾವೆಗಳನ್ನು ಸರಕಾರವು ತೆಗೆದು ಹಾಕುತ್ತದೆಂಬುದಾಗಿ. ಗವರ್ನ್‌ಮೆಂಟ್ ಸೆಕ್ರೆಟರಿ. ಥಾಮಸ್‌ನ್ ಅವರ ಜಾಹೀರನಾಮೆ.[೫೧] ಇತ್ಯಾದಿ ವಿಷಯುಗಳು ದಾಖಲೆಗಳಲ್ಲಿ ಉಲ್ಲೇಖಿತವಾಗಿವೆ. ಶ್ರೀಮಠದ ಪಾರುಪತ್ಯಗಾರರಾಗಿ, ಕ್ರಮವಾಗಿ. ನರಸಿಂಹ ಭಟ್ಟ. ತಮ್ಮಯ್ಯ ಭಟ್ಟ ಮತ್ತು ಅಣ್ಣಯ್ಯ ಭಟ್ಟರು ಮತ್ತು ಸೋದೆ ತಾಲೂಕಿನ

ಸುಬೇದಾರರಾಗಿ ಸೂರ್ಯನಾರಣಪ್ಪನವರು, ರಾಮಕೃಷ್ಣ ಮತ್ತು ವೆಂಕಟರಾಯರು ಕಂಪನಿ ಸರಕಾರದ ಕಾಲದಲ್ಲಿ ತಮ್ಮ ಕಾರ್ಯ ನಿರ್ವಹಿಸಿದರೆಂಬುದು ಕಂಡುಬರುತ್ತದೆ. ಅದೇ ರೀತಿ, ಈ ಅವಧಿಯಲ್ಲಿ, ಕ್ರಮವಾಗಿ ಶ್ರೀ ಗಂಗಾಧರೇಂದ್ರ(ಸು. ಕ್ರಿ. ಶ. ೧೭೭೯–೧೮೧೬), ಶ್ರೀ ಸರ್ವಜ್ಞೇಂದ್ರ (ಸು. ಕ್ರಿ. ಶ. ೧೮೧೬–೧೮೨೬) ಮತ್ತು ಶ್ರೀ ಗಂಗಾಧರೇಂದ್ರ ಸರಸ್ವತಿಗಳು (ಸು. ಕ್ರಿ. ಶ. ೧೮೨೭–೧೮೬೪) ಸ್ವರ್ಣವಲ್ಲೀ ಪೀಠದಲ್ಲಿದ್ದರೆಂದು ತಿಳಿದುಬರುತ್ತದೆ.

## ೧೮೫೮ ರಿಂದ ೧೯೯೦ :

ಕಂಪನಿ ಸರಕಾರ ಮುಕ್ತಾಯವಾದನಂತರ ಸ್ವರ್ಣವಲ್ಲಿಯ ಪೀಠಕ್ಕೆ ಬಂದವರು, ಕ್ರಮವಾಗಿ, ಶ್ರೀ ಸರ್ವಜ್ಞೇಂದ್ರ ಸರಸ್ವತೀ[೫೭] (ಸು. ಕ್ರಿ. ಶ. ೧೮೬೫ – ಸು. ಕ್ರಿ. ಶ. ೧೮೮೦), ಶ್ರೀ ಗಂಗಾಧರೇಂದ್ರ ಸರಸ್ವತೀ[೫೮] (ಕ್ರಿ. ಶ. ೧೮೮೦ –೧೯೧೮) ಮತ್ತು ಶ್ರೀ ಸರ್ವಜ್ಞೇಂದ್ರ ಸರಸ್ವತಿ[೫೯] (೧೯೧೮ – ೧೯೯೦). ಇವರುಗಳ ಕಾಲಕ್ಕೆ ಸಂಬಂಧಿಸಿದ ದಾಖಲೆಗಳು ಶ್ರೀಮಠದಲ್ಲಿ ಸಾಕಷ್ಟು ಲಭ್ಯವಾಗಿವೆ. ದೇವರ ಜಯಂತಿ, ರಥೋತ್ಸವ. ಗುರುಕಾಣಿಕೆ, ಶಿಷ್ಯರ ಆಚಾರವಿಚಾರ, ಹೊನ್ನೆಹಳ್ಳಿಯಲ್ಲಿ ನರಸಿಂಹ, ಚಂದ್ರಮೌಳೀಶ್ವರ, ಶಾರದಾಂಬಾ, ಕಾಶಿವಿಶ್ವೇಶ್ವರ, ಕಾಲಭೈರವ ಮತ್ತು ಶಂಕರಾಚಾರ್ಯ ಪೀಠ ಸ್ಥಾಪನೆಗೆ ಸಂಬಂಧಿಸಿದ ಕೈಫಿಯತ್, ಭೂದಾನ ಪಟ್ಟೆ, ಭೂಮಿ ಸಾಗುವಳಿ, ಮೂಲಗೇಣಿ, ಕೆರೆ ದುರಸ್ತಿ, ದತ್ತು ಸ್ವೀಕಾರ, ಪೌರೋಹಿತ್ಯ, ಬಹಿಷ್ಕಾರ, ದೀಪಾರಾಧನೆ ಕಾಣಿಕೆ, ಪಾರುಪತ್ಯ, ಇರುಳು ತಪ್ಪಿದ ಹೆಣ್ಣಿನ ವಿಚಾರ, ಜಾತಿಪದ್ಧತಿ, ಬೆಟ್ಟದ ಸಲುವಾಗಿ ಜಂಗಲ್ ಭೂಮಿ, ಮುಂತಾದ ಅನೇಕ ಸಂಗತಿಗಳನ್ನು ಈ ಕಾಲದ ದಾಖಲೆಗಳು ಬೆಳಕಿಗೆ ತರುತ್ತವೆ.

ಸ್ವರ್ಣವಲ್ಲೀ ಮಹಾಸಂಸ್ಥಾನದಲ್ಲಿ ಸುವ್ಯವಸ್ಥಿತ ಆಡಳಿತ ರೂಪಿಸಿ, ಆರ್ಥಿಕ ಪ್ರಗತಿಗಾಗಿ ಶ್ರಮಿಸಿ, ಧರ್ಮವನ್ನಾಚರಿಸಿ, ಶಿಷ್ಯರ ಏಳ್ಗೆಗಾಗಿ ಸದಾ ಚಿಂತಿಸಿ, ಸಕಲ ಧರ್ಮಸಮನ್ವಯ ದೃಷ್ಟಿಯನ್ನಿರಿಸಿ, ಅನುಷ್ಠಾನ ನಿರತರಾದವರು, ಪೀಠದಲ್ಲಿ ೫೭ ನೆಯವರಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳು (೧೮೮೦–೧೯೧೮). ಅವರು ಶ್ರೀಮಠದ ಚಾರಿತ್ರಿಕ ದಾಖಲೆಗಳನ್ನೆಲ್ಲ ಸಂಗ್ರಹಿಸಿ, ಸುವ್ಯವಸ್ಥಿತವಾಗಿ ಇರಿಸಿದರು.

ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳ ಕರಕಮಲ ಸಂಜಾತರಾದ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು (೧೯೧೮–೧೯೯೦) ಗುರುಪರಂಪರೆಯಲ್ಲಿ ೫೮. ನೆಯವರು. ಎರಡು ಮಹಾಯುದ್ಧಗಳು. ದೇಶಕ್ಕೆ ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯೋತ್ತರದ ಸಮಸ್ತ ಆಗು ಹೋಗುಗಳನ್ನು ವಸ್ತುನಿಷ್ಠವಾಗಿ ವೀಕ್ಷಿಸಿದವರು ಸರ್ವಜ್ಞೇಂದ್ರರು.

## ಪ್ರಸ್ತುತದಲ್ಲಿ ಶ್ರೀಮಠ :

ಗುರು ಪರಂಪರೆಯಲ್ಲಿ ೫೯ ನೆಯವರಾದ, ಪ್ರಸ್ತುತ ಪೀಠದಲ್ಲಿರುವ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ೧೯೯೧ ರಲ್ಲಿ ಪೀಠಕ್ಕೆ ಬಂದರು. ಪೀಠಾರೋಹಣವಾದಂದಿನಿಂದ ಶ್ರೀಗಳವರು ತಮ್ಮನ್ನು ಅನೇಕ ಧಾರ್ಮಿಕ, ಸಾಮಾಜಿಕ

ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಮಹಾಸಂಸ್ಥಾನದ ಆಡಳಿತ ಚುರುಕುಗೊಂಡಿದೆ. ಆರಾಧ್ಯ ದೇವತೆಗಳಾದ ಶ್ರೀ ಲಕ್ಷ್ಮೀನರಸಿಂಹ, ಶ್ರೀ ಚಂದ್ರಮೌಳೀಶ್ವರ ಮತ್ತು ಶ್ರೀ ರಾಜರಾಜೇಶ್ವರೀ, ಇವರ ತ್ರಿಕಾಲ ಉಪಾಸನೆಯಲ್ಲಿ ಚ್ಯುತಿ ಬರದಂತೆ ನೋಡಿಕೊಳ್ಳಲಾಗುತ್ತಿದೆ. ಶ್ರೀಗಳವರು ಸ್ವಂತ ಅನುಷ್ಠಾನ, ಕಠಿಣ ಸಾಧನೆಗಳ ಜೊತೆಗೆ ಲೋಕಕಲ್ಯಾಣಾರ್ಥವಾಗಿ ಅನೇಕ ಧಾರ್ಮಿಕ ಕಾರ್ಯಕ್ರಮಗಳನ್ನು ನಿರ್ದೇಶಿಸುತ್ತಿದ್ದಾರೆ. ಶ್ರೀಮಠದ ವಾರ್ಷಿಕ ಉತ್ಸವಗಳಾದ ನರಸಿಂಹ ಜಯಂತಿ, ಶಂಕರ ಜಯಂತಿ, ಆರಾಧನೆಗಳು, ಕ್ಷೇತ್ರಪಾಲ ಹಬ್ಬ, ಗಣೇಶ ಚತುರ್ಥಿ, ಶರನ್ನವರಾತ್ರಿ, ದೀಪಾವಳಿ, ಎಲ್ಲವೂ ವಿಧಿಪೂರ್ವಕವಾಗಿ, ವಿಜೃಂಭಣೆಯಿಂದ ಆಚರಿಸಲ್ಪಡುತ್ತಿವೆ. ಶ್ರೀಗಳವರು ಶ್ರೀಚಕ್ರ ಆರಾಧನೆಯನ್ನು ಮುನ್ನಡೆಸಿಕೊಂಡು ಬಂದಿದ್ದಾರೆ. ಶಿಷ್ಯರಲ್ಲಿ ಜಾಗೃತಿಯನ್ನುಂಟು ಮಾಡಿ ಸನ್ಮಾರ್ಗ ತೋರಿಸಲೆಂದು ಮಹಾಸಂಸ್ಥಾನದ ೧೬ ಸೀಮೆಗಳಲ್ಲಿ ಮತ್ತು ಘಟ್ಟದ ಕೆಳಗಿನ ಪ್ರದೇಶಗಳಲ್ಲಿ ಸಂಚರಿಸಿ, ಆಶೀರ್ವಚನ ನೀಡಿದ್ದಾರೆ. ದೇಶದ ನಾನಾ ಭಾಗಗಳಲ್ಲಿಯ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದ್ದಾರೆ. ಶ್ರೀಗಳವರ ಧುರೀಣತ್ವದಲ್ಲಿ, 'ವಿವಾಹದಲ್ಲಿ ಬರುವ ಧಾರ್ಮಿಕ ಹಾಗು ಲೌಕಿಕ ಸಮಸ್ಯೆಗಳು' ಎಂಬ ವಿಷಯದ ಚಿಂತನ ಗೋಷ್ಠಿ, ಲೋಕ ಕಲ್ಯಾಣಾರ್ಥವಾಗಿ ದಶಲಕ್ಷ ರುದ್ರಮಂತ್ರ ಪುರಶ್ಚರಣ, ವನಸ್ಪತಿ, ಬೃಹಸ್ಪತಿ, ಧನ್ವಂತರಿ ಜಪ ಹವನ, ಶ್ರೀಸೂಕ್ತ, ಪುರುಷಸೂಕ್ತ ಹವನ ಮತ್ತು ಮಹಾರುದ್ರ ಪಾರಾಯಣ, ಕೋಟಿ ಗಾಯತ್ರೀ ಜಪ ಯಜ್ಞ, ಜೀವನ ಶಿಕ್ಷಣ ಶಿಬಿರ, ಸಂಸ್ಕೃತ ವಾಙ್ಮಯ ವಿಚಾರ ಸಂಕಿರಣ, ಯಕ್ಷಗಾನ ಕಲಾ ಪ್ರೋಷಣೆ, ದೇವಾಲಯಗಳ ಜೀರ್ಣೋದ್ಧಾರ, ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನದ ಸಹಯೋಗದೊಂದಿಗೆ ಪುಸ್ತಕ ಪ್ರಕಟಣಾ ಕಾರ್ಯ, ಬೇಡ್ತಿ ಅಘನಾಶಿನಿ ಕೊಳ್ಳ ಸಂರಕ್ಷಣೆ, ಕರ್ನಾಟಕ ಇತಿಹಾಸ ಅಕಾಡೆಮಿಯ ಸಮ್ಮೇಳನ, ವೇದವಿದ್ಯಾ ಸಮ್ಮೇಳನ, ಮೊದಲಾದ ಅನೇಕ ಕಾರ್ಯಕ್ರಮಗಳು ಸಂಘಟಿಸಲ್ಪಟ್ಟಿದ್ದು, ಜನರು ಸಾಕಷ್ಟು ಪ್ರಯೋಜನ ಪಡೆದಿದ್ದಾರೆ. ಲೋಕಕ್ಷೇಮಕ್ಕಾಗಿ, ಶ್ರೀಗಳವರು ತಮ್ಮನ್ನು ನಿರಂತರವಾಗಿ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಪ್ರಸ್ತುತದಲ್ಲಿ ಪೀಠದಲ್ಲಿರುವ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ಸಾಗುತ್ತಿರುವ ಗತಿಯನ್ನು ವೀಕ್ಷಿಸಿದರೆ, ಪೂರ್ವದಲ್ಲಿ ಮಹಾ ತಪಸ್ವಿಗಳೂ ಜ್ಞಾನಿಗಳೂ ಆಗಿದ್ದ ಬೃಹದ್ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳ ನೆನಪು ಮರುಕಳಿಸುತ್ತದೆ.

ಒಟ್ಟಿನಲ್ಲಿ, ಹೀಗಿದೆ ಸ್ವರ್ಣವಲ್ಲೀ ಮಹಾಸಂಸ್ಥಾನದ ಕಿರುಪರಿಚಯ. ಮೇಲ್ನೋಟಕ್ಕೆ ಆಕರ ಸಾಮಗ್ರಿಗಳು ಶ್ರೀಮಠದ ಚರಿತ್ರೆಯನ್ನರಿಯಲು ಪ್ರಯೋಜನಕಾರಿ ಎಂದೆನಿಸಿದರೂ, ಅವುಗಳನ್ನು ಸಮಗ್ರವಾಗಿ ಪರಿಶೀಲಿಸಿದಾಗ, ವಿಷಯವ್ಯಾಪ್ತಿ ವಿಷ್ಟೊಂದು ವಿಸ್ತಾರವಾಗಿದೆ ಎಂಬುದರ ಅರಿವು ಉಂಟಾಗುತ್ತದೆ. ಕಾಶಿ, ಉಜ್ಜಯಿನಿ, ಮುಂಬಯಿ, ಪುಣೆ, ಗೋವಾ, ಗೋಕರ್ಣ, ಚೆನ್ನೈ ಮುಂತಾದ ಸ್ಥಳಗಳಲ್ಲಿ ದೊರೆಯಬಹುದಾದ, ಸ್ವರ್ಣವಲ್ಲೀ ಮಹಾಸಂಸ್ಥಾನದ ಚರಿತ್ರೆಗೆ ಸಂಬಂಧಿಸಿದ ಹಸ್ತಪ್ರತಿಗಳ ಶೋಧನಾಕಾರ್ಯ ಇನ್ನೂ ಆಗಬೇಕಾಗಿದೆ.

ಸ್ವರ್ಣವಲ್ಲೀ ಸಂಸ್ಥಾನ ಘಟ್ಟದ ಮೇಲಿನ ಹಾಗು ಕೆಳಗಿನ ಪ್ರದೇಶಗಳಲ್ಲಿ ವಿವಿಧ ಜಾತಿ ಮತ್ತು ಕೋಮುಗಳಿಗೆ ಸೇರಿದ ಅನೇಕ ಶಿಷ್ಯರನ್ನು ಹೊಂದಿದೆ. ಸ್ವರ್ಣವಲ್ಲೀ ಸಂಸ್ಥಾನ ಐತಿಹಾಸಿಕವಾಗಿ ಪುರಾತನ ಮತ್ತು ಸರ್ವತಂತ್ರ ಸ್ವತಂತ್ರ ಎಂಬುದಾಗಿ ಚಾರಿತ್ರಿಕ ದಾಖಲೆಗಳಲ್ಲಿ ಈ ರೀತಿ ಉಲ್ಲೇಖವಾಗಿದೆ :

"ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ ಗುರುಪರಂಪರಾ ಪ್ರಾಪ್ತ ಷಣ್ಮತ ವ್ಯವಸ್ಥಾಪನಾಚಾರ್ಯ ಕ್ರಮಾಗತ ಶ್ರೌತ ಸ್ಮಾರ್ತ ಕರ್ಮಮಾರ್ಗ ವ್ಯವಸ್ಥಾಪಕಾಶೇಷತ್ರಯ್ಯಾಂತಾದ್ಯದ್ವೈತ ಸಿದ್ಧಾಂತ ಪ್ರಬಂಧ ಪ್ರವರ್ತಕತ್ವಾದಿ ರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಶ್ರೀಮತ್ಸುಧಾಪುರವರ ಸಿಂಹಾಸನಾಧೀಶ್ವರ ಸರ್ವತಂತ್ರ ಸ್ವತಂತ್ರ ವ್ಯಾಖ್ಯಾನ ಸಿಂಹಾಸನಾಧಿಷ್ಠಿತ ರಾಜಾಧಿರಾಜ ದೇಶಿಕ ಗೋಕರ್ಣಮಂಡಲಾಧೀಶ ಸಹ್ಯಾದ್ರಿಪುರವರಾಧೀಶ್ವರ ಶಾಲ್ಮಲೀತೀರವಾಸ ಶ್ರೀಮನ್ ಲಕ್ಷ್ಮೀನೃಸಿಂಹ ಚಂದ್ರಮೌಳಿ ಪದಪಂಕೇರುಹ ರಸಗ್ರಾಸಾಳಿವನ್ಮಾನಸಾ ಶ್ರೀಮತ್ಸೋದಾ ಸ್ವರ್ನವಲ್ಲಿ ಮಹಾಸಂಸ್ಥಾನಾಧೀಶ್ವರ...."

ಸನಾತನ ವೈದಿಕ ಧರ್ಮವನ್ನು ಪ್ರಚುರಗೊಳಿಸಿ, ಈ ದೇಶದ ಐಕ್ಯತೆಗಾಗಿ ಶ್ರಮಿಸಿದವರು ಆದಿಶಂಕರಾಚಾರ್ಯರು. ಆ ಸತ್ಸಂಪ್ರದಾಯವನ್ನು ಇಂದಿನವರೆಗೂ ಮುಂದುವರಿಸಿಕೊಂಡು ಬಂದವರು ಸ್ವರ್ಣವಲ್ಲೀ ಮಹಾಸಂಸ್ಥಾನದ ಗುರುವರ್ಯರು.

## ಟಿಪ್ಪಣಿಗಳು ಮತ್ತು ಸಾಂದರ್ಭಿಕ ಗ್ರಂಥಗಳು

೧. ಚಾರಿತ್ರಿಕ ದಾಖಲೆಗಳಲ್ಲಿ ಸ್ವರ್ಣವಲ್ಲಿಯನ್ನು 'ಸ್ವರ್ನವಲ್ಲಿ', 'ಹೊಂನೆಹಳ್ಳಿ' ಎಂಬುದಾಗಿ ಉಲ್ಲೇಖಿಸಲಾಗಿದೆ. ಸ್ವರ್ಣವಲ್ಲೀ ಸಂಸ್ಥಾನದ ಸೀಮೆಗಳಲ್ಲಿಯ ಗ್ರಾಮಾಂತರ ಪ್ರದೇಶಗಳಲ್ಲಿಯ ಜನರು, ಇಂದಿಗೂ 'ಹೊನ್ನಳ್ಳೀ ಮಠ' ಎಂದೇ ಕರೆಯುತ್ತಾರೆ. ಕ್ರಿ. ಶ. ೧೮೦೦ ರಲ್ಲಿ ಹೊನ್ನೆಹಳ್ಳಿ ಮಠಕ್ಕೆ ಬಂದ ಡಾ॥ ಫ್ರಾನ್ಸಿಸ್ ಬುಕಾನನ್‌ನು, ಹೆಸರನ್ನು ಉಚ್ಚರಿಸಲು ಸರಿಯಾಗಿ ಬಾರದೆ, 'ಎ ಜರ್ನಿ ಫ್ರಾಮ್ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಮತ್ತು ಮಲ್ಬಾರ್' (ಸಂ. III), ಎಂಬ ವೃತ್ತಾಂತದಲ್ಲಿ 'ಹೊನ್ನಉಲ್ಲಿ' ಎಂದು ಹೆಸರಿಸಿದ್ದಾನೆ.

೨. ಸ್ವಲ್ಪ ದೂರವಾದರೂ, ಶಿರಸಿಯಿಂದ ಹುಲೇಕಲ್ ಮಾರ್ಗವಾಗಿಯೂ ಸ್ವರ್ಣವಲ್ಲಿಯನ್ನು ತಲುಪಬಹುದು.

೩. ಸ್ವರ್ಣವಲ್ಲೀ ದಾಖಲೆ (ಸ್ವ. ದಾ. ) ೬.

೪. ಪೂರ್ವದಲ್ಲಿ ಮಠವಿದ್ದ ಸಹಸ್ರಲಿಂಗ ಸ್ಥಳ, ಈಗಿರುವ ಸ್ವರ್ಣವಲ್ಲೀ ಮಠಕ್ಕೆ ತೀರ ಸಮೀಪವಾಗಿದೆ. ಹುಳಗೋಳದ ಸಮೀಪವಿರುವ, ಪ್ರವಾಸಿಗರನ್ನು ಆಕರ್ಷಿಸುವ ಬಂಡೆಬಸಪ್ಪ ಅನೇಕ ಶಿವಲಿಂಗಗಳುಳ್ಳ ಸಹಸ್ರಲಿಂಗ, ಪೂರ್ವದಲ್ಲಿ ಮಠವಿದ್ದ ಸಹಸ್ರಲಿಂಗವಲ್ಲ, ಎಂಬುದನ್ನು ಓದುಗರು ಗಮನದಲ್ಲಿಡಬೇಕು. ಆದರೂ, ಪೂರ್ವದಲ್ಲಿ ಸಹಸ್ರಲಿಂಗದ ಸಮುಚ್ಚಯ, ಸ್ವರ್ಣವಲ್ಲೀ ಮಠದ ಸಮೀಪದ ಸಹಸ್ರಲಿಂಗದಿಂದ ಪ್ರಾರಂಭವಾಗಿ, ಹುಳಗೋಳದ ಸಮೀಪವಿರುವ ಸಹಸ್ರಲಿಂಗದವರೆಗೂ ವಿಸ್ತಾರವಾಗಿ ಪಸರಿಸಿತ್ತೆಂದು ಊಹಿಸಬಹುದಾಗಿದೆ.

೫. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕರಾದ ಡಾ. ಎಚ್. ಆರ್. ರಘುನಾಥ ಭಟ್ಟರು ಗುರುತಿಸಿದ್ದಾರೆ.

೬. ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಶಿರಸಿ ತಾಲೂಕಿನ ಇತಿಹಾಸ', ೧೯೮೮, ಪು. ೬, ೭ ನೋಡಿರಿ.

೭. ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ', ಶ್ರೀ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ೧೯೯೭ ಮತ್ತು 'ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' (ಸ್ವ. ದಾ.) ಕರ್ನಾಟಕ ರಾಜ್ಯ ಪತ್ರಾಗಾರ, ಬೆಂಗಳೂರು, ೧೯೯೭.

೮. ಎಲ್ಲ ಕಾಗದಪತ್ರಗಳೂ ಐತಿಹಾಸಿಕವಾಗಿ ಮಹತ್ವವಾದವುಗಳಲ್ಲ. ಪೂರ್ವೋಲ್ಲೇಖಿತ 'ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' ಎಂಬ ಗ್ರಂಥದಲ್ಲಿ ಸ್ವರ್ಣವಲ್ಲೀ ಸಂಸ್ಥಾನಕ್ಕೆ ಸಂಬಂಧಿಸಿದ ಒಟ್ಟೂ ೫೩೮ ಆಯ್ದ ದಾಖಲೆಗಳನ್ನು ಉಲ್ಲೇಖಿಸಲಾಗಿದೆ. ದಾಖಲೆಗಳ ಸೂಕ್ಷ್ಮ ಚಿತ್ರೀಕರಣದ ಸುರಳಿಗಳನ್ನು ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಇರಿಸಲಾಗಿದೆ.

೯. ಕೆಲವೇ ಶಾಸನಗಳ ಪ್ರತಿಗಳಲ್ಲಿ ಮಾತ್ರ ಕಾಲಕ್ಕೆ ಸಂಬಂಧಿಸಿ ವ್ಯತ್ಯಾಸ ಕಂಡುಬರುತ್ತದೆ. ಆದರೆ ಅಂಥ ದಾಖಲೆಗಳು ತೀರ ವಿರಳ.

೧೦. ವೇದವ್ಯಾಸಕೃತ ಸ್ಕಾಂದಪುರಾಣದಲ್ಲಿಯ ಉತ್ತರ ಸಹ್ಯಾದ್ರಿಖಂಡ, ಹವ್ಯಕರ ಪೂರ್ವೇತಿಹಾಸದ ಮೇಲೆ ಬೆಳಕು ಚೆಲ್ಲುವ ಒಂದು ಪುರಾಣ ಗ್ರಂಥ. ಹವ್ಯಕರ ಮೂಲಸ್ಥಳವಾದ ಅಹಿಚ್ಛತ್ರ ಭಾರತದ ಯಾವ ಭಾಗದಲ್ಲಿದೆ ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಬನವಾಸಿಯ ಕದಂಬ ಮಯೂರವರ್ಮನಿಗೆ ಬ್ರಾಹ್ಮಣರನ್ನು ಅಹಿಕ್ಷೇತ್ರದಿಂದ ಕರೆತರಲು ಕಾಶ್ಯಪ ಮುನಿಗಳು ಆದೇಶಿಸುತ್ತಾರೆ (ಉತ್ತರ ಸಹ್ಯಾದ್ರಿಖಂಡ, ಅಧ್ಯಾಯ-೪, ಪು. ೧೪, ಶ್ಲೋ. ೧೯). ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ತಾಳಗುಂದ ಶಿಲಾಶಾಸನದಲ್ಲಿಯೂ ಮಯೂರವರ್ಮನು ಬ್ರಾಹ್ಮಣರನ್ನು ಅಹಿಚ್ಛತ್ರದಿಂದ ಕರೆತಂದನೆಂದು ಉಲ್ಲೇಖಿಸಲಾಗಿದೆ. ಆದರೆ ಅಹಿಚ್ಛತ್ರ ಎಲ್ಲಿದೆ ಎಂಬುದನ್ನು ಉಲ್ಲೇಖಿಸಲಾಗಿಲ್ಲ. ಹವ್ಯಕರು ಆಂಧ್ರದ ಗೋದಾವರೀ ತೀರದ ಅಹಿಚ್ಛತ್ರದವರೆಂಬುದೂ ಒಂದು ವಾದ.

ಮಯೂರವರ್ಮನು ಅಹಿಚ್ಛತ್ರದಿಂದಲೇ ಹವ್ಯಕರನ್ನು ಕರೆತಂದನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ; ಆ ಬಗ್ಗೆ ಹಲವಾರು ಗ್ರಂಥಗಳಲ್ಲಿ ಆಧಾರ ದೊರಕುತ್ತದೆ. ಆದರೆ ಮಯೂರವರ್ಮನು ಹವ್ಯಕರನ್ನು ಕರೆತಂದುದು ಆಂಧ್ರದ ಅಹಿಚ್ಛತ್ರದಿಂದಲ್ಲ, ಉತ್ತರದ ಅಹಿಚ್ಛತ್ರದಿಂದಲೇ ಎಂಬುದು ನಿರ್ವಿವಾದ, ಎಂಬುದಾಗಿ ಶ್ರೀ ಎಚ್. ಎಂ. ತಿಮ್ಮಪ್ಪ ಅವರು ಅಭಿಪ್ರಾಯಪಟ್ಟಿದ್ದಾರೆ ('ಹವ್ಯಕರ ಇತಿಹಾಸ', ಹವ್ಯಕ ಸಂಪದಭಿವೃದ್ಧಿ ಸಮಾಜ, ಕೇಡಲಸರ, ೧೯೯೦, ಪು. ೨೧). ಒಟ್ಟಿನಲ್ಲಿ ಪಂಚದ್ರಾವಿಡ ಬ್ರಾಹ್ಮಣರಲ್ಲಿ ಒಂದು ಪಂಗಡಕ್ಕೆ ಸೇರಿದ ಹವ್ಯಕರು ಗಂಗಾನದಿ ತೀರದಲ್ಲಿದ್ದ ಅಹಿಚ್ಛತ್ರದಿಂದಲೇ ಬಂದವರೆಂದು ತಿಮ್ಮಪ್ಪನವರು ನಿರ್ಣಯಿಸಿದ್ದಾರೆ.

೧೧. ಸ್ವ. ದಾ. ೪೯೮.

೧೨. ಸ್ವ. ದಾ. ೨೨೪.

೧೩. ಸ್ವ. ದಾ. ೧.

೧೪. ಈ ತಾಮ್ರಶಾಸನದ ಮೂಲ ಶಾಸನವು ಶಿಲಾಶಾಸನವಾಗಿದ್ದು, ಅದು ಉಜ್ಜಯಿನಿಯ ಕಾಳಿಕಾ ದೇವಾಲಯದ ಸಮ್ಮುಖದಲ್ಲಿದೆ ಎಂದೂ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ಜ್ಞಾನದೀಪಿಕೆಯ ಕನ್ನಡಾನುವಾದ (ಅಪ್ರಕಟಿತ) ಮಾಡಿದ ಸ್ವರ್ಣವಲ್ಲೀ ಮಠದ ಸಂಸ್ಕೃತ ಮಹಾವಿದ್ಯಾಲಯದ ಪ್ರಾಚಾರ್ಯರಾದ, ಹುಲಿದೇವನಸರದ ವಿದ್ವಾನ್ ಭಾಲಚಂದ್ರ ಶಾಸ್ತ್ರಿಗಳು ಪ್ರಸ್ತುತ ಶಾಸನದ ಕನ್ನಡಾನುವಾದವನ್ನೂ ಮಾಡಿದ್ದಾರೆ. ಸ್ವರ್ಣವಲ್ಲೀ ಚರಿತ್ರೆಯನ್ನು ರಚಿಸುವಲ್ಲಿ ಲೇಖಕರು ಕನ್ನಡಾನುವಾದವನ್ನು ಸೂಕ್ತವಾಗಿ ಬಳಸಿಕೊಂಡಿದ್ದಾರೆ.

೧೫. ಸ್ವ. ದಾ. ೨೨೪; 'ಜ್ಞಾನದೀಪಿಕಾ', ಅಧ್ಯಾಯ (ಅ) ೪, ಶ್ಲೋಕ ೬೪.

೧೬. ಸ್ವ. ದಾ. ೨೨೪

ಸುಮಾರು ೧೨ ನೇ ಶತಮಾನದ ಆದಿವರೆಗೆ ಉಜ್ಜಯನೀ ಮಠದಲ್ಲಿ ಗುರುಗಳಿದ್ದರೆಂದು ಊಹಿಸಬಹುದು.

೧೭. ಶ್ರೀ ಗಂಗಾಧರೇಂದ್ರ ಸರಸ್ವತಿಗಳನ್ನು ಕುರಿತು ಜ್ಞಾನದೀಪಿಕೆಯ ೫ ನೆಯ ಅಧ್ಯಾಯದಲ್ಲಿ ಮಾಹಿತಿ ನೀಡಲಾಗಿದೆ.

೧೮. ನಿರ್ದಿಷ್ಟ ಮಾಹಿತಿ ದೊರೆಯದ್ದರಿಂದ, ವಿಕ್ರಮಾರ್ಕ, ನೃಸಿಂಹ ವೀರಭೂಪಾಲ ಮತ್ತು ಚಂದ್ರಸೇನರ ಕಾಲ ನಿರ್ಧರಿಸುವದು ಕಠಿಣ.

೧೯. ಅರಸನ ಹೆಸರು ನಮೂದಿತವಾಗಿಲ್ಲ.

೨೦. ವಾದಿರಾಜ ಸ್ವಾಮಿಗಳು ರಚಿಸಿದ 'ತೀರ್ಥಪ್ರಬಂಧ'ದಲ್ಲಿ ವೆಂಕಟರಮಣ ದೇವರು ಮಂಜುಗುಣಿಯಲ್ಲಿ ಬಂದು ನೆಲೆಸಿದ ವರ್ಣನೆಯಿದೆ.

೨೧. ಸ್ವ. ದಾ. ೨೨೪.

೨೨. ಗೋಕರ್ಣ, ಕಡತೋಕೆ ಮತ್ತು ಸಹಸ್ರಲಿಂಗ ಸ್ಥಳಗಳಲ್ಲಿಯ ಗುರುಪರಂಪರೆಯ ವೃತ್ತಾಂತವನ್ನು 'ಜ್ಞಾನದೀಪಿಕಾ'ದ ಐದನೆಯ ಅಧ್ಯಾಯದಲ್ಲಿ ನೀಡಲಾಗಿದೆ.

೨೩. 'ಎಪಿಗ್ರಾಫಿಯಾ ಕರ್ನಾಟಿಕಾ', VIII, ಎಸ್. ಕೆ. ೩೭೫.

೨೪. 'ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್', ಸಂ. XX, ಉ. ಕ., ಶಿರಸಿ ತಾಲೂಕು, ನಂ. ೨೩೦.

೨೫. ಸ್ವ. ದಾ. ೨, ೩, ೪, ೯.

೨೬. ಮೂಲ ಶಾಸನಗಳ ಪತ್ತೆಯಾಗಿಲ್ಲ. ಹೀಗಾಗಿ, ವಪ್ಪನೆ ಕಾಗದದಲ್ಲಿಯ ಈ ಶಿಲಾಶಾಸನಗಳ ಪ್ರತಿಗಳು ಚಾರಿತ್ರಿಕ ದೃಷ್ಟಿಯಿಂದ ಬಹು ಉಪಯುಕ್ತ.

೨೭. ಕೋಟೆಮನೆ ಮಠ, ಸ್ವರ್ಣವಲ್ಲೀ ಮಹಾಸಂಸ್ಥಾನದ ಕಾಲುಮಠ.

೨೮. ಸ್ವ. ದಾ. ೪.

೨೯. ಶಿರಸಿಯಿಂದ ೧೯ ಕಿ. ಮೀ. ಅಂತರದಲ್ಲಿರುವ ಸ್ವಾದಿ. ಒಂದು ಪ್ರಸಿದ್ಧ ಐತಿಹಾಸಿಕ ಸ್ಥಳ. ಶಿರಸಿಯನ್ನು ಕೇಂದ್ರವನ್ನಾಗಿರಿಸಿಕೊಂಡು ಸೋಂದಾ ತಾಲೂಕು ಕ್ರಿ. ಶ. ೧೮೦೧ ರಿಂದ ಮುಂದುವರಿಯಿತು. ಕ್ರಿ. ಶ. ೧೮೫೯ ರಲ್ಲಿ ತಾಲೂಕಿನ ಹೆಸರನ್ನು ಬದಲಿಸಿ, 'ಶಿರಸಿ ತಾಲೂಕು' ಎಂದು ಹೆಸರಿಸಲಾಯಿತು.

೩೦. ಸ್ವ. ದಾ. ೫–೪೯.

೩೧. ಸ್ವ. ದಾ. ೬.

೩೨. ಸ್ವ. ದಾ. ೯.

೩೩. ಸ್ವ. ದಾ. ೧೭.

೩೪. ಸ್ವ. ದಾ. ೨೩.

೩೫. ಸ್ವ. ದಾ. ೨೭.

೩೬. ಸ್ವ. ದಾ. ೩೪.

೩೭. ಸ್ವ. ದಾ. ೪೨.

೩೮. ಸ್ವ. ದಾ. ೨೨.

ಬೃಹದ್ಗಂಗಾಧರೇಂದ್ರರ ಕಾಲ, ಜೀವನ ಮತ್ತು ಸಾಧನೆಗಳ ಮೇಲೆ ಬೆಳಕು ಬೀರುವ ಚಾರಿತ್ರಿಕ ದಾಖಲೆಗಳು ಹೆಚ್ಚಿನ ಸಂಖ್ಯೆಯಲ್ಲಿ ಇನ್ನೂ ಲಭ್ಯವಾಗಿಲ್ಲ. ಏನಿದ್ದರೂ, ಇವರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯ.

೩೯. ಲೇಖಕರ 'ಶೃಂಗೇರಿ ಧರ್ಮಸಂಸ್ಥಾನ', ಪು. ೬೨–೬೫.

೪೦. ಕಡತ ೧೩೪, ದಾ. ೪೧.

೪೧. ಸ್ವ. ದಾ. ೫೧–೫೮.

೪೨. ಸ್ವಾ. ದಾ. ೫೦.
೪೩. ಸ್ವಾ. ದಾ. ೫೬.
೪೪. ಅಂದಿನ ಗವರ್ನರ್ ಜನರಲ್ ಲಾರ್ಡ್ ವೆಲ್ಲೆಸ್ಲಿಯಿಂದ ನೇಮಕಗೊಂಡ ಬುಕಾನನ್, ವೆಲ್ಲೆಸ್ಲಿಯ ಆದೇಶದ ಮೇರೆಗೆ, ಮೈಸೂರು, ಕೆನರಾ ಮತ್ತು ಮಲಬಾರಗಳಲ್ಲಿ ಸಂಚರಿಸಿ, ವೃತ್ತಾಂತ ನೀಡಿದನು. ಆ ವೃತ್ತಾಂತವೇ ಈಗ, 'ಎ ಜರ್ನಿ ಫ್ರಾಮ್ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ' (ಏಶಿಯನ್ ಎಜ್ಯುಕೇಶನ್ ಸರ್ವಿಸಸ್, ನ್ಯೂಡಿಲ್ಲಿ, ಮದ್ರಾಸ್, ೧೯೮೮) ಎಂಬ ಶಿರೋನಾಮೆಯಿರುವ ಮೂರು ಸಂಪುಟಗಳಲ್ಲಿ ಪ್ರಕಾಶಗೊಂಡಿದ್ದು, ಉತ್ತರಕನ್ನಡ ಜಿಲ್ಲೆಯ ವೃತ್ತಾಂತವನ್ನು ಮೂರನೆಯ ಸಂಪುಟದಲ್ಲಿ ನೀಡಲಾಗಿದೆ.
೪೫. ಸ್ವಾ. ದಾ. ೫೮–೧೦೬.
೪೬. ಸ್ವಾ. ದಾ. ೬೬.
೪೭. ಸ್ವಾ. ದಾ. ೭೩.
೪೮. ಸ್ವಾ. ದಾ. ೮೩.
೪೯. ಸ್ವಾ. ದಾ. ೮೫.
೫೦. ಸ್ವಾ. ದಾ. ೧೦೧.
೫೧. ಸ್ವಾ. ದಾ. ೧೦೩.
೫೨. ಸ್ವಾ. ದಾ. ೨೦೮–೨೨೩.
೫೩. ಸ್ವಾ. ದಾ. ೨೨೪–೨೯೨.
೫೪. ಸ್ವಾ. ದಾ. ೨೯೩–೩೯೪.

# ಶ್ರೀಮದ್ ಜಗದ್ಗುರು ಶಂಕರಾಚಾರ್ಯರ ಕುರಿತು ರಾಷ್ಟ್ರೀಯ ವಿಚಾರ ಸಂಕಿರಣದ ಸಮಾರೋಪ ಸಮಾರಂಭದಲ್ಲಿ

# ಶ್ರೀಮದ್ ಜಗದ್ಗುರು ಶಂಕರಾಚಾರ್ಯ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳು ಮಾಡಿದ ಸಮಾರೋಪ ಉಪನ್ಯಾಸ

ಓಂ ನಮೋ ಬ್ರಹ್ಮಾದಿಭ್ಯೋ ಬ್ರಹ್ಮವಿದ್ಯಾ ಸಂಪ್ರದಾಯ ಕರ್ತೃಭ್ಯೋ
ವಂಶ ಋಷಿಭ್ಯೋ ಮಹದ್ಭ್ಯೋ ನಮೋ ಗುರುಭ್ಯಃ ।

ಶ್ರೀ ಶಂಕರಾಚಾರ್ಯರ ಕುರಿತು ರಾಷ್ಟ್ರೀಯ ವಿಚಾರ ಸಂಕಿರಣದ ಸಮಾರೋಪ ಈಗ ನಡೆಯುತ್ತಿದೆ. ಸಮಾರೋಪ ಎಂದರೆ ಎಲ್ಲವನ್ನೂ ಒಮ್ಮೆ ಸಂಕ್ಷೇಪವಾಗಿ ಅವಲೋಕಿಸುವದು.

ಅನೇಕ ಕಡೆಗಳಲ್ಲಿ ಶ್ರೀ ಶಂಕರಾಚಾರ್ಯರನ್ನು ಕುರಿತು ವಿಚಾರ ಗೋಷ್ಠಿಗಳು ನಡೆಯುತ್ತಿರುವದನ್ನು ನಾವು ಕಾಣುತ್ತೇವೆ. ಅಲ್ಲೆಲ್ಲ ಶ್ರೀ ಶಂಕರಾಚಾರ್ಯರು ಯಾವಾಗ ಹುಟ್ಟಿದರು, ಎಲ್ಲಿ ಕಣ್ಮರೆಯಾದರು ? ಇವೇ ಚರ್ಚೆಯ ಪ್ರಧಾನ ವಿಷಯವಾಗಿರುತ್ತವೆ. ಆದರೆ ಇದೊಂದನ್ನೇ ಚರ್ಚೆ ಮಾಡುತ್ತಾ ಕುಳಿತರೆ ಏನು ಪ್ರಯೋಜನ ? ಇಲ್ಲಿಯ ವಿಚಾರ ಸಂಕಿರಣ ಒಂದು ಯೋಗ್ಯವಾದ ಭೂಮಿಕೆಯಲ್ಲಿ ನಡೆದಿದೆ. ವಿಷಯುಗಳನ್ನು ತುಂಬ ಉತ್ತಮವಾಗಿ ವಿಭಾಗ ಮಾಡಿದ್ದಾರೆ. ೧೯ ಉಪನ್ಯಾಸಗಳಲ್ಲಿ, ಆದಿ ಶಂಕರರ ಇತಿಹಾಸವನ್ನು ಕುರಿತು ಒಂದು ಪ್ರಬಂಧ ಮಂಡಿಸಲ್ಪಟ್ಟಿದೆ. ಉಳಿದವುಗಳೆಲ್ಲವೂ ಅವರ ಬೇರೆ ಬೇರೆ ಮುಖಗಳನ್ನು ಪರಿಚಯಿಸುವ ಪ್ರಯತ್ನಗಳು. ಇಲ್ಲಿಯ ಎಲ್ಲ ವಿಷಯಗಳೂ ಪ್ರಧಾನವಾದವುಗಳೇ. ಆದರೆ ನಮ್ಮ ದೃಷ್ಟಿಯಿಂದ ಎರಡು ವಿಷಯಗಳು ಎದ್ದು ಕಾಣುತ್ತವೆ. ಅವು –

೧. ಅದ್ವೈತ ಸಿದ್ಧಾಂತ ಮತ್ತು ವೈಜ್ಞಾನಿಕತೆ

೨. ಅದ್ವೈತ : ಒಂದು ಅನುಷ್ಠಾನ ವೇದಾಂತ

ಈ ಎರಡು ವಿಷಯಗಳು ಪ್ರಮುಖ; ಏಕೆಂದರೆ ಈ ಕಾಲದ ಜನರಿಗೆ ವೈಜ್ಞಾನಿಕ ಎನ್ನುವ ರೀತಿಯಲ್ಲಿ ಹೇಳದೇ ಇದ್ದರೆ ಅದು ಒಪ್ಪಿಗೆ ಆಗುವುದಿಲ್ಲ. ವೈಜ್ಞಾನಿಕತೆಯಿದ್ದರೆ ಶ್ರೀ ಶಂಕರರು ಈ ಕಾಲದಲ್ಲಿಯೂ ಪ್ರಸ್ತುತರಾಗುತ್ತಾರೆ. ಇನ್ನೊಂದು, ಇಷ್ಟೆಲ್ಲ

ವೇದಾಂತ ಹೇಳಿ ಪ್ರಯೋಜನವೇನು ? ಅನುಷ್ಠಾನ ತಾನೆ ? ಅನುಷ್ಠಾನಕ್ಕೆ ಬರದ ಸಿದ್ಧಾಂತದಿಂದ ಏನೂ ಪ್ರಯೋಜನವಿಲ್ಲ. ಆದ್ದರಿಂದ ನಮ್ಮ ದೃಷ್ಟಿಯಲ್ಲಿ ಇವೆರಡು ಹೆಚ್ಚು ಪ್ರಮುಖ.

ನಿನ್ನೆ ದಿನಾಂಕ ೦೩-೦೫-೨೦೦೦ ಮುಂಜಾನೆಯ ಗೋಷ್ಠಿ ತುಂಬ ಉತ್ತಮವಾಗಿ ನಡೆದಿದೆ. ಆ ಗೋಷ್ಠಿಯಲ್ಲಿ "ಅದ್ವೈತ ಸಿದ್ಧಾಂತ ಮತ್ತು ವೈಜ್ಞಾನಿಕತೆ" ಕುರಿತಾಗಿ ತುಂಬ ಹರಿತವಾದ, ಆಳವಾದ ಚಿಂತನೆ ನಡೆದಿದೆ. ನಮ್ಮ ಓಟ (ಗಮನಿಸುವಿಕೆ) ಅದರ ಓಟಕ್ಕೆ (ವಿಷಯ ಪ್ರತಿಪಾದನೆಗೆ) ಸರಿಸಮವಾಗಿಲ್ಲದ ಕಾರಣ, ಅದು ಎಷ್ಟು ಹರಿತ, ಎಷ್ಟು ಆಳ, ಎನ್ನುವುದು ಪೂರ್ತಿಯಾಗಿ ಗಮನಕ್ಕೆ ಬಂದಿಲ್ಲ. ಅದು ಪುಸ್ತಕದ ರೂಪದಲ್ಲಿ ಬಂದ ನಂತರ ಚೆನ್ನಾಗಿ ಅರಿಯಲು ಸಾಧ್ಯವಾಗುತ್ತದೆ.

ಬ್ರಹ್ಮಸೂತ್ರ ಭಾಷ್ಯದ ಎರಡನೇ ಅಧ್ಯಾಯದ ನಾಲ್ಕನೇ ಪಾದದ ಎಂಟನೇ ಸೂತ್ರದಲ್ಲಿ ಬರುವಂತಹ ವಿಷಯವು ಆಧುನಿಕ ವಿಜ್ಞಾನಕ್ಕೆ ಸಂವಾದಿಯಾಗಿರುವ ವಿಷಯವಾಗಿದೆ. ಶ್ರೀ ಶಂಕರರ ಗ್ರಂಥಗಳಲ್ಲಿ ಆಧುನಿಕ ವಿಜ್ಞಾನಕ್ಕೆ ಸರಿಹೊಂದುವ ಅನೇಕ ಸಂಗತಿಗಳು ನಿರೂಪಿಸಲ್ಪಟ್ಟಿವೆ, ಎಂಬುದಕ್ಕೆ ಇದೊಂದು ನಿದರ್ಶನ. ಅಲ್ಲಿ ಬಂದಂತಹ ವಿಷಯವೆಂದರೆ– ನಮ್ಮಲ್ಲಿರತಕ್ಕಂತಹ ಪ್ರಾಣಗಳು, ಇಂದ್ರಿಯಗಳು ಯಾವ ಯಾವವು ? ಅವು ಹೇಗೆ ಕೆಲಸ ಮಾಡುತ್ತವೆ ? ಅವು ಒಂದಕ್ಕೊಂದು ಪೂರಕವೇ ? ಅವೆಲ್ಲವೂ ಒಂದೆಯೋ ಅಥವಾ ಬೇರೆ ಬೇರೆಯೆ ? ಹೀಗೆ ವಿಸ್ತಾರವಾಗಿ ಅಲ್ಲಿ ಚಿಂತನೆ ನಡೆಯುತ್ತದೆ. ಅವೆಲ್ಲವೂ ಅತ್ಯಂತ ವೈಜ್ಞಾನಿಕವಾದ ವಿಚಾರಗಳು. ಆದರೆ ಅವೆಲ್ಲವನ್ನೂ ಇಲ್ಲಿ ಹೇಳಲಿಕ್ಕೆ ಸಾಧ್ಯವಾಗುವುದಿಲ್ಲ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಪಂಚ ಪ್ರಾಣಗಳು, ಪಂಚ ಜ್ಞಾನೇಂದ್ರಿಯಗಳು ಮತ್ತು ಪಂಚ ಕರ್ಮೇಂದ್ರಿಯಗಳು. ಇವೆಲ್ಲವುಗಳನ್ನೂ ವೇದಾಂತವಲ್ಲಿ 'ಪ್ರಾಣ' ಎಂಬ ಶಬ್ದದಿಂದ ಕರೆಯುತ್ತಾರೆ. ಈ ಎಲ್ಲ ಪ್ರಾಣಗಳ ಪೈಕಿ ಶ್ರೇಷ್ಠನಾದವನು, ಜ್ಯೇಷ್ಠನಾದಂಥವನು ಮುಖ್ಯಪ್ರಾಣ. ಮುಖ್ಯ ಎಂಬ ಶಬ್ದಕ್ಕೆ ಎರಡು ಅರ್ಥ– ಒಂದು ಮುಖದಲ್ಲಿ ಇದ್ದಂಥವನು ಎಂಬರ್ಥ, ಇನ್ನೊಂದು ಪ್ರಧಾನ ಎಂದರ್ಥ. ಆ ಸಂದರ್ಭದಲ್ಲಿ ಆಚಾರ್ಯರು ತಮ್ಮ ಭಾಷ್ಯದಲ್ಲಿ ಹೇಳಿದ ಒಂದು ಮಾತು ಅದ್ಭುತವಾದದ್ದೂ ವೈಜ್ಞಾನಿಕವಾದದ್ದೂ ಆಗಿದೆ–

> ಜ್ಯೇಷ್ಠಶ್ಚ ಪ್ರಾಣಃ ।
> ಶುಕ್ರ ನಿಷೇಕಕಾಲಾದಾರಭ್ಯ ತಸ್ಯ ವೃತ್ತಿಲಾಭಾತ್ ॥
> ನ ಚೇತ್ ತಸ್ಯ ತದಾನೀಂ ವೃತ್ತಿಲಾಭಃ ಸ್ಯಾತ್ ।
> ಯೋನೌ ನಿಷಿಕ್ತಂ ಶುಕ್ರಂ। ಪೂಯೇತ ನ ಸಂಭವೇತ್ ವಾ ॥

ಇದರ ಅರ್ಥ:- ಮುಖ್ಯ ಪ್ರಾಣ ಉಳಿದೆಲ್ಲ ಪ್ರಾಣಕ್ಕಿಂತ ಜ್ಯೇಷ್ಠವಾದದ್ದು. ಜ್ಯೇಷ್ಠ ಎಂದರೆ ಉಳಿದ ಪ್ರಾಣಗಳಿಗೆ ಹಿರಿಯಣ್ಣ, ಮೊದಲೇ ಬಂದಿದ್ದು ಎಂದರ್ಥ. ಏಕೆಂದರೆ ಈ ಜೀವಾತ್ಮ ಮೊಟ್ಟಮೊದಲು ತಾಯಿಯ ಗರ್ಭಕ್ಕೆ ಬಂದಾಗಲೇ ಪ್ರಾಣ ಇದ್ದಾನೆ. ಉಳಿದ ಅಪಾನ, ವ್ಯಾನ, ಉದಾನ, ಸಮಾನಗಳು, ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳು, ಶ್ರೋತ್ರ, ಚಕ್ಷು, ರಸನ, ಜಿಹ್ವೆ, ಘ್ರಾಣಗಳು ಇವೆಲ್ಲ ಆನಂತರ ವ್ಯಕ್ತವಾಗಿ

ಬಂದವರು. ಅವನು ಮೊದಲೇ ಇದ್ದವನು ಎಂಬುದಕ್ಕೆ ಆಚಾರ್ಯರು ಕೊಟ್ಟ ಕಾರಣವೆಂದರೆ 'ಶುಕ್ರ ನಿಶೇಕ ಕಾಲಾದಾರಭ್ಯ ತಸ್ಯ ವೃತ್ತಿಲಾಭಾತ್' ಯಾವೊತ್ತು ತಾಯಿಯ ಗರ್ಭದಲ್ಲಿ ಪ್ರವೇಶವಾಯಿತೋ, ಆ ಹೊತ್ತಿನಿಂದಲೇ ಅವನು (ಮುಖ್ಯ ಪ್ರಾಣನು) ಇದ್ದಾನೆ. ಆ ಹೊತ್ತಿನಿಂದಲೇ ಮುಖ್ಯಪ್ರಾಣ ಇದ್ದಾನೆ, ಎನ್ನುವುದಕ್ಕೆ ಪ್ರಮಾಣವೇನು ? ಇದಕ್ಕೆ ಅವರು ಹೀಗೆ ಉತ್ತರ ಕೊಡುತ್ತಾರೆ. ಆಗಲೇ ಆ ಬೀಜದಲ್ಲಿ ಪ್ರಾಣ ಇಲ್ಲದೇ ಇದ್ದರೆ, ಅಲ್ಲಿ ನಿಕ್ಷೇಪಿಸಲ್ಪಟ್ಟ ನಂತರ ಅದು ಒಣಗಿ ಹೋಗಬೇಕಾಗಿತ್ತು. ಅಥವಾ ಗರ್ಭವಾಗದೇ ಹೋಗಬೇಕಾಗುತ್ತಿತ್ತು. ಅನಂತರ ಅದರ ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಎರಡು ಧಾತುಗಳು ಪರಸ್ಪರ ಸೇರಿ, ಕ್ರಮೇಣ ಶಿಶುವಾಗುತ್ತದೆ. ಪ್ರಸೂತಿ ವೈದ್ಯರ ಜೊತೆಯಲ್ಲಿ ಸಮಾಲೋಚನೆ ಮಾಡಿ ಇದನ್ನು (ತುಂಬಾ ಮೊದಲಿನಿಂದಲೇ ಭ್ರೂಣಕ್ಕೆ ಪ್ರಾಣ ಇರುತ್ತದೆಯೆಂಬುದನ್ನು) ಖಚಿತಪಡಿಸಿಕೊಳ್ಳಲಾಗಿದೆ. ಶ್ರೀ ಶಂಕರಾಚಾರ್ಯರು ಯಾವ ಪ್ರಯೋಗಾಲಯಕ್ಕೂ ಹೋಗದೆ ಈ ವೈಜ್ಞಾನಿಕ ದೃಷ್ಟಿಯನ್ನು ಹೇಗೆ ಪಡೆದರು ಎಂಬುದು ಅರ್ಥವಾಗದ ವಿಷಯ. ಇಂಥ ಇನ್ನೂ ಅನೇಕ ವಿಷಯಗಳು ಅಲ್ಲಲ್ಲಿ ಗಮನಕ್ಕೆ ಬರುತ್ತವೆ. ಅವುಗಳಲ್ಲಿ ಕೆಲವು ಸ್ಪಷ್ಟವಾಗಿ ವೈಜ್ಞಾನಿಕ ಎಂದು ಗೊತ್ತಾಗಿದೆ, ಇನ್ನೂ ವೈಜ್ಞಾನಿಕ ಎಂದು ಗೊತ್ತಾಗದೇ ಇದ್ದದ್ದು, ಮುಂದೆ ಯಾವುದೋ ಕಾಲದಲ್ಲಿ ವಿಜ್ಞಾನಿಗಳು 'ಇದು ಸತ್ಯ' ಎಂದು ಹೇಳಿದ ಮೇಲೆ ನಮಗೆ ಎಚ್ಚರವಾಗುವಂಥ ವಿಷಯಗಳು ಎಷ್ಟಿವೆಯೋ ಗೊತ್ತಿಲ್ಲ ! ಅಂಥ ವೈಜ್ಞಾನಿಕತೆ ಆಚಾರ್ಯರ ಭಾಷ್ಯದಲ್ಲಿ ಓತ-ಪ್ರೋತವಾಗಿ ತುಂಬಿದೆ ಎಂದರೆ ತಪ್ಪಲ್ಲ.

ಶ್ರೀ ಲಕ್ಷ್ಮೀಶ ತೋಳ್ಪಾಡಿಯವರು ಅತ್ಯಂತ ನಿಷ್ಕೃಷ್ಟವಾದ ಶಬ್ದಗಳಿಂದ "ಅದ್ವೈತ ಒಂದು ಅನುಷ್ಠಾನ ವೇದಾಂತ" ಎಂಬುದನ್ನು ಪ್ರಸ್ತುತ ಪಡಿಸಿದ್ದಾರೆ. ಆದರೆ ಶ್ರೀ ಶಂಕರರ ಅನುಷ್ಠಾನ ವೇದಾಂತಕ್ಕೆ ಶ್ರೀ ಶಂಕರರೇ ಬರೆದ **"ಉಪದೇಶ ಪಂಚಕಮ್"** ಕೃತಿಯು ಬಹು ಉತ್ತಮವಾದ ನಿದರ್ಶನ. ಅವರು ಅದರಲ್ಲಿ ಅನುಷ್ಠಾನವನ್ನು ಹೇಗೆ ಮಾಡಬೇಕು ಎನ್ನುವುದನ್ನು ಸಂಕ್ಷೇಪದಲ್ಲಿ, ಉತ್ತಮವಾಗಿ ಕೊಟ್ಟಿದ್ದಾರೆ. ಇದನ್ನೇ ಸಾಧನ ಪಂಚಕ ಅಥವಾ ಸೋಪಾನ ಪಂಚಕ ಎಂದೂ ಹೇಳುವುದುಂಟು. ಇದು ವೇದಾಂತ ಸಾಧನೆಯ ಅತ್ಯಂತ ಕೊನೆಯ ಹಂತ

"ಅಥ ಪರಬ್ರಹ್ಮಾತ್ಮನಾಸ್ಥೀಯತಾಮ್ ॥"

ಅಂದರೆ ಪರಬ್ರಹ್ಮವೇ ಆಗುವುದು. ಇನ್ನೂ ಚೆನ್ನಾದ ಶಬ್ದಗಳಲ್ಲಿ ಹೇಳುವುದಾದರೆ— ತಾನು ಮೊದಲೇ ಪರಬ್ರಹ್ಮನಾಗಿದ್ದುದನ್ನು ಕಂಡುಕೊಳ್ಳುವದು. ಅದೇ ಪ್ರತಿಯೊಬ್ಬ ಮಾನವನ ಪರಮ-ಚರಮ ಲಕ್ಷ್ಯ. ಆ ಸ್ಥಿತಿಗೆ ಹೋಗಬೇಕಾದರೆ, ಹಿಂದೆ ೩೯ ಮೆಟ್ಟಿಲುಗಳಿವೆ. ಅವುಗಳನ್ನೇ ಈ ಸ್ತೋತ್ರದಲ್ಲಿ ಪ್ರತಿಪಾದನೆ ಮಾಡಲಾಗಿದೆ.

**ವೇದೋ ನಿತ್ಯಮಧೀಯತಾಂ ತದುದಿತಂ ಕರ್ಮಸ್ವನುಷ್ಠೀಯತಾಂ**
**ತೇನೇಶಸ್ಯ ವಿಧೀಯತಾಮಪಚಿತಿಃ ಕಾಮ್ಯೇ ಮತಿಸ್ತ್ಯಜ್ಯತಾಮ್ ।**
**ಪಾಪೌಘಃ ಪರಿಧೂಯತಾಂ ಭವಸುಖೇ ದೋಷೋಽನುಸಂಧೀಯತಾಂ**
**ಆತ್ಮೇಚ್ಛಾ ವ್ಯವಸೀಯತಾಂ ನಿಜಗೃಹಾತ್ತೂರ್ಣಂ ವಿನಿರ್ಗಮ್ಯತಾಮ್ ॥ ೧ ॥**

ಸಾಧಕನು ಏರಬೇಕಾದ ಮೆಟ್ಟಿಲುಗಳಲ್ಲಿ –

**ಒಂದನೇ ಮೆಟ್ಟಿಲು :** ವೇದೋ ನಿತ್ಯಮಧೀಯತಾಮ್ ।

ವೇದಾಧ್ಯಯನವನ್ನು ನಿತ್ಯವೂ ಮಾಡಬೇಕು.

**ಎರಡನೇ ಮೆಟ್ಟಿಲು :** ತದುದಿತಂ ಕರ್ಮ ಸ್ವನುಷ್ಠೀಯತಾಮ್ ।

ವೇದೋಕ್ತವಾದ, ಶಾಸ್ತ್ರೋಕ್ತವಾದ ಕರ್ಮವನ್ನು ಚೆನ್ನಾಗಿ ಅನುಷ್ಠಾನ ಮಾಡಬೇಕು.

**ಮೂರನೇ ಮೆಟ್ಟಿಲು :** ತೇನೇಶಸ್ಯ ವಿಧೀಯತಾಮ್ ಅಪಚಿತಿಃ ।

ಆ ಕರ್ಮವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಬೇಕು. ಅದರ ಫಲವನ್ನೂ ಕರ್ಮವನ್ನೂ ಹಾರ್ದಿಕವಾಗಿ ಅವನಿಗೆ ಅರ್ಪಿಸಬೇಕು. ನಾವೆಲ್ಲರೂ "ಶ್ರೀ ಪರಮೇಶ್ವರಃ ಪ್ರಿಯತಾಮ್" ಎಂದು ಕರ್ಮಾಂತ್ಯದಲ್ಲಿ ಅಕ್ಷತದೊಂದಿಗೆ ನೀರು ಬೆರೆಸಿ ಚೆಲ್ಲಿಬಿಡುತ್ತೇವೆ. ಆ ಅಕ್ಷತವೂ. ನೀರೂ ಎಲ್ಲಿಗೆ ಹೋಯಿತೋ ಗೊತ್ತಿಲ್ಲ. ಇವನ ಭಾವನೆಯೂ ಎಲ್ಲಿಗೆ ಹೋಯಿತೋ ಗೊತ್ತಿಲ್ಲ. ಹಾರ್ದಿಕವಾಗಿ ಪರಮೇಶ್ವರನನ್ನು ಸ್ಮರಿಸಿ, "ತಗೋ, ಇದೆಲ್ಲವೂ ನಿನಗೆ" ಎಂಬ ಸಮರ್ಪಣ ಭಾವದಿಂದ ಅದು ಕೊಡುವಂತಹದಾಗಬೇಕು.

**ನಾಲ್ಕನೇ ಮೆಟ್ಟಿಲು :** ಕಾಮ್ಯೇ ಮತಿಸ್ತ್ಯಜ್ಯತಾಮ್ ।

ಕಾಮ್ಯ ಕರ್ಮಗಳನ್ನು ಬಿಡಬೇಕು. ನಿತ್ಯ–ನೈಮಿತ್ತಿಕ ಕರ್ಮಗಳಲ್ಲೇ ತೊಡಗಬೇಕು. ಹೀಗೆ ಮಾಡುವುದರಿಂದ ಸಾಧಕನು ಐದನೇ ಮೆಟ್ಟಿಲಿಗೆ ಏರುತ್ತಾನೆ. ಅಂದರೆ ಪಾಪರಾಶಿಗಳೆಲ್ಲ ಕ್ಷಯಿಸುತ್ತವೆ.

**ಐದನೇ ಮೆಟ್ಟಿಲು :** ಪಾಪೌಘಃ ಪರಿಧೂಯತಾಂ,

**ಆರನೇ ಮೆಟ್ಟಿಲು :** ಭವಸುಖೇ ದೋಷೋನುಸಂಧೀಯತಾಂ ।

ಯಾವಾಗ ಒಳಗಿದ್ದ ಪಾಪ ಕ್ಷೀಣವಾಗುತ್ತದೆಯೋ, ಆಗ ಇಲ್ಲಿಯ ವಸ್ತುಸ್ಥಿತಿ ಅರ್ಥವಾಗಲು ಪ್ರಾರಂಭವಾಗುತ್ತದೆ. ಐಹಿಕವಾದ ಸುಖ ನಿಜವಾದ ಸುಖ ಹೌದೇ ಅಲ್ಲವೇ ? ಇದು ಶಾಶ್ವತವೇ ? ಹೀಗೆ ಮೊದಲು ಪ್ರಶ್ನೆಗಳು ಮೂಡುತ್ತವೆ. ಆಮೇಲೆ ಸ್ಪಷ್ಟ ಉತ್ತರಗಳು ಅವನ ಮನಸ್ಸಿನಲ್ಲಿ ಪ್ರಾರಂಭವಾಗುತ್ತವೆ. ಇದಾವುದೂ ಶಾಶ್ವತವಲ್ಲ, ಇದಾವುದೂ ಶ್ರೇಷ್ಠವಾದ ಸುಖವಲ್ಲ ಎಂಬ ಅರಿವು ಮೂಡುತ್ತದೆ. ಈ ಅರಿವನ್ನು ಸದಾ ಜಾಗೃತವಾಗಿಟ್ಟುಕೊಳ್ಳುವ ಪ್ರಯತ್ನವಾಗಬೇಕು.

**ಏಳನೇ ಮೆಟ್ಟಿಲು :** ಆತ್ಮೇಚ್ಛಾ ವ್ಯವಸೀಯತಾಂ ।

ಉಪನಿಷತ್ತುಗಳು, ಆಚಾರ್ಯರು, ಶಾಸ್ತ್ರಗಳು, ಹೇಳುತ್ತವೆ– ಆ ಪರಬ್ರಹ್ಮರೂಪವಾದ ಆನಂದವೇ ಶ್ರೇಷ್ಠವಾದ, ನಿತ್ಯವಾದ ಆನಂದ. ಐಹಿಕ

ಸುಖ ನಿಜಸುಖವಲ್ಲ ಎಂದು ಆಚಾರ್ಯರು ಹೇಳುತ್ತಾರೆ. ಪರಬ್ರಹ್ಮವೇ ನಿಜವಾದ ಆನಂದ ಎಂಬುದನ್ನು ಪುನಃ ಪುನಃ ಅನುಸಂಧಾನ ಮಾಡುವದರಿಂದ ಆತ್ಮೇಚ್ಛೆ ಅಂದರೆ ಪರಮಾತ್ಮನನ್ನು ಪಡೆಯಬೇಕೆಂಬ ಇಚ್ಛೆ ಅಂಕುರಿಸುತ್ತದೆ, ಬೆಳೆಯುತ್ತದೆ. ಅದು ಬೆಳೆದಾಗ ಮುಂದಿನ ಮೆಟ್ಟಿಲು.

**ಎಂಟನೇ ಮೆಟ್ಟಿಲು :** ನಿಜಗೃಹಾತ್ತೂರ್ಣಂ ವಿನಿರ್ಗಮ್ಯತಾಂ ।

ಆ ಆನಂದ ಸಿಗಬೇಕಾದರೆ ಪುನಃ ಪುನಃ ಮೋಹಕ್ಕೆ ಸಿಲುಕಿಸುವ ಮನೆ. ಆಸ್ತಿ ಇದನ್ನೆಲ್ಲ ಬಿಟ್ಟುಬಿಡಬೇಕು.

ನಾವೆಲ್ಲರೂ ಹೆಚ್ಚಾಗಿ ಹೇಳುವುದು ಇದೊಂದೇ ಶ್ಲೋಕವನ್ನೇ. ಮತ್ತೆ ನಮ್ಮೆಲ್ಲರ ಆಲೋಚನೆಯೂ ಹೆಚ್ಚೆಂದರೆ ನಿಲ್ಲುವದು ಈ ಶ್ಲೋಕದಲ್ಲಿಯೇ. ಇದಕ್ಕೂ ಮುಂದೆ ನಮ್ಮ ಆಚರಣೆಯೇ ಹೋಗುವದಿಲ್ಲ. ಏಕೆಂದರೆ ಮನೆ-ಮಠ ಎಲ್ಲ ಬಿಟ್ಟು ಹೋಗಲಿಕ್ಕೆ ಸಾಧ್ಯವಿಲ್ಲ; ಗೃಹಸ್ಥರಾದರೆ ಮನೆ, ಸನ್ಯಾಸಿಗಳಾದರೆ ಮಠ. ಇವರಿಗೆ ಮಠ ಬಿಟ್ಟು ಇರಲಿಕ್ಕಾಗುವುದಿಲ್ಲ, ಗೃಹಸ್ಥರಿಗೆ ಮನೆ ಬಿಟ್ಟು ಇರಲಿಕ್ಕಾಗುವುದಿಲ್ಲ. ವ್ಯತ್ಯಾಸ ಏನೇನೂ ಇಲ್ಲ. ಆದರೆ ಅನುಷ್ಠಾನ ವೇದಾಂತದ ದಾರಿ ಹೇಗಿದೆ. ಎನ್ನುವದನ್ನು ಎಲ್ಲರೂ ತಿಳಿದುಕೊಳ್ಳಬೇಕು. ಮುಂದೆ ಎಂದಾದರೂ ಅವಕಾಶ ಬಂದಾಗ ಆ ದಾರಿಯಲ್ಲಿ ಹೋಗಲು ಸಾಧ್ಯವಾದೀತು.

**ಸಂಗಃಸತ್ಸು ವಿಧೀಯತಾಂ ಭಗವತೋ ಭಕ್ತಿರ್ದೃಢಾಧೀಯತಾಂ**
**ಶಾಂತ್ಯಾದಿಃ ಪರಿಚೀಯತಾಂ ದೃಢತರಂ ಕರ್ಮಾಶು ಸಂತ್ಯಜ್ಯತಾಮ್ ।**
**ಸದ್ವಿದ್ವಾನುಪಸೃಪ್ಯತಾಂ ಪ್ರತಿದಿನಂ ತತ್ಪಾದುಕಾ ಸೇವ್ಯತಾಂ**
**ಬ್ರಹ್ಮೈಕಾಕ್ಷರಮರ್ಥ್ಯತಾಂ ಶ್ರುತಿಶಿರೋವಾಕ್ಯಂ ಸಮಾಕರ್ಣ್ಯತಾಮ್ ॥ ೨ ॥**

**ಒಂಬತ್ತನೇ ಮೆಟ್ಟಿಲು :** ಸಂಗಸ್ಸತ್ಸು ವಿಧೀಯತಾಂ ।

ಮನೆ ಬಿಟ್ಟು ಎಲ್ಲಿಗೆ ಹೋಗುವದು ? ಸತ್ಸಂಗಕ್ಕೆ ಹೋಗಬೇಕು. ಮಹಾತ್ಮರ ಸಹವಾಸ ಮಾಡಬೇಕು.

**ಹತ್ತನೇ ಮೆಟ್ಟಿಲು :** ಭಗವತೋ ಭಕ್ತಿರ್ದೃಢಾಧೀಯತಾಂ ।

ಭಗವಂತನ ಕುರಿತಾಗಿ ದೃಢವಾದ ಭಕ್ತಿಯನ್ನು ಬೆಳೆಸಿಕೊಳ್ಳಿ. ಹಾಗೆ ಬೆಳೆಸಿಕೊಳ್ಳಲು ಅನೇಕ ಉಪಾಯಗಳಿವೆ. ಭಗವಂತನ ಲೀಲೆಯನ್ನು ಆಸ್ವಾದಿಸುವದು, ಅವನ ಕೀರ್ತನೆ, ಅವನ ಪೂಜೆ ಇತ್ಯಾದಿಗಳನ್ನು ಮಾಡುವದು.

**ಹನ್ನೊಂದನೇ ಮೆಟ್ಟಿಲು :** ಶಾಂತ್ಯಾದಿಃ ಪರಿಚೀಯತಾಂ ।

ಭಕ್ತಿಯಿಂದ ಶಮ, ದಮ ಇತ್ಯಾದಿ ಆತ್ಮಗುಣಗಳು ಅವನಲ್ಲಿ ಉಂಟಾಗುತ್ತವೆ. ಶಮ ಎಂದರೆ ಮನಸ್ಸಿನ ನಿಗ್ರಹ, ದಮ ಎಂದರೆ ಹೊರಗಿನ

ಇಂದ್ರಿಯಗಳ ನಿಗ್ರಹ. ಮನಸ್ಸಿನ ನಿಗ್ರಹ ಚೆನ್ನಾಗಿ ಆಗಿಬಿಟ್ಟರೆ ಹೊರಗಿನ ಇಂದ್ರಿಯಗಳ ನಿಗ್ರಹ ತಾನಾಗಿಯೇ ಆಗಿಬಿಡುತ್ತದೆ. ಅಂಥವನ ಮುಖ ನೋಡಿದಾಗಲೇ ಗೊತ್ತಾಗಿಬಿಡುತ್ತದೆ. ಶಮ ಗುಣ ತುಂಬಿಕೊಂಡಿದ್ದರೆ ಅವರ ಮುಖದಲ್ಲಿ, ನಡೆಯಲ್ಲಿ ನುಡಿಯಲ್ಲಿ ವಿನಯ ಕಾಣುತ್ತದೆ. (ಜಿತೇಂದ್ರಿಯನಾದರೆ ವಿನಯವುಂಟಾಗುತ್ತದೆ) ಎಂಬುದಾಗಿ ಸುಭಾಷಿತ ಹೇಳುತ್ತದೆ.

ಉಪನಿಷತ್ತಿನಲ್ಲಿ "ಸತ್ಯಕಾಮ ಜಾಬಾಲ" ಎನ್ನುವವನ ಕಥೆ ಬರುತ್ತದೆ. ಸತ್ಯಕಾಮ ಒಬ್ಬ ಸಣ್ಣ ಬಾಲಕ. ಒಂದು ದಿನ ಮಹಾತ್ಮರೊಬ್ಬರ ದರ್ಶನವಾಯಿತು. ಅವರು ತಮ್ಮ ಶಿಷ್ಯರನ್ನೆಲ್ಲ ಕೂಡಿಸಿಕೊಂಡು ವೇದಾಂತವನ್ನು ಹೇಳುತ್ತಾ ಇದ್ದರು. ಆಗ ಅವನಿಗೆ ತಾನೂ ಅದನ್ನು ಕಲಿಯಬೇಕೆಂದೆನಿಸಿತು.

**ಸತ್ಯಕಾಮ :** ಗುರುಗಳೇ, ಅದನ್ನು ನನಗೂ ಹೇಳಿಕೊಡುತ್ತೀರಾ ?

ಆ ಕಾಲದ ಸಂಪ್ರದಾಯದಂತೆ ಗುರುಗಳು ಹೇಳುತ್ತಾರೆ.

**ಗುರು :** ನೀನು ಯಾರ ಮಗ ? ನಿನ್ನ ಕುಲಗೋತ್ರ ಯಾವುದು ?

**ಸತ್ಯಕಾಮ :** ನನಗೊಂದೂ ಗೊತ್ತಿಲ್ಲ.

**ಗುರು :** " ಸರಿ, ನೀನು ಮನೆಗೆ ಹೋಗಿ ಕೇಳಿಕೊಂಡು ಬಾ. "

ಸತ್ಯಕಾಮನು ಮನೆಗೆ ಬರುತ್ತಾನೆ. ಇದುವರೆಗೆ ಅವನು ತಂದೆಯನ್ನು ನೋಡಿಯೇ ಇಲ್ಲ, ತಂದೆ ಗೊತ್ತಿಲ್ಲ. ತಾಯಿಯಷ್ಟೇ ಇದ್ದಾಳೆ. ತಾಯಿಯನ್ನು ಕೇಳುತ್ತಾನೆ.

**ಸತ್ಯಕಾಮ :** "ಅಮ್ಮಾ, ನಾನು ವಿದ್ಯಾಭ್ಯಾಸಕ್ಕೆ ಹೋಗಬೇಕು. ನನ್ನ ತಂದೆ ಯಾರು ? ನನ್ನ ಗೋತ್ರ ಯಾವುದು, ಹೇಳುತ್ತೀಯಾ ?" ತಾಯಿ ಆಲೋಚನೆ ಮಾಡಿ ಹೇಳಿದಳು.

**ತಾಯಿ :** ಇಲ್ಲ, ನನಗೂ ಕೂಡ ಗೊತ್ತಿಲ್ಲ.

ಅದರ ಗುಟ್ಟೇನು ? ಅದು ಯಾಕೆ ಹೀಗಾಯಿತು ? ತಾಯಿಯೊಬ್ಬಳಿಗೆ ತನ್ನ ಮಗನ ತಂದೆ ಯಾರು ಎಂತ ಗೊತ್ತಿಲ್ಲವೇ ? ಇದೊಂದು ಗಹನವಾದ ವಿಷಯ. ಇದನ್ನು ಕುರಿತು ಈಗ ಪ್ರಸ್ತಾಪ ಬೇಡ.

**ತಾಯಿ :** ನಾನು ಜಬಲಾ. ನನ್ನ ಮಗ ನೀನು ಜಾಬಾಲ. ಇಷ್ಟು ಮಾತ್ರ ಗೊತ್ತು ನನಗೆ.

ಆ ಹುಡುಗ ಗುರುಗಳಲ್ಲಿ ಬಂದು ಹೇಳುತ್ತಾನೆ.

**ಸತ್ಯಕಾಮ :** ತಾಯಿಯನ್ನು ಕೇಳಿದೆ ಗುರುಗಳೆ. ನನಗೆ ನನ್ನ ತಂದೆ ಯಾರು ಎಂತ ಗೊತ್ತಿಲ್ಲ. ನನಗೆ ನನ್ನ ಗೋತ್ರ ಯಾವುದು ಎಂತಲೂ ಗೊತ್ತಿಲ್ಲ. ಜಬಲಾ ಎಂಬ ಸ್ತ್ರೀಯ ಮಗನಾದ ನಾನು ಜಾಬಾಲ.

ಇಷ್ಟು ಹೇಳಿ ನಮಸ್ಕಾರ ಮಾಡಿದ. ಆ ಗುರುಗಳಿಗೆ ತುಂಬ ಖುಷಿ ಆಯಿತು. ಅವರು ಹೇಳಿದರು,

**ಗುರು :** " ನೀನು ಸತ್ಯವಾಡಿದ್ದೀಯೆ. ಚೊಕ್ಕ ಮನಸ್ಸನ್ನು ಬಿಚ್ಚಿಟ್ಟಿದ್ದೀಯೆ. ಇದು ನಿನ್ನ ಯೋಗ್ಯತೆಯನ್ನು ತೋರಿಸುತ್ತದೆ. ಆದ್ದರಿಂದ ನಾನು ಕಂಡುಕೊಂಡಂತೆ ನಿನಗೆ ವೇದಾಂತವನ್ನು ಓದುವ ಯೋಗ್ಯತೆ ಇದೆ. ಬಾ, ನಿನಗೆ ಉಪನಯನ ಮಾಡುತ್ತೇನೆ, ಅಧ್ಯಯನ ಮಾಡಿಸುತ್ತೇನೆ. "

ಹೀಗೆ ಹೇಳಿ ಅವನಿಗೆ ಎಲ್ಲವನ್ನೂ ಉಪದೇಶ ಮಾಡಿದರು. ಹಾಗಾಗಿ ಉಪದೇಶಕ್ಕೆ ಪಾತ್ರತ್ವ ಬರುವುದು ಇಂತಹ ಸದ್ಗುಣಗಳಿಂದ.

**ಹನ್ನೆರಡನೇ ಮೆಟ್ಟಿಲು :** ದೃಢತರಂ ಕರ್ಮಾಶು ಸಂತ್ಯಜ್ಯತಾಂ ।

ಹನ್ನೊಂದನೆ ಮೆಟ್ಟಿಲು ಕಳೆದ ನಂತರ ಕರ್ಮದ ಸಂನ್ಯಾಸ– ಅಂದರೆ ಅವನು -ಶಮ ದಮಾದಿಗಳಲ್ಲೇ ತೊಡಗಬೇಕು. ಬಾಹ್ಯ ಕರ್ಮಗಳನ್ನು ಬಿಡಬೇಕು.

**ಹದಿಮೂರನೇ ಮೆಟ್ಟಿಲು :** ಸದ್ವಿದ್ವಾನುಪಸೃಪ್ಯತಾಂ, ಪ್ರತಿದಿನಂ ತತ್ಪಾದುಕಾ ಸೇವ್ಯತಾಂ ।

ಬ್ರಹ್ಮಜ್ಞಾನಿಯಾದ, ಶ್ರೋತ್ರಿಯನೂ ಆದ ಆಚಾರ್ಯನಲ್ಲಿ ಹೋಗಿ ಶರಣಾಗು, ಅವನ ಸೇವೆ ಮಾಡು. ಎಂದು ತಾಯಿಯ ಹತ್ತಿರ ಹತ್ತಾರು ಸಲ ಹೇಳಿದರೂ ಒಪ್ಪಿಗೆ ಕೊಡಲಿಲ್ಲ. ಕೊನೆಗೆ ಮೊಸಳೆ ಬಂದು ಹಿಡಿಯಿತು......... ಇತ್ಯಾದಿ ಘಟನೆಗಳು ನಡೆದವು. ಅನಂತರ ಯಾವದೋ ಒಂದು ಅನಿವಾರ್ಯಕ್ಕೆ ಸಿಕ್ಕಿ ತಾಯಿ ಒಪ್ಪಿಗೆ ಕೊಟ್ಟಳು. ತಾಯಿಯ ಆಜ್ಞೆ ಪಡೆದ ಶಂಕರ ಭಗವತ್ಪಾದರು ಯೋಗ್ಯವಾದ ಗುರುವನ್ನು ಅರಸುವದಕ್ಕಾಗಿ ಹೊರಡುತ್ತಾರೆ.

ಗುರುವಿನ ಆಯ್ಕೆಯಲ್ಲಿ ಒಂದು ವಿಶೇಷವಿದೆ. ಶಿಷ್ಯನು ಯೋಗ್ಯನಲ್ಲ ಎಂದು ಕಂಡುಬಂದಾಗ ಗುರು ಅವನನ್ನು ಬಿಡಬಹುದು. ಹಾಗೆಯೇ ಗುರುವು ಯೋಗ್ಯನಲ್ಲ ಎಂದು ಚೆನ್ನಾಗಿ ತಿಳಿದಾಗ ಶಿಷ್ಯ ಗುರುವನ್ನು ಬಿಡಬಹುದು ಎಂಬುದೂ ಇದೆ. ಅದಕ್ಕಾಗಿಯೇ ಆಚಾರ್ಯರು ಕೇರಳದ ಕಾಲಟಿಯಿಂದ ಸಂಚರಿಸುತ್ತ ನರ್ಮದಾ ನದಿಯ ತೀರದಲ್ಲಿಯ ಓಂಕಾರೇಶ್ವರಕ್ಕೆ ಬರುತ್ತಾರೆ. ಓಂಕಾರೇಶ್ವರದಲ್ಲಿ ಇದ್ದ ಶ್ರೀ ಗೋವಿಂದ ಭಗವತ್ಪಾದರು ಒಬ್ಬ ಮಹಾತ್ಮರು, ಸಕಲಶಾಸ್ತ್ರಜ್ಞರು, ವೇದಗಳಲ್ಲಿ ಪರಿಣತರು, ಇಷ್ಟೇ ಅಲ್ಲ, ಒಬ್ಬ ಅನುಭಾವಿಗಳು ಎಂದು ತಿಳಿದಾಕ್ಷಣ, ಅವರೇ ತನಗೆ ತಕ್ಕದಾದ ಗುರು ಎಂದು ಮನಸ್ಸಿನಲ್ಲಿ ಮಾಡಿಕೊಂಡು ಅವರಲ್ಲಿ ಶರಣಾಗತಿಯನ್ನು

ಹೊಂದುತ್ತಾರೆ. ಅವರ ಅನುಗ್ರಹದಿಂದ ಸಂನ್ಯಾಸ ದೀಕ್ಷೆ, ವೇದಾಂತ ಅಧ್ಯಯನ ಎಲ್ಲ ಆಯಿತು ಎಂಬುದಾಗಿ ಈಗ ನಮಗೆ ಕಂಡು ಬರುವ ಶ್ರೀ ಶಂಕರರ ಕಥೆಯಲ್ಲಿ ಗೊತ್ತಾಗುತ್ತದೆ.

ಗುರುಶುಶ್ರೂಷಯಾ ವಿದ್ಯಾ ।

ವಿದ್ಯೆ ಬರುವದಾದರೆ ಅದು ಗುರು ಶುಶ್ರೂಷೆಯಿಂದ. ಈ ಕಾಲದಲ್ಲಿ ನಮಗಾರಿಗೂ ಇಂತಹ ಅವಕಾಶ ದೊರಕಿಲ್ಲ. ಹಾಗಾಗಿ ನಮಗೆಲ್ಲರಿಗೂ—

"ಗುರುರ್ಗುರುತಮೋ ಧಾಮ ಸತ್ಯಃ ಸತ್ಯಪರಾಕ್ರಮಃ ।"

ಭಗವಂತ ನೀನೇ "ಗುರೂಣಾಂ ಗುರುಃ"

ಎಂಬ ಭಾವನೆಯಿಂದ ಅವನನ್ನೇ ಗಟ್ಟಿಯಾಗಿ ಹಿಡಿದುಕೊಳ್ಳುವದನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ.

**ಹದಿನಾಲ್ಕನೇ ಮೆಟ್ಟಿಲು :** ಬ್ರಹ್ಮೈಕಾಕ್ಷರಮರ್ಥ್ಯತಾಂ ।

ಗುರುವು ಪರಬ್ರಹ್ಮವನ್ನು ನಿನಗೆ ಉಪದೇಶಿಸುತ್ತಾನೆ. ಪರಬ್ರಹ್ಮನ ಏಕಾಕ್ಷರವೆಂದರೆ ಓಂಕಾರ. ಅದು ಗುರೂಪದೇಶದಿಂದ ಬರಬೇಕು. ಆ ಓಂಕಾರವನ್ನು ಜಪಿಸುತ್ತಾ ಅದರ ಅರ್ಥವೂ, ಅದಕ್ಕಿಂತ ಅಭಿನ್ನವೂ ಆದ ಪರಬ್ರಹ್ಮವನ್ನು ಭಾವನೆ ಮಾಡಿಕೊಳ್ಳಬೇಕು ಎಂದರ್ಥ.

ಆದರೆ ಒಂದೆರಡು ದಿವಸಗಳಲ್ಲಿ ಅರ್ಥವಾಗುವಂತಹ ವಿಷಯ ಇದಲ್ಲ; ಏಕೆಂದರೆ ದೇವರು ಕಾಣಲ್ಪಡತಕ್ಕಂಥವನಲ್ಲ, ಅನುಭವಿಸಲ್ಪಡತಕ್ಕಂಥವನು.

ನ ಸಂದೃಶೇ ತಿಷ್ಠತಿ ರೂಪಮಸ್ಯ<br>
ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ ।<br>
ಹೃದಾ ಮನೀಷಾ ಮನಸಾಭಿಕ್ಲೃಪ್ತೋ<br>
ಯ ಏನಂ ವಿದುಃ ಅಮೃತಾಃ ತೇ ಭವಂತಿ ।

(ಮಹಾನಾರಾಯಣೋಪನಿಷತ್)

ಈ ಮಂತ್ರ ಇದೇ ಅರ್ಥವನ್ನು ಹೇಳುತ್ತದೆ, ಅನುಭವ ಪಡೆಯಲು ಮನಸ್ಸು ಪರಿಪಕ್ವಗೊಳ್ಳಬೇಕು. ಅದಕ್ಕೆ ಅನುಭವಿ ಗುರುಗಳ ಸಾನ್ನಿಧ್ಯದಲ್ಲಿ ಹಲವು ಕಾಲ ಇರಬೇಕಾಗುತ್ತದೆ. ಅವರಿಂದ ಹಲವು ಹಂತಗಳಲ್ಲಿ ಮಾರ್ಗದರ್ಶನ ಪಡೆಯಬೇಕಾಗುತ್ತದೆ. ಹಂತ ಹಂತವಾಗಿ ಸಾಧನೆಯ ಮಾರ್ಗದಲ್ಲಿ ಮುಂದುವರಿಯಬೇಕಾಗುತ್ತದೆ.

ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಕಥೆ ಬರುತ್ತದೆ—

ಇಂದ್ರ ದೇವತೆಗಳ ರಾಜ; ಮತ್ತು ವಿರೋಚನ ಅಸುರರ ರಾಜ. ಇವರು ಬ್ರಹ್ಮವಿದ್ಯೆಯನ್ನು ಪಡೆಯಲಿಕ್ಕೆ ಪ್ರಜಾಪತಿಯ ಬಳಿಗೆ ಹೋದರು. ಬ್ರಹ್ಮವಿದ್ಯೆಯನ್ನು ಪಡೆದರೆ ಅಮೃತರಾಗುತ್ತಾರೆ ಎಂದು ಅವರಿಗೆ ಯಾರೋ ಹೇಳಿದ್ದರು. ಆಗಿನ್ನೂ ಅಮೃತ ಮಥನ ಆಗಿರಲಿಲ್ಲ ಎಂದುಕೊಳ್ಳೋಣ. ತಾವೆಲ್ಲರೂ ಅಮೃತರಾಗಬೇಕು, ಮರಣವನ್ನು ದಾಟಬೇಕು ಎಂಬ ಬಯಕೆ ಈಗಲೂ ಎಲ್ಲರಲ್ಲೂ ಇದೆ. ತಾನು ಸಾಯಬಾರದು ಎಂದು ಎಲ್ಲರೂ ಬಯಸುವವರೇ. ಅದಕ್ಕಾಗಿ ಅವರಿಬ್ಬರೂ ಹೋಗಿದ್ದರು. ಅವರಿಬ್ಬರೂ ಮೂವತ್ತೆರಡು ವರ್ಷಗಳ ಕಾಲ ಪ್ರಜಾಪತಿಯ ಸನ್ನಿಧಿಯಲ್ಲಿ ಬ್ರಹ್ಮಚರ್ಯದಿಂದ ಇದ್ದರು. ಅನಂತರ ಒಂದುದಿನ ಇಬ್ಬರೂ ಪ್ರಜಾಪತಿಗೆ ವಂದಿಸಿದರು ಮತ್ತು ಬ್ರಹ್ಮವಿದ್ಯೆಯನ್ನು ಉಪದೇಶಿಸುವಂತೆ ಪ್ರಾರ್ಥನೆ ಮಾಡಿದರು. ಆಗ ಪ್ರಜಾಪತಿಯು ಒಂದು ಕ್ಷಣ ಆಲೋಚನೆ ಮಾಡಿದ. ಅನಂತರ ನೀರಿನಲ್ಲಿ ಪ್ರತಿಬಿಂಬವನ್ನು ತೋರಿಸಿ ಉಪದೇಶಿಸಲು ತೊಡಗಿದ. "ನೋಡಿ, ಇಲ್ಲಿ ಕಾಣುತ್ತಾ ಇದೆಯಲ್ಲ, ಈ ಕೈ, ಈ ಕಾಲು, ಈ ತಲೆ ಇವುಗಳುಳ್ಳ ಈ 'ನಾನು'ವೇ (ಶರೀರವೇ) ಬ್ರಹ್ಮ".

ಇಂದ್ರನೂ ತನ್ನ ಮೈ ಮುಟ್ಟಿಕೊಂಡ, ವಿರೋಚನನೂ ತನ್ನ ಮೈ ಮುಟ್ಟಿಕೊಂಡ. ಇಬ್ಬರೂ ತಮ್ಮ ತಮ್ಮ ಕೊಠಡಿಗೆ ಹೋದರು. ವಿರೋಚನ ತುಂಬ ಗರ್ವದಿಂದ, ಸಂತೋಷದಿಂದ ಉಕ್ಕಿಹೋದ. ಏಕೆಂದರೆ ಅವನ ಆಲೋಚನೆಯಂತೆ ಅವನಿಗೆ ಬ್ರಹ್ಮಜ್ಞಾನ ಬಂದೇ ಹೋಯಿತು. ಅವನು ಮಾರನೆಯ ದಿನ ಅಸುರರಿದ್ದಲ್ಲಿಗೆ ಹೋಗಿ ಹೇಳಿದ,

" ನನ್ನನ್ನೇ ಪೂಜೆ ಮಾಡಿ. "

ಇತ್ತ ಇಂದ್ರ ಸ್ವಲ್ಪ ಆಲೋಚನೆ ಮಾಡಿ–

ಇದೇ ಬ್ರಹ್ಮವೇ ? ಇದಕ್ಕೆ ಗಾಯ ಮಾಡಿದರೆ ಗಾಯವಾಗುತ್ತದೆ. ಯಾರಾದರೂ ಶರೀರಕ್ಕೆ ಶಸ್ತ್ರದಿಂದ ಆಘಾತ ಮಾಡಿದರೆ ಸತ್ತು ಹೋಗುತ್ತದೆ. ಇಂತಹ ಈ ಶರೀರ ಬ್ರಹ್ಮವಾಗಲು ಸಾಧ್ಯವೇ ? ಈ ಸಂಶಯಕ್ಕೆ ಪರಿಹಾರ ಕಂಡುಕೊಳ್ಳಲು ಮಾರನೆಯ ದಿನ ಇಂದ್ರನು ಪ್ರಜಾಪತಿಯಲ್ಲಿ ಹೋಗಿ ಪ್ರಶ್ನೆ ಕೇಳಿದ. ಆಗ ಪ್ರಜಾಪತಿಯು ಹೇಳಿದ– "ನೋಡು, ನಿನಗೆ ನಿನ್ನೆ ಹೇಳಿದ ವಿಷಯವನ್ನೇ ಇನ್ನೂ ಸ್ಪಷ್ಟವಾಗಿ ಹೇಳುತ್ತೇನೆ." "ಏತಂ ತ್ವೇವ ತೇ ಭೂಯೋ ಅನುವ್ಯಾಖ್ಯಾಸ್ಯಾಮಿ। ವಸಾಪರಾಣಿ ದ್ವಾತ್ರಿಂಶತಂ ವರ್ಷಾಣಿ" (ಬ್ರಹ್ಮವನ್ನು ಇನ್ನೂ ಸ್ಪಷ್ಟವಾಗಿ ಹೇಳುತ್ತೇನೆ. ಇನ್ನೂ ಮೂವತ್ತೆರಡು ವರ್ಷ ಬ್ರಹ್ಮಚಾರಿಯಾಗಿರು) ಅನಂತರ ಪ್ರಜಾಪತಿ ಹೇಳಿದ: ಇದೇ ಬ್ರಹ್ಮ ಎಂದರೆ ಶರೀರವೇ ಬ್ರಹ್ಮವೆಂದರ್ಥವಲ್ಲ. ಈ ಶರೀರದೊಳಗೆ ಇರುವವನು ಬ್ರಹ್ಮ. ಮತ್ತೆ

ಹೋಗಿ ಇಂದ್ರನು ಆಲೋಚನೆ ಮಾಡಿದ. ಶರೀರದೊಳಗೆ ಇದ್ದವನು ಸ್ವಪ್ನದಲ್ಲಿ ಗೊತ್ತಾಗುತ್ತಾನೆ. ಸ್ವಪ್ನದಲ್ಲಿ ಕಾಣುವ ಆ "ನಾನು"ವಿಗೆ ಸುಖದುಃಖಗಳೆಲ್ಲ ಇದೆ. ಬ್ರಹ್ಮ ಎಂದರೆ ದುಃಖ ಇರಲಿಕ್ಕೆ ಸಾಧ್ಯವೇ ಇಲ್ಲ. ಅದು ಆನಂದಸ್ವರೂಪ. ಆದ್ದರಿಂದ ಇದು ಬ್ರಹ್ಮವಿರಲಿಕ್ಕಿಲ್ಲವೆಂದು ಇಂದ್ರನಿಗೆ ತೋರಿತು. ಅವನು ಪುನಃ ಪ್ರಜಾಪತಿಯಲ್ಲಿಗೆ ಬಂದು ಮತ್ತೆ ಪ್ರಶ್ನೆ ಕೇಳಿದ. ಪ್ರಜಾಪತಿಯು ಇನ್ನೂ ಮೂವತ್ತೆರಡು ವರ್ಷಗಳ ಬ್ರಹ್ಮಚರ್ಯದ ನಂತರ, ಸ್ವಪ್ನಾವಸ್ಥೆಯುಳ್ಳವನಿಗಿಂತಲೂ ಸೂಕ್ಷ್ಮನಾದ ಸುಷುಪ್ತ್ಯಾವಸ್ಥೆಯುಳ್ಳ ಪುರುಷನನ್ನು ಉಪದೇಶಿಸುತ್ತಾನೆ. ಇಂದ್ರನಿಗೆ ಈ ವಿಷಯದಲ್ಲಿಯೂ ಪ್ರಶ್ನೆ ಬರುತ್ತದೆ. ಆಗ ಮತ್ತೆ ಐದುವರ್ಷಗಳ ಬ್ರಹ್ಮಚರ್ಯೆಯ ನಂತರ ಪರಮಾತ್ಮನನ್ನು ಉಪದೇಶಿಸಿದ. ಹೀಗೆ ಹಂತಹಂತವಾಗಿ ಮುಂದುವರಿಯಬೇಕಾಗುತ್ತದೆ. ಅನುಭವಿಕರಾದ ಆಚಾರ್ಯರ ಸನ್ನಿಧಿಯಲ್ಲಿ ಹಲವುಕಾಲ ಇದ್ದರೆ ಮಾತ್ರ ಪರಮಾತ್ಮನನ್ನು ಪಡೆಯಲಿಕ್ಕೆ ಬೇಕಾದಂತಹ ಪರಿಪಕ್ವ ಭೂಮಿಕೆ ಮನಸ್ಸಿಗೆ ಬರುತ್ತದೆ. ಅದಿಲ್ಲವಾದರೆ ಅವನು ವಿರೋಚನನಾಗಿ ಬಿಡುತ್ತಾನೆ. ಅದೆಷ್ಟೋ ಜನ ವೇದಾಂತ ಓದಿದವರು ನಾಸ್ತಿಕರಾದವರೂ ಇದ್ದಾರೆಂತ ಕೇಳಿದ್ದೇವೆ. ಆದರೆ ನಿಜವಾದ ದಾರಿಯಲ್ಲಿ ಹೋದರೆ ಹಾಗಾಗುವುದಿಲ್ಲ, ನಿಜವಾದ ದಾರಿಯನ್ನು ಪಡೆಯಬೇಕಾದರೆ ಗುರುಕುಲ ವಾಸ ಮಾಡಿ ಗುರು ಅನುಗ್ರಹ ಪಡೆಯಬೇಕು.

**ಹದಿನೈದನೇ ಮೆಟ್ಟಿಲು : ಶ್ರುತಿ ಶಿರೋವಾಕ್ಯಂ ಸಮಾಕರ್ಣ್ಯತಾಮ್ ।**

ಉಪನಿಷದ್ವಾಕ್ಯವನ್ನು ಶ್ರವಣ ಮಾಡಬೇಕು. ಉಪನಿಷತ್ತುಗಳಲ್ಲಿ ಅನೇಕ ವಿಧದ ವಾಕ್ಯಗಳು ಬರುತ್ತವೆ. ಉಪಾಸನೆಯನ್ನು ವಿಧಿಸುವ ವಾಕ್ಯಗಳು, ಜಗತ್ತಿನ ಸೃಷ್ಟಿಯನ್ನು ಹೇಳುವ ವಾಕ್ಯಗಳು, ಪರಬ್ರಹ್ಮನನ್ನೇ ಹೇಳುವ ವಾಕ್ಯಗಳು ಎಂಬುದಾಗಿ ಅವುಗಳನ್ನು ವಿಭಾಗಿಸಬಹುದು. ಪರಬ್ರಹ್ಮವನ್ನು ಹೇಳುವ ವಾಕ್ಯಗಳಲ್ಲಿ ಜೀವ ಬ್ರಹ್ಮೈಕ್ಯವನ್ನು ಹೇಳುವ ವಾಕ್ಯಗಳು ಮುಖ್ಯವಾದವುಗಳು. ಉಪನಿಷತ್ತಿನ ವಾಕ್ಯಗಳನ್ನು ತಿಳಿದುಕೊಳ್ಳಬೇಕೆಂದರ್ಥ. ಪರಮಾತ್ಮ ಸಾಕ್ಷಾತ್ಕಾರದ ಮೂರು ಉಪಾಯಗಳಾದ ಶ್ರವಣ, ಮನನ, ನಿದಿಧ್ಯಾಸನಗಳ ಪೈಕಿ ಶ್ರವಣವನ್ನು ಈ ವಾಕ್ಯದಲ್ಲಿ ವಿಧಿಸಲಾಗಿದೆ. ಮುಂದಿನ ನಾಲ್ಕು ಮೆಟ್ಟಿಲುಗಳಲ್ಲಿ ಮನನವನ್ನು ಹೇಳುತ್ತಿದ್ದಾರೆ.

**ವಾಕ್ಯಾರ್ಥಶ್ಚ ವಿಚಾರ್ಯತಾಂ ಶ್ರುತಿಶಿರಃ ಪಕ್ಷಃ ಸಮಾಶ್ರೀಯತಾಂ**
**ದುಸ್ತರ್ಕಾತ್ಸುವಿರಮ್ಯತಾಂ ಶ್ರುತಿಮತಸ್ತರ್ಕೋಽನುಸಂಧೀಯತಾಮ್ ।**
**ಬ್ರಹ್ಮಾಸ್ಮೀತಿ ವಿಭಾವ್ಯತಾಮಹರಹರ್ಗರ್ವಃ ಪರಿತ್ಯಜ್ಯತಾಂ**
**ದೇಹೇಽಹಂ ಮತಿರುಜ್ಝ್ಯತಾಂ ಬುಧಜನೈರ್ವಾದಃ ಪರಿತ್ಯಜ್ಯತಾಮ್ ॥ ೩ ॥**

**ಹದಿನಾರನೇ ಮೆಟ್ಟಿಲು** : ವಾಕ್ಯಾರ್ಥಶ್ಚ ವಿಚಾರ್ಯತಾಮ್ ।

**ಹದಿನೇಳನೇ ಮೆಟ್ಟಿಲು** : ಶ್ರುತಿಶಿರಃ ಪಕ್ಷಃ ಸಮಾಶ್ರೀಯತಾಮ್ ।

**ಹದಿನೆಂಟನೇ ಮೆಟ್ಟಿಲು** : ದುಸ್ತರ್ಕಾತ್ ಸುವಿರಮ್ಯತಾಮ್ ।

**ಹತ್ತೊಂಬತ್ತನೇ ಮೆಟ್ಟಿಲು** : ಶ್ರುತಿಮತಃ ತರ್ಕೋಽನುಸಂಧೀಯತಾಂ ।

ಉಪನಿಷತ್ತಿನ ತಾತ್ಪರ್ಯವೇನು ? ಎಂಬುದನ್ನು ಆಲೋಚನೆ ಮಾಡಬೇಕು. ಹೀಗೆ ಆಲೋಚನೆ ಮಾಡುವಾಗ ವೇದಾಂತಕ್ಕೆ ವಿರುದ್ಧವಲ್ಲದ ಪಕ್ಷವನ್ನೇ ಆಶ್ರಯಿಸಬೇಕು. ದುಸ್ತರ್ಕಕ್ಕೆ ಹೋಗದೆ. ಶ್ರುತಿ ಸಮ್ಮತವಾದ ತರ್ಕವನ್ನೇ ಅನುಸಂಧಾನ ಮಾಡಬೇಕು.

ಉಪನಿಷತ್ತುಗಳು ಅಲ್ಲಲ್ಲಿ ಯುಕ್ತವಾದ ತರ್ಕಗಳನ್ನು ನೀಡುತ್ತವೆ ಉದಾ :- ಛಾಂದೋಗ್ಯದಲ್ಲಿ ಕಾರಣಕ್ಕಿಂತ ಕಾರ್ಯ ಭಿನ್ನವಲ್ಲ ಎಂಬ ಬಗ್ಗೆ ನೀಡಿದ ಸೋದಾಹರಣ ತರ್ಕ. ಹೇಗೆ ಮಣ್ಣು ಮುದ್ದೆಯಿಂದ ಹುಟ್ಟಿದ ಮಡಕೆ, ಕುಡಿಕೆ ಮೊದಲಾದವುಗಳು ಮಣ್ಣಿಗಿಂತ ಬೇರೆ ಅಲ್ಲವೋ, ಹಾಗೆಯೇ. (ಸತ್ ಎಂದು ಕರೆಯಲ್ಪಟ್ಟ) ಬ್ರಹ್ಮದಿಂದ ಹುಟ್ಟಿದ ಜಗತ್ತು ಬ್ರಹ್ಮಕ್ಕಿಂತ ಬೇರೆಯಲ್ಲ. ಇಂಥ ತರ್ಕಗಳನ್ನು ನೆನಪು ಮಾಡಿಕೊಂಡು ವೇದಾಂತ ಪಕ್ಷವನ್ನು ದೃಢಮಾಡಿಕೊಳ್ಳಬೇಕು. ಹಾಗೆಯೇ ಶ್ರುತಿಯು ದುಸ್ತರ್ಕವನ್ನು ಕೆಲವೆಡೆ ತೋರಿಸಿದೆ. ಉದಾ :- "ಕಥಮಸತಃ ಸಜ್ಜಾಯೇತ" ಅಭಾವದಿಂದ ಭಾವ ಉತ್ಪತ್ತಿಯಾಗಲು ಹೇಗೆ ಸಾಧ್ಯ ? ಇಂಥ ದುಸ್ತರ್ಕಗಳನ್ನು ದೂರವಿಟ್ಟು ವೇದಾಂತ ಪಕ್ಷವಾದ ಬ್ರಹ್ಮಕಾರಣವಾದವನ್ನು ಮನಸ್ಸಿನಲ್ಲಿ ನಿಲ್ಲುವಂತೆ ಮಾಡಿಕೊಳ್ಳಬೇಕು.

ಮುಂದಿನ "ಬ್ರಹ್ಮಾಸ್ಮೀತಿ ವಿಭಾವ್ಯತಾಮ್" ಎಂಬ ವಾಕ್ಯದಲ್ಲಿ ನಿದಿಧ್ಯಾಸನವನ್ನು ಹೇಳಿದ್ದರಿಂದ ಇಲ್ಲಿ ಹೇಳಿದ ವಾಕ್ಯಾರ್ಥ ವಿಚಾರವೆಂದರೆ ಮಹಾವಾಕ್ಯದ ಅರ್ಥದ ವಿಚಾರವೆಂದರ್ಥ. ಉಪನಿಷತ್ತುಗಳಿಗೆ ಪರಮ ತಾತ್ಪರ್ಯವಿರುವದು "ಜೀವಬ್ರಹ್ಮೈಕ್ಯ"ದಲ್ಲಿ. ಅದನ್ನು ನೇರವಾಗಿ ಮಹಾವಾಕ್ಯಗಳು ಹೇಳುತ್ತವೆ. ಜೀವ ಬ್ರಹ್ಮರ ಐಕ್ಯವೆಂದರೇನು ? ಅದು ಯಾವ ಹಂತದಲ್ಲಿ ? ಇತ್ಯಾದಿ ಪ್ರಶ್ನೆಗಳ ಬಗ್ಗೆ ಶಾಸ್ತ್ರಸಮ್ಮತವಾದ ಉತ್ತರ ಮನಸ್ಸಿಗೆ ಒಪ್ಪಿಗೆಯಾಗದಿದ್ದಲ್ಲಿ "ಅಹಂ ಬ್ರಹ್ಮಾಸ್ಮಿ" ಎಂಬ ನಿದಿಧ್ಯಾಸನ (ಧ್ಯಾನ) ಸಮಂಜಸವಾಗಿ ಆಗುವದಿಲ್ಲ. ಆದ್ದರಿಂದ ಮೊದಲು ಮನನ ಅಥವಾ ಚಿಂತನೆ, ಅನಂತರ ನಿದಿಧ್ಯಾಸನ.

ಇಲ್ಲಿ ಒಂದು ಪ್ರಶ್ನೆ– "ಶ್ರುತಿಶಿರಃ ಪಕ್ಷಃ ಸಮಾಶ್ರೀಯತಾಂ", "ಶ್ರುತಿಮತಃ ತರ್ಕಃ ಅನುಸಂಧೀಯತಾಂ" ಈ ವಾಕ್ಯಗಳಲ್ಲಿ ಶ್ರೀಮದಾಚಾರ್ಯರು ನಮ್ಮ ತರ್ಕಶಕ್ತಿಗೆ ಪರಿಮಿತಿ ಹಾಕಿದಂತೆ, ಕಡಿವಾಣ ಹಾಕಿದೆ ಕಾಣಿಸುತ್ತವೆಯಲ್ಲವೆ ? ಬ್ರಹ್ಮಸತ್ಯವೆಂದಾದರೆ,

ಬ್ರಹ್ಮಾನುಭವ – ಅಹಂ ಬ್ರಹ್ಮಾಸ್ಮಿ ಅನುಭವ – ಸತ್ಯಾನುಭವ ಎಂದಾದರೆ, ಅದು ಎಲ್ಲ ತರ್ಕಗಳನ್ನೂ ಗೆಲ್ಲುವ, ಎಲ್ಲ ಪ್ರಶ್ನೆಗಳಿಗೂ ಉತ್ತರಿಸುವ ಸಾಮರ್ಥ್ಯ ಉಳ್ಳದ್ದಾಗಿರಬೇಕಲ್ಲವೆ ? ಆಧುನಿಕ ವೈಜ್ಞಾನಿಕರು ಪ್ರಯೋಗದ ಮೂಲಕ ಕಂಡುಹಿಡಿದ ಸತ್ಯವು ಹೇಗೆ ಎಲ್ಲ ಪ್ರಶ್ನೆ – ತರ್ಕಗಳನ್ನು ಪರಿಹರಿಸಿಕೊಳ್ಳುವದೋ, ಹಾಗೆಯೇ ಬ್ರಹ್ಮಾನುಭವವೂ ಎಲ್ಲ ಪ್ರಶ್ನೆ ತರ್ಕಗಳನ್ನು ದಾಟಬಹುದಾಗಿರುವಾಗ, "ವೇದಾಂತ ಪಕ್ಷವನ್ನೇ ಹಿಡಿದುಕೊಳ್ಳಿ" "ವೇದಾಂತ ಸಮ್ಮತವಾದ ತರ್ಕವನ್ನೇ ಅನುಸಂಧಾನ ಮಾಡಿ" ಎಂದು ಹೇಳಿದರೆ ಸರಿಯೆ ?

ಇದಕ್ಕೆ ಉತ್ತರ– ಬ್ರಹ್ಮಾನುಭವವು ಎಲ್ಲ ಪ್ರಶ್ನೆ ತರ್ಕಗಳನ್ನೂ ಗೆಲ್ಲುತ್ತದೆ ಎಂಬುದು ನಿಶ್ಚಯ "......... ಛಿದ್ಯಂತೇ ಸರ್ವಸಂಶಯಾಃ ...ತಸ್ಮಿನ್ ದೃಷ್ಟೇ ಪರಾವರೇ" ಎಂಬಲ್ಲಿ ಶ್ರುತಿ ಇದೇ ಅಭಿಪ್ರಾಯಪಟ್ಟಿದೆ. ಆದರೆ ಇಲ್ಲಿ ಸಾಧನೆಗಳನ್ನು ಹಂತ ಹಂತವಾಗಿ ಉಪದೇಶಿಸುತ್ತಿರುವುದು ಅನುಭವಕ್ಕಿಂತ ಇನ್ನೂ ಕೆಳಗಿನ ಹಂತದಲ್ಲಿ ಇರುವವನಿಗೋಸ್ಕರ. ಮನಸ್ಸು ಪ್ರಶ್ನೆ ತರ್ಕಗಳಿಲ್ಲದೆ ಉಪಶಾಂತ ಸ್ಥಿತಿಯನ್ನು ಪಡೆಯದ ಹೊರತೂ, ನಿದಿಧ್ಯಾಸನ (ಧ್ಯಾನ) ಅಥವಾ ಸಮಾಧಿಯ ಕಡೆಗೆ ಹೋಗುವ ಪ್ರಯತ್ನ ಸಾಧ್ಯವಿಲ್ಲ. ಪ್ರಶ್ನೆ ತರ್ಕಗಳಿಗಾದರೋ ಮಿತಿಯೇ ಇಲ್ಲ. ಮತ್ತೆ ಮತ್ತೆ ಪ್ರಶ್ನೆಗಳು ಬರುತ್ತಲೇ ಇರುತ್ತವೆ. ಹೊಸ ಹೊಸ ತರ್ಕಗಳು ತೋರುತ್ತಲೇ ಇರುತ್ತವೆ. ಆ ತರ್ಕಗಳು ವೇದಾಂತಕ್ಕೆ ಬೆಂಬಲವಾಗಿದ್ದರೆ ಪರವಾಗಿಲ್ಲ. ವೇದಾಂತ ಪಕ್ಷಕ್ಕೆ ವಿರುದ್ಧವಾದರೆ. ಮನಸ್ಸು ವೇದಾಂತ ಮಾರ್ಗದಲ್ಲಿ ಮುಂದುವರಿಯುವದಿಲ್ಲ. ಸಾಧನೆ ನಿಂತು ಹೋಗುತ್ತದೆ. ಆ ತರ್ಕಗಳಿಗೆ ಉತ್ತರ ಇಲ್ಲ ಎಂದರ್ಥವಲ್ಲ. ಆ ಉತ್ತರಗಳು ಆಗ ಹೊಳೆಯದಿದ್ದರೆ ಮನಸ್ಸು ಸಾಧನೆಯಲ್ಲಿ ನಿಲ್ಲುವದಿಲ್ಲ. ಹೊಸ ತರ್ಕಗಳು, ಹೊಸ ಉತ್ತರಗಳು ಬೆಳೆಯುತ್ತಲೇ ಹೋದರೆ ಸಾಧನೆ ನಿಂತೇ ಹೋಗುತ್ತದೆ. ಆದ್ದರಿಂದ ತರ್ಕಕ್ಕೆ ಯಾವುದೋ ಒಂದು ಪರಿಮಿತಿಯನ್ನು ಹಾಕಲೇಬೇಕು.

ಹಾಗೆಂದು ತರ್ಕ ಸ್ವಲ್ಪವೂ ಬೇಡವೆನ್ನಲಾಗದು. ಏಕೆಂದರೆ ಸಾಕಷ್ಟು ಆಲೋಚನೆ ಮಾಡದ ಹೊರತೂ ವೇದಾಂತದ ಅಭಿಪ್ರಾಯ ಮನದಟ್ಟಾಗುವದಿಲ್ಲ. "ಆರ್ಷಂ ಧರ್ಮೋಪದೇಶಂಚ ವೇದಶಾಸ್ತ್ರಾ ವಿರೋಧಿನಾ । ಯಸ್ತರ್ಕೇಣಾನುಸಂಧತ್ತೇ ಸಧರ್ಮಂ ವೇದ ನೇತರಃ ॥ (ಋಷಿಗಳಿಂದ ನೀಡಲ್ಪಟ್ಟ ಧರ್ಮೋಪದೇಶವನ್ನು, ವೇದಶಾಸ್ತ್ರಗಳಿಗೆ ವಿರುದ್ಧವಲ್ಲದ ತರ್ಕದಿಂದ ಯಾವನು ಆಲೋಚನೆ ಮಾಡುತ್ತಾನೆಯೋ ಅವನೇ ಧರ್ಮವನ್ನು ಸರಿಯಾಗಿ ತಿಳಿಯಬಲ್ಲ. ಅದಿಲ್ಲದಿದ್ದರೆ ಸಾಧ್ಯವಿಲ್ಲ).

ಪ್ರಕೃತ ಪರಬ್ರಹ್ಮನಿಗೂ ಜೀವಾತ್ಮನಿಗೂ ಐಕ್ಯ ಹೇಗೆಂಬುದೇ ಈ ವಾಕ್ಯಾರ್ಥದ ವಿಚಾರ. ಜೀವಾತ್ಮ– ಬ್ರಹ್ಮ ಒಂದೇ ಎನ್ನುವದು ತುಂಬ ಗಹನವಾದ ವಿಷಯ. ಅದನ್ನು ವಿಚಾರ ಮಾಡುವಾಗ ವೇದಾಂತದ ಪಕ್ಷವನ್ನೇ ಅನುಸರಿಸಬೇಕು. ನಾಸ್ತಿಕ ಪಕ್ಷವನ್ನು ಹಿಡಿಯಬಾರದು.

ಇಂದು ಮುಂಜಾನೆಯ (೪-೫-೨೦೦೦) ಗೋಷ್ಠಿಯಲ್ಲಿ ಡಾ. ಜಿ. ಎಂ. ಹೆಗಡೆ, ಧಾರವಾಡ ಇವರು ಈ ವಾಕ್ಯಗಳಿಗೆ ಅರ್ಥ ಏನು ? ಎನ್ನುವದನ್ನು "ಅನುಭವಾಮೃತ" ಎಂಬ ಗ್ರಂಥವನ್ನು ಉಲ್ಲೇಖಿಸುತ್ತ ತುಂಬ ಚೆನ್ನಾಗಿ ಹೇಳಿದ್ದಾರೆ. ಇನ್ನೂ ಅನೇಕ ಪ್ರಬಂಧಗಳಲ್ಲಿ ಇದರ ಹೊಳಹು ಬಂದಿದೆ.

ಹಿಂದೊಂದು ಕಾಲದಲ್ಲಿ ಅನುಭವ, ಸಾಧನೆಗಳ ಮೇಲೆ ಶಾಸ್ತ್ರಗಳು ನಿಂತಿದ್ದವು. ಸಾಧನೆ ಅನುಭವಗಳನ್ನು ಪಕ್ಕಕ್ಕಿಟ್ಟು ಕೇವಲ ಚರ್ಚೆಯಲ್ಲೇ ತೊಡಗಿ, ಆ ಚರ್ಚೆ ದಾರಿ ತಪ್ಪಿ, ನೆಲೆ ತಪ್ಪಿ ಏನೆಲ್ಲ ಅನಾಹುತಗಳಾದವು ನಮ್ಮ ದೇಶದಲ್ಲಿ ! ಆ ಅನಾಹುತಗಳನ್ನು ತಪ್ಪಿಸಲಿಕ್ಕೋಸ್ಕರವೇ ಆಚಾರ್ಯರ ಅವತಾರವಾಯಿತೆನ್ನಬಹುದಾಗಿದೆ. ಆಚಾರ್ಯರು ಅದೃಶ್ಯರಾಗಿ ಹೋದನಂತರ ರಾಮಾನುಜರು, ಮಧ್ವಾಚಾರ್ಯರು ಮುಂತಾದ ಮಹಾನುಭಾವರ ಅವತಾರವಾಯಿತು. ಅದಷ್ಟಾದ ನಂತರವೂ ಪುನಃ ತರ್ಕ ಬೆಳೆದಿದೆ. ಈಗಲೂ ಕೆಲವು ಕಡೆಗಳಲ್ಲಿ ಬೂದಿ ಮುಚ್ಚಿದ ಕೆಂಡದಂತೆ ಆಗಾಗ ತೂರಿಕೊಳ್ಳುತ್ತ ಇರುತ್ತದೆ. ಇಂತಹ ದುಸ್ತರ್ಕ ವ್ಯರ್ಥ ಮತ್ತು ಕೊನೆ ಇಲ್ಲದ್ದು. ಅದರಿಂದ ವಿಚಾರ ನಿರ್ಧಾರಕ್ಕೆ ಬರುವದೇ ಇಲ್ಲ. ಆದ್ದರಿಂದ ಅಂತಹ ದುಸ್ತರ್ಕಕ್ಕೆ ಹೋಗಬೇಡ. ಶ್ರುತಿಮತವಾದ ತರ್ಕದ ಚೌಕಟ್ಟಿನಲ್ಲಿ ಹೋದರೆ ಲಕ್ಷ್ಯ ಸಿಕ್ಕುತ್ತದೆ.

ಇಪ್ಪತ್ತನೇ ಮೆಟ್ಟಿಲು : ಬ್ರಹ್ಮಾಸ್ಮೀತಿ ವಿಭಾವ್ಯತಾಮ್,
ಅಹರಹರ್ಗರ್ವಃ ಪರಿತ್ಯಜ್ಯತಾಮ್ ।

ಯಾವಾಗ ಶಾಸ್ತ್ರದ ಚೌಕಟ್ಟಿನಲ್ಲಿ ಮನನ ಮಾಡುತ್ತಾನೋ, ಆಗ "ಅಹಂ ಬ್ರಹ್ಮಾಸ್ಮಿ" ಎಂಬ ವಾಕ್ಯದ ಅರ್ಥದ ಪರೋಕ್ಷ ಜ್ಞಾನವುಂಟಾಗುತ್ತದೆ. ಅಂದರೆ ಅವನಿಗೆ "ನಾನು" ಎಂದು ತೋರಿಬರುತ್ತಿರುವ ಜೀವಾತ್ಮ, ಯಾವ ಅರ್ಥದಲ್ಲಿ, ಯಾವ ರೀತಿಯಲ್ಲಿ ಬ್ರಹ್ಮವೇ ಆಗಿದೆ ಎಂಬುದರ ನಿರ್ಣಯಾತ್ಮಕ ಊಹೆ ಬಂದಿರುತ್ತದೆ. ಅದನ್ನೇ ಅನುಸಂಧಾನ ಮಾಡುತ್ತ, ಧ್ಯಾನಮಾಡುತ್ತ ಹೋಗಬೇಕೆಂಬುದು "ಬ್ರಹ್ಮಾಸ್ಮೀತಿ ವಿಭಾವ್ಯತಾಂ" ಎಂಬುದರರ್ಥ. ಇದೇ ನಿದಿಧ್ಯಾಸನ. ಇದು ಸಾಕ್ಷಾತ್ಕಾರದಲ್ಲಿ ಪರ್ಯವಸಾನವಾಗುತ್ತದೆ. ಶ್ರೀ ಆಚಾರ್ಯರು, "ಅಹಂ ಬ್ರಹ್ಮಾಸ್ಮಿ" ಎಂಬ ಅನುಸಂಧಾನ ಮಾಡು, ಅದರ ಜೊತೆ ಜೊತೆಯಲ್ಲಿಯೇ ಗರ್ವವನ್ನು ಬಿಡು ಎಂಬ ಸೂಚನೆಯನ್ನು ಕೊಡುತ್ತಾರೆ.

ನಾನೇ ಎಲ್ಲವೂ ಆಗಿದ್ದೇನೆ. (ಅಹಂ ಬ್ರಹ್ಮಾಸ್ಮಿ) ಎಂದಾಗ ಅದು ಗರ್ವವಲ್ಲವೇ ? ಹಾಗಾದರೆ ಯಾಕೆ ಹೀಗೆ ಹೇಳುತ್ತಿದ್ದಾರೆ ? ಇದರ ಗುಟ್ಟೇನು ? ಇದನ್ನು ತಿಳಿಯಲು ನಾವು ಶ್ರೀ ರಾಮಾನುಜಾಚಾರ್ಯರಿಗೆ ಶರಣು ಹೋಗಬೇಕು. ಅವರು ಹೇಳಿದ ಮಾರ್ಗ ತುಂಬ ಉತ್ತಮವಾಗಿದೆ. ಅದೇನೆಂದರೆ, "ನಾನು ಪರಬ್ರಹ್ಮನ ಒಂದು ಅಂಶ" ಶ್ರೀ ಶಂಕರರೂ ಕೂಡ ಇದನ್ನು ಉಲ್ಲೇಖಿಸುತ್ತಾರೆ–

"ಸತ್ಯಪಿ ಭೇದಾಪಗಮೇ ನಾಥ ತವಾಹಂ ನ ಮಾಮಕೀನಸ್ತ್ವಂ ।
ಸಾಮುದ್ರೋಹಿ ತರಂಗಃ ಕ್ವಚನ ಸಮುದ್ರೋ ನ ತಾರಂಗಃ ॥

ನಾನು ಬ್ರಹ್ಮವೇ ಆಗಿದ್ದೇನೆ. ಎಂದರೆ ಈ "ನಾನು" ಎಂಬ ಸ್ಫುರಣೆಯ ಹಿನ್ನೆಲೆಯಲ್ಲಿ ಪರಮಾತ್ಮ ತತ್ವದ ಒಂದು ದೊಡ್ಡ ಸಮುದ್ರವೇ ಇದೆ. ಆ ಸಮುದ್ರದ ಒಂದು ಅಲೆ "ನಾನು." ಪ್ರತಿಯೊಂದು ಜೀವಾತ್ಮವೂ ಪರಮಾತ್ಮನೆಂಬ ಸಮುದ್ರದ ಒಂದು ಅಲೆ. ಹೀಗೆ ಅನುಸಂಧಾನ ಮಾಡುತ್ತ ಹೋದರೆ ಆ ಅಲೆ ಸಮುದ್ರಕ್ಕಿಂತ ಬೇರೆ ಅಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಗರ್ವ ಪಡುವಂತಿಲ್ಲ. ಏಕೆಂದರೆ ನನಗಿಂತ ದೊಡ್ಡವ ಅವನಿದ್ದಾನೆ. ಅಲೆಗಿಂತ ಸಮುದ್ರ ದೊಡ್ಡದು. "ಬ್ರಹ್ಮಾಸ್ಮಿ" ಎನ್ನುವ ಅನುಭವದ ಜೊತೆಯಲ್ಲಿ ಗರ್ವದ ಪರಿತ್ಯಾಗವೂ ಆಗಬೇಕಾದರೆ ಈ ರೀತಿಯ ಅನುಸಂಧಾನವಾಗಬೇಕು ಎಂದು ನನಗನಿಸುತ್ತದೆ. ಕಂಚಿಯ ಶ್ರೀ ಪರಮಾಚಾರ್ಯರು "ಅಹಂ ಬ್ರಹ್ಮಾಸ್ಮಿ" ಎಂಬುದರ ಅನುಸಂಧಾನವನ್ನು ಹೀಗೆಯೇ ಮಾಡುತ್ತಿದ್ದರು, ಎನ್ನುವದನ್ನು ಅವರ ಆಪ್ತರಲ್ಲೊಬ್ಬರು ಹೇಳುತ್ತಿದ್ದರು. ಏಕೆಂದರೆ ಅದ್ವೈತಸ್ಥಿತಿ ಸಾಧ್ಯ, ಅಂದರೆ ಗುರಿ, ಸಾಧನವಲ್ಲ. ಜೀವಚೈತನ್ಯ - ಬ್ರಹ್ಮಚೈತನ್ಯಗಳು ಒಂದೇ ಆಗಿರುವ ಐಕ್ಯ ಲಕ್ಷ್ಯ. ಅದಕ್ಕೆ ಹೋಗಲು ತಾನು ಪರಮಾತ್ಮನ ಅಂಶವೆಂಬ ಅನುಸಂಧಾನ ಸಾಧನ.

**ಇಪ್ಪತ್ತೊಂದನೇ ಮೆಟ್ಟಿಲು : ದೇಹೇಽಹಂಮತಿರುಜ್ಝ್ಯತಾಮ್ ।**

ಯಾವಾಗ ಪರಬ್ರಹ್ಮವೇ ನಾನು, ಎಂಬುದು ಅರಿವಿಗೆ ಬಂತೋ, ಆಗ ಶರೀರ ನಾನಲ್ಲ ಎನ್ನುವುದು ತಾನಾಗಿಯೇ ಅರಿವಿಗೆ ಬರತೊಡಗುತ್ತದೆ. ಅದನ್ನು ಮರೆಯದಂತೆ ನೋಡಿಕೊಳ್ಳಬೇಕು.

**ಇಪ್ಪತ್ತೆರಡನೇ ಮೆಟ್ಟಿಲು : ಬುಧಜನೈರ್ವಾದಃ ಪರಿತ್ಯಜ್ಯತಾಮ್ ।**

ಇಷ್ಟು ದೂರ ಬಂದ ಮೇಲೆ ಶಾಸ್ತ್ರ ಪಂಡಿತರೊಡನೆ ಹೆಚ್ಚು ಚರ್ಚೆಗೆ ಹೋಗಬೇಡಿ. ಸಾಧನೆಯಿಂದ ದೊರೆತ ಅನುಭವವೇ ಮುಖ್ಯ. ಅನುಭವದ ನೆಲೆ ಶುರುವಾದ ನಂತರ ಮಾತು ಕಡಿಮೆಯಾಗಲು ಶುರುವಾಗುತ್ತದೆ. ಅನುಭವದ ಪರಿಪಕ್ವತೆ ಬಂದಾಗ ಮಾತಿಲ್ಲದ ದಕ್ಷಿಣಾಮೂರ್ತಿಯ ಸ್ಥಿತಿ.

ಮುಂದೆ ನಾಲ್ಕನೆಯ ಶ್ಲೋಕ. ೨೩ ರಿಂದ ೨೮ ಮೆಟ್ಟಿಲವರೆಗೆ ಇದೆ. ಇವು ಮೆಟ್ಟಿಲುಗಳ ಸರಣಿಯಲ್ಲಿ, ೨೨ ಮೆಟ್ಟಿಲುಗಳಾದ ಮೇಲೇ ಬರಬೇಕೆಂದಿಲ್ಲ. ಈ ವಿಷಯಗಳು ಮುಂಚೆಯೂ ಕೂಡ ಬರಬಹುದು. ಏಕೆಂದರೆ ಸಂನ್ಯಾಸಿಯ ಆಶ್ರಮಧರ್ಮವನ್ನು ಇಲ್ಲಿ ಹೇಳಿದ್ದಾರೆ.

**ಕ್ಷುದ್ವ್ಯಾಧಿಶ್ಚ ಚಿಕಿತ್ಸ್ಯತಾಂ ಪತಿದಿನಂ ಭಿಕ್ಷೌಷಧಂ ಭುಜ್ಯತಾಂ**
**ಸ್ವಾದ್ವನ್ನಂ ನತು ಯಾಚ್ಯತಾಂ ವಿಧಿವಶಾತ್ಪ್ರಾಪ್ತೇನ ಸಂತುಷ್ಯತಾಮ್ ।**
**ಶೀತೋಷ್ಣಾದಿ ವಿಷಹ್ಯತಾಂ ನ ತು ವೃಥಾ ವಾಕ್ಯಂ ಸಮುಚ್ಚಾರ್ಯತಾಂ**
**ಔದಾಸೀನ್ಯಮಭೀಪ್ಸ್ಯತಾಂ ಜನಕೃಪಾ ನೈಷ್ಠುರ್ಯಮುತ್ಸೃಜ್ಯತಾಮ್ ॥ ೪ ॥**

**ಇಪ್ಪತ್ತಮೂರನೇ ಮೆಟ್ಟಿಲು :** ಕ್ಷುದ್ವ್ಯಾಧಿಶ್ಚ ಚಿಕಿತ್ಸ್ಯತಾಮ್, ಪ್ರತಿದಿನಂ ಭಿಕ್ಷೌಷಧಂ ಭುಜ್ಯತಾಮ್ ।

ಹಸಿವೆಯಾಗುವುದು ಆರೋಗ್ಯದ ಲಕ್ಷಣ ಎನ್ನುತ್ತಾರೆ, ಡಾಕ್ಟರರು. ಆದರೆ ನಮ್ಮಲ್ಲಿ ಹಸಿವು ಎನ್ನುವುದು ವ್ಯಾಧಿಯಿದ್ದಂತೆ. ಹಸಿವೆ ಎನ್ನುವ ವ್ಯಾಧಿಗೆ ಚಿಕಿತ್ಸೆ ಮಾಡಿಕೊಳ್ಳಬೇಕು. ಔಷಧವನ್ನು ಹೇಗೆ ಸ್ವಲ್ಪ ತೆಗೆದುಕೊಳ್ಳುತ್ತೇವೆಯೋ ಹಾಗೆಯೇ ಸ್ವಲ್ಪ ಆಹಾರ ತೆಗೆದುಕೊಳ್ಳಬೇಕು. "ಔಷಧವತ್ ಅಶನಮಾಚರೇತ್" ಎಂದು ಆರುಣ್ಯುಪನಿಷತ್ತಿನಲ್ಲಿ ಬರುತ್ತದೆ. ಆ ಆಹಾರವನ್ನು ಭಿಕ್ಷೆಯಿಂದ ಪಡೆದುಕೊಳ್ಳಬೇಕು. ಇದಲ್ಲದೇ ಜ್ವರಾದಿವ್ಯಾಧಿಗಳು ಬಂದರೆ ಚಿಕಿತ್ಸೆ ಮಾಡಿಕೊಳ್ಳಬೇಕು.

**ಇಪ್ಪತ್ತನಾಲ್ಕನೇ ಮೆಟ್ಟಿಲು :** ಸ್ವಾದ್ವನ್ನಂ ನ ತು ಯಾಚ್ಯತಾಂ ವಿಧಿವಶಾತ್ ಪ್ರಾಪ್ತೇನ ಸಂತುಷ್ಯತಾಮ್ ।

ಭಿಕ್ಷೆಯಲ್ಲಿ ರುಚಿಯಾದ ಆಹಾರವೇ ಬರಲಿ ಎಂದು ಬಯಸಬಾರದು. ಯಾವುದು ವಿಧಿಲಿಖಿತವೋ ಅದು ಬರುತ್ತದೆ. ಅದರಿಂದಲೇ ತೃಪ್ತಿಪಟ್ಟುಕೊಳ್ಳಬೇಕು.

**ಇಪ್ಪತ್ತೈದನೇ ಮೆಟ್ಟಿಲು :** ಶೀತೋಷ್ಣಾದಿ ವಿಷಹ್ಯತಾಮ್,

ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸಿಕೊಳ್ಳಬೇಕು. ಹಾಗೆಂದರೆ ಶೀತ, ಉಷ್ಣ ಮೊದಲಾದ ದ್ವಂದ್ವಗಳು ಕೆಲವೊಮ್ಮೆ ಸುಖವನ್ನು, ಕೆಲವೊಮ್ಮೆ ದುಃಖವನ್ನು ಉಂಟುಮಾಡುತ್ತವೆ. ಸುಖವಾಗಲಿ ದುಃಖವಾಗಲಿ ಉಂಟಾಗುವದು ಮನಸ್ಸಿನಲ್ಲಿ. ಶೀತ, ಉಷ್ಣ ಮೊದಲಾದ ದ್ವಂದ್ವಗಳು ಪ್ರಾಪ್ತವಾದರೂ ಅವುಗಳಿಂದ ಮನಸ್ಸಿನಲ್ಲಿ ಸುಖದುಃಖಗಳೆಂಬ ಏರುಪೇರುಗಳು ಉಂಟಾಗದಂತೆ ಚಿತ್ತಸ್ಥೈರ್ಯವಿಟ್ಟುಕೊಳ್ಳುವದು. ಇದನ್ನು ತಿತಿಕ್ಷಾ ಎನ್ನುತ್ತಾರೆ.

**ಇಪ್ಪತ್ತಾರನೇ ಮೆಟ್ಟಿಲು : ನ ತು ವೃಥಾ ವಾಕ್ಯಂ ಸಮುಚ್ಚಾರ್ಯತಾಮ್ ।**

ವ್ಯರ್ಥವಾಗಿ ಮಾತನಾಡಲೇ ಬಾರದು. ಅನವಶ್ಯಕವಾದ ಹ ಅತಿಯಾದ ಮಾತಾಡುವಿಕೆ ಜ್ಞಾನಮಾರ್ಗಕ್ಕೆ ಅಪಾಯಕಾರಿ. ಅವಶ್ಯವಾಗಿ ಮಾತಾಡಬೇಕಾಗಿ ಬಂದಾಗ ಮಾತಾಡದಿದ್ದರೂ ಸರಿ ಅದಕ್ಕಾಗಿಯೇ ಆಚಾರ್ಯರು 'ವೃಥಾ ಮಾತಾಡಬೇಡಿ' ಎಂದು ಶಬ್ದವನ್ನು ಬಳಸಿ ಹೇಳಿದ್ದಾರೆ. ಇಲ್ಲಿ ವಾಗಿಂದ್ರಿಯದ ನಿಯಮನವೊ ಹೇಳಿದ್ದು ಕಂಡುಬರುತ್ತಿದೆಯಾದರೂ, ಇವರ ಜೊತೆಯಲ್ಲಿ ಪಾದಾದಿಗಳನ್ನು ವ್ಯರ್ಥಚೇಷ್ಟೆಯಲ್ಲಿ ತೊಡಗಿಸಬಾರದೆಂಬು ಸೇರಿಸಿಕೊಳ್ಳಬೇಕು.

**ಇಪ್ಪತ್ತೇಳನೇ ಮೆಟ್ಟಿಲು : ಔದಾಸೀನ್ಯಮಭೀಪ್ಸ್ಯತಾಮ್ ।**

ಮನಸ್ಸಿನ ಆಗ್ರಹಗಳನ್ನು ಬಿಟ್ಟು, ಯಾವುದೇ ಪಕ್ಷವನ್ನೂ ಬೆಂಬ ಅಥವಾ ವಿರೋಧಿಸದೇ ತಟಸ್ಥನಾಗಿರುವಿಕೆಯೇ ಔದಾ ಔದಾಸೀನ್ಯದಿಂದ ಸ್ವಸ್ಥನಾಗಿರಲು ಸಾಧ್ಯ. ಸತತವಾಗಿ ಬೇಕು-ಬೇಡ ಲೆಕ್ಕಿಸುತ್ತ, ಸಂತೋಷ - ಪರಿತಾಪಗಳನ್ನು ಹೊಂದುತ್ತಿರುವ ಮನ ಔದಾಸೀನ್ಯದಲ್ಲಿ ತನ್ನಷ್ಟಕ್ಕೆ ತಾನೇ ನಿಂತುಕೊಳ್ಳುವಂತೆ ಮಾಡಲು ಪ್ರಯತ್ನವೂ ಬೇಕಾಗುತ್ತದೆ. "ಕಾಣುವ ವಿಷಯಗಳಿಂದ ಸುಖವಾಗಬೇಕಾದದ್ದಾಗಲೀ, ದುಃಖ ನಿವೃತ್ತಿಯಾಗಬೇಕಾದದ ಇಲ್ಲ. ಸುಖಪ್ರಾಪ್ತಿ, ದುಃಖ ನಿವೃತ್ತಿಗಳೆರಡೂ ತನ್ನ ಮೂಲದ ಇದೆ." ಎಂಬ ಅನುಸಂಧಾನದ ಮೂಲಕ ಬೇಕು - ಬೇ ಸಿಲುಕದಿರುವಂತೆ (ಔದಾಸೀನ್ಯದಿಂದಿರುವಂತೆ) ಮಾಡಿಕೊಳ್ಳಬೇಕು. ಮೊದಲು "ತಾನು ಔದಾಸೀನ್ಯದಿಂದಿರಬೇಕು" ಎಂಬ ದೃಢ ಬೇಕು. ಇಂಥ ಸಂಕಲ್ಪದ ಮೂಲಕ ಔದಾಸೀನ್ಯದಿಂದ ಇದ್ದವನು ಸಂಕಲ್ಪ ವಿಕಲ್ಪ ಮುಂತಾದ ಮನಸ್ಸಿನ ವೃತ್ತಿಗಳನ್ನು ಕಳೆದು ಮನೋನ್ಮನೀ ಎಂಬ ಅವಸ್ಥೆಯನ್ನು ಪಡೆಯುತ್ತಾನೆ.

**ಇಪ್ಪತ್ತೆಂಟನೇ ಮೆಟ್ಟಿಲು : ಜನಕೃಪಾ ನೈಷ್ಠುರ್ಯಮುತ್ಸೃಜ್ಯತಾಮ್ ।**

ಜನರು ತನ್ನ ಯಾವ ಕ್ರಿಯೆಗೆ ಮೆಚ್ಚಿಕೊಂಡಾರು, ಯಾವ ಮೆಚ್ಚಿಕೊಳ್ಳದಿದ್ದಾರು ಎಂಬ ಚಿಂತೆಯನ್ನು ಬಿಟ್ಟು ಬಿಡಬೇಕು. ಮೆಚ್ಚಿಸುವದೊಂದೇ ಉದ್ದೇಶವಾಗಬಾರದು. ಹಾಗೆಂದ ಮಾತ್ರ ಹಿತವನ್ನು ಬಯಸಬಾರದು ಅಥವಾ ಸಾಧಿಸಬಾರದೆಂದರ್ಥವಲ್ಲ. ಜನರು ತನ್ನ ಬಗ್ಗೆ ಮೆಚ್ಚಿಕೊಳ್ಳಲಿ ಎಂಬ ಬಯಕೆಯಿರಬಾರದ ತನ್ನ ಸ್ಥಾನದ ದೃಷ್ಟಿಯಿಂದ ಹೇಗಿರಬೇಕೋ ಹಾಗೆಯೇ ಅದರಲ್ಲಿಯೇ ನಿಷ್ಠೆಯಿರಬೇಕು. ಈ ವಿಷಯದಲ್ಲಿ ಪೂರ್ಣ ವಿಶ್ವಾ

ಸಾಕು. ಜನತೆಯ ಮೆಚ್ಚಿಗೆಯು ತಾನು ಸರಿಯಾಗಿದ್ದೇನೆಯೋ ಇಲ್ಲವೋ ಎಂಬಲ್ಲಿ ಮಾನದಂಡವಲ್ಲ.

"ಸುಮ್ಮನೇ ಕುಳಿತರೆ ಯಾರೂ ನನ್ನನ್ನು ಕೇಳುವವರಿಲ್ಲ. ಆದ್ದರಿಂದ ಭಾಷಣ ಮಾಡಿ. ಜನರನ್ನು ಮೆಚ್ಚಿಸಿ ಚಪ್ಪಾಳೆಗಿಟ್ಟಿಸಿಕೊಳ್ಳಬೇಕು" ಎನ್ನುವ ಭಾವನೆಯನ್ನು ಬಿಟ್ಟುಬಿಡಬೇಕು, ಎಂದು ಆಚಾರ್ಯರು ಹೇಳುತ್ತಾರೆ. ಜನರು ನಿನಗೆ ಗೌರವ ಕೊಡಬಹುದು ಯಾ ಅವಮಾನ ಮಾಡಬಹುದು, ನಿನಗೆ ನಿನ್ನ ನೆಲೆ ಮುಖ್ಯ. ಇದು ಶ್ರೀ ಶಂಕರ ಭಗವತ್ಪಾದರ ಅಪ್ಪಣೆ.

ಇನ್ನು ಸಾಧನ ಪಂಚಕದಲ್ಲಿಯ ಕೊನೆಯ ಶ್ಲೋಕ. ಇದರಲ್ಲಿ ಹೇಳಿದ ವಿಷಯ ಕುರಿತು ಈಗಾಗಲೇ ಪ್ರಸ್ತಾಪವಾಗಿದೆ.

ಏಕಾಂತೇ ಸುಖಮಾಸ್ಯತಾಂ ಪರತರೇ ಚೇತಃ ಸಮಾಧೀಯಾತಾಂ
ಪೂರ್ಣಾತ್ಮಾ ಸುಸಮೀಕ್ಷ್ಯತಾಂ ಜಗದಿದಂ ತದ್ಬಾಧಿತಂ ದೃಶ್ಯತಾಮ್ ।
ಪ್ರಾಕ್ಕರ್ಮ ಪ್ರವಿಲಾಪ್ಯತಾಂ ಚಿತಿಬಲಾನ್ನಾಪ್ಯುತ್ತರೈಃ ಶ್ಲಿಷ್ಯತಾಂ
ಪ್ರಾರಬ್ಧಂ ತ್ವಿಹಭುಜ್ಯತಾಮಥ ಪರಬ್ರಹ್ಮಾತ್ಮನಾ ಸ್ಥೀಯತಾಮ್ ॥ ೫ ॥

**ಇಪ್ಪತ್ತೊಂಬತ್ತನೇ ಮೆಟ್ಟಿಲು : ಏಕಾಂತೇ ಸುಖಮಾಸ್ಯತಾಮ್ ।**

ಇನ್ನೊಬ್ಬನಿಲ್ಲದ, ಪ್ರಶಾಂತವಾದ. ಎಲ್ಲಿ ಕುಳಿತರೆ ಮನಸ್ಸು ಸುಲಭವಾಗಿ ಏಕಾಗ್ರಗೊಳ್ಳುತ್ತದೆಯೋ ಅಂತಹ ಸ್ಥಳದಲ್ಲಿ ಕುಳಿತುಕೊಳ್ಳಬೇಕು. ಶರೀರದ ಯಾವ ಅವಯುವಕ್ಕೂ ಪೆಟ್ಟಾಗದ ಹಾಗೆ ಕುಳಿತುಕೊಳ್ಳಬೇಕು. "ಸ್ಥಿರ ಸುಖಮಾಸನವ್" ಎಂಬುದಾಗಿ ಯೋಗಶಾಸ್ತ್ರ ಹೇಳುತ್ತದೆ. ದೀರ್ಘ ಕಾಲದವರೆಗೆ ಅಲುಗಾಡದೇ ಆಸನ ಬದಲಾಯಿಸದೇ ಕುಳಿತುಕೊಂಡರೆ ಚಿತ್ತವನ್ನು ಏಕಾಗ್ರಗೊಳಿಸಲು ಹೆಚ್ಚು ಸಾಧ್ಯವಾಗುತ್ತದೆ. ಆದರೆ ಹಾಗೆ ಕುಳಿತದ್ದರಿಂದ ಶರೀರದ ಯಾವ ಭಾಗಕ್ಕೂ ಅಶಾಸ್ತ್ರೀಯವಾಗಿ ಪೆಟ್ಟು ಬೀಳಬಾರದು. ಶಾಸ್ತ್ರೀಯವಾಗಿ ಪೆಟ್ಟುಬಿದ್ದರೆ ಹಾನಿಯಿಲ್ಲ. ಆದರೆ ಶಾಸ್ತ್ರೀಯವಾದ ಪೆಟ್ಟಿನಿಂದಲೂ, ಅದು ರೂಢಿಯಾಗುವದಕ್ಕಿಂತ ಮೊದಲು, ಚಿತ್ತೈಕಾಗ್ರತೆಗೆ ಸ್ವಲ್ಪ ತೊಂದರೆಯೆನಿಸಬಹುದು. ಅದನ್ನು ರೂಢಿಮಾಡುವುದರ ಮೂಲಕ ಗೆಲ್ಲಬೇಕು.

**ಮೂವತ್ತನೇ ಮೆಟ್ಟಿಲು : ಪರತರೇ ಚೇತಸ್ಸಮಾಧೀಯತಾಮ್ ।**

ಸುತ್ತ ಮುತ್ತಲೂ ನೋಡುತ್ತಾ ಕುಳಿತುಕೊಳ್ಳುವುದಲ್ಲ ಅಥವಾ ಭೂತ, ಭವಿಷ್ಯತ್ತುಗಳ ಆಲೋಚನೆ ಮಾಡುತ್ತಾ ಕುಳಿತುಕೊಳ್ಳುವುದಲ್ಲ. ಗುರುಗಳು ಹೇಳಿದ ರೀತಿಯಲ್ಲಿ ಪರತತ್ವದಲ್ಲಿ ಮನಸ್ಸನ್ನು ನಿಲ್ಲಿಸಬೇಕು.

**ಮೂವತ್ತೊಂದನೇ ಮೆಟ್ಟಿಲು :** ಪೂರ್ಣಾತ್ಮಾ ಸುಸಮೀಕ್ಷ್ಯತಾಮ್ ।

ಆ ಪೂರ್ಣನಾದ, ಅನಂತನಾದ, ಸರ್ವವ್ಯಾಪಕನಾದ, ಸರ್ವವೂ ಆಗಿರುವ ಪರಮಾತ್ಮನನ್ನು ನೋಡುತ್ತಾ, ಅವನನ್ನು ಅನುಭವಿಸುತ್ತಾ ಕುಳಿತುಕೊಳ್ಳಬೇಕು.

**ಮೂವತ್ತೆರಡನೇ ಮೆಟ್ಟಿಲು :** ಜಗದಿದಂ ತದ್‌ಬಾಧಿತಂ ದೃಶ್ಯತಾಂ ।

ಪರಮಾತ್ಮನ ಸತ್ಯತೆಯ ಎದುರಿಗೆ ಜಗತ್ತಿನ ಸತ್ಯತೆ ಏನೂ ಅಲ್ಲ. ಈ ಜಗತ್ತು ಸತ್ಯತೆಯನ್ನು ಅವನಿಂದ ಎರವಲಾಗಿ ಪಡೆದಿದೆ. ಇದಕ್ಕೆ ತನ್ನದೇ ಸತ್ಯತ್ವ ಇಲ್ಲ. ಆದ್ದರಿಂದ ಅದೇ (ಪರಬ್ರಹ್ಮವೇ) ಸತ್ಯ. ಇದನ್ನು ಮನಗಾಣಬೇಕು.

ಪುತ್ತೂರ ಅಜ್ಜನನ್ನು ಭೇಟಿಮಾಡಿದರೆ ಅವರು ಇದೇ ಮಾತನ್ನು ಹೇಳುತ್ತಾರೆ. ಅವರ ಜೊತೆಯಲ್ಲಿ ಕುಳಿತು ಮಾತನಾಡುವಾಗ ಅವರು ಅನವಶ್ಯಕವಾಗಿ ಮಾತನಾಡುವುದೇ ಇಲ್ಲ. ನಾವು ಏನಾದರೂ ಕೇಳಿದರೆ ಮಾತ್ರ ಮಾತನಾಡುತ್ತಾರೆ. ಇಲ್ಲವಾದರೆ ಕಣ್ಣು ಮುಚ್ಚಿ ಕುಳಿತುಬಿಡುತ್ತಾರೆ. ಕಣ್ಣು ಮುಚ್ಚಿ ಕುಳಿತಾಗ ಅದೆಷ್ಟೋ ಸಾರೆ ನಗುತ್ತಾರೆ; ಕೈ ಎತ್ತಿ "ಆಹಾ ! ಆಹಾ !" ಎನ್ನುತ್ತಾರೆ. ಆಗ ನಾವು ಅಜ್ಜ, ಏನಾಯಿತು ಎಂದು ಕೇಳಿದರೆ ಕೊಡುವ ಉತ್ತರ "ಈ ನಾನೆಂಬ ಅಹಂಕಾರ, ಅಹಂಕಾರದ ಹಿಂದೆ ಇರುವ ಬುದ್ಧಿತತ್ವ; ಬುದ್ಧಿತತ್ವದ ಹಿಂದೆ ಇರುವ ಅವ್ಯಕ್ತ, ಇವೆಲ್ಲವುಗಳ ಹಿಂದೆ, ಇವೆಲ್ಲಕ್ಕೂ ಆಶ್ರಯವಾಗಿ, ಇವೆಲ್ಲಕ್ಕೂ ಸತ್ಯತ್ವವನ್ನು ಕೊಟ್ಟಂತಹ ಒಂದು ತತ್ವ ಇದೆ. ಅವನೇ ಭಗವಂತ." ಎಷ್ಟು ಸೊಗಸಾಗಿ ಹೇಳುತ್ತಾರೆ ಅವರು ! ನಾವೆಲ್ಲ ಹೇಳುವುದು ಅವರು ಹೇಳಿದ ಮಾತನ್ನೇ.

**ಮೂವತ್ಮೂರನೇ ಮೆಟ್ಟಿಲು :** ಪ್ರಾಕ್ಕರ್ಮ ಪ್ರವಿಲಾಪ್ಯತಾಂ ।

ಇಷ್ಟಾದ ಮೇಲೆ ಮುಂದಿನ ಮೆಟ್ಟಿಲುಗಳು ಸಹಜವಾಗಿ ಆಗುವ ಪ್ರಕ್ರಿಯೆಗಳು. ಅವನ ಪ್ರಾಕ್ತನ ಕರ್ಮಗಳೆಲ್ಲವೂ ನಶಿಸಿ ಹೋಗುತ್ತವೆ. ಇಲ್ಲಿ ಪ್ರಾಕ್ತನ ಕರ್ಮಗಳೆಂದರೆ, ಇದುವರೆಗೆ ಫಲಕೊಡಲು ಪ್ರಾರಂಭಿಸದೇ ಇದ್ದ ಸಂಚಿತ ಕರ್ಮಗಳು ಎಂದರ್ಥ.

**ಮೂವತ್ನಾಲ್ಕನೇ ಮೆಟ್ಟಿಲು :** ಚಿತಿಬಲಾತ್ ನಾಪ್ಯುತ್ತರೈಃ ಶ್ಲಿಷ್ಯತಾಮ್ ।

ಹೊಸ ಕರ್ಮಗಳು ಅವನನ್ನು ಲೇಪಿಸುವುದಿಲ್ಲ. ಮುಂದೆ ಅವನಿಗೆ ಪಾಪ-ಪುಣ್ಯಗಳ ಲೇಪವಿಲ್ಲ. ಕಾರಣವೇನೆಂದರೆ ಅವನು ಕರ್ಮಗಳ ಲೇಪ ಸ್ವಲ್ಪವೂ ಇಲ್ಲದ ಪರಮಾತ್ಮತತ್ವದಲ್ಲಿ ನೆಲೆ ನಿಂತಿದ್ದಾನೆ.

**ಮೂವತ್ತೈದನೇ ಮೆಟ್ಟಿಲು :** ಪ್ರಾರಬ್ಧಂ ತ್ವಿಹಭುಜ್ಯತಾಮ್ ।

ಈ ಶರೀರದ ಪ್ರಾರಬ್ಧ ಕರ್ಮದಿಂದ ಆಗಿದೆ. ಪ್ರಾರಬ್ಧಕರ್ಮವೆಂದರೆ ಈಗಾಗಲೇ ಫಲ ಕೊಡಲು ಪ್ರಾರಂಭಿಸಿದ ಕರ್ಮ. ಅದು ಅನುಭವಿಸಿಯೇ ಸವೆಸಲ್ಪಡಬೇಕಾದದ್ದು. ಕಾರಣ ಅದೊಂದನ್ನು ಅನುಭವಿಸುತ್ತಾ ಇರುತ್ತಾನೆ.

**ಮೂವತ್ತಾರನೇ ಮೆಟ್ಟಿಲು :** ಅಥ ಪರಬ್ರಹ್ಮಾತ್ಮನಾ ಸ್ಥೀಯತಾಮ್ ।

ಅಲ್ಲಿಗೆ ಮಾತಿಲ್ಲ. ವೇದಾಂತದ ಪರಮ-ಚರಮ ಲಕ್ಷ್ಯವಿದು. ಆತ ಪರಬ್ರಹ್ಮವೇ ಆಗಿಬಿಡುತ್ತಾನೆ. ಇಲ್ಲಿ ಅಥ ಶಬ್ದವಿದೆ. ಅದಕ್ಕೆ ಶರೀರ ಬಿದ್ದು ಹೋದ ನಂತರ ಎಂದೂ ಅರ್ಥವಿದೆ. ಜ್ಞಾನಿಯು ಪ್ರಾರಬ್ಧಕರ್ಮಜನ್ಯವಾದ ಶರೀರ ಇರುವ ತನಕ ಜೀವನ್ಮುಕ್ತನಾಗಿರುತ್ತಾನೆ. ಪ್ರಾರಬ್ಧ ಕರ್ಮ ಖರ್ಚಾದಾಗ ಶರೀರ ಬಿದ್ದುಹೋಗುತ್ತದೆ. ಅನಂತರ ಅಂದರೆ ಶರೀರ ಬಿದ್ದು ಹೋಗುತ್ತಿರುವಂತೆಯೇ ಆ ಚೇತನ ಪರಬ್ರಹ್ಮವಾಗಿ ಬಿಡುತ್ತದೆ. ಇದು ವಿದೇಹ ಮುಕ್ತಿ.

ಇಲ್ಲಿ ೩೫ ಹಂತಗಳು ಸಾಧನಗಳು. ೩೬ ನೆಯದೇ ಲಕ್ಷ್ಯ (ಸಾಧಿಸಬೇಕಾದದ್ದು). ಇದೇ ಅನುಷ್ಠಾನ ವೇದಾಂತ. ಇಲ್ಲಿ ಯೋಗದ ಸಮಗ್ರವಾದ ಚಿತ್ರಣ ಇದೆ ಎನ್ನಬಹುದು. ವೇದಾಂತ ಅನುಷ್ಠಾನ ರೂಪವೇ ಯೋಗ. ವೇದಾಂತದಲ್ಲಿ ಇದ್ದ ಮುಂದಿನ ಹಂತಗಳು ನಮಗೆಲ್ಲರಿಗೂ ಕೈಗೆಟಕುವ ಸ್ಥಿತಿಯಲ್ಲಿ ಇಲ್ಲ. ಏಕೆಂದರೆ "ವೇದೋ ನಿತ್ಯಮಧೀಯತಾಮ್ ।" ಎಂಬುದಾಗಿ ಹೇಳಿದ ಮೊದಲನೇ ಹಂತಕ್ಕೆ ನಾವೆಲ್ಲರೂ ಪ್ರವೇಶಮಾಡಿಲ್ಲ. ಹಾಗಾಗಿ ಈಗ ವೇ॥ ಶಂಕರ ನಾರಾಯಣ ಘನಪಾಠಿಗಳು ಹೇಳಿದಂತಹ ವಿಷಯುವೇ ಎಲ್ಲರಿಗೂ ಸುಸಂಬದ್ಧವಾದದ್ದು, ಪ್ರಸ್ತುತವಾದದ್ದು. ಅದೇನೆಂದರೆ ಪ್ರತಿದಿನವೂ ಸಂಧ್ಯಾವಂದನೆ ಮಾಡಿರಿ. ವೇದವನ್ನು ಓದಲಿಕ್ಕಾಗದೇ ಹೋದರೆ ವೇದಮಾತೆಯ ಅನುಸಂಧಾನ ಮಾಡಿ. ಅದೂ ಆಗದೇ ಇದ್ದರೆ, "ಕಲೌ ಕಲ್ಮಷಚಿತ್ತಾನಾಂ ಗತಿರ್ಗೋವಿಂದಕೀರ್ತನಮ್ ॥" ಕಲಿಯುಗದಲ್ಲಿ ವಿಧಿ, ಸಂಸ್ಕಾರಗಳಿಲ್ಲದೇ ಕಲ್ಮಷದಿಂದ ಕೂಡಿದ ಚಿತ್ತವುಳ್ಳವರಿಗೆ ಭಗವಂತನ ಸಂಕೀರ್ತನೆಯೊಂದೇ ದಾರಿ. "ಭಜಗೋವಿಂದಂ ಮೂಢಮತೇ ।" ಎಂದು ಶ್ರೀ ಆಚಾರ್ಯರು ಅಪ್ಪಣೆ ಕೊಡಿಸಿದಂತೆ ಭಗವಂತನೇ ಗತಿ.

ನಮ್ಮ ಜೀವನಕ್ಕೆ ಒಂದು ಗುರಿ, ಒಂದು ದಾರಿ ಇರಬೇಕು. ಇವೆರಡು ಇದ್ದರೆ ಮಾತ್ರ ಜೀವನ ಅರ್ಥಪೂರ್ಣ. ಇದೇ ಎಲ್ಲ ಭಾರತೀಯ ದಾರ್ಶನಿಕರ ಅಭಿಪ್ರಾಯ. ಗುರಿ ಮತ್ತು ದಾರಿ, ಇವೆರಡು ಬಂದಾಗಲೇ ಜೀವನ ಸರಿಹೋಗುತ್ತದೆ. ಇದನ್ನು ಎಲ್ಲ ಜನತೆಗೆ ತೋರಿಸುವುದೇ ಶ್ರೀ ಆಚಾರ್ಯರ ಉದ್ದೇಶ, ಶಂಕರ ಜಯಂತಿಯ ಆಚರಣೆಯ ಉದ್ದೇಶ, ರಾಷ್ಟ್ರೀಯ ವಿಚಾರ ಸಂಕಿರಣದ ಉದ್ದೇಶ,

ಇಷ್ಟು ಹೊತ್ತು ನಿಮ್ಮನ್ನೆಲ್ಲ ಕೂಡ್ರಿಸಿಕೊಂಡು ನಿಮ್ಮೆಲ್ಲರ ತಾಳ್ಮೆಯನ್ನು ಉಪಯೋಗಿಸಿಕೊಂಡಿದ್ದರ ಉದ್ದೇಶ.

ನಾವು ಎಲ್ಲಿಂದ ಬಂದಿದ್ದೇವೆಯೋ ಅಲ್ಲಿಗೆ ಸೇರುವುದೇ ನಮ್ಮೆಲ್ಲರ ಗುರಿ. ನಮಗೆ ಗೊತ್ತಿಲ್ಲದೇ ಹೋದರೂ ಇದು ಸತ್ಯ—. ಆ ಪರಮಾತ್ಮನಿಂದಲೇ ನಾವೆಲ್ಲರೂ ಬಂದಿದ್ದೇವೆ. ಈಗ ಹೇಳಿದಂತಹ ೩೫ ಮೆಟ್ಟಿಲುಗಳೇ ಅದಕ್ಕೆ ಹೋಗುವ ದಾರಿ. ಮೊದಲನೆಯ ಮೆಟ್ಟಿಲು, ಎಲ್ಲರೂ ನೆನಪಿಡಬೇಕಾದದ್ದು, ಭಗವಂತನ ಸ್ಮರಣೆ. ಸ್ಮರಣೆಯಲ್ಲೂ ಎರಡು ತರಹ. ಒಂದನೆಯದು ನಿಷ್ಕಾಮವಾಗಿ ಸತತ ಸ್ಮರಣೆ, ಎರಡನೆಯದು ಸಕಾಮವಾಗಿ ಸತತ ಸ್ಮರಣೆ. ಯಾವುದಾದರೂ ಬೇಕಾದದ್ದರ ಪ್ರಾರ್ಥನೆಯ ಜೊತೆಯಲ್ಲಿ ಭಗವಂತನ ಸ್ಮರಣೆ ಮಾಡಿದರೆ, ಅದನ್ನೂ ಕೂಡ ಭಗವಂತ ಒಪ್ಪುತ್ತಾನೆ. ಇದೇ ಸಕಾಮ ಸ್ಮರಣೆ. ಸರ್ವಾತ್ಮನಾದ, ಉದಾರನಾದ, ಭಗವಂತ ಸಕಾಮ ಸ್ಮರಣೆಯುಳ್ಳವರಿಗೂ ಒಂದು ಸ್ಥಾನ ಇಟ್ಟಿದ್ದಾನೆ. ಇಲ್ಲಿಂದ ಈ ಹೊತ್ತು ನಮ್ಮ ಪ್ರಯಾಣವನ್ನು ಪ್ರಾರಂಭಿಸಬೇಕಾಗಿದೆ. ಆ ರೀತಿಯಾಗಿ ಆದರೇನೇ, ಜೀವನ ಸರಿಯಾದ ರೀತಿಯಲ್ಲಿ ನಡೆಯಲಿಕ್ಕೆ ಸಾಧ್ಯ ಇಂದಿನ ಈ ವಿಚಾರ ಸಂಕಿರಣ ಎಲ್ಲರಿಗೂ ಶ್ರೀ ಶಂಕರರ ಸಂದೇಶದ ಪ್ರಸ್ತುತತೆಯನ್ನು ಮನವರಿಕೆ ಮಾಡಿಕೊಡುತ್ತ ಎಲ್ಲರಿಗೂ "ಆ ದಾರಿಯಲ್ಲಿ ಬನ್ನಿ" ಎನ್ನುವ ಕರೆಯನ್ನು ಕೊಡುತ್ತದೆ.

ಈ ಉತ್ಸವ ಆ ಅರ್ಥದಲ್ಲಿ ಸಾರ್ಥಕವಾಗಲಿ. ಅದಕ್ಕೆ ಭಗವದನುಗ್ರಹವಾಗಲಿ.

**ಲೋಕಾಃ ಸಮಸ್ತಾಃ ಸುಖಿನೋ ಭವಂತು**

**ನಾರಾಯಣ ನಾರಾಯಣ ನಾರಾಯಣ**

# ಲೇಖಕರ ವಿಳಾಸ


೧. ವಿದ್ವಾನ್ ಎಂ. ಎಲ್. ನರಸಿಂಹಮೂರ್ತಿ
ಅದ್ವೈತ ವೇದಾಂತ ವಿಭಾಗ
ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠ, ತಿರುಪತಿ

೨. ವಿದ್ವಾನ್ ರಾಮಚಂದ್ರಶರ್ಮಾ ತ್ಯಾಗಲಿ
೯೦, ಗಣೇಶನಂದನ ಸಿ.ಎಚ್.ಬಿ.ಎಸ್. ೧ ನೇ ಲೇಔಟ
ವಿಜಯನಗರ, ಬೆಂಗಳೂರು - ೫೬೦ ೦೪೦

೩. ವಿದ್ವಾನ್ ಅನಂತ ಶರ್ಮಾ ಭುವನಗಿರಿ
೪೩, "ಗಿರಿಶ್ರೀ" ೩-ಬಿ ಮುಖ್ಯರಸ್ತೆ
ಗಿರಿನಗರ, ಬೆಂಗಳೂರು - ೫೬೦ ೦೮೫

೪. ವಿದ್ವಾನ್ ವಿ. ಎನ್. ಭಟ್ಟ
ಸಹ್ಯಾದ್ರಿ ಕಲಾ ಕಾಲೇಜು
ಶಿವಮೊಗ್ಗ - ೫೭೭ ೨೦೩

೫. ಡಾ. ಎ. ಕೆ. ಶಾಸ್ತ್ರಿ
ನಿವೃತ್ತ ಇತಿಹಾಸ ಪ್ರಾಧ್ಯಾಪಕರು
'ಭವಾನಿ' ಟಿ.ಎಸ್.ಎಸ್. ರೈಸ ಮಿಲ್ ಹತ್ತಿರ
ಶಿರಶಿ (ಉತ್ತರ ಕನ್ನಡ ಜಿಲ್ಲೆ)

೬. ವಿದ್ವಾನ್ ಡಿ. ಎಸ್. ಭಟ್ಟ
ನಿವೃತ್ತ ಪ್ರಾಚಾರ್ಯರು, ಸೋಮಸಾಗರ
ಅಂಚೆ : ಕಾನಗೋಡ, ತಾ : ಶಿರಶಿ (ಉ. ಕ. ಜಿಲ್ಲೆ)

೭. ಡಾ. ವಿ. ಡಿ. ಹೆಗಡೆ
ಪ್ರವಾಚಕರು, ಹಿಂದಿ ವಿಭಾಗ
ಮೈಸೂರು ವಿಶ್ವವಿದ್ಯಾಲಯ, ಮಾನಸಗಂಗೋತ್ರಿ
ಮೈಸೂರು - ೫೭೦ ೦೦೬

೮. ಡಾ. ಕೆ. ವಿ. ಆಚಾರ್ಯ
ಮುಖ್ಯಸ್ಥರು, ಇಲೆಕ್ಟ್ರೋನಿಕ್ಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬

೯. ಡಾ. ಎಸ್. ಬಾಲಚಂದ್ರರಾವ್
ಪ್ರಾಂಶುಪಾಲರು, ನ್ಯಾಶನಲ್ ಕಾಲೇಜು
ಬಸವನಗುಡಿ, ಬೆಂಗಳೂರು - ೫೬೦ ೦೦೪

೧೦. ಲಕ್ಷ್ಮೀಶ ತೋಳ್ಪಾಡಿ
ಕೆಂಬಳಾಜೆ ಹೌಸ್, ಶಾಂತಿಗೋಡು
ಅಂಚೆ : ನೆರಿಮುಗೆರು, ಪುತ್ತೂರು - ೫೭೪ ೨೦೨ (ದ. ಕ)

೧೧. ಶ್ರೀ ಶ್ರೀರಂಗಪ್ರಿಯ ಮಹಾದೇಶಿಕ ಶ್ರೀಪಾದಂಗಳು
ಅಷ್ಟಾಂಗ ಯೋಗ ವಿಜ್ಞಾನ ಮಂದಿರ
೬೨೫, ೪ ನೇ ಮೇನ್, ಹನುಮಂತ ನಗರ,
ಬೆಂಗಳೂರು - ೫೬೦ ೦೧೯

೧೨. ಡಾ. ಆರ್. ಗಣೇಶ
೧೨೫೦, (೩೦) ೪ ನೇ ಮೇನ್, ಇ ಬ್ಲಾಕ್
೨ ನೇ ಹಂತ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

೧೩. ಡಾ. ಜಿ. ಎನ್. ಭಟ್
ಮುಖ್ಯಸ್ಥರು, ಸಂಸ್ಕೃತ ವಿಭಾಗ
ಕೆನರಾ ಕಾಲೇಜು, ಮಂಗಳೂರು

೧೪. ಡಾ. ಶ್ರೀಕೃಷ್ಣ ಭಟ್ ಅರ್ತಿಕಜೆ
ಮುಖ್ಯಸ್ಥರು, ಕನ್ನಡ ವಿಭಾಗ
ಮದ್ರಾಸ ವಿಶ್ವವಿದ್ಯಾಲಯ
ಮರಿನಾ ಕೆಂಪಸ್, ಚೆನ್ನೈಯಿ - ೬೦೦ ೦೦೫

೧೫. ಡಾ. ಜೆ. ಸದಾನಂದಂ
ತೆಲುಗು ಪ್ರಾಧ್ಯಾಪಕರು ಹಾಗೂ ಅಷ್ಟಾವಧಾನಿಗಳು
ಅನಂತಪುರ, ಆಂಧ್ರ ಪ್ರದೇಶ

೧೬. ಡಾ. ಜಿ. ಎಂ. ಹೆಗಡೆ
ಮುಖ್ಯಸ್ಥರು, ಕನ್ನಡ ವಿಭಾಗ
ಕಿಟೆಲ್ ಆರ್ಟ್ಸ ಕಾಲೇಜು, ಧಾರವಾಡ - ೫೮೦ ೦೦೧

# ಶ್ರೀ ಭಗವತ್ಪಾದ ಪ್ರಕಾಶನ (ರಿ.)

## ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ

ಅಂಚೆ : ಮಠದೇವಳ, ಶಿರಸಿ (ಉ. ಕ.) - ೫೮೧ ೩೩೬

## ಮಹಾಸಂಸ್ಥಾನದಿಂದ ಪ್ರಕಟಗೊಂಡು ಮಾರಾಟಕ್ಕೆ ಲಭ್ಯವಿರುವ ಪುಸ್ತಕಗಳ ಮತ್ತು ಕ್ಯಾಸೆಟ್‌ಗಳ ವಿವರ

| | | | |
|---|---|---|---|
| ೧. | ಬೌಧಾಯನೀಯ ನಿತ್ಯಕರ್ಮ | ರೂ. | ೧೦೦-೦೦ |
| ೨. | ಬೋಧಾಯನೋಕ್ತಸಂಧ್ಯಾವಿಧಿಃ | ರೂ. | ೧೦-೦೦ |
| ೩. | ಸ್ವರ್ಣವಲ್ಲೀ ಮಹಾಸಂಸ್ಥಾನ (ಚರಿತ್ರೆ) | ರೂ. | ೧೦೦-೦೦ |
| ೪. | ವಿವಾಹ ಸಂಸ್ಕಾರ | ರೂ. | ೨೫-೦೦ |
| ೫. | ಗಾಯತ್ರೀ ಜಪಯಜ್ಞ | ರೂ. | ೨೫-೦೦ |
| ೬. | ಸ್ವರ್ಣವಲ್ಲೀ ಸುಧಾ ಕುಸುಮ - ೧ | ರೂ. | ೧೦-೦೦ |
| ೭. | ಸ್ವರ್ಣವಲ್ಲೀ ಸುಧಾ ಕುಸುಮ - ೨ | ರೂ. | ೧೦-೦೦ |
| ೮. | ಭಗವದ್ಗೀತೆ ಆಧ್ಯಾತ್ಮವಿದ್ಯೆ ಸಂಪುಟ - ೧ | ರೂ. | ೧೦೦-೦೦ |
| ೯. | ಕೃಷ್ಣಯಜುರ್ವೇದ ಸ್ವಾಹಾಕಾರವಿಧಿಃ | ರೂ. | ೧೮೦-೦೦ |
| ೧೦. | ಶ್ರೀ ಸರ್ವಜ್ಞೇಂದ್ರ ಸರಸ್ವತೀ | ರೂ. | ೨೫-೦೦ |
| ೧೧. | ಗಾಯತ್ರೀ ಮಹತ್ವ (ಕ್ಯಾಸೆಟ್) | ರೂ. | ೩೦-೦೦ |
| ೧೨. | ಬೋಧಾಯನೋಕ್ತ ಸಂಧ್ಯಾವಂದನೆ (ಕ್ಯಾಸೆಟ್) | ರೂ. | ೩೦-೦೦ |
| ೧೩. | ಶ್ರೀ ಲಕ್ಷ್ಮೀನೃಸಿಂಹ ಕಲ್ಪೋಕ್ತಪೂಜಾವಿಧಿಃ | ರೂ. | ೫೦-೦೦ |
| ೧೪. | ಶಂಕರಾಚಾರ್ಯರ ಸ್ತೋತ್ರರತ್ನಮಾಲೆ | ರೂ. | ೫೦-೦೦ |
| ೧೫. | ಸನಾತನ ಸಂಸ್ಕಾರಗಳು | ರೂ. | ೫೦-೦೦ |
| ೧೬. | ಕೃಷ್ಣಯಜುರ್ವೇದ ಸ್ವಾಹಾಕಾರ ವಿಧಿಃ ಭಾಗ - ೨ | ರೂ. | ೪೫೦-೦೦ |
| ೧೭. | ವಿಭೂತಿ ಪುರುಷ ವಿದ್ಯಾರಣ್ಯರು | ರೂ. | ೬೫-೦೦ |
| ೧೮. | ಶ್ರೀ ಬೃಹತ್ ಗಂಗಾಧರೇಂದ್ರ ಸರಸ್ವತೀ | ರೂ. | ೭೦-೦೦ |
| ೧೯. | ಶ್ರೀ ಸರ್ವಜ್ಞೇಂದ್ರರು | ರೂ. | ೪೫-೦೦ |
| ೨೦. | ಶ್ರೀ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳ ಸಂದೇಶ ನುಡಿ | ರೂ. | ೭೫-೦೦ |
| ೨೧. | ಶ್ರೀ ಸ್ವರ್ಣವಲ್ಲೀ ಗುರುವಂಶ ಚರಿತಂ | ರೂ. | ೧೦೦-೦೦ |
| ೨೨. | ಶ್ರೀ ಶಂಕರಾಚಾರ್ಯರ ಅದ್ವೈತದರ್ಶನ | ರೂ. | ೧೨೦-೦೦ |

**" ಸ್ವರ್ಣವಲ್ಲೀ ಪ್ರಭಾ " ಮಾಸಪತ್ರಿಕೆಗೆ ಚಂದಾದಾರರಾಗಿ ಜ್ಞಾನಾನಂದ ಅನುಭವಿಸಿರಿ**

ಚಂದಾವಿವರ :

| | | |
|---|---|---|
| ವಾರ್ಷಿಕ ಚಂದಾ | ರೂ. | ೯೦-೦೦ |
| ಮೂರು ವರ್ಷದ ಚಂದಾ | ರೂ. | [illegible]-೦೦ |
| ಪ್ರೋತ್ಸಾಹಕ ಸದಸ್ಯರು | ರೂ. | ೧,೦೦೦-೦೦ |
| ಪೋಷಕ ಸದಸ್ಯರು | ರೂ. | ೫,೦೦೦-೦೦ |

